# ಕರ್ನಾಟಕದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು

(ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ವೀರಾಕ್ಷಿ. ಎಲ್. ವಿವೇಕಿ

ಮಾರ್ಗದರ್ಶಕರು
ಡಾ. ಅಶೋಕಕುಮಾರ
ಸಹಪ್ರಾಧ್ಯಾಪಕರು





ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

# ಕರ್ನಾಟಕದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು

(ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
**ವೀರಾಕ್ಷಿ. ಎಲ್. ವಿವೇಕಿ**

ಮಾರ್ಗದರ್ಶಕರು
**ಡಾ. ಅಶೋಕಕುಮಾರ**
ಸಹಪ್ರಾಧ್ಯಾಪಕರು



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೦

# ದೃಢೀಕರಣ ಪತ್ರ

ಕರ್ನಾಟಕದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ವೀರಾಕ್ಷಿ ಎಲ್. ವಿವೇಕಿ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೪-೦೨-೨೦೧೦
ಸ್ಥಳ : ವಿದ್ಯಾರಣ್ಯ

(ಡಾ. ಅಶೋಕಕುಮಾರ)
ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

ಕರ್ನಾಟಕದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ **ಡಾ. ಅಶೋಕಕುಮಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೪.೨.೧೦

ಸ್ಥಳ : ವಿದ್ಯಾರಣ್ಯ

೧೪.೨.೧೦

(ವೀರಾಕ್ಷಿ ಎಲ್ ವಿವೇಕಿ)
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಕೃತಜ್ಞತೆಗಳು

**ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ)** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲು ನನಗೆ ತುಂಬಾ ಸಂತೋಷವಾಗುತ್ತಿದೆ. ಈ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ನನ್ನ ಅಧ್ಯಯನಕ್ಕೆ ನೆರವಾದವರಿಗೆ ಕೃತಜ್ಞತೆಗಳನ್ನು ಹೇಳುವುದು ನನ್ನ ಕರ್ತವ್ಯ ಎಂದು ಭಾವಿಸುತ್ತೇನೆ.

ಆರಂಭದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾಗಿದ್ದ ಡಾ. ಬಿ.ಎ. ವಿವೇಕ ರೈ ಮತ್ತು ಇಂದಿನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಅವರಿಗೆ ಹಾಗೂ ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ವೀರೇಶ ಬಡಿಗೇರ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟು ನನ್ನನ್ನು ಪ್ರೋತ್ಸಾಹಿಸಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಎಲ್ಲಾ ಸಂದರ್ಭಗಳಲ್ಲಿಯೂ ಚರ್ಚೆ ನಡೆಸಿ, ಓದಿ, ತಿದ್ದಿ ತೀಡಿ ಮಾರ್ಗದರ್ಶನ ನೀಡಿದ ಪ್ರೀತಿಯ ಗುರುಗಳಾದ ಡಾ. ಅಶೋಕಕುಮಾರ ಅವರಿಗೆ ಮತ್ತು ಅಧ್ಯಯನಕ್ಕೆ ಸ್ಫೂರ್ತಿಯನ್ನು ನೀಡಿ ಪ್ರೋತ್ಸಾಹಿಸಿ ಚರ್ಚೆಗಳ ಮೂಲಕ ಸಲಹೆ ಸೂಚನೆಗಳನ್ನು ನೀಡಿ ಅಧ್ಯಯನ ಮತ್ತಷ್ಟು ಗಟ್ಟಿಕೊಳ್ಳುವಂತೆ ನೆರವು ನೀಡಿದ ನಮ್ಮ ವಿಭಾಗದ ಪ್ರೀತಿಯ ಗುರುಗಳಾದ ಡಾ. ಕೆ.ವಿ.ನಾರಾಯಣ, ಮುಖ್ಯಸ್ಥರಾದ ಡಾ. ಡಿ. ಪಾಂಡುರಂಗಬಾಬು, ಡಾ. ಸಾಂಬಮೂರ್ತಿ, ಡಾ. ಪಿ. ಮಹಾದೇವಯ್ಯ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಬಗೆಗೆ ವಿವಿಧ ರೀತಿಯ ಸಲಹೆ ಸೂಚನೆಗಳನ್ನು ನೀಡಿದ ಡಾ. ರಹಮತ್ ತರೀಕೆರೆ, ಡಾ. ಸಿ.ಪಿ. ನಾಗರಾಜ, ಡಾ. ಲಿಂಗದೇವರು ಹಳೆಮನೆ, ಡಾ. ಹೆಚ್ ಜಿ. ರಾಮಕೃಷ್ಣ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಸುಬ್ಬಣ್ಣ ರೈ, ಡಾ. ಮಾಧವ ಪೆರಾಜೆ, ಡಾ. ಕೆ. ರವೀಂದ್ರನಾಥ, ಡಾ. ಸುಚೇತಾ ನವರತ್ನ, ಡಾ. ಹೆಚ್.ಡಿ. ಪ್ರಶಾಂತ ಅವರಿಗೂ ಕೃತಜ್ಞತೆಗಳನ್ನು ಹೇಳಬಯಸುತ್ತೇನೆ.

ಪೂಜ್ಯ ಮಾತೋಶ್ರೀ ದಿ. ಮಲ್ಲಮ್ಮ ಎಲ್. ವಿವೇಕಿ ಅವರನ್ನು ಚಿಕ್ಕಂದಿನಿಂದಲೇ ಕಳೆದುಕೊಂಡಿದ್ದು, ಪ್ರೀತಿಯ ಸ್ಥಾನದಲ್ಲಿ ತಂದೆಯವರಾದ ಎಲ್.ಬಿ. ವಿವೇಕಿ ಅವರು ತಂದೆ ಮತ್ತು ತಾಯಿ ಸ್ಥಾನದಲ್ಲಿ ಪ್ರೀತಿಯಿಂದ ಸಾಕಿ, ಸಲುಹಿ ತಮ್ಮ ಅನುಭವ, ಸಲಹೆ ಸೂಚನೆಗಳನ್ನು ನೀಡಿ ಅಧ್ಯಯನದ ಬೆಳವಣಿಗೆಗೆ ಕಾರಣಕರ್ತರಾದ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಅಧ್ಯಯಕ್ಕೆ ಪ್ರೇರಣೆ ನೀಡಿ ಪ್ರೋತ್ಸಾಹಿಸಿ ಸಲಹೆಗಳನ್ನು ನೀಡಿದ ಪ್ರೀತಿಯ ತಂಗಿ ಇಂಗ್ಲೀಶ್ ಸ್ನಾತಕೋತ್ತರ ಪದವೀಧರಳಾದ ವಿಶಾಲಾಕ್ಷಿ ಮತ್ತು ನಿರ್ಮಲಾ, ಸ್ನಾತಕೋತ್ತರ ಪದವಿಧರರಾದ ಅಣ್ಣಂದಿರು ಸಂಗಮೇಶ, ಬಸವರಾಜ ಅವರಿಗೂ ಮತ್ತು ಕಿರಿಯ ಸಹೋದರ ಸುರೇಶಬಾಬು ಹಾಗೂ ಚಿಕ್ಕಪ್ಪರು ಮತ್ತು ಚಿಕ್ಕಮ್ಮರಿಗೂ ಮತ್ತು ಅಧ್ಯಯನಕ್ಕೆ ಸಹಕರಿಸಿದಂತಹ ಕುಟುಂಬದ ಎಲ್ಲಾ ಸದಸ್ಯರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಪ್ರತಿ ಸಂದರ್ಭದಲ್ಲಿ ಚರ್ಚಿಸಿ ಸೂಕ್ತ ಸಲಹೆ, ಸೂಚನೆಗಳನ್ನು ನೆರವು ನೀಡಿ ಸಹಕರಿಸಿದ ಸ್ನೇಹಿತರಾದ ಡಾ. ವಾಗೀಶ, ಎನ್.ಎಂ. ವೆಳ್ಳಿಮಾ ಎಂ, ಕಲ್ಲಯ್ಯ ಹಿರೇಮಠ, ಕುಪ್ಪೇರಾವ್, ವಿಪ್ಲವಿ, ಸೋಮಕ್ಕ, ನಾಗರಾಜ ಚಿಂತ್ರಪಳ್ಳಿ ಹಾಗೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಮಹಾಪ್ರಬಂಧವನ್ನು ಅಂದವಾದ ಅಕ್ಷರರೂಪದಲ್ಲಿ ಸಂಯೋಜಿಸಿದ ವಿರೂಪಾಕ್ಷಯ್ಯ. ಹಿರೇಮಠ ಹಾಗೂ ಬಸವರಾಜ. ಜೆ, ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

✍ ವೀರಾಕ್ಷಿ. ಎಲ್. ವಿವೇಕಿ.

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಸ್ವರೂಪ

೧.೩. ಅಧ್ಯಯನದ ಮಹತ್ವ

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ವೈಧಾನಿಕತೆ

### ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

## ಪ್ರಾಸ್ತಾವಿಕ ಮಾತು

ಪ್ರಾಥಮಿಕ ಶಿಕ್ಷಣದಲ್ಲಿ ಉಂಟಾಗಿರುವ ಭಾಷಾ ಗೊಂದಲಗಳು ಭಾಷೆ ಮತ್ತು ಮಾಧ್ಯಮದ ಹಿನ್ನೆಲೆಯಲ್ಲಿ ರೂಪುಗೊಂಡಿವೆ. ಭಾಷೆ ಹಾಗೂ ಮಾಧ್ಯಮ ಇವೆರಡು ಭಿನ್ನ ಅರ್ಥ ಹೊಂದಿರುವ ಪರಿಕಲ್ಪನೆಗಳಾಗಿವೆ. ಕರ್ನಾಟಕದಲ್ಲಿ ಕನ್ನಡ ಭಾಷೆ ಶಾಲಾ ಆವರಣದಲ್ಲಿ ಎರಡು ಮಾದರಿಯಲ್ಲಿ ಕಲಿಸಲಾಗುತ್ತದೆ. ಸಾರ್ವಜನಿಕ ವಲಯದ ಸರ್ಕಾರಿ ಶಾಲೆಗಳಲ್ಲಿ ಕನ್ನಡದ ಮೂಲಕ ಕಲಿಸುವ ಭಾಷಾನೀತಿ ಜಾರಿಯಲ್ಲಿದೆ. ಆದರೆ ಖಾಸಗಿ ಶಾಲೆಗಳಲ್ಲಿ ಕನ್ನಡವನ್ನು ಒಂದು ವಿಷಯವಾಗಿ ಕಲಿಸುವ ಭಾಷಾನೀತಿ ಜಾರಿಯಲ್ಲಿದೆ. ಒಂದೇ ರಾಜ್ಯದಲ್ಲಿ ಎರಡು ಬಗೆಯ ಭಾಷಾ ನೀತಿಗಳು ಜಾರಿಯಲ್ಲಿರುವುದು ಗೊಂದಲವನ್ನು ಸೃಷ್ಟಿಸುತ್ತಿದೆ ಎಂದು ಸಾಹಿತಿಗಳು, ಶಿಕ್ಷಣಚಿಂತಕರು ಮತ್ತು ಶೈಕ್ಷಣಿಕ ಮನೋವಿಜ್ಞಾನಿಗಳು ಹೇಳುತ್ತಿದ್ದಾರೆ. ಇದಕ್ಕೆ ಕಾರಣಗಳೇನು? ಕಾರಣರು ಯಾರು? ಎಂಬುದಕ್ಕೆ ಸ್ಪಷ್ಟ ಮಾಹಿತಿ ಇಲ್ಲದೆ ಗೊಂದಲ ಉಂಟಾಗುತ್ತಿದೆ. ಈ ಭಾಷಾಮಾಧ್ಯಮ ಕುರಿತ ವಾಗ್ವಾದಗಳು ಕರ್ನಾಟಕದಲ್ಲಿ ಹೊಸದೇನು ಅಲ್ಲ. ಅದಕ್ಕೊಂದು ಚಾರಿತ್ರಿಕತೆಯೇ ಇದೆ. ಇತ್ತೀಚಿನ ದಿನಗಳಲ್ಲಿ ಕನ್ನಡ ಭಾಷಾ ಬಳಕೆ ಕುರಿತು ನಡೆಯುತ್ತಿರುವ ವಾಗ್ವಾದಗಳು ಇಂದಿನ ಖಾಸಗಿ ಶಾಲೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿವೆ. ಈ ಎರಡು ಅಂಶಗಳ ಹಿನ್ನೆಲೆಯಲ್ಲಿ ಭಾಷಾನೀತಿ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಾ ಬಂದಿದೆ.

ಶಿಕ್ಷಣದ ಎಲ್ಲಾ ಹಂತಗಳಲ್ಲೂ ಕಲಿಕೆಯ ಮಾಧ್ಯಮವನ್ನಾಗಿ ಕನ್ನಡವನ್ನೇ ಬಳಸಬೇಕು ಎಂದು ಹೇಳಲಾಗುತ್ತಿದೆ. ಆದರೆ ಇದು ಶೈಕ್ಷಣಿಕ ಭಾಷಾ ತತ್ವದ ವಿಚಾರವಾಗಿಲ್ಲ. ಏಕೆಂದರೆ ಕೇವಲ ಸರ್ಕಾರಿ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಜಾರಿಯಲ್ಲಿದೆ. ಜೊತೆಗೆ ಉನ್ನತ ಶಿಕ್ಷಣ ಹಾಗೂ ವೃತ್ತಿಯಲ್ಲಿ ಅವಕಾಶಗಳು ಸಿಗಬೇಕಾದರೆ ಇಂಗ್ಲೀಶ್ ಕಲಿಕೆಯು ಅಗತ್ಯವಾಗಿ ಬೇಕು ಎಂದು ಹೇಳುತ್ತಿರುವುದು ಇನ್ನೊಂದು ವಾದವಾಗಿದೆ. ಇದರೊಂದಿಗೆ, ಶಿಕ್ಷಣದ

ಒಂದು ಹಂತದವರೆಗೆ ಕನ್ನಡವನ್ನು ಮಾಧ್ಯಮವನ್ನಾಗಿ ಬಳಸಿ ಅನಂತರ ಮುಂದಿನ ಹಂತಗಳಲ್ಲಿ ವಿದ್ಯಾರ್ಥಿಗಳು ಯಾವ ಮಾಧ್ಯಮದ ಮೂಲಕ ಕಲಿಯಬೇಕು ಎನ್ನುವುದನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡುವಂತಿರಬೇಕು ಎಂದು ಮತ್ತೊಂದು ವಾದವನ್ನು ಮಂಡಿಸಲಾಗುತ್ತಿದೆ.

ಪ್ರಾಥಮಿಕ ಹಂತದಲ್ಲಿ ಶಿಕ್ಷಣವನ್ನು ಭಾಷೆ ಹಾಗೂ ಮಾಧ್ಯಮದ ರೂಪದಲ್ಲಿ ಕಲಿಸುವ ವ್ಯವಸ್ಥೆ ಜಾರಿಯಲ್ಲಿದೆ. ಕರ್ನಾಟಕ ಪ್ರದೇಶದಲ್ಲಿ ಕನ್ನಡ ಅಧಿಕೃತ ಭಾಷೆಯಾಗಿರುವುದರಿಂದ ಕನ್ನಡವನ್ನು ಒಂದು ಭಾಷೆಯನ್ನಾಗಿ ಎಲ್ಲಾ ಮಕ್ಕಳಿಗೆ ಕಡ್ಡಾಯವಾಗಿ ಕಲಿಸಲಾಗುತ್ತಿದೆ. ಹಾಗೆಯೇ ಕನ್ನಡ ನಾಡಿನಲ್ಲಿ ಬಹುಸಂಖ್ಯಾತರ ಮಾತೃಭಾಷೆ ಕನ್ನಡವೇ ಆಗಿರುವುದರಿಂದ ಕನ್ನಡ ಮಾಧ್ಯಮದ ಮೂಲಕವೇ ಶಿಕ್ಷಣವನ್ನು ನೀಡಬೇಕೆನ್ನುವ ಭಾಷಾನೀತಿ ಹಿನ್ನೆಲೆಯಲ್ಲಿ ಮಾಧ್ಯಮ ಜಾರಿಯಲ್ಲಿದೆ. ಈ ಎರಡು ಕ್ರಮಗಳು ಭಾಷಾ ನೀತಿ ಅಡಿಯಲ್ಲಿ ರಚನೆಯಾಗಿವೆ.

ಆದರೆ ಮೂಲತಃವಾಗಿ ಈ ಎರಡು ಅಂಶಗಳಲ್ಲಿ ಗೊಂದಲಗಳು ಕಂಡು ಬರುತ್ತಿವೆ. ಅದೇನೆಂದರೆ ಒಂದನೇ ತರಗತಿಯಿಂದ ಏಳನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣವನ್ನು ನೀಡುತ್ತಾ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕು ಎಂಬುದು ಸರ್ಕಾರದ ತೀರ್ಮಾನವಾಗಿದೆ. ಆದರೆ ಕನ್ನಡವನ್ನು ಒಂದು ಭಾಷೆಯನ್ನಾಗಿ ಮಾತ್ರ ಕಲಿಸಿ ಉಳಿದಂತೆ ಇಂಗ್ಲೀಶ್ ಮಾಧ್ಯಮದಲ್ಲಿ ಕಲಿಸಲಾಗುವುದೆಂದು ಖಾಸಗಿ, ಅನುದಾನರಹಿತ ಸಂಸ್ಥೆಗಳು ತಮ್ಮ ಖಚಿತ ಅಭಿಪ್ರಾಯಗಳನ್ನು ತಿಳಿಸುತ್ತಿವೆ. ನ್ಯಾಯಾಲಯವು ಸಹ ಖಾಸಗಿ ಶಾಲೆಗಳ ಪರವಾಗಿ ಆದೇಶವನ್ನು ಹೊರಡಿಸಿದೆ. ಈ ಬಗೆಯ ಭಾಷಾ ತಾರತಮ್ಯದ ಮಾದರಿಗಳು ಶಿಕ್ಷಣ ಕ್ರಮದಲ್ಲಿರುವುದು ಕಂಡು ಬರುತ್ತದೆ. ಇದರಿಂದಾಗಿ ಸರ್ಕಾರಿ, ಅನುದಾನರಹಿತ ಸಂಘ-ಸಂಸ್ಥೆಗಳು ಹಾಗೂ ನ್ಯಾಯಾಲಯಗಳ ನಡುವೆಯೆ ಗೊಂದಲಗಳಿರುವುದು ಈ ಮೂಲಕ ಸ್ಪಷ್ಟವಾಗುತ್ತದೆ. ಈ ಬಗೆಯ ಭಾಷಾ ಸಮಸ್ಯೆ ಹಾಗೂ ಗೊಂದಲಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನಗಳು ನಡೆಯಬೇಕಿದೆ. ಹೀಗಾಗಿ ಈ ಭಾಷಾ ಸಮಸ್ಯೆ ಕುರಿತು ಇರುವ ವಿವಾದಗಳ ಸ್ವರೂಪವನ್ನು ಅಧ್ಯಯನ ಮಾಡುವ ಅಗತ್ಯತೆ ಇದೆ. ಈ ಅಗತ್ಯತೆಯನ್ನು ಮನಗಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕನ್ನಡ ಪರವಾಗಿ ವಿಷಯ ಮಂಡಿಸುವವರು ವಿದ್ಯಾರ್ಥಿಗಳಿಗೆ ಕನ್ನಡ ಅಥವಾ ಅವರ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕೆಂದು ವಿಶ್ಲೇಷಿಸುತ್ತಾ ಬಂದಿದ್ದಾರೆ. ಇದಕ್ಕೆ ಸರಕಾರದ ಬೆಂಬಲವೂ ಸಾಕಷ್ಟಿದೆ. ಕನ್ನಡವನ್ನು ಬೋಧನೆಯ ವಿಷಯವನ್ನಾಗಿ ಕಲಿಸುವಲ್ಲಿ ಸರ್ಕಾರದ ಯಾವ ಆಕ್ಷೇಪಣೆಯು ಇಲ್ಲ. ಆದರೆ ಅದನ್ನು ಪ್ರಥಮ, ದ್ವಿತೀಯ ಹಾಗೂ ತೃತೀಯ ಭಾಷೆಯಾಗಿ ಯಾವುದರಲ್ಲಿ ಉಳಿಸಬೇಕೆನ್ನುವಲ್ಲಿ ಹಲವು ತೊಡರುಗಳಿವೆ. ಕಾರಣ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಸುತ್ತಿರುವ ಖಾಸಗಿ ಅನುದಾನರಹಿತ

ಶಾಲೆಗಳು ಕನ್ನಡವನ್ನು ಬೋಧನಾ ಮಾಧ್ಯಮವನ್ನಾಗಿ ಬಳಸುತ್ತಿಲ್ಲ. ಅಲ್ಲದೆ ರಾಜ್ಯ ಉಚ್ಚ ನ್ಯಾಯಾಲಯವು ಖಾಸಗಿ ಶಾಲೆಗಳ ಪರವಾಗಿ ತೀರ್ಪನ್ನು ನೀಡಿರುವುದರಿಂದ ಭಾಷಿಕ ಸಮಸ್ಯೆಗಳು ಮತ್ತಷ್ಟು ಉಲ್ಬಣಗೊಂಡಿದೆ.

ಈ ತೀರ್ಪಿನಿಂದ ಶಿಕ್ಷಣ ಮಾಧ್ಯಮದ ವಾಗ್ವಾದಗಳನ್ನು ಕುರಿತು ನಾಡಿನಾದ್ಯಂತ ಅನೇಕ ಬುದ್ಧಿ ಜೀವಿಗಳು, ಸಾಹಿತಿಗಳು ಸಹ ಸಮಾಲೋಚನೆ ನಡೆಸಿ ಮಾತೃಭಾಷಾ ಮಾಧ್ಯಮದಲ್ಲೇ ಶಿಕ್ಷಣ ನೀಡಬೇಕೆಂದು ತಿಳಿಸಿದ್ದಾರೆ. ಮಾತೃಭಾಷೆ ಎಂದರೆ ಮಗು ತನ್ನ ಜನ್ಮದಿಂದಲೇ ಪಡೆದುಕೊಂಡು ಬಂದಿರುವ ಭಾಷೆ. ಅಂದರೆ ಮಗುವಿನ ತಾಯಿ ಯಾವ ಭಾಷೆಯನ್ನು ದೈನಂದಿನ ಜೀವನದಲ್ಲಿ ಉಪಯೋಗಿಸುತ್ತಾಳೆಯೆ ಅದು ಆ ಮಗುವಿನ ಮಾತೃಭಾಷೆ ಎಂದು ಕರೆಯಿಸಿಕೊಳ್ಳುತ್ತದೆ. ಇಂತಹ ಮಾತೃಭಾಷೆ ಹಾಗೂ ಭಾಷಾ ಮಾಧ್ಯಮವನ್ನು ಕುರಿತು ಶಿಕ್ಷಣ ಚಿಂತಕರು, ಸಾಹಿತಿಗಳು ಅನೇಕ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು.

**ಶಿಕ್ಷಣ ಚಿಂತಕರು ಭಾಷಾ ಮಾಧ್ಯಮ ಕುರಿತು ನೀಡಿದ ವ್ಯಾಖ್ಯಾನಗಳು**

**ಗಾಂಧೀಜಿ :** ನಮ್ಮ ಭಾಷೆ ನಮ್ಮದೇ ಪ್ರತಿಬಿಂಬ. ವಿಚಾರ ಪ್ರಕಟಣೆಗೆ ನಮ್ಮ ಭಾಷೆಗಳು ತೀರಾ ಅಶಕ್ತ ಎಂದರೆ ಆದಷ್ಟು ಬೇಗ ನಾವು ನಿರ್ನಾಮ ಆಗುವುದೇ ಮೇಲು. ಪರಭಾಷೆಯ ಮಾಧ್ಯಮ ಬುದ್ಧಿಗೆ ಆಯಾಸ, ಮಕ್ಕಳ ಶಕ್ತಿಗೆ ಭಾರ; ಅದರಿಂದ ಅವರು ಬರೀ ಗಿಳಿ ಪಂಡಿತರೂ, ಅನುಕರಣಾಶೀಲರೂ ಆಗಿದ್ದಾರೆ.

**ರವೀಂದ್ರನಾಥ ಠಾಕೂರ :** ತನ್ನ ಹೃದಯಾಂತರಾಳದ ಭಾವನೆಗಳನ್ನು
ಪರಭಾಷೆಯಲ್ಲಿ ತಿಳಿಸಲು ಪ್ರಯತ್ನಿಸುವುದು
ಪ್ರಿಯತಮೆಗೆ ತನ್ನ ಮುಗುಳ್ನಗೆಯನ್ನು
ವಕೀಲನ ಮೂಲಕ ತಿಳಿಸಲು ಪ್ರಯತ್ನಿಸಿದಂತೆ.

**(ಎ.ಆರ್.ನಾರಾಯಣಘಟ್ಟ, ಶಿಕ್ಷಣ ಮಾಧ್ಯಮ ಸಮಗ್ರ ಚಿಂತನ, ಗೀತಾ ಕುಟೀರ, ಬೆಂಗಳೂರು, ಪುಟ-೪)**

**ಕುವೆಂಪು :** ಕನ್ನಡಿಗರ ಸರ್ವತೋಮುಖವಾದ ಉದ್ಧಾರ ಕನ್ನಡದಿಂದಲೇ ಸಾಧ್ಯ. ಕನ್ನಡಿಗರಿಗೆ ಕನ್ನಡವೇ ಗತಿ! ಕನ್ನಡ ನಾಡಿನಲ್ಲಿ ವಿದ್ಯಾಭ್ಯಾಸ ಎಲ್ಲಾ ಘಟ್ಟಗಳಲ್ಲೂ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು; ಕನ್ನಡವೇ ಪ್ರಧಾನ ಭಾಷೆಯಾಗಬೇಕು ಅಂದೇ ನಮ್ಮೆಲ್ಲರಿಗೂ ಅಮೃತ ಪಾನ ಎಂದಿದ್ದಾರೆ. ಅಲ್ಲದೆ

ಕನ್ನಡ ನಾಡಿನಲ್ಲಿ ಕನ್ನಡ ಪ್ರಥಮ ಭಾಷೆಯಾಗಬೇಕು, ಶಿಕ್ಷಣದ ಎಲ್ಲಾ ಘಟ್ಟಗಳಲ್ಲಿಯೂ ಅದು ಶಿಕ್ಷಣ ಮಾಧ್ಯಮವಾಗಬೇಕು. ಈ ಎರಡು ಸಂಕಲ್ಪಗಳು ಕೈಗೂಡಿದರೆ ಉಳಿದೆಲ್ಲಾ ಕೇಡುಗಳೂ ಮಾಯವಾಗುತ್ತವೆ. **(ಕುವೆಂಪು ಸಮಗ್ರ ಗದ್ಯ, ಸಂಪುಟ-೨, ಸಂಪಾದಕರು ಡಾ.ಕೆ.ಸಿ. ಶಿವಾರೆಡ್ಡಿ, ಪುಟ-೫೪೯, ೬೨೨)**

**ಆಲೂರು ವೆಂಕಟರಾಯರು** : ಕರ್ನಾಟಕದಲ್ಲಿ ಎಲ್ಲವೂ ಕನ್ನಡದಲ್ಲಿಯೇ ಇರಬೇಕು. ಕರ್ನಾಟಕವೆಂಬುದೊಂದು ಜನಾಂಗ, ಅದಕ್ಕೆ ಒಂದೇ ಶರೀರ, ಮನಸ್ಸು ಮತ್ತು ಆತ್ಮಗಳಿರುತ್ತವೆ. ಎಂಬ ಭಾವನೆ ಎಲ್ಲಿಯವರೆಗೆ ನಮ್ಮಲ್ಲಿ ಉತ್ಪನ್ನವಾಗುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಕನ್ನಡವೆಂಬ ಭಾವ ತೋರುವುದಿಲ್ಲ ಎಂದು ತಿಳಿಸಿದ್ದಾರೆ.

**ಡಿ.ವಿ.ಜಿ** : ಕನ್ನಡ ಭಾಷೆ ಉಳಿದು ಬೆಳೆಯಬೇಕಾದರೆ ಶಿಕ್ಷಣ, ಆಡಳಿತ ಕೋರ್ಟು, ಕಛೇರಿಗಳಲ್ಲಿ ಕಡ್ಡಾಯವಾಗಬೇಕು. ಪ್ರಾಥಮಿಕದಿಂದ ಮಾಧ್ಯಮಿಕದವರೆಗೂ ಪ್ರಾದೇಶಿಕ ಭಾಷೆಯಲ್ಲಿಯೇ ನಡೆಸತಕ್ಕದ್ದು.

**ವಿ.ಕೃ. ಗೋಕಾಕ್** : ಯಾವುದೇ ವಿದೇಶಿ ಭಾಷೆಯನ್ನು ಪ್ರಾಥಮಿಕ ಹಂತದಲ್ಲಿ ಮಾಧ್ಯಮವನ್ನಾಗಿ ಮಾಡುವುದು ವಿನಾಶಕಾರಿ. ಕನ್ನಡ ಮಾಧ್ಯಮದಲ್ಲಿ ಕೇವಲ ಅಭಿಮಾನ ಒಂದೇ ಸೇರಿಲ್ಲ. ಮುಖ್ಯವಾಗಿ ಒಂದು ಪ್ರಾಣಸಮ ಮಹತ್ವದ ಶೈಕ್ಷಣಿಕ ವಿಷಯ ಅಡಕವಾಗಿದೆ. **(ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು, ಪ್ರಬೋಧ ಪುಸ್ತಕಮಾಲೆ ಮೈಸೂರು, ೧೯೮೯, ಪುಟ-೪)**

**ಪು.ತಿ.ನ** : ಕನ್ನಡ ನುಡಿಗೆ ಈಗೊದಗಿರುವ ಅವಸ್ಥೆಯನ್ನು ನೋಡಿದರೆ ಕಣ್ಣೀರು ಬರುವುದು. ಆದರೆ ಕಣ್ಣೀರು ಸುರಿಸುವುದರಿಂದ ಕಾರ್ಯ ಸಿದ್ಧಿಯಾಗದು. ಕನ್ನಡಕ್ಕೆ ಸ್ವಗೃಹದಲ್ಲಿಯೇ ಯಜಮಾನ್ಯವು ತಪ್ಪಿರುವುದು. ಈ ದುರಾವಸ್ಥೆಗೆ ಆಂಗ್ಲ ಭಾಷೆಯ ಪ್ರಾಬಲ್ಯವೇ ಎಂದು ತಮ್ಮಲ್ಲಿ ಹೊಸದಾಗಿ ಅರಿಕೆ ಮಾಡಬೇಕಿಲ್ಲ. **(ಪು.ತಿ.ನ ಸಮಗ್ರ ಗದ್ಯ, ಪುಟ ಸಂಖ್ಯೆ-೮೦೨)**

**ಜಿ.ಪಿ. ರಾಜರತ್ನಂ** : ಕರ್ನಾಟಕದ ಜನಜೀವನದಲ್ಲಿ ಕೆಳಗಿನಿಂದ ಹಿಡಿದು ಮೇಲಿನ ವರೆಗೂ ಎಲ್ಲಾ ಕ್ಷೇತ್ರಗಳಲ್ಲಿಯೂ ಕನ್ನಡವನ್ನು ಮಾಧ್ಯಮವನ್ನಾಗಿ ಮಾಡಬೇಕು. ಅತ್ಯಂತ ಅಗತ್ಯವಾದ ಈ ಕಾರ್ಯ ಈಡೇರುವವರೆಗೂ ಇತರ ಭಾಷೆಗಳು ಅದಕ್ಕೆ ಅಡ್ಡಿಯಾಗಬಾರದು. **(ಅಧ್ಯಕ್ಷರ ಭಾಷಣ ೧೯೭೮, ಪುಟ ಸಂಖ್ಯೆ -೩೫)**

**ಜಿ.ಎಸ್. ಶಿವರುದ್ರಪ್ಪ** : ಕನ್ನಡ ನಾಡಿನಲ್ಲಿ ಇನ್ನೂ ಕನ್ನಡ ಭಾಷೆಯ ಸ್ಥಾನಮಾನಗಳಿಗಾಗಿ ಹೊಡೆದಾಡುವಂಥ ಪರಿಸ್ಥಿತಿ ಉಳಿದಿರುವುದು ಹೆಮ್ಮೆ ತರುವ ಸಂಗತಿ ಅಲ್ಲ. ಪರಕೀಯರಿಂದ ಪಾರಾದರೂ, ಅವರ ಭಾಷೆಯನ್ನು ನಮ್ಮ ಮಕ್ಕಳ ಶಿಕ್ಷಣ ಮಾಧ್ಯಮವನ್ನಾಗಿಸುವಲ್ಲಿ ತೋರುತ್ತಿರುವ ಉತ್ಸಾಹ ಅತ್ಯಂತ ವಿಷಾದನೀಯ. **(ಜಿ.ಎಸ್. ಶಿವರುದ್ರಪ್ಪ ಸಮಗ್ರ ಗದ್ಯ ಪು.ಸಂ-೮೩)**

ಈ ಹಿನ್ನೆಲೆಯಲ್ಲಿ ಅನೇಕ ಸಾಹಿತಿಗಳು ಕನ್ನಡ ಭಾಷೆಯ ಮಹತ್ವ, ಅಗತ್ಯತೆಯನ್ನು ಅಲ್ಲದೆ ಕನ್ನಡ ಭಾಷೆ ಮಾಧ್ಯಮವಾಗಬೇಕೆಂದು ಒತ್ತಿ ಹೇಳುತ್ತಿದ್ದಾರೆ. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯು ಬೆಳೆದು ಬರಬೇಕೆಂದು ಹೋರಾಟ ಮಾಡಬೇಕಾದಂಥ ಪರಿಸ್ಥಿತಿ ಬಂದಿರುವುದು ಶೋಚನೀಯ. ಇಂಥ ಪರಿಸ್ಥಿತಿಯಲ್ಲಿ ಸರ್ಕಾರವು ಕನ್ನಡವನ್ನು ಭಾಷಾ

ಮಾಧ್ಯಮವನ್ನಾಗಿ ಜಾರಿಗೊಳಿಸದೇ ಹೈಕೋರ್ಟ್ ಮೊರೆ ಹೋಗಿದೆ. ಹೈಕೋರ್ಟ್ ಸಹ ಕನ್ನಡ ಮಾಧ್ಯಮವನ್ನು ಬಿಟ್ಟು ಇಂಗ್ಲೀಶ್ ಮಾಧ್ಯಮ ಪರವಾಗಿ ತೀರ್ಪು ನೀಡಿದೆ. ಹೀಗಾಗಿ ಹೈಕೋರ್ಟ್ ತೀರ್ಪಿನ ವಿರುದ್ಧ ಸರಕಾರ ಸುಪ್ರೀಂಕೋರ್ಟ್‌ಗೆ ಮನವಿ ಸಲ್ಲಿಸಿದೆ. ಆದರೆ ಸುಪ್ರೀಂಕೋರ್ಟ್ ಸಹ ಖಚಿತವಾದ ನಿರ್ಣಯವನ್ನು ನೀಡಲಾಗದೆ ಮುಂದೂಡುತ್ತಲೇ ಬರುತ್ತಿರುವುದು ನಮ್ಮೆಲ್ಲರ ಗಮನಕ್ಕೆ ಬರದಿರಲಾರದು. ಆದರೆ ಈ ನ್ಯಾಯಾಲಯದ ತೀರ್ಪಿನಿಂದಾಗಿ ಭಾಷಿಕ ಸಮಸ್ಯೆಗಳು ಹಾಗೆಯೇ ಉಳಿದುಕೊಳ್ಳುವಂತಾಗಿದೆ.

ಕಲಿಕೆಯ ವಿಷಯ ಹಾಗೂ ಮಾಧ್ಯಮ ಯಾವುದಾಗಿರಬೇಕು ಎನ್ನುವ ಚರ್ಚೆಯ ವಿಷಯ ಶೈಕ್ಷಣಿಕ ಮಟ್ಟಕ್ಕಿಂತ ಸಾಮಾಜಿಕ ನೆಲೆಯಲ್ಲಿ ಹೆಚ್ಚು ಚರ್ಚೆಯಾಗುತ್ತಿದೆ. ಸಾಮಾಜಿಕ ನೆಲೆಯಲ್ಲಿ ಇಂಗ್ಲೀಶ್ ಕಲಿಕೆಗೆ ಹೆಚ್ಚು ಬೇಡಿಕೆಯಿದೆ ಎನ್ನಲಾಗಿದೆ. ಹಾಗಾದರೆ ಇಂಗ್ಲೀಶ್ ಕಲಿಕೆಯ ಪರವಾಗಿಯೇ ಹೆಚ್ಚು ವಾದಗಳು ಕೇಳಿ ಬರುತ್ತಿವೆ, ಎನ್ನುವುದಕ್ಕೆ ಕಾರಣಗಳನ್ನು ಗುರುತಿಸುವ ಅಗತ್ಯತೆಯಿದೆ.

ಕನ್ನಡವನ್ನು ಭಾಷೆಯಾಗಿ ಕಲಿಸಬೇಕು ಎನ್ನುವ ನಿರ್ಧಾರವನ್ನು ಸರಕಾರವು ಕೈಗೊಂಡಿದೆ. ಆದರೆ ಅದನ್ನು ಪ್ರಥಮ ಭಾಷೆಯಾಗಿ ಉಳಿಸಬೇಕೆ ಅಥವಾ ದ್ವಿತೀಯ, ತೃತೀಯ ಭಾಷೆಯಾಗಿ ಅಳವಡಿಸಬೇಕೆ ಎನ್ನುವಲ್ಲಿ ಸ್ಪಷ್ಟತೆಯನ್ನು ಕಾಣಲು ಸಾಧ್ಯವಾಗಿಲ್ಲ. ಇಂದಿನ ಶಿಕ್ಷಣದಲ್ಲಿ ಭಾಷಾ ವ್ಯವಸ್ಥೆಯ ಮೂಲಕ ಇದನ್ನು ಗಮನಿಸಬಹುದು. ಈ ನೆಲೆಯಲ್ಲಿ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮ ಮತ್ತು ಇಂಗ್ಲೀಶ್ ಕಲಿಕೆ ವಿಚಾರವಾಗಿ ಬೆಳೆಯುತ್ತಿರುವ ಭಾಷಾ ವಿವಾದಗಳನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಪ್ರಾಥಮಿಕ ಶಿಕ್ಷಣದಲ್ಲಿ ಭಾಷಾಶಿಕ್ಷಣ ಮತ್ತು ಭಾಷಾಮಾಧ್ಯಮ ಕುರಿತು ಇದುವರೆಗು ಅಲ್ಲಲ್ಲಿ ಆಂಶಿಕವಾಗಿ ಚರ್ಚೆಗಳು ನಡೆದಿವೆ. ಅದರಲ್ಲಿ ಭಾಷಾಶಿಕ್ಷಣಕ್ಕಿಂತ ಭಾಷಾಮಾಧ್ಯಮದ ಮೇಲೆ ಚರಿತ್ರೆಯುದ್ದಕ್ಕೂ ಚರ್ಚೆಗಳು ನಡೆದುಕೊಂಡು ಬಂದಿವೆ. ಆದರೆ ಇತ್ತೀಚಿನ ಕೆಲವು ವರ್ಷಗಳಿಂದೀಚೆಗೆ ಈ ಚರ್ಚೆ ಮಹತ್ವ ಪಡೆದುಕೊಂಡು ತಾರಕಕ್ಕೇರಿದೆ.

ಶಿಕ್ಷಣದಲ್ಲಿ, ಭಾಷೆಯನ್ನು ಇನ್ನಿತರೆ ವಿಷಯಗಳಂತೆ ಒಂದು ವಿಷಯವಾಗಿ ಕಲಿಸುತ್ತಿರುವುದು ಒಂದು ವಿಧಾನ. ಗಣಿತ, ವಿಜ್ಞಾನ, ಸಮಾಜ ಇತ್ಯಾದಿ ವಿಷಯಗಳನ್ನು ಭಾಷಾ ಮಾಧ್ಯಮದಲ್ಲಿ ಕಲಿಸುತ್ತಿರುವುದು ಮತ್ತೊಂದು ವಿಧಾನ. ಈ ಎರಡೂ ವಿಧಾನಗಳಲ್ಲಿ ವ್ಯತ್ಯಾಸಗಳಿವೆ. ಆದರೆ ಪ್ರಸ್ತುತ ಶಿಕ್ಷಣದಲ್ಲಿ ಈ ಎರಡು ವಿಧಾನಗಳು ಏಕಕಾಲದಲ್ಲಿಯೇ ಜಾರಿಯಲ್ಲಿವೆ.

ಭಾಷೆಯನ್ನು ಒಂದು ವಿಷಯವಾಗಿ ಕಲಿಸುವ ವಿಧಾನವೇ ಬೇರೆ. ಇಡೀ ಶಿಕ್ಷಣವನ್ನು ಒಂದು ಮಾಧ್ಯಮದ ಮೂಲಕ ಕಲಿಸುವ ವಿಧಾನವೇ ಬೇರೆ. ಇವೆರಡೂ ಪ್ರತ್ಯೇಕವಾದ

ಚರ್ಚೆಗಳಾಗಿವೆ. ಭಾಷೆಯನ್ನು ಕಲಿಸುವ ವಿಚಾರದಲ್ಲಿ ಹೆಚ್ಚಾಗಿ ಗೊಂದಲಗಳು ಕಂಡು ಬರುವುದಿಲ್ಲ. ಆದರೆ ಯಾವ ಮಾಧ್ಯಮದಲ್ಲಿ ಕಲಿಸಬೇಕು ಮತ್ತು ಯಾವ ವಿಧಾನದಲ್ಲಿ ಕಲಿಸಬೇಕು ಎನ್ನುವ ಕುರಿತು ಭಾಷಾಚಿಂತಕರು, ಶಿಕ್ಷಣತಜ್ಞರು, ಸಾಹಿತಿಗಳು ಚರ್ಚೆಗಳನ್ನು ಬೆಳೆಸಿರುವುದು ಕಂಡು ಬರುತ್ತದೆ. ಶಿಕ್ಷಣದಲ್ಲಿ ಭಾಷೆಯನ್ನು ಕಲಿಯುವುದು ಒಂದು ಮುಖ್ಯ ಗುರಿಯಾಗಿದೆ. ಹಾಗೆ ಕಲಿಯುವ ಸಂದರ್ಭದಲ್ಲಿ ಕೆಲವು ನಿಯಮಗಳುಂಟು ಮುಖ್ಯವಾಗಿ ಒಂದನೇ ತರಗತಿಯಿಂದ ನಾಲ್ಕನೇ ತರಗತಿಯವರೆಗೆ ಕೇವಲ ಮಾತೃಭಾಷೆಯನ್ನು ಮಾತ್ರ ಕಲಿಯುವುದು. ನಂತರ ಐದರಿಂದ ಹತ್ತನೇ ತರಗತಿಯವರೆಗೆ ದ್ವಿತೀಯ ಹಾಗೂ ತೃತೀಯ ಭಾಷೆಯಾಗಿ ಪ್ರಾದೇಶಿಕ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಭಾಷೆಗಳನ್ನು ಕಲಿಯಬೇಕೆನ್ನುವುದು ಶಿಕ್ಷಣ ವ್ಯವಸ್ಥೆಯಲ್ಲಿರುವ ತತ್ವವಾಗಿದೆ. ರಾಜ್ಯದಲ್ಲಿರುವ ಎಲ್ಲಾ ಅಲ್ಪಸಂಖ್ಯಾತ ಭಾಷಿಕರು ನಾಲ್ಕನೇ ತರಗತಿಯವರೆಗೆ ಮಾತೃಭಾಷೆಯನ್ನು ಕಲಿಯುತ್ತಿದ್ದಾರೆಂದು ಹೇಳಲು ಸಾಧ್ಯವಿಲ್ಲ. ಕಾರಣ ಅಧಿಕೃತವಾಗಿ ರಾಜ್ಯದಲ್ಲಿ ಕನ್ನಡ ಮತ್ತು ಇಂಗ್ಲೀಶ್ ಭಾಷೆಯ ಶಿಕ್ಷಣ ವ್ಯವಸ್ಥೆ ಜಾರಿಯಲ್ಲಿದೆ. ಅದೇ ರೀತಿಯಾಗಿ ಶಿಕ್ಷಣದಲ್ಲಿ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಸಾಮ್ಯತೆ ಇಲ್ಲದಿರುವುದನ್ನು ಗುರುತಿಸಬಹುದು. ಹೇಗೆಂದರೆ ಶಿಕ್ಷಣ ನೀತಿಯ ಪ್ರಕಾರ ಮಗುವಿನ ಮಾತೃಭಾಷೆ ಪ್ರಥಮ ಭಾಷೆಯಾಗಿರಬೇಕು ಆದರೆ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಮತ್ತು ಇಂಗ್ಲೀಶ್ ಭಾಷೆಗಳೇ ಪ್ರಥಮ ಭಾಷೆಗಳಾಗಿವೆ. ಈ ಎರಡು ಮಾಧ್ಯಮ ಶಾಲೆಗಳಲ್ಲಿ ಕನ್ನಡ ಹಾಗೂ ಇಂಗ್ಲೀಶನ್ನು ದ್ವಿತೀಯ ಭಾಷೆಯಾಗಿ ಕಲಿಸಲಾಗುತ್ತಿದೆ. ಹೀಗೆ ಕಲಿಸುವಾಗ ಸಾಮಾನ್ಯ ಕಲಿಕೆಯ ತತ್ವಗಳನ್ನೇ ಭಾಷಾ ಕಲಿಕೆಗೂ ಅನ್ವಯಿಸಲಾಗುತ್ತಿದೆ. ಆದರೆ ಭಾಷೆಯನ್ನು ಕಲಿಯಲು ಬಳಸುವ ವಿಧಾನಗಳು ಬೇರೆಯಾಗಿವೆ ಎಂಬುದು ಇತ್ತೀಚಿನ ಅಧ್ಯಯನಗಳಿಂದ ಸ್ಪಷ್ಟವಾಗುತ್ತದೆ. ಅದರಲ್ಲೂ ಮುಖ್ಯವಾಗಿ ಕನ್ನಡ ಮತ್ತು ಇಂಗ್ಲೀಶ್ ಈ ಎರಡು ಭಾಷೆಗಳಲ್ಲಿ ಕಲಿಕೆಯ ವಿಧಾನಗಳು ಬೇರೆಯಾಗಿರುತ್ತದೆ. ಏಕೆಂದರೆ ಕನ್ನಡ ಮಾತೃಭಾಷೆಯಾಗಿರುವ ಮಕ್ಕಳು ಶಾಲೆಯಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿಯುವಾಗ ಕೇವಲ ಓದು ಮತ್ತು ಬರಹವನ್ನು ಮಾತ್ರ ಕಲಿಯುತ್ತಾರೆ. ಆದರೆ ಇಂಗ್ಲೀಶನ್ನು ಮಾತೃ ಭಾಷೆಯಾಗಿ ಹೊಂದದೇ ಇರುವ ಮಕ್ಕಳು ಪ್ರಾರಂಭದಿಂದ ನಾಲ್ಕು ಭಾಷಾ ಕೌಶಲಗಳನ್ನು ಕಲಿಯಬೇಕಾಗುತ್ತದೆ. ಕಾರಣ ಔಪಚಾರಿಕ ನೆಲೆಯಲ್ಲಿ ಇಂಗ್ಲೀಶನ್ನು ಬಳಸುವುದಿಲ್ಲ. ಹಾಗಾಗಿ ಭಾಷೆಯನ್ನು ಕಲಿಯುವ ವಿಧಾನಗಳು ಮತ್ತು ಉಳಿದ ವಿಷಯಗಳನ್ನು ಮಾಧ್ಯಮದ ಮೂಲಕ ಕಲಿಯುವ ವಿಧಾನದಲ್ಲಿ ಸಾಕಷ್ಟು ಸಮಸ್ಯೆಗಳು ಹಾಗೂ ಭಿನ್ನತೆಗಳಿವೆ. ಈ ಹಿನ್ನೆಲೆಯಲ್ಲಿ ಭಾಷೆ ಮತ್ತು ಮಾಧ್ಯಮದ ನಡುವೆ ಇರುವ ಸ್ವರೂಪವನ್ನು ಅರ್ಥೈಯಿಸುವುದು ಹಾಗೂ ವಿಶ್ಲೇಷಿಸುವುದು ಪ್ರಚಲಿತದಲ್ಲಿ ಅವಶ್ಯಕವೆನಿಸುತ್ತದೆ. ಈ ರೀತಿಯಾಗಿ ಒಂದು ವಿಷಯವನ್ನು ಕಲಿಸುವ ವಿಧಾನ ಕುರಿತು ಚಿಂತನೆಗಳು ನಡೆದಿರುವುದು ಬೆಳಕಿಗೆ ಬರುತ್ತಿದೆ. ಅದರಲ್ಲೂ

ಇಂಗ್ಲೀಶ್ ಅತ್ಯಂತ ಬೇಡಿಕೆ ಭಾಷೆಯಾಗಿ ಪರಿಣಮಿಸುತ್ತಿರುವುದರಿಂದ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕೆನ್ನುವ ಒತ್ತಾಯ ಸಾರ್ವಜನಿಕರಲ್ಲಿ ತೀವ್ರವಾಗಿದೆ. ಆದರೆ ಇದಕ್ಕೆ ಕನ್ನಡ ಚಿಂತಕರ ಒಮ್ಮತವಿಲ್ಲ.

ಪ್ರಾಥಮಿಕ ತರಗತಿಯಿಂದ ಪದವಿ ಹಂತದವರೆಗೆ ವಿಷಯಗಳನ್ನು ಒಂದು ಮಾಧ್ಯಮದ ಮೂಲಕ ಕಲಿಸಬೇಕು ಎನ್ನುವುದು ಒಂದು ಪ್ರತ್ಯೇಕವಾದ ಚರ್ಚೆಯಾಗಿ ಬೆಳೆಯುತ್ತಿದೆ. ಈ ಚರ್ಚೆ ನಿನ್ನೆಯದಲ್ಲ. ಚರಿತ್ರೆದುದ್ದಕ್ಕೂ ಈ ಚರ್ಚೆ ನಡೆದು ಬಂದಿದೆ. ಹಿಂದಿನ ಕಾಲದಿಂದಲೂ ಸಹ ಮಾತೃಭಾಷಾ ಮಾಧ್ಯಮದ ಮೂಲಕವೇ ಕಲಿಸಬೇಕೆಂದು ಶಿಕ್ಷಣಚಿಂತಕರು, ಸಮಾಜಸುಧಾರಕರು ಹೇಳುತ್ತಾ ಬಂದಿದ್ದಾರೆ. ಇವರೆಲ್ಲರ ಹೋರಾಟದ ಫಲವೇ, ಕಾಲದಿಂದ ಕಾಲಕ್ಕೆ ಮಾತೃಭಾಷಾ ಮಾಧ್ಯಮದ ಬಗ್ಗೆ ವರದಿಗಳು ಹುಟ್ಟಿಕೊಂಡಿವೆ.

ಪ್ರಸ್ತುತ ಸಂದರ್ಭದಲ್ಲಿ ಜಾಗತೀಕರಣದ ತೀವ್ರತರನಾದ ಬೆಳವಣಿಗೆಯಿಂದಾಗಿ ಇಂಗ್ಲೀಶ್ ಮಾಧ್ಯಮದಲ್ಲಿ ಕಲಿಯುವುದು ಅತ್ಯಂತ ಅವಶ್ಯಕ ಎಂಬ ಕೂಗು ಸಮಾಜದಲ್ಲಿ ಕೇಳಿ ಬರುತ್ತಿದೆ. ಇದರ ಫಲವಾಗಿಯೇ ಇಂಗ್ಲೀಶ್ ಮಾಧ್ಯಮ ಪರವಾಗಿ ವಾಗ್ವಾದಗಳು ಕಂಡು ಬರುತ್ತಿವೆ. ಆದರೆ ವಿದ್ವಾಂಸರು, ಸಾಹಿತಿಗಳು ಮಾತ್ರ ಶಿಕ್ಷಣ ಮಾತೃಭಾಷಾ ಮಾಧ್ಯಮದಲ್ಲಿಯೇ ನಡೆಯಬೇಕು. ಇದರಿಂದ ಕಲಿಕೆ ಅರ್ಥಪೂರ್ಣವಾಗಿ, ಮಗುವಿನ ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗಬಲ್ಲದು ಎಂದು ವಿಶ್ಲೇಷಿಸುತ್ತಾರೆ. ಅಂದರೆ ಈ ಮೇಲಿನ ವಿವರಣೆಯಿಂದ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ಕಲಿಸಬೇಕು ಎಂಬ ಅಭಿಪ್ರಾಯದಲ್ಲಿ ಗೊಂದಲಗಳಿವೆ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಕರ್ನಾಟಕ ಸರ್ಕಾರ ಮಾತ್ರ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು ಎಂದು ರಾಜ್ಯದಲ್ಲಿ ಜಾರಿ ಮಾಡಿದೆ. ಈ ನಿಯಮ ಸರ್ಕಾರಿ ಶಾಲೆಗಳಲ್ಲಿ ಮಾತ್ರ ಕಡ್ಡಾಯವಾಗಿದೆ. ಅಂದರೆ ಖಾಸಗಿ ಶಾಲೆಗಳಲ್ಲಿ ಈ ನಿಯಮ ಜಾರಿಯಲ್ಲಿಲ್ಲ. ಹೈಕೋರ್ಟ್ ಸಹ ೨೦೦೮ರಲ್ಲಿ ಈ ನಿಯಮ ಖಾಸಗಿ ಶಾಲೆಗಳಿಗೆ ಅನ್ವಯಿಸುವುದಿಲ್ಲವೆಂದು ಹೇಳಿದೆ. ಈ ರೀತಿಯ ಇಬ್ಬಗೆ ನೀತಿಯಿಂದಾಗಿ ಭಾಷಾಮಾಧ್ಯಮ ಕುರಿತು ವಾಗ್ವಾದಗಳು ವ್ಯಾಪಕವಾಗಿ ಚರ್ಚೆಯಾಗುತ್ತಿವೆ.

ಭಾಷಾ ಮಾಧ್ಯಮವನ್ನು ಕುರಿತು ಚಿಂತಕರು, ಸಾಹಿತಿಗಳು ಮಾತೃಭಾಷೆಯ ಪರವಾಗಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ನಮಗೆಲ್ಲಾ ತಿಳಿದ ವಿಷಯ. ಆದರೆ ಇವರೆಲ್ಲಾ ಶಿಕ್ಷಣ ನೀಡುವ ಶಿಕ್ಷಕರನ್ನು, ಕಲಿಯುವ ಮಕ್ಕಳನ್ನು ಮತ್ತು ಪಾಲಕರನ್ನು ಗಮನದಲ್ಲಿಟ್ಟುಕೊಂಡು ಚರ್ಚೆಗಳನ್ನು ನಡೆಸುತ್ತಿಲ್ಲ. ಬದಲಾಗಿ ಭಾಷಿಕ, ಆರ್ಥಿಕ, ರಾಜಕೀಯ ಹಾಗೂ ಜಾಗತೀಕರಣದ ಹಿನ್ನೆಲೆಯಲ್ಲಿ ವಾಗ್ವಾದಗಳು ಸೃಷ್ಟಿಯಾಗುತ್ತಿವೆ. ಈ ತೆರನಾದ ಪ್ರಭಾವ ಪ್ರಾಚೀನ ಕಾಲದ ಶಿಕ್ಷಣ ಪದ್ಧತಿಯಿಂದಲೂ ಒಂದಲ್ಲಾ ಒಂದು ಕಾರಣಗಳಿಂದ ನಡೆದು ಬಂದಿದೆ. ಆದ್ದರಿಂದ ಚಾರಿತ್ರಿಕವಾಗಿ ಬಂದ ಶಿಕ್ಷಣ ಪರಂಪರೆಯನ್ನು ಗುರುತಿಸಿ, ಬ್ರಿಟೀಶ್ ಹಾಗೂ ಕರ್ನಾಟಕದ ಏಕೀಕರಣದ ನಂತರ ಬಂದ ವರದಿಗಳು ಮತ್ತು ಭಾಷಾ ಚಳುವಳಿಗಳು ಭಾಷಾ

ಮಾಧ್ಯಮವನ್ನು ಕುರಿತು ಏನನ್ನು ಹೇಳುತ್ತವೆ, ಮತ್ತು ಪ್ರಸ್ತುತ ಸಂದರ್ಭದಲ್ಲಿ ಅವುಗಳನ್ನು ಹೇಗೆ ಬಳಸಿಕೊಳ್ಳಲಾಗುತ್ತಿದೆ ಎಂಬುದನ್ನು ಗಮನಿಸಬೇಕಿದೆ. ಏಕೆಂದರೆ ಇದುವರೆಗು ಭಾಷಾಮಾಧ್ಯಮದ ಬಗ್ಗೆ ಆಂಶಿಕವಾದ ಚರ್ಚೆಗಳು ನಡೆಯುತ್ತಾ ಬಂದಿವೆಯೇ ಹೊರತು ಸಮಗ್ರ ರೂಪದ ಅಧ್ಯಯನಗಳು ನಡೆದಿರುವುದು ವಿರಳ. ಇಂತಹ ಕೊರತೆಯನ್ನು ನೀಗಿಸುವ ಸಲುವಾಗಿ ಬ್ರಿಟೀಷರ ಕಾಲದಿಂದ ಇಂದಿನಕಾಲದವರೆಗೆ ಬಂದಂತಹ ಭಾಷಾ ಚಳುವಳಿಗಳು, ವರದಿಗಳನ್ನು ಮುಖ್ಯವಾಗಿ ಬಳಸಿಕೊಂಡು ಚಚಿಸಲಾಗಿದೆ. ಹಾಗೆಯೇ ಕರ್ನಾಟಕ ಏಕೀಕರಣದ ನಂತರ ಬಂದ ಕೆಲವು ಕನ್ನಡಭಾಷಾ ಪಠ್ಯ ಪುಸ್ತಕಗಳ ಸ್ವರೂಪವನ್ನು ವಿಶ್ಲೇಷಣೆ ಮಾಡಲಾಗಿದೆ. ನಂತರದಲ್ಲಿ ಭಾಷಾ ಮಾಧ್ಯಮದ ವಾಗ್ವಾದಗಳನ್ನು ಪ್ರಧಾನವಾಗಿರಿಸಿಕೊಂಡು ಅವುಗಳ ಸ್ವರೂಪವನ್ನು ವಿಶ್ಲೇಷಿಸುವುದು ಈ ಅಧ್ಯಯನದ ಮಹದುದ್ದೇಶವಾಗಿದೆ.

## ೧.೨. ಅಧ್ಯಯನದ ಸ್ವರೂಪ

ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು (ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ) ಎನ್ನುವ ಶೀರ್ಷಿಕೆ ಅಡಿಯಲ್ಲಿ ಒಟ್ಟು ಏಳು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಮಾತೃಭಾಷೆ ಶಿಕ್ಷಣ ಕುರಿತು ಉಂಟಾದ ವಾಗ್ವಾದಗಳ ಸ್ವರೂಪವನ್ನು ಕುರಿತು ಪ್ರಮುಖ ಅಂಶವಾಗಿ ಪರಿಗಣಿಸಿ ಅಧ್ಯಯನ ಮಾಡಲಾಗಿದೆ.

ಮೊದಲಿಗೆ ಸಂಶೋಧನಾ ವಿಷಯದ ಉದ್ದೇಶವನ್ನು ಪ್ರಾರಂಭದಲ್ಲಿ ತಿಳಿಸಲಾಗಿದೆ. ಸಂಶೋಧನೆಯ ಚೌಕಟ್ಟು, ಅಧ್ಯಯನದ ವಿಷಯ ವ್ಯಾಪ್ತಿಯನ್ನು ವಿವರಿಸಲಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮ ಕಡ್ಡಾಯ ಮತ್ತು ಇಂಗ್ಲೀಶ್ ಕಲಿಕೆಗೆ ಸಂಬಂಧಿಸಿದ ಈ ಎರಡು ಚಿಂತನೆಗಳ ಮೂಲಕ ಬೆಳೆದು ಬಂದಿರುವ ಮಹತ್ವದ ಅಂಶವನ್ನು ಕುರಿತು ಚರ್ಚಿಸಲಾಗಿದೆ.

ಇದರ ಜೊತೆಗೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗು ಬಂದಿರುವ ಅಧ್ಯಯನಗಳನ್ನು ಕಾಲಾನುಕ್ರಮದಲ್ಲಿರಿಸಿ ಚರ್ಚಿಸಲಾಗಿದೆ. ಪ್ರಾರಂಭದಲ್ಲಿ ಪಿಎಚ್.ಡಿ. ಮಹಾಪ್ರಬಂಧಗಳನ್ನು ನಂತರ ಎಂ.ಫಿಲ್ ಪ್ರಬಂಧಗಳನ್ನು ಮತ್ತು ಎಂ.ಇಡಿ. ಶಿಕ್ಷಣ ಪದವಿಯ ಕಿರುಪ್ರಬಂಧಗಳನ್ನು ಚರ್ಚಿಸಲಾಗಿದೆ. ನೇರವಾಗಿ ಅಧ್ಯಯನಕ್ಕೆ ನೆರವಾಗುವಂತಹ ಕೃತಿಗಳನ್ನು ಚರ್ಚಿಸಲಾಗಿದೆ.

ನಂತರದಲ್ಲಿ ಪ್ರಾಚೀನ ಭಾರತದಲ್ಲಿ ವೇದ, ಬೌದ್ಧ ಹಾಗೂ ಮುಸ್ಲಿಮರ ಮತ್ತು ಬ್ರಿಟೀಷರ ಕಾಲಘಟ್ಟಗಳಲ್ಲಿದ್ದ ಶಿಕ್ಷಣ ಪದ್ಧತಿಯ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ. ಈ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಣದ ಭಾಷೆ, ಬೋಧನಾ ಮಾಧ್ಯಮ, ಪಠ್ಯಕ್ರಮ ಇತ್ಯಾದಿ ಅಂಶಗಳ ಸ್ವರೂಪವನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದಲ್ಲಿನ ಶಿಕ್ಷಣ ಪರಂಪರೆ

ಮೂಲತಃವಾಗಿ ಭಾರತೀಯ ಹಿನ್ನೆಲೆಯಲ್ಲಿ ಬೆಳೆದು ಬಂದಿದ್ದರಿಂದ ಪೂರ್ವಪೀಠಿಕೆಯಾಗಿ ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯ ಸ್ವರೂಪವನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಮುಂದಿನ ಭಾಗದಲ್ಲಿ ಸ್ವಾತಂತ್ರ ಪೂರ್ವದಲ್ಲಿ ಬ್ರಿಟೀಷರು ಮತ್ತು ಸ್ವಾತಂತ್ರ ನಂತರದಲ್ಲಿ ಭಾರತ ಸರ್ಕಾರವು ಶಿಕ್ಷಣದ ಭಾಷೆ ಹಾಗೂ ಮಾಧ್ಯಮ ಕುರಿತಾಗಿ ಜಾರಿಗೆ ತಂದಂತಹ ವರದಿಗಳನ್ನು ಚರ್ಚಿಸಿ ವಿಶ್ಲೇಷಿಸಲಾಗಿದೆ. ಹಾಗೆಯೇ ರಾಜ್ಯ ಸರ್ಕಾರ ಹೊರಡಿಸಿದ ವರದಿಗಳನ್ನು ಸಹ ಚರ್ಚೆಗೆ ಬಳಸಿಕೊಳ್ಳಲಾಗಿದೆ.

ನಂತರದಲ್ಲಿ ಏಕೀಕರಣದಿಂದ ಪ್ರಸ್ತುತದವರೆಗೆ ಬಂದ ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳ ಸ್ವರೂಪವನ್ನು ಚರ್ಚಿಸಲಾಗಿದೆ. ಮುಖ್ಯವಾಗಿ ಭಾಷೆ ಹಾಗೂ ಮಾಧ್ಯಮ ಕುರಿತಾದ ವಾಗ್ವಾದಗಳನ್ನು ಅಧ್ಯಯನ ಮಾಡುವುದು ಮೂಲ ಉದ್ದೇಶವಾಗಿದ್ದರಿಂದ ಮುಖ್ಯವೆನಿಸಿರುವ ಕೆಲವು ಭಾಷಾ ಪಠ್ಯಗಳನ್ನು ಬಳಸಿಕೊಂಡು ಭಾಷಾ ಸ್ವರೂಪವನ್ನು ಚರ್ಚೆಗೆ ಒಳಪಡಿಸಲಾಗಿದೆ.

ಮುಂದಿನ ಭಾಗದಲ್ಲಿ ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಭಾಷಾ ಕಲಿಕೆ ಹಾಗೂ ಮಾತೃಭಾಷಾ ಮಾಧ್ಯಮ ಮತ್ತು ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಎಂಬ ವಿಚಾರ ಕುರಿತಾದ ವಾಗ್ವಾದಗಳ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನಡೆಯಬೇಕು ಎನ್ನುವುದು ಒಂದು ವಿಧದ ಭಾಷಾನೀತಿಯಾಗಿದೆ. ಶಿಕ್ಷಣದಲ್ಲಿ ಯಾವ ತರಗತಿಯಿಂದ ಎಷ್ಟು ಭಾಷೆಗಳನ್ನು ಕಲಿಸ ಬೇಕೆನ್ನುವುದು ಶಿಕ್ಷಣದ ನೀತಿಯಾಗಿದೆ. ಈ ಶಿಕ್ಷಣ ನೀತಿಯಲ್ಲಿಯೇ ಸಾಕಷ್ಟು ಗೊಂದಲಗಳಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಈ ಭಾಷಾನೀತಿ ಕುರಿತು ಕೋರ್ಟ್ ನೀಡಿರುವ ತೀರ್ಪು ಸಹ ಅನೇಕ ಗೊಂದಲಗಳನ್ನು ಸೃಷ್ಟಿಸಿದೆ. ಈ ನೆಲೆಯಿಂದ ಇದುವರೆಗು ಲಭ್ಯ ವಾದಂತಹ ಮಾಹಿತಿಗಳನ್ನು ಬಳಸಿಕೊಂಡು ವಿವಿಧ ಚಿಂತಕರ, ಸಾಹಿತಿಗಳ, ಶಿಕ್ಷಣತಜ್ಞರ ಅಭಿಪ್ರಾಯಗಳನ್ನು ವಿಶ್ಲೇಷಿಸಲಾಗಿದೆ. ಈ ವಾಗ್ವಾದಗಳು ಹುಟ್ಟು ಹಾಕಿರುವ ಗೊಂದಲಗಳನ್ನು ವಿವಿಧ ನೆಲೆಯಲ್ಲಿ ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಕೊನೆಯ ಭಾಗದಲ್ಲಿ ಸಂಶೋಧನೆಯಲ್ಲಿ ಕಂಡುಕೊಂಡ ಒಳನೋಟಗಳನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಜೊತೆಗೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಪರಿವಿಡಿಯಾನುಸಾರವಾಗಿ ದಾಖಲಿಸಲಾಗಿದೆ. ಅಲ್ಲದೆ ಕೊನೆಯದಾಗಿ ಮುಂದೆ ಕೈಗೊಳ್ಳಬಹುದಾದ ಅಧ್ಯಯನದ ಸಾಧ್ಯತೆಗಳನ್ನು ಸಹ ಕೊಡಲಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನವನ್ನು ಅರ್ಥಪೂರ್ಣವಾಗಿ ಮುಕ್ತಾಯಗೊಳಿಸಲಾಗಿದೆ.

## ೧.೩. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಚಾರಿತ್ರಿಕ ವಿಶ್ಲೇಷಣೆ ಮಾದರಿಯ ಅಧ್ಯಯನವಾಗಿದೆ. ಈ ಅಧ್ಯಯನದ ಆಧಾರದ ಮೇಲೆ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಲ್ಲಿ ಒಂದು ಹೊಸ ಆಯಾಮವನ್ನು ರೂಪಿಸಲು ಸಹಾಯಕವಾಗಬಹುದು.

ಅಲ್ಲದೆ, ಶಿಕ್ಷಣ ಕ್ಷೇತ್ರಕ್ಕೆ ಪ್ರಸ್ತುತ ಅಧ್ಯಯನ ಬಹಳ ಪ್ರಯೋಜನಕಾರಿಯಾಗಿದೆ. ಜೊತೆಗೆ ರಾಜ್ಯ ಸರಕಾರ ಮುಂದೆ ರೂಪಿಸಬಹುದಾದ ಹೊಸ ಯೋಜನೆಗಳಿಗೆ ಸಲಹಾ ಕೈಪಿಡಿಯಾಗಬಲ್ಲದು. ರಾಜ್ಯ ಸರಕಾರಿ ಸಂಘಸಂಸ್ಥೆಗಳಾದ ಕನ್ನಡಸಾಹಿತ್ಯ ಪರಿಷತ್ತು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮುಂತಾದವುಗಳು ಮುಂದೆ ಭಾಷಾ ನೀತಿಯನ್ನು ಜಾರಿಗೆ ತರುವಲ್ಲಿ ಹೆಚ್ಚಿನ ಜವಾಬ್ದಾರಿಯುತ ಸೂಕ್ತವಾದ ಕ್ರಮಗಳನ್ನು ಕೈಗೊಳ್ಳುವಲ್ಲಿ ಈ ಅಧ್ಯಯನ ನೆರವಾಗಬಲ್ಲದು.

ಮುಖ್ಯವಾಗಿ ಭಾಷಿಕ ಸಮಸ್ಯೆಯನ್ನು ನಿವಾರಿಸಿ ಏಕರೂಪವಾದ ಸಾರ್ವತ್ರಿಕ ಶಿಕ್ಷಣ ಜಾರಿಗೆ ಬರುವಂತೆ ಶಿಕ್ಷಣದಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಮತ್ತು ಉತ್ತಮ ಶಿಕ್ಷಣವನ್ನು ರೂಪಿಸುವ ಕಡೆಗೆ ಅಧ್ಯಯನ ಪ್ರಮುಖ ಪಾತ್ರವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಭಾಷಾ ನೀತಿಯಿಂದಾಗುತ್ತಿರುವ ಗೊಂದಲಗಳನ್ನು ಸಮಸ್ಯೆಗಳನ್ನು ಅರ್ಥೈಸಿಕೊಳ್ಳುವ ಉದ್ದೇಶದಿಂದ ಅಧ್ಯಯನ ಕೈಗೊಂಡಿರುವುದು ಹೆಚ್ಚು ಉಪಯುಕ್ತವಾಗಿದೆ. ಪ್ರಚಲಿತದಲ್ಲಿರುವ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾತೃಭಾಷೆ ಮಾಧ್ಯಮ ಮತ್ತು ಇಂಗ್ಲೀಶ್ ಕಲಿಕೆ ಒಂದನೇ ತರಗತಿಯಿಂದಲೇ ಬೇಕೆ? ಬೇಡವೇ? ಎನ್ನುವ ಎರಡು ಪ್ರಮುಖ ಚಿಂತನೆಗಳ ಸ್ವರೂಪವನ್ನು ಕುರಿತು ಸಮಗ್ರ ರೂಪದಲ್ಲಿ ಅಧ್ಯಯನ ಮಾಡಿರುವುದು ಹೆಚ್ಚು ಸಹಕಾರಿಯಾಗಿದೆ. ಇದರ ನೆರವಿನಿಂದಾಗಿ ಪ್ರಸ್ತುತ ಶೈಕ್ಷಣಿಕ ವಲಯದಲ್ಲಿ ಉತ್ತಮ ಭಾಷಾನೀತಿ ಜಾರಿಗೆ ತರಲು ಈ ಅಧ್ಯಯನವು ಹೆಚ್ಚು ಸಹಾಯಕವಾಗಬಲ್ಲದು.

## ೧.೪. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕರ್ನಾಟಕ ಏಕೀಕರಣದ ನಂತರ ಬಂದ ವರದಿಗಳನ್ನು, ನಿಯತಕಾಲಿಕೆಗಳಲ್ಲಿನ ಲೇಖನಗಳನ್ನು ಪ್ರಮುಖವಾಗಿ ಚರ್ಚೆಗೆ ಬಳಸಿಕೊಳ್ಳಲಾಗಿದೆ. ೧೯೫೬ರ ನಂತರದಲ್ಲಿ ಬಂದಿರುವ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿ ಲಭ್ಯವಾದ ಒಂದರಿಂದ ಏಳನೇ ತರಗತಿಯ ಕೆಲವು ಪುಸ್ತಕಗಳನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ವರದಿಗಳು ಮತ್ತು ಲೇಖನಗಳಲ್ಲಿ ಭಾಷಾಮಾಧ್ಯಮ ಕುರಿತಾಗಿ ಚರ್ಚಿಸಿರುವ ಅಂಶಗಳನ್ನು ಮಾತ್ರ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಜೊತೆಗೆ ಪ್ರಚಲಿತದಲ್ಲಿ ಮಾಧ್ಯಮದ ಚರ್ಚೆ ಕುರಿತು ಇಂದಿಗೂ ಬರುತ್ತಿರುವ ಲೇಖನಗಳನ್ನು ಬಳಸಿಕೊಳ್ಳಲಾಗುತ್ತಿದೆ ಮತ್ತು ಪ್ರಾಥಮಿಕ ಕನ್ನಡಭಾಷಾ ಪಠ್ಯಪುಸ್ತಕಗಳು ಮಾಧ್ಯಮದ

ಹಿನ್ನೆಲೆಯಲ್ಲಿ ರಚನೆಯಾಗಿವೆಯೆ ಇಲ್ಲವೆ ಎಂಬುದನ್ನು ಧ್ವನಿ, ಪದ, ವಾಕ್ಯ ಇತ್ಯಾದಿ ಅಂಶಗಳಿಗೆ ಸಿಮೀತಗೊಳಿಸಿಕೊಳ್ಳಲಾಗಿದೆ.

ಪ್ರಾಥಮಿಕ ಶಿಕ್ಷಣದಲ್ಲಿನ ಭಾಷೆ ಮತ್ತು ಮಾಧ್ಯಮದ ಚರ್ಚೆ ಪ್ರಸ್ತುತದ ಶಿಕ್ಷಣ ವ್ಯವಸ್ಥೆಯಲ್ಲಿ ಭಾಷಿಕ ಸಮಸ್ಯೆಯಾಗಿ, ಸವಾಲಾಗಿ ಮರುಕಳಿಸಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಈ ಮೇಲೆ ಸೂಚಿಸಿದ ಆಕರಗಳನ್ನು ಮಾತ್ರ ಬಳಸಿಕೊಂಡು ಭಾಷಾ ಮಾಧ್ಯಮದ ಕುರಿತು ವಿವರಣೆ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಪ್ರಸ್ತುತ ಅಧ್ಯಯನವು ಪಿಎಚ್.ಡಿ ಮಹಾಪ್ರಬಂಧವಾಗಿರುವುದರಿಂದ ಕಾಲದ ಪರಿಮಿತಿಗೆ ಒಳಪಟ್ಟಿದೆ. ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮಾಧ್ಯಮದ ಬಗ್ಗೆ ಚರ್ಚೆ ನಡೆದ ಕೃತಿಗಳನ್ನು ಮತ್ತು ನಿಯತಕಾಲಿಕೆಗಳಲ್ಲಿನ ಲೇಖನಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ. ಈ ಮೇಲಿನ ಆಕರಗಳೇ ಸಾಕಷ್ಟು ವಿವರಗಳನ್ನು ಒದಗಿಸುತ್ತಿರುವುದರಿಂದ ಕ್ಷೇತ್ರಕಾರ್ಯ, ವ್ಯಕ್ತಿಸಂದರ್ಶನ ಆಧಾರಿತ ಮಾಹಿತಿಗಳನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಿಲ್ಲ. ಇದು ಈ ಅಧ್ಯಯನದ ಮಿತಿಯೂ ಹೌದು ವ್ಯಾಪ್ತಿಯೂ ಹೌದು.

## ೧.೫. ಅಧ್ಯಯನಕ್ಕೆ ಅಳವಡಿಸಿದ ವೈಧಾನಿಕತೆ

ಪ್ರಸ್ತುತ ಅಧ್ಯಯನವು, ಪ್ರಚಲಿತದಲ್ಲಿ ಪ್ರಧಾನವಾಗಿ ಚರ್ಚೆಯಾಗುತ್ತಿರುವ ಪ್ರಾಥಮಿಕ ಹಂತದ ಕನ್ನಡ ಭಾಷಾಮಾಧ್ಯಮದ ವಾಗ್ವಾದಗಳನ್ನು ಗಮನದಲ್ಲಿಟ್ಟುಕೊಂಡು ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಲಾಗಿದೆ. ಭಾಷಾಶಿಕ್ಷಣ ಮತ್ತು ಭಾಷಾಮಾಧ್ಯಮ ಕುರಿತ ಚರ್ಚೆಯನ್ನು ಶೈಕ್ಷಣಿಕ ಹಾಗೂ ಭಾಷಾ ವೈಜ್ಞಾನಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಹಾಗೆಯೆ ಅಧ್ಯಯನ ಮಾಡುವಾಗ ಕ್ಷೇತ್ರಕಾರ್ಯ ಆಧಾರಿತ ಮಾಹಿತಿಯನ್ನು ತುಂಬಾ ಕಡಿಮೆ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆ. ಭಾಷಾಮಾಧ್ಯಮ ಕುರಿತ ಚರ್ಚೆ ಕೇವಲ ಶೈಕ್ಷಣಿಕ ವಲಯಕ್ಕೆ ಸಿಮೀತವಾಗಿರದೆ ಸಾಮಾಜಿಕ, ಆಡಳಿತಾತ್ಮಕ, ರಾಜಕೀಯ ಹಾಗೂ ಆರ್ಥಿಕ ವಲಯಗಳಿಗೂ ವಿಸ್ತರಿಸಿಕೊಂಡಿದೆ. ಆದ್ದರಿಂದ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ವೈಧಾನಿಕತೆಯನ್ನು ರೂಪಿಸಿಕೊಳ್ಳಲಾಗಿದೆ.

• • •

## ಅಧ್ಯಾಯ : ಎರಡು

# ಇದುವರೆಗು ನಡೆದ ಅಧ್ಯಯನಗಳ ಸಮೀಕ್ಷೆ

---

೨.೧. ಪಿಎಚ್.ಡಿ. ಮಹಾಪ್ರಬಂಧಗಳು

೨.೨. ಎಂ.ಫಿಲ್. ಪ್ರಬಂಧಗಳು

೨.೩. ಎಂ.ಇಡಿ. ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು

೨.೪. ಕೃತಿಗಳು

೨.೫. ಲೇಖನಗಳು

೨.೬. ನಿಯತಕಾಲಿಕೆಗಳು

## ಅಧ್ಯಾಯ : ಎರಡು

# ಇದುವರೆಗು ನಡೆದ ಅಧ್ಯಯನದ ಸಮೀಕ್ಷೆ

ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮಕ್ಕಳಿಗೆ ಕಲಿಕೆ ಯಾವ ಮಾಧ್ಯಮದಲ್ಲಿ ಇರಬೇಕು ಎನ್ನುವ ಚರ್ಚೆ ಅಥವಾ ವಿಚಾರ ಇಂದು ನಿನ್ನೆಯದಲ್ಲ, ಪ್ರಾಚೀನ ಕಾಲದಿಂದಲೂ ಈ ಚರ್ಚೆ ಚಾಲ್ತಿಯಲ್ಲಿದೆ. ಪ್ರಾಚೀನ ಕಾಲದಲ್ಲಿ ಕನ್ನಡ ಮಾಧ್ಯಮಕ್ಕಿಂತಲೂ ಪ್ರಮುಖವಾಗಿ ಸಂಸ್ಕೃತ ಮಾಧ್ಯಮಕ್ಕೆ ಪ್ರಾಧಾನ್ಯತೆ ಇತ್ತು. ಏಕೆಂದರೆ ಇಲ್ಲಿ ಬಳಕೆಯಾದ ಮೌಖಿಕ ಪಠ್ಯಕ್ರಮದ ವ್ಯವಸ್ಥೆಯನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಉದಾಹರಣೆಗೆ : ವೇದಗಳನ್ನು ಬಾಯಿಪಾಠ ಮಾಡುವುದು, ಅಂದರೆ ಈ ವೇದಗಳೆಲ್ಲವು ಸಂಸ್ಕೃತದಲ್ಲಿ ರಚನೆಯಾಗಿವೆ ಎಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಪ್ರಾಚೀನ ಕಾಲದಲ್ಲಿ ಸಂಸ್ಕೃತ ಶಿಕ್ಷಣ ಮಾಧ್ಯಮಕ್ಕೆ ಆದ್ಯತೆ ಇತ್ತು ಎನ್ನುವುದರಲ್ಲಿ ಸ್ಪಷ್ಟತೆ ಇದೆ ಎಂದು ಹೇಳಬಹುದು. ಶಿಕ್ಷಣ ವಲಯದಲ್ಲಿ ಸಂಸ್ಕೃತ ಭಾಷೆಯನ್ನು ಮಾಧ್ಯಮವನ್ನಾಗಿ ಸಂಪೂರ್ಣವಾಗಿ ಬಳಸಲಾಗಿದೆ. ಆದರೂ ಸಹ ಪ್ರಾದೇಶಿಕ ಭಾಷೆಗಳಲ್ಲಿ ಶಿಕ್ಷಣ ನೀಡುತ್ತಿದ್ದುದಕ್ಕೆ ಅನೇಕ ಪುರಾವೆಗಳು ಸಿಗುತ್ತವೆ. ಹಾಗೆಯೇ ಸಂಸ್ಕೃತಕ್ಕೆ ಬದಲಾಗಿ ಕನ್ನಡ ಮಾಧ್ಯಮವನ್ನು ಬಳಸಿದ್ದು ತೀರಾ ವಿರಳ. ಕ್ರಿ.ಶ. ಸುಮಾರು ೧೪ನೇ ಶತಮಾನದಲ್ಲಿ 'ಆಂಡಯ್ಯ' ಎಂಬ ಕವಿ ತನ್ನ 'ಕಬ್ಬಿಗರ ಕಾವ' ಕೃತಿಯ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಸಂಸ್ಕೃತ ಮಾಧ್ಯಮವನ್ನು ಸಂಪೂರ್ಣವಾಗಿ ವಿರೋಧಿಸಿರುವುದನ್ನು ಕಾಣಬಹುದು. ಚರಿತ್ರೆಯುದ್ದಕ್ಕೂ ದೇಶಿ ಭಾಷೆಗಳು ಪ್ರತಿರೋಧ ವ್ಯಕ್ತಪಡಿಸಿದ್ದನ್ನು ಕಾಣಲು ಸಾಧ್ಯವಿದೆ. ಉದಾ : ೧೫ನೇ ಶತಮಾನದಲ್ಲಿ ಸುಲ್ತಾನರ ಕಾಲದಲ್ಲಿ ಉರ್ದು ಮಾಧ್ಯಮ ಬೆಳೆದು ಬಂದಿತು. ನಂತರದಲ್ಲಿ ಬ್ರಿಟೀಷರ ಪ್ರಭಾವ ಬಲವಾಗಿ ಬೇರೂರಿತು. ವಸಾಹತುಶಾಹಿಯ ಆಳ್ವಿಕೆ ನೀತಿಯ ಹಿನ್ನೆಲೆಯಲ್ಲಿ ಬ್ರಿಟೀಷ ಆಡಳಿತ ಹಾಗೂ ಆರ್ಥಿಕ ಪರಿಣಾಮ ಪ್ರಬಲ ಮಾಧ್ಯಮವಾಗಿ ಗೋಚರಿಸಿತ್ತು. ಪ್ರಸ್ತುತದಲ್ಲಿ ಅದರ ಪ್ರಭಾವ ಗಾಢವಾಗಿ ಪರಿಣಮಿಸಿದೆ. ಇತ್ತೀಚಿನ ನಾಲ್ಕೈದು ವರ್ಷಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಾಧ್ಯಮ ಕುರಿತಾಗಿ ಸಾಕಷ್ಟು ಚರ್ಚೆಗಳು, ಅಧ್ಯಯನಗಳು ಬೆಳೆದು ಬರುತ್ತಿವೆ. ಇಂತಹ ಎಲ್ಲ ಅಧ್ಯಯನಗಳು

ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಪೂರಕವಾಗಿರುವುದರಿಂದ ಅವುಗಳನ್ನು ಇಲ್ಲಿ ಸಮೀಕ್ಷೆ ಮಾಡಲಾಗಿದೆ.

ಪ್ರಾಥಮಿಕ ಶಿಕ್ಷಣದ ಭಾಷಾ ಮಾಧ್ಯಮ ಕುರಿತಂತೆ ಇದುವರೆಗು ಬಂದ ಅಧ್ಯಯನಗಳನ್ನು ಇಲ್ಲಿ ಸಮೀಕ್ಷೆ ಮಾಡಲಾಗಿದೆ. ಅದರಲ್ಲಿ ಪಿಎಚ್.ಡಿ ಮಹಾಪ್ರಬಂಧಗಳನ್ನು, ಎಂ.ಫಿಲ್ ಕಿರುಪ್ರಬಂಧಗಳನ್ನು ಎಂ.ಇಡಿ. ಕಿರುಪ್ರಬಂಧಗಳನ್ನು ಸಮೀಕ್ಷೆಗೆ ಬಳಸಿಕೊಳ್ಳಲಾಗಿದೆ. ನಂತರದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಕೃತಿಗಳನ್ನು ಮತ್ತು ಲೇಖನಗಳನ್ನು ಇಲ್ಲಿ ಸಮೀಕ್ಷೆ ಮಾಡಲಾಗಿದೆ. ಅದೇ ರೀತಿಯಾಗಿ ಪ್ರಾಥಮಿಕ ಶಿಕ್ಷಣ ಮಾಧ್ಯಮ ಕುರಿತಾಗಿ ಕಳೆದ ನಾಲ್ಕು ಐದು ವರ್ಷಗಳಿಂದ ಚರ್ಚೆಗಳು, ವಾದ ವಿವಾದಗಳು ಪತ್ರಿಕೆಗಳಲ್ಲಿ ಸ್ಥಳಾವಕಾಶಗಳನ್ನು ಪಡೆದುಕೊಳ್ಳುತ್ತಿವೆ. ಅಂತಹ ದಿನಪತ್ರಿಕೆ, ವಾರಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಬಂದಿರುವ ಲೇಖನಗಳನ್ನು ಸಹ ಇಲ್ಲಿ ಸಮೀಕ್ಷೆ ಮಾಡಲಾಗಿದೆ.

## ೨.೧. ಪಿಎಚ್.ಡಿ. ಮಹಾಪ್ರಬಂಧಗಳು

**ಎಚ್.ಎಸ್. ಶಿವಸ್ವಾಮಿ ೧೯೮೮ರಲ್ಲಿ ಉಪಾಧ್ಯಾಯ.ಯು.ಪಿ.** ಅವರ ಮಾರ್ಗದರ್ಶನದಲ್ಲಿ **'ಪದವಿ ತರಗತಿಗಳ ಕನ್ನಡ ಭಾಷೆ ಸಾಹಿತ್ಯ ಕಲಿಕೆ'** ಎಂಬ ವಿಷಯದ ಮೇಲೆ ಪಿಎಚ್.ಡಿ. ಪದವಿಯನ್ನು ಪಡೆದಿದ್ದಾರೆ.

ಈ ಅಧ್ಯಯನದಲ್ಲಿ ಪದವಿ ತರಗತಿಗಳಲ್ಲಿ ವಿದ್ಯಾರ್ಥಿಗಳ ಕನ್ನಡ ಭಾಷಾ ಸಾಹಿತ್ಯ ಕಲಿಕೆ ಹೇಗೆ ಮತ್ತು ಏಕೆ ನಡೆಯುತ್ತದೆ ಮತ್ತು ಅವುಗಳ ಪರಿಣಾಮಗಳೇನು ಎಂಬುದನ್ನು ವಿದ್ವಾಂಸರ ಮಾತುಗಳ ಹಿನ್ನೆಲೆಯಲ್ಲಿ ಚರ್ಚೆಯನ್ನು ಬೆಳೆಸಿದ್ದಾರೆ. ವಿದ್ಯಾರ್ಥಿಗಳಿಗೆ ಆಳವಾದ ಅಧ್ಯಯನಕ್ಕೆ ಸ್ಪಷ್ಟವಾದ ತಿಳುವಳಿಕೆಯನ್ನು ನೀಡುವ ರೀತಿಯಲ್ಲಿ ಕನ್ನಡ ಕಲಿಕೆಯಾಗುತ್ತಿರುವ ಅಂಶಗಳನ್ನು ಚರ್ಚಿಸಿದ್ದಾರೆ. ಜೊತೆಗೆ ವಿದ್ಯಾರ್ಥಿಗಳಿಗೆ ಕನ್ನಡ ಕಲಿಕೆಯ ಬೋಧನೆ ಆಳವಾದ ಅಧ್ಯಯನವನ್ನು ಮೂಡಿಸುವಂತಿರಬೇಕು ಎಂಬುದನ್ನು ವಿವರಿಸಿದ್ದಾರೆ.

**ಡಾ. ನಂದಾ ಆರ್. ಇಟಕರ** ಅವರು **ಡಾ. ಕೃ. ಅನ್ಬನ್** ಅವರ ಮಾರ್ಗದರ್ಶನದಲ್ಲಿ **'ಒಂದನೇ ತರಗತಿಯಿಂದ ಐದನೇ ತರಗತಿವರೆಗಿನ ಕನ್ನಡ ಪಠ್ಯಪುಸ್ತಕಗಳಲ್ಲಿಯ ಪದಗಳ ಅಧ್ಯಯನ'** ಎನ್ನುವ ಮಹಾಪ್ರಬಂಧವನ್ನು ಧಾರವಾಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಅಧ್ಯಯನದಲ್ಲಿ ಸಂಶೋಧಕರು ಒಂದನೇ ತರಗತಿಯಿಂದ ಐದನೇ ತರಗತಿಯವರೆಗಿನ ಕನ್ನಡ ಪಠ್ಯಪುಸ್ತಕಗಳಲ್ಲಿ ಬಳಕೆಯಾದ ಕನ್ನಡ ಪದಗಳನ್ನು ಪಟ್ಟಿ ಮಾಡಿದ್ದಾರೆ. ಇಲ್ಲಿ ಬಳಕೆಗೊಂಡಂತಹ ಕನ್ನಡ ಪದಗಳ ಮೂಲರೂಪ ಮತ್ತು ಅವುಗಳ ಬೆಳವಣಿಗೆಯನ್ನು ವಿಶ್ಲೇಷಿಸಿದ್ದಾರೆ. ಮೂಲ ಪದದಲ್ಲಿನ ರಚನೆ ರೂಪಾಂತರ ನಂತರ ಹೊಂದಿದ ಬಗೆಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇದರಿಂದ ಮೂಲ ರೂಪ ನಂತರ ವಿಸ್ತಾರ ಹೊಂದಿದ ಪದರೂಪಗಳನ್ನು ತಿಳಿಯಲು ಅನುಕೂಲವಾಗುತ್ತದೆ ಹಾಗೂ ಇಲ್ಲಿ ಬಳಕೆಗೊಂಡ ಪದಗಳು

ಮಾಧ್ಯಮದ ಹಿನ್ನೆಲೆಯಲ್ಲಿ ರಚನೆಯಾಗಿವೆಯೇ ಎನ್ನುವುದನ್ನು ನೋಡಲು ಅಧ್ಯಯನ ಸಹಾಯಕವಾಗುತ್ತದೆ.

**ಜಿ.ಎಚ್. ಪಾರ್ವತಮ್ಮ** ಅವರು **'ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲ್ಯಗಳ ಸಾಧನೆ'** ಎನ್ನುವ ಪಿಎಚ್.ಡಿ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಪ್ರಬಂಧಕಾರರು ಕನ್ನಡ ಮತ್ತು ಇಂಗ್ಲಿಶ್ ಮಾಧ್ಯಮದ ವಿದ್ಯಾರ್ಥಿಗಳ ಸಾಧನೆಯ ಹೋಲಿಕೆಯನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಕನ್ನಡ ಮತ್ತು ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಲ್ಲಿ ವಿಜ್ಞಾನ ಮತ್ತು ಸಮಾಜ ಪಾಠಗಳ ಕಲಿಕಾ ಸಾಧನೆ ಉನ್ನತ ಮಟ್ಟದ್ದಾಗಿದ್ದರೆ, ಗಣಿತದಲ್ಲಿ ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳ ಸಾಧನೆ ಉನ್ನತ ಮಟ್ಟದ್ದಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ. ಗಣಿತ, ಸಮಾಜ, ವಿಜ್ಞಾನ ಪಾಠಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಂಡು ವಿದ್ಯಾರ್ಥಿಗಳ ಸಾಧನೆಯ ಕಲಿಕೆಯನ್ನು ಗುರುತಿಸಿದ್ದಾರೆ. ಅಂದರೆ ವಿಜ್ಞಾನ ಮತ್ತು ಸಮಾಜ ಪಾಠಗಳಲ್ಲಿ ಬರುವ ಪರಿಕಲ್ಪನೆಗಳು, ನಿಯಮಗಳು, ತತ್ವಗಳು ದಿನನಿತ್ಯದ ಪರಿಸರದಲ್ಲಿ ಬಳಕೆಯಾಗುತ್ತಿರುತ್ತವೆ. ಮಕ್ಕಳು ಪರಿಸರದ ಮೂಲಕ ಬೇಗನೆ ವಿಷಯಗಳನ್ನು ಗ್ರಹಿಸಬಲ್ಲವರಾಗಿದ್ದಾರೆ. ಸಮಾಜ ಮತ್ತು ವಿಜ್ಞಾನ ವಿಷಯಗಳು ಹೆಚ್ಚು ಶಾಬ್ಧಿಕ ವಿವರಣೆಯನ್ನು ಅಪೇಕ್ಷಿಸುವುದರಿಂದ ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಸುಲಭವಾಗುತ್ತದೆ. ಗಣಿತದಲ್ಲಿ ವಿವರಣೆಗಿಂತ ಹೆಚ್ಚಾಗಿ ತಾರ್ಕಿಕ ಚಿಂತನೆ, ಅಮೂರ್ತೀಕರಣ ಹಾಗೂ ಲೆಕ್ಕಾಚಾರಗಳು ಪ್ರಮುಖವಾಗಿ ಕಂಡು ಬರುವುದರಿಂದ ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಲ್ಲಿ ಗಣಿತದ ಸಾಧನೆಯಮಟ್ಟ ಉತ್ತಮವಾಗಿದೆ.

ಅಂದರೆ ವಿದ್ಯಾರ್ಥಿಗಳಿಗೆ ವಿಷಯಗಳನ್ನು ಅವರ ಮಾತೃಭಾಷೆಯಲ್ಲಿ ಅರ್ಥವಾಗುವ ರೀತಿಯಲ್ಲಿ ಬೋಧಿಸಿದಾಗ ಎಂತಹ ವಿಷಯಗಳನ್ನಾದರೂ ಚೆನ್ನಾಗಿ ಗ್ರಹಿಸಬಲ್ಲರು. ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಿಗೆ ಅವರ ಮಾತೃಭಾಷೆಯಲ್ಲದ ಅನ್ಯ ಭಾಷೆಯಲ್ಲಿ ವಿಷಯಗಳನ್ನು ಕಲಿಸಿದಾಗ ಅವರ ಗ್ರಹಿಸುವ ಸಾಮರ್ಥ್ಯ ಉತ್ತಮವಾಗಿರುವುದಿಲ್ಲ. ಇದರಿಂದಾಗಿ ಹೆಚ್ಚು ವಿವರಣೆಯನ್ನು ಬಯಸುವ ಉತ್ತರಗಳನ್ನು ನೀಡಲು ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಿಗೆ ಸಾಧ್ಯವಾಗುವುದಿಲ್ಲೆಂದು ತಿಳಿಸಿದ್ದಾರೆ. ಶಿಕ್ಷಣ ತಜ್ಞರು ಸಹ ಮಾತೃ ಭಾಷಾ ಮಾಧ್ಯಮ ಕಲಿಕೆಯ ವಿಧಾನವನ್ನೇ ಸಮರ್ಥಿಸುತ್ತಾರೆ.

**ಡಾ. ಭೀಮಣ್ಣ ಮೇಟಿ** ಅವರು **'ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು' (ಗುಲಬರ್ಗಾ ಜಿಲ್ಲೆಯ ಉರ್ದು ಭಾಷಿಕ ಮಕ್ಕಳನ್ನು ಅನುಲಕ್ಷಿಸಿ)** ಎನ್ನುವ ಪಿಎಚ್.ಡಿ. ಮಹಾಪ್ರಬಂಧವನ್ನು **ಡಾ.ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು, ಉರ್ದುಭಾಷೆಯನ್ನು ಮಾತೃಭಾಷೆಯಾಗಿರುವ

ಉರ್ದು ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿರುವ ಮಕ್ಕಳು ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವಾಗ ಯಾವ ಬಗೆಯ ದೋಷಗಳನ್ನು ಮಾಡುತ್ತಾರೆ. ಎನ್ನುವುದನ್ನು ಒಂದು ನಿರ್ಧಿಷ್ಟ ವ್ಯಾಪ್ತಿಗೆ ಅನ್ವಯಿಸಿ ಅಧ್ಯಯನ ಮಾಡಿದ್ದಾರೆ.

ಉರ್ದು ಭಾಷೆಯ ಮಕ್ಕಳು ಕನ್ನಡ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ವ್ಯಾಕರಣ ಅಂಶಗಳಾದ ಪದಾದಿ, ಪದಮಧ್ಯ, ಪದಾಂತ್ಯ ಮತ್ತು ದೀರ್ಘ ಹ್ರಸ್ವಸ್ವರಗಳಲ್ಲಿ ಹಾಗೂ ಸಜಾತಿ, ವಿಜಾತಿ ದ್ವಿತ್ವಾಕ್ಷರಗಳಲ್ಲಿ ದೋಷಗಳನ್ನು ಎದುರಿಸುತ್ತಿದ್ದಾರೆ. ಧ್ವನಿ, ಪದ, ವಾಕ್ಯ ಮುಂತಾದವುಗಳನ್ನು ಸರಿಯಾದ ರೂಪದಲ್ಲಿ ಗ್ರಹಿಸುವಂತೆ ಅವರ ಭಾಷೆಯ ಮೂಲಕವೇ ಕಲಿಸುವ ವ್ಯವಸ್ಥೆ ನಡೆಯಬೇಕು. ಹಾಗಾದಾಗ ಮಾತ್ರ ಮಕ್ಕಳು ಭಾಷೆಯನ್ನು ಕಲಿಯಲು ಸಾಧ್ಯ. ಮೊದಲು ಮಾತೃಭಾಷೆಯಲ್ಲಿ ಒಂದು ಹಂತದವರೆಗೆ ಮಗು ಶಿಕ್ಷಣ ಪಡೆಯಬೇಕು. ನಂತರ ಅವರ ಗ್ರಹಿಕೆ, ಅಭಿವ್ಯಕ್ತಿಸುವ ತಿಳುವಳಿಕೆಯ ಸಾಮರ್ಥ್ಯದಿಂದ ಮಾತೃಭಾಷೆಯ ಮೂಲಕವೇ ಕಲಿಯಲು ಸಾಧ್ಯ ಎಂದು ಹೇಳಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

**ಡಾ. ಕೆ.ರಂಗನಾಥ್ ಅವರು ಡಾ. ಕಿ.ರಂ. ನಾಗರಾಜ** ಅವರ ಮಾರ್ಗದರ್ಶನದಲ್ಲಿ **'ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷದ ನೆಲೆಗಳು'**ಎನ್ನುವ ಪಿಎಚ್.ಡಿ. ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಪ್ರಬಂಧದಲ್ಲಿ ಭಾಷೆಯನ್ನು ಕುರಿತು ಸಾಂಸ್ಕೃತಿಕ ಮತ್ತು ರಾಜಕೀಯ ಚರ್ಚೆಗಳ ಹಿನ್ನೆಲೆಯಲ್ಲಿ ತಾತ್ವಿಕವಾಗಿ ಅಧ್ಯಯನ ಮಾಡಿದ್ದಾರೆ. ಆರಂಭದಲ್ಲಿ ಪ್ರಭುತ್ವ ಭಾಷೆಗಳು ಪ್ರಾದೇಶಿಕವಾಗಿ ಪ್ರಭುತ್ವ ನಡೆಸಿದರೂ ತನ್ನ ಭಾಷೆಯನ್ನು ಜನಸಮುದಾಯಗಳ ಶಿಕ್ಷಣದ ಮೇಲೆ ಹೇರುತ್ತಿರಲಿಲ್ಲ. ಆದರೆ ವಸಾಹತುಶಾಹಿ ಪ್ರಭುತ್ವಗಳ ಭಾಷೆ ರಾಜಕಾರಣದಿಂದ ಜನಮುಖಿ ಸಂಸ್ಕೃತಿಯನ್ನು, ಭಾಷೆಗಳನ್ನು ನಾಶಗೊಳಿಸಿ ತನ್ನ ಒಡೆತನವನ್ನು ಸ್ಥಾಪಿಸುತ್ತದೆ. ಕನ್ನಡವು ತನ್ನ ನೆಲದಲ್ಲೇ ಅನಾಥವಾಗುವ ಬಿಕ್ಕಟ್ಟಿಗೆ ಒಳಗಾಗಿದೆ. ಯಾವುದೇ ಒಂದು ಭಾಷಿಕ ಸಮುದಾಯ ತಾನು ಯಾವ ಭಾಷೆಯಲ್ಲಿ ಮಾತನಾಡಬೇಕು, ಯಾವ ಭಾಷೆಯಲ್ಲಿ ಶಿಕ್ಷಣವನ್ನು ಸ್ವೀಕರಿಸಬೇಕು ಎನ್ನುವುದಕ್ಕಿಂತ ಆ ಸಮುದಾಯವೇ ನಿರ್ಧರಿಸಬೇಕು. ಹಾಗೆ ನಿರ್ಧರಿಸುವುದು ಅದರ ರಾಜಕೀಯ ಹಕ್ಕಾಗಿರುತ್ತದೆ. ಈ ಕಾರಣದಿಂದ ಇಂಗ್ಲೀಶ್ ಭಾಷೆಯನ್ನು ತಿರಸ್ಕರಿಸಿ ಕನ್ನಡ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ರೂಪಿಸಬೇಕು ಎನ್ನುವುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಅಂದರೆ ಬ್ರಿಟೀಷರ ಆಳ್ವಿಕೆ ಕೇವಲ ಪ್ರಾದೇಶಿಕವಾಗಿ ಅಷ್ಟೇ ಇರಲಿಲ್ಲ. ಶೈಕ್ಷಣಿಕ, ಆಡಳಿತ, ಭಾಷಿಕ ಹಾಗೂ ರಾಜಕೀಯವಾಗಿಯೂ ಅವರ ಅಧಿಕಾರ ಪ್ರಬಲವಾಗಿತ್ತು. ಒಂದು ಭಾಷೆ ಜಾರಿಗೆ ಬರಬೇಕಾದರೆ ಕೇವಲ ಪ್ರಾದೇಶಿಕ ಮತ್ತು ಜನತೆಯ ಬೇಡಿಕೆ ಮುಖ್ಯವಾಗಿರುವುದಿಲ್ಲ. ಅದನ್ನು ಹೊರತುಪಡಿಸಿ ರಾಜಕೀಯ ಪ್ರಭುತ್ವದ ಇಚ್ಚಾಶಕ್ತಿ ಅಧಿಕವಾಗಿರುತ್ತದೆ ಎಂಬುದು ತಿಳಿದು ಬರುತ್ತದೆ.

**ಸೋಮಕ್ಕ.ಎಂ** ಅವರು **ಡಾ.ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ **'ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು' (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)** ಎನ್ನುವ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಅಧ್ಯಯನದಲ್ಲಿ ಲಂಬಾಣಿ ಮಕ್ಕಳು ಕನ್ನಡ ಭಾಷೆಯನ್ನು ಔಪಚಾರಿಕವಾಗಿ ಕಲಿಯುವಾಗ ಮಾಡುವ ದೋಷಗಳನ್ನು ಕುರಿತು ಅಧ್ಯಯನದಲ್ಲಿ ವಿಶ್ಲೇಷಿಸಿದ್ದಾರೆ. ಲಂಬಾಣಿ ಮಕ್ಕಳು ಕನ್ನಡವನ್ನು ಓದುವಾಗ, ಬರೆಯುವಾಗ ಎದುರಿಸುವ ಸಮಸ್ಯೆಗಳನ್ನು ಹಾಗೂ ಕಲಿಕೆಗೆ ಅಡ್ಡಿಯಾಗುವ ಭಾಷಿಕ ಸಾಮಾಜಿಕ ಕಾರಣಗಳನ್ನು ಕುರಿತು ಚರ್ಚಿಸಿ ಪರಿಹಾರ ಗಳನ್ನು ಸೂಚಿಸಿದ್ದಾರೆ. ಲಂಬಾಣಿ ಭಾಷಿಕ ಮಕ್ಕಳು ಓದುವಾಗ ಹಾಗೂ ಬರೆಯುವಾಗ ಸ್ವರ, ವ್ಯಂಜನ, ದೀರ್ಘ ಹ್ರಸ್ವ, ಗುಣಿತಾಕ್ಷರ, ಒತ್ತಕ್ಷರಗಳಲ್ಲಿ ಮುಖ್ಯವಾಗಿ ದೋಷಗಳನ್ನು ಮಾಡುತ್ತಾರೆ ಎಂಬುದನ್ನು ಗುರುತಿಸಿದ್ದಾರೆ. ಲಂಬಾಣಿ ಮಕ್ಕಳಿಗೆ ಕನ್ನಡ ಅನ್ಯ ಭಾಷೆಯಾಗಿ ರುತ್ತದೆ. ಕನ್ನಡ ಭಾಷೆಯಲ್ಲಿಯ ಪದಗಳು, ವಿಷಯ ವಸ್ತುಗಳು ಅಪರಿಚಿತವಾಗಿರುತ್ತವೆ. ಹಾಗಾಗಿ ಲಂಬಾಣಿ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಕಲಿಕೆಯನ್ನು ಪೂರೈಸುವುದರಿಂದ ಕಲಿಕೆಯಲ್ಲಿಯ ದೋಷಗಳನ್ನು ಕಡಿಮೆ ಮಾಡಬಹುದು ಎನ್ನುವುದನ್ನು ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಿದ್ದಾರೆ.

**ಗಜಾನನನಾಯ್ಕ** ಅವರು **ಇಂಗ್ಲೀಶ್ ಗೀತೆಗಳು ಪೂರ್ವದ ಭಾಷಾಂತರ ಪ್ರಕ್ರಿಯೆ (೧೮೫೦ರಿಂದ೧೯೨೦)** ಎನ್ನುವ ಪಿಎಚ್.ಡಿ.ಮಹಾಪ್ರಬಂಧವನ್ನು **ಡಾ.ಎಂ. ಉಷಾ** ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಆಧುನಿಕ ಶಿಕ್ಷಣ ಮತ್ತು ಭಾಷಾಂತರ ಎಂಬ ಅಧ್ಯಾಯದಲ್ಲಿ ಬ್ರಿಟೀಷರ ಕಾಲದ ಆಧುನಿಕ ಶಿಕ್ಷಣ ಪದ್ಧತಿಯನ್ನು ಕುರಿತು ಚರ್ಚಿಸಿದ್ದಾರೆ. ಬ್ರಿಟೀಷರು ತಮ್ಮ ಅವಧಿಯಲ್ಲಿ ಕೆಲವು ಬದಲಾವಣೆಗಳನ್ನು ತರುವ ಮೂಲಕ ನೂತನ ಶಿಕ್ಷಣವನ್ನು ಆರಂಭಿಸಿದರು. ಅದುವರೆಗೂ ಕೆಲವೇ ವರ್ಗದವರಿಗೆ ಮೀಸಲಾಗಿದ್ದ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಿದರು. ಅಲ್ಲದೆ ಕರ್ನಾಟಕದಲ್ಲಿ ಇಂಗ್ಲೀಶ್ ಮಾದರಿ ಅಡಿಯಲ್ಲಿ 'ಇಂಗ್ಲೀಶ್ ಮಾಧ್ಯಮ' ಶಿಕ್ಷಣವನ್ನು ಹುಟ್ಟು ಹಾಕಿದರು. ಈ ಬಗೆಯ ಇಂಗ್ಲೀಶ್ ಮಾಧ್ಯಮವನ್ನು ಜಾರಿಗೆ ತರುವಲ್ಲಿ ಹಿಂದಿನ ಉದ್ದೇಶವನ್ನು ಕುರಿತು ಇಲ್ಲಿ ಚರ್ಚಿಸಿದ್ದಾರೆ.

**ಬಿ. ಪ್ರಕಾಶರವರು ಪ್ರೊ, ಉಪ್ಪಂಗಳ ರಾಮಭಟ್ಟ** ಅವರ ಮಾರ್ಗದರ್ಶನದಲ್ಲಿ **ದಕ್ಷಿಣ ಕನ್ನಡ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಕನ್ನಡ ಪಠ್ಯಪುಸ್ತಕಗಳ ರಾಚನಿಕ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ** ಎಂಬ ಮಹಾಪ್ರಬಂಧವನ್ನು ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ.

ಸಂಶೋಧಕರು ಪ್ರಾಚೀನ ಕಾಲದಲ್ಲಿ ಪಠ್ಯಪುಸ್ತಕಗಳು ಹೇಗೆ ರಚನೆಗೊಂಡಿವೆ. ಅವುಗಳ ಭಾಷಾ ಬಳಕೆ, ವಿಷಯ ವಸ್ತುಗಳ ಬಳಕೆ ಹೇಗೆ ಯಾವ ಉದ್ದೇಶದ ಹಿನ್ನೆಲೆಯಲ್ಲಿ ರಚನೆಯಾಗಿವೆ. ಸ್ವಾತಂತ್ರ ಪೂರ್ವ ಕಾಲದಲ್ಲಿದ್ದ ಶಿಕ್ಷಣದ ಭಾಷೆ, ವಸ್ತುಗಳ ರಚನೆ ನಂತರ ಹೇಗೆ ಬದಲಾವಣೆಗೊಂಡಿದೆ ಅವುಗಳ ಉದ್ದೇಶವೇನು? ಅಂದಿನ ಸಾಮಾಜಿಕ ಅಗತ್ಯಗಳಿಗೆ ತಕ್ಕಂತೆ ಪಠ್ಯಪುಸ್ತಕಗಳು ರಚನೆಯಾಗಿವೆಯೇ ಎಂಬುದನ್ನು ಚರ್ಚಿಸಿದ್ದಾರೆ. ಸ್ವಾತಂತ್ರ ಪೂರ್ವದ ಹಾಗೂ ಸ್ವಾತಂತ್ರ ನಂತರದ ಪಠ್ಯಪುಸ್ತಕದ ಭಾಷೆ ವಸ್ತುವಿಗೆ ತಕ್ಕಂತೆ ರಚನೆಯಲ್ಲಾದ ಬದಲಾವಣೆಗಳೇನು ಎಂಬುದನ್ನು ವಿಶ್ಲೇಷಿಸಿದ್ದಾರೆ. ಜೊತೆಗೆ ಪ್ರಾಚೀನ ಕಾಲದಲ್ಲಿ ಶಿಕ್ಷಣ ಯಾವ ಮಾಧ್ಯಮದಲ್ಲಿ ಬೆಳೆದುಕೊಂಡು ಬಂದಿತ್ತು ಎಂಬುದನ್ನು ಸಹ ಚರ್ಚಿಸಿದ್ದಾರೆ. ಇವರ ವಿಶ್ಲೇಷಣೆಯ ಕ್ರಮವನ್ನು, ಬಳಸಿದ ಪಠ್ಯಗಳನ್ನು ಗಮನಿಸಿದಾಗ ಪ್ರಾಚೀನ ಕಾಲದ ಮತ್ತು ಬ್ರಿಟೀಷರ ಕಾಲದ ಪೂರ್ವಾರ್ಧದವರೆಗು ಸಂಸ್ಕೃತ ಕಲಿಕೆಯ ಮಾಧ್ಯಮವನ್ನು ಅನುಸರಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

### ೨.೨. ಎಂ.ಫಿಲ್. ಪ್ರಬಂಧಗಳು

**ಬಸವರಾಜ ಕೊಡಗುಂಟಿಯವರು ಡಾ. ಸಂಗಮೇಶ ಸವದತ್ತಿಮಠ** ಅವರ ಮಾರ್ಗದರ್ಶನದಲ್ಲಿ **'ಮಕ್ಕಳ ಭಾಷೆ ಒಂದು ಅಧ್ಯಯನ'** ಎನ್ನುವ ಎಂ.ಫಿಲ್. ಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಮಕ್ಕಳಲ್ಲಿ ಭಾಷೆ ಹೇಗೆ ಹಂತ ಹಂತವಾಗಿ ಬೆಳವಣಿಗೆ ರೂಪವನ್ನು ಪಡೆದುಕೊಳ್ಳುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಅಲ್ಪಪ್ರಾಣ, ಮಹಾಪ್ರಾಣ, ದೀರ್ಘ, ಹ್ರಸ್ವ, ಸ್ವರ, ವ್ಯಂಜನಗಳ ತಿಳುವಳಿಕೆ ಹೊಂದಿದಂತಹ ಮಕ್ಕಳು ಅವುಗಳನ್ನು ಬಳಸುವಾಗ ಯಾವ ರೀತಿಯ ವ್ಯತ್ಯಾಸಗಳಾಗುತ್ತವೆ ಎನ್ನುವುದನ್ನು ವಿವರಿಸುತ್ತಾರೆ. ಜೊತೆಗೆ ಪಠ್ಯಪುಸ್ತಕಗಳಲ್ಲಿನ ಮಹಾಪ್ರಾಣ ಇತ್ಯಾದಿ ಪದಗಳನ್ನು ಹೇಗೆ ಉಚ್ಚರಿಸುತ್ತಾರೆ ಮತ್ತು ಅವುಗಳಲ್ಲಿನ ವ್ಯತ್ಯಾಸಗಳೇನು ಎನ್ನುವುದನ್ನು ಗುರುತಿಸಿದ್ದಾರೆ. ಇವರ ವಿಶ್ಲೇಷಣೆಯನ್ನು ಗಮನಿಸಿದಾಗ ಪ್ರಾಥಮಿಕ ಮಾಧ್ಯಮ ಮಾತೃಭಾಷೆಯಲ್ಲಿಯೇ ನಡೆಯಬೇಕೆಂಬುದು ಗೋಚರಿಸುತ್ತದೆ.

**ಎಸ್. ಸಿದ್ಧಲಿಂಗಪ್ಪ ಅವರು ಡಾ.ಕೃಷ್ಣ ಪರಮೇಶ್ವರಭಟ್ಟ** ಅವರ ಮಾರ್ಗದರ್ಶನದಲ್ಲಿ **'ಪ್ರೌಢಶಾಲಾ ಮಕ್ಕಳ ಕನ್ನಡದ ಬಳಕೆಯಲ್ಲಿ ಕಾಗುಣಿತದ ದೋಷಗಳು'** ಎನ್ನುವ ಎಂ.ಫಿಲ್. ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಪ್ರಶ್ನಾವಳಿ ಮೂಲಕ ಆಂಗ್ಲ ಮತ್ತು ಕನ್ನಡ ಮಾಧ್ಯಮದ ಮಕ್ಕಳ ಕನ್ನಡ ಬಳಕೆಯಲ್ಲಿ ಮಾಡುವ ದೋಷಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಗಳು ಮಾಡುವ ದೋಷಗಳನ್ನು ಪಟ್ಟಿ ಮಾಡಿದ್ದಾರೆ. ಕಾಗುಣಿತ ದೋಷಗಳಲ್ಲಿ ಹ್ರಸ್ವ ಸ್ವರ, ದೀರ್ಘಸ್ವರ ಹಾಗೂ ಮಹಾಪ್ರಾಣ, ಅಲ್ಪಪ್ರಾಣ, ಒತ್ತಕ್ಷರಗಳಲ್ಲಿ ಮಾಡುವ ದೋಷಗಳನ್ನು ಗುರುತಿಸಿದ್ದಾರೆ. ಈ ಅಂಶಗಳಲ್ಲಿ ಯಾವ ಮಾಧ್ಯಮದ ಮಕ್ಕಳು ಹೆಚ್ಚು ದೋಷಗಳನ್ನು ಮಾಡುತ್ತಾರೆ ಎನ್ನುವುದನ್ನು

ಕ್ಷೇತ್ರಕಾರ್ಯದ ಮೂಲಕ ವಿವರಿಸಿದ್ದಾರೆ. ಅಲ್ಲದೇ ಈ ಅಂಶಗಳ ಮೇಲೆ ವಿದ್ವಾಂಸರು ನೀಡಿರುವ ಪರ ಹಾಗೂ ವಿರೋಧದ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಇವರ ಅಧ್ಯಯನದಿಂದ ಮಾತೃಭಾಷಾ ಕಲಿಕೆಯನ್ನು ಅನುಸರಿಸುವ ಮಕ್ಕಳಿಗಿಂತ ಅನ್ಯ ಮಾಧ್ಯಮ (ಇಂಗ್ಲೀಶ್) ಕಲಿಕೆಯ ಮಕ್ಕಳು ಅಕ್ಷರ ದೋಷಗಳನ್ನು ಹೆಚ್ಚಾಗಿ ಮಾಡುತ್ತಾರೆ ಎಂಬುದು ತಿಳಿದು ಬರುತ್ತದೆ.

**ಡಿ.ಎಸ್. ನಾರಾಯಣ** ಅವರು **'ಇಂಗ್ಲೀಶ್ ಕನ್ನಡ ಸಂಬಂಧ ಕುರಿತ ಚಿಂತನೆಗಳು'** ಎನ್ನುವ ಎಂ.ಫಿಲ್ ಕಿರು ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಸಂಶೋಧನಾಕಾರರು ಕರ್ನಾಟಕದಲ್ಲಿ ಕನ್ನಡ ಭಾಷೆ ಮತ್ತು ವಸಾಹತುಶಾಹಿಯ ಆಗಮನದಿಂದಾದ ಇಂಗ್ಲೀಶ್ ಭಾಷೆ ಇವೆರಡೂ ಭಾಷೆಗಳ ನಡುವಿನ ಸಂಬಂಧವನ್ನು ಭಾಷಿಕ, ಪ್ರಾದೇಶಿಕ, ರಾಜಕೀಯ, ಆಡಳಿತ ಹಾಗೂ ಶೈಕ್ಷಣಿಕ ಹಿನ್ನೆಲೆಯಲ್ಲಿ ತಾತ್ವಿಕವಾಗಿ ಅಧ್ಯಯನ ಮಾಡಿದ್ದಾರೆ.

ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಮಿಶನರಿಗಳು, ಪ್ರಾದೇಶಿಕ ಭಾಷೆಗಳಲ್ಲಿ ಶಾಲೆಗಳನ್ನು ತೆರೆದರು. ಜೊತೆಗೆ ಮಿಶನ್ ಸ್ಕೂಲ್‌ಗಳು, ಕಾನ್ವೆಂಟ್ ಶಾಲೆಗಳನ್ನು ತೆರೆದರು. ಈ ರೀತಿಯಲ್ಲಿ ಪ್ರಾದೇಶಿಕ ಭಾಷಾ ಮಾಧ್ಯಮ ಶಾಲೆಗಳು ಮತ್ತು ಇಂಗ್ಲೀಶ್ ಮಾಧ್ಯಮ ಶಾಲೆಗಳು ಎಂದು ಎರಡು ರೀತಿಯಲ್ಲಿ ಶಿಕ್ಷಣ ಬೆಳೆದು ಬರಲು ಪ್ರಾರಂಭವಾಯಿತು. ಈ ಬಗೆಯ ಶಿಕ್ಷಣದಿಂದಾಗಿ ಜನರ ಮನೋಭಾವನೆಗಳಲ್ಲಿಯೂ ಸಹ ಬದಲಾವಣೆಗಳು ಕಂಡು ಬರತೊಡಗಿದವು ಎನ್ನುವುದನ್ನು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಇವರ ಸಂಶೋಧನೆಯು ಬ್ರಿಟೀಷರ ಕಾಲದಲ್ಲಿ ಇಂಗ್ಲೀಶ್ ಮಾಧ್ಯಮ ಬೆಳೆದು ಬಂದ ಬಗೆ, ಅದಕ್ಕೆ ಕಾರಣಗಳೇನು? ಪರಿಣಾಮಗಳೇನು ಎಂಬುದನ್ನು ವಿಶ್ಲೇಷಿಸುತ್ತದೆ.

ಆಧುನಿಕ ತಂತ್ರಜ್ಞಾನ, ವಿಜ್ಞಾನ ಮತ್ತು ಇನ್ನಿತರೆ ಜ್ಞಾನ ಶಾಖೆಗಳ ಅಧ್ಯಯನಕ್ಕೆ ಇಂಗ್ಲೀಶ್ ಭಾಷೆಯ ತಿಳುವಳಿಕೆ ಅನಿವಾರ್ಯ ಹೌದು. ಆದರೆ ಅಗತ್ಯವಿದ್ದಲ್ಲಿ ಮಾತ್ರ ಇಂಗ್ಲೀಶ್ ಬಳಕೆ ಮಾಡಬೇಕು. ಹೊರತು ಉಳಿದಂತೆಲ್ಲ ಕನ್ನಡ ಮಾಧ್ಯಮದ ಬಳಕೆ ಉತ್ತಮ ಎಂದು ತಿಳಿಸುವ ಮೂಲಕ ಎಲ್ಲಾ ಜ್ಞಾನ ಶಾಖೆಗಳ ತಿಳುವಳಿಕೆಗೆ ಮೂಲ ಮಾತೃಭಾಷೆಯೆ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

**ಡಾ. ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ **ಎಸ್.ಪಿ.ತಿಪ್ಪಾನಾಯಕ 'ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ'** ಎಂಬ ವಿಷಯದ ಅಧ್ಯಯನಕ್ಕಾಗಿ ಎಂ.ಫಿಲ್. ಪದವಿಯನ್ನು ಪಡೆದಿದ್ದಾರೆ. ಇದರಲ್ಲಿ ಕನ್ನಡ ಸಂಧಿಯ ಸಮಸ್ಯೆಯ ಸ್ವರೂಪವನ್ನು ಪ್ರಾಥಮಿಕ ಕನ್ನಡ ಭಾಷಾ ಪಠ್ಯಗಳನ್ನು ಅನುಲಕ್ಷಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಕನ್ನಡ ಭಾಷಾ ಪಠ್ಯಗಳಲ್ಲಿ ಬಳಸಿಕೊಂಡಿರುವ ಪದಗಳು ಕನ್ನಡಕ್ಕಿಂತ ಹೆಚ್ಚು ಸಂಸ್ಕೃತ ಭಾಷೆಯ ಪದಗಳೇ ಸೇರಿಕೊಂಡಿವೆ. ಅವುಗಳಲ್ಲಿ ಸಂಸ್ಕೃತ ಪದಗಳು ಯಾವುವು? ಕನ್ನಡ ಪದಗಳು ಯಾವುವು? ಎಂದು

ಶಾಲೆಗಳಲ್ಲಿ ಕಲಿಸುತ್ತಿಲ್ಲ. ಕನ್ನಡ, ಸಂಸ್ಕೃತ ಸಂಧಿಗಳು ಬೇರೆ ಬೇರೆ ಎಂದು ಹೇಳಿ ಕೊಡಲಾಗುತ್ತಿದೆ. ಆದರೆ ಅವೆರಡು ಸಂಧಿಗಳು ಹೇಗೆ ಭಿನ್ನವೆಂದು ಯಾವ ಕನ್ನಡ ಪಠ್ಯಪುಸ್ತಕಗಳಲ್ಲಿ ವಿವರಿಸಿರುವುದಿಲ್ಲ. ಶಾಲೆಗಳಲ್ಲಿ ಶಿಕ್ಷಕರು ಈ ವಿಷಯದ ತಿಳುವಳಿಕೆಯನ್ನು ಮಕ್ಕಳಿಗೆ ವಿವರಿಸಿರುವುದಿಲ್ಲ. ಇದರಿಂದಾಗಿ ಸಂಸ್ಕೃತದ ಎಲ್ಲಾ ಪದಗಳು ಕನ್ನಡ ಪದಗಳೇ (ತದ್ಭವ ಮಾಡಿಕೊಂಡು) ಎಂಬಂತೆ ಬಳಸಲಾಗುತ್ತಿದೆ. ಕನ್ನಡಕ್ಕೂ, ಸಂಸ್ಕೃತಕ್ಕೂ ವ್ಯತ್ಯಾಸ ವಿಲ್ಲದಂತಾಗಿ ಬಳಕೆಗೊಳ್ಳುತ್ತಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಇವರು ಮುಖ್ಯವಾಗಿ ಕನ್ನಡ ಮಾಧ್ಯಮದ ಮಕ್ಕಳಿಗೆ ಕನ್ನಡ ಭಾಷಾ ಪಠ್ಯಗಳಲ್ಲಿ ಬೇರೆ ಭಾಷೆಯ ಕ್ರಮಣಿಕೆಯನ್ನು ಕಲಿಸುವುದೇಕೆ ಎಂಬ ಪ್ರಶ್ನೆಯನ್ನು ಹಾಕಿಕೊಂಡು ಚರ್ಚಿಸಿದ್ದಾರೆ.

### ೨.೩. ಎಂ.ಇಡಿ. ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧಗಳು

**ಮಂಜುನಾಥಗೌಡ ಟಿ. 'ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನ'** ಎನ್ನುವ ಕಿರುಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

ಈ ಪ್ರಬಂಧದಲ್ಲಿ ಸಂಶೋಧಕರು, ಪ್ರಾಥಮಿಕ ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಭಾಷೆಯನ್ನು ಓದುವಾಗ ಮಾಡುವ ದೋಷಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳ ಬಾಯ್ದೆರೆ ಓದುವಿನ ಸಾಮರ್ಥ್ಯವನ್ನು ಅವರು ಓದುವ ವೇಗ, ಸ್ಪಷ್ಟತೆ, ಸಂಶ್ಲೇಷಿಸಿ ಓದುವ ಕ್ರಮವನ್ನು ವಿಶ್ಲೇಷಿಸಿದ್ದಾರೆ. ಹಾಗೂ ಉಚ್ಚಾರಣೆ, ಅರ್ಥ, ಒತ್ತಕ್ಷರ ಮುಂತಾದ ಕ್ಲಿಷ್ಟತೆಗಳನ್ನು ಸೂಕ್ತ ಪರೀಕ್ಷಣಗಳ ಮೂಲಕ ಪರೀಕ್ಷಿಸಿದ್ದಾರೆ. ನಾಲ್ಕನೇ ತರಗತಿಯ ಮಕ್ಕಳನ್ನು ಮಾತ್ರ ಅನುಲಕ್ಷಿಸಿ ಅವರು ಕನ್ನಡ ಭಾಷೆಯನ್ನು ಓದುವಾಗ ಮಾಡುವ ದೋಷಗಳನ್ನು ಇಲ್ಲಿ ಗುರುತಿಸಿದ್ದಾರೆ. ಅಂದರೆ ಈ ಮಕ್ಕಳು ಕನ್ನಡವನ್ನು ಓದುವಾಗ ಅಕ್ಷರ, ಪದಗಳನ್ನು ಸಂಶ್ಲೇಷಿಸಿ ಮತ್ತು ವಿಶ್ಲೇಷಿಸಿ ಓದುವ ಕ್ರಮದಲ್ಲಿ ಉಚ್ಚಾರಣೆ, ಅರ್ಥಗಳಲ್ಲಿ ದೋಷಗಳು ಕಂಡು ಬರುತ್ತವೆ ಎನ್ನುವುದನ್ನು ಅಧ್ಯಯನದಲ್ಲಿ ಸೂಚಿಸಿದ್ದಾರೆ. ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳಿಗೆ ಎಲ್ಲಾ ವಿಷಯಗಳನ್ನು ಇಂಗ್ಲೀಶ್‌ನಲ್ಲಿ ಬೋಧನೆ ಮಾಡುತ್ತಿರುವುದರಿಂದ ಕನ್ನಡವನ್ನು ಅವರು ಪರಿಸರದಲ್ಲಿ ಹೆಚ್ಚು ಬಳಕೆ ಮಾಡದಿರುವುದು ಈ ದೋಷಗಳಿಗೆ ಕಾರಣವಾಗಿರಬಹುದು. ಮತ್ತು ಇಂಗ್ಲೀಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿರುವುದರಿಂದ ಕನ್ನಡವನ್ನು ಸರಿಯಾಗಿ ಕಲಿಯಲು ಮತ್ತು ಕಲಿಸಲು ಶ್ರಮಪಡುವುದಿಲ್ಲ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಆಂಗ್ಲ ಮಾಧ್ಯಮ ಮಕ್ಕಳು ಕನ್ನಡ ಅಕ್ಷರ ಹಾಗೂ ಪದಗಳನ್ನು ಗುರುತಿಸುವಲ್ಲಿ ಸಾಧಾರಣ ವರ್ಗದಲ್ಲಿರುವುದು ಕಂಡು ಬರುತ್ತಿದೆ. ಕನ್ನಡ ಪದಗಳನ್ನು ವಿಶ್ಲೇಷಿಸಿ ಓದುವ ಮತ್ತು ಗುರುತಿಸುವ ಪ್ರಯತ್ನ ಕಡಿಮೆ ವರ್ಗದಲ್ಲಿರುವುದು ಕಂಡು ಬರುತ್ತಿದೆ. ಹಾಗೆಯೇ ಕನ್ನಡ ಪದಗಳನ್ನು ಸಂಶ್ಲೇಷಿಸಿ ಓದುವುದರಲ್ಲಿ ಅತಿ ಕಡಿಮೆ ವರ್ಗದಲ್ಲಿರುವುದು ಕಂಡು ಬರುತ್ತದೆ ಎನ್ನುವುದನ್ನು ಅಧ್ಯಯನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಅಂದರೆ ಇಲ್ಲಿ ಆಂಗ್ಲ ಮಾಧ್ಯಮ ಮಕ್ಕಳ ಮಾತೃಭಾಷೆಯು ಬೇರೆಯಾಗಿದೆ. ಹೆಚ್ಚಿನವರೆಲ್ಲ ಅನ್ಯಭಾಷಿಕರಾಗಿದ್ದಾರೆ. ಆಂಗ್ಲ ಭಾಷೆ ಮನೆಮಾತಾಗಿರುವವರು ತೀರಾ ವಿರಳ. ಹಾಗಾಗಿ ಮಾತೃ ಭಾಷೆಯಲ್ಲಿಯೇ ಮಕ್ಕಳಿಗೆ ಭಾಷೆಯನ್ನು ಕಲಿಸುವ ಮೂಲಕ ದೋಷಗಳನ್ನು ಕಡಿಮೆ ಮಾಡಬಹುದು. ಆಂಗ್ಲ ಮಾಧ್ಯಮ ಮಕ್ಕಳಿಗೆ ಪರಿಹಾರ ಬೋಧನೆ ಮಾಡುವುದರ ಜೊತೆಗೆ ಓದುಗಾರಿಕೆಯನ್ನು ಉತ್ತಮಪಡಿಸಬಹುದು. ಅನ್ಯ ಭಾಷಿಕರಿಗೆ ಎರಡನೇ ಭಾಷೆಯನ್ನು ಅಷ್ಟೇ ಸಮರ್ಪಕವಾಗಿ ಕಲಿಸುವ ಪ್ರಯತ್ನ ಮಾಡಬೇಕು. ಹಾಗಾದಾಗ ಮಾತೃ ಭಾಷೆಯನ್ನು ಸಂಪೂರ್ಣವಾಗಿ ಕಲಿಯಲು ಸಾಧ್ಯಾವಾಗುತ್ತದೆ ಎನ್ನುವುದನ್ನು ಪ್ರಮುಖವಾಗಿ ಗುರುತಿಸಿದ್ದಾರೆ.

**ಪುಷ್ಪಾವತಿ. ಎಸ್.ಕೆ. ಐದನೆ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳ ತೌಲನಿಕ ಅಧ್ಯಯನ** ಎನ್ನುವ ಕಿರುಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಕನ್ನಡ ಮಾಧ್ಯಮದಲ್ಲಿ ಬಾಲಕಿಯರಿಗಿಂತ ಬಾಲಕರು ಕನ್ನಡ ಅಕ್ಷರ, ಪದಗಳನ್ನು ಗುರುತಿಸುವಲ್ಲಿ ದೋಷಗಳನ್ನು ಮಾಡುತ್ತಾರೆ. ಅದೇ ಆಂಗ್ಲ ಮಾಧ್ಯಮದಲ್ಲಿ ಬಾಲಕರಗಿಂತ ಬಾಲಕಿಯರು ಅಕ್ಷರ ಹಾಗೂ ಪದಗಳನ್ನು ಗುರುತಿಸುವಲ್ಲಿ ಹೆಚ್ಚು ದೋಷಗಳನ್ನು ಮಾಡುತ್ತಾರೆ ಎನ್ನುವುದು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಅಂದರೆ ಅನ್ಯ ಭಾಷೆ ಕಲಿಕೆಗಿಂತ ಮಾತೃ ಭಾಷೆ ಕಲಿಕೆ ಮಕ್ಕಳಿಗೆ ಬಹು ಬೇಗನೆ ಪೂರೈಕೆಯಾಗುತ್ತದೆ ಎನ್ನುವುದು ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಮಾತೃಭಾಷೆಯ ಮೂಲಕ ಮಕ್ಕಳ ಕಲಿಕೆ ಸಂಪೂರ್ಣವಾದಾಗ ಇತರ ಅನ್ಯಭಾಷೆಗಳನ್ನು ಸುಲಭವಾಗಿ ಗ್ರಹಿಸಿಕೊಳ್ಳಬಹುದು. ಅದು ಒಂದು ಹಂತದವರೆಗೆ ಮುಂದುವರೆಯಬೇಕು. ಆಗ ಮಗುವಿನ ತಿಳುವಳಿಕೆಯ ಬುದ್ಧಿಮಟ್ಟ ಮತ್ತು ಗ್ರಹಿಸುವ ಸಾಮರ್ಥ್ಯ ಸ್ವಲ್ಪಮಟ್ಟಿಗೆ ಬೆಳೆದಿರುವುದರಿಂದ ವಿಷಯ ಜ್ಞಾನ ಸ್ಪಷ್ಟವಾಗುತ್ತದೆ. ಆದರೆ ಅದೇ ವಿಷಯವನ್ನು ಅನ್ಯಭಾಷೆಯ ಮೂಲಕ ಮಗುವಿನ ಕಲಿಕೆ ಪ್ರಾರಂಭವಾಗುತ್ತಿದ್ದಂತೆಯೇ ಕಲಿಸುವುದು ಮಗುವಿನ ತಿಳುವಳಿಕೆಗೆ ಮುಟ್ಟುವುದಿಲ್ಲ. ಹೀಗಾಗಿ ಮಗುವಿನ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವುದರಿಂದ ಅನ್ಯ ಭಾಷೆಗಳಲ್ಲಿ ಆಗುವಂತಹ ದೋಷಗಳನ್ನು ಸರಿಪಡಿಸಬಹುದು ಎನ್ನುವುದನ್ನು ಇಲ್ಲಿ ತಿಳಿಸಿದ್ದಾರೆ.

**ನಾರನಗೌಡ್ರ ಮಂಜುನಾಥ 'ಏಳನೇ ತರಗತಿಯ ಕನ್ನಡ ಪಠ್ಯಪುಸ್ತಕದಲ್ಲಿನ ನೈತಿಕ ಮೌಲ್ಯಗಳನ್ನು ಗುರುತಿಸುವ ಬಗ್ಗೆ ಒಂದು ಸ್ಥೂಲ ಅಧ್ಯಯನ'** ಎನ್ನುವ ಕಿರು ಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇಲ್ಲಿ ಸಂಶೋಧಕರು ಕನ್ನಡ ಪಠ್ಯಪುಸ್ತಕಗಳಲ್ಲಿ ನೀತಿ ಪಾಠಗಳ ಮೂಲಕ ಪ್ರತಿಬಿಂಬವಾಗುವ ನೈತಿಕ ಶಿಕ್ಷಣವು ಮಕ್ಕಳಲ್ಲಿ ಹೇಗೆ ಬೆಳೆದು ಬರುತ್ತಿದೆ ಎಂಬುದನ್ನು ಗುರುತಿಸಿದ್ದಾರೆ. ಮಕ್ಕಳಿಗೆ ಕಲಿಸುವಂತಹ ವಿಷಯಗಳು ಅವರ ಸುತ್ತಮುತ್ತಲ ಪರಿಸರದಲ್ಲಿ ಬಳಕೆಯಾಗುವಂತಿದ್ದರೆ ಎಂತಹ ವಿಷಯಗಳನ್ನಾದರೂ ಅವರು ಸುಲಭವಾಗಿ ಗ್ರಹಿಸುತ್ತಾರೆ ಮತ್ತು ಅರ್ಥೈಸಿಕೊಳ್ಳುತ್ತಾರೆ. ಅದೇ ರೀತಿಯಾಗಿ ನೈತಿಕ ಶಿಕ್ಷಣ ಎನ್ನುವುದು ಸಮಾಜದ ಪ್ರತಿಬಿಂಬ. ಆ ಸಮಾಜದಲ್ಲಿ ಘಟಿಸುವ ಸನ್ನಿವೇಶಗಳನ್ನೇ ಮಗು

ತನ್ನ ಬೌದ್ಧಿಕ ಮಟ್ಟಕ್ಕೆ ಅನುಗುಣವಾಗಿ ಕಲಿಯುತ್ತದೆ. ಹಾಗಾಗಿ ಮಗುವಿನ ಮಾತೃಭಾಷೆಯೆ ಹಲವಾರು ವಿಷಯ ಜ್ಞಾನಕ್ಕೆ ಹೆಚ್ಚು ಪೋಷಕ. ಅದು ನೈತಿಕ ಶಿಕ್ಷಣವಾಗಿರಬಹುದು ಅಥವಾ ಇತರೆ ಸಮಾಜ, ವಿಜ್ಞಾನ, ಗಣಿತ ಮುಂತಾದ ವಿಷಯಗಳೂ ಆಗಿರಬಹುದು. ಆದ್ದರಿಂದ ಮಗು ತನ್ನ ಮನೆಮಾತು, ಮಾತೃಭಾಷೆ ಮೂಲಕ ವಿಷಯವನ್ನು ಚೆನ್ನಾಗಿ ಕಲಿಯಬಲ್ಲದು ಎಂದಿದ್ದಾರೆ. ಹಾಗೂ ಪರಿಸರದಲ್ಲಿರುವುದನ್ನು ಅಷ್ಟೇ ಚುರುಕಾಗಿ ಬೇಗನೆ ಕಲಿತುಕೊಳ್ಳುತ್ತದೆ. ಈ ಮಕ್ಕಳಲ್ಲಿ ಮಾತೃಭಾಷೆಯ ಮೂಲಕ ಕಲಿಸುವಂತಹ ನೈತಿಕ ಶಿಕ್ಷಣ ಶೇಕಡ ೭೦ರಷ್ಟು ಪ್ರಮಾಣದಲ್ಲಿ ವ್ಯಕ್ತವಾಗಿರುವುದು ಕಂಡು ಬರುತ್ತದೆ ಎನ್ನುವುದನ್ನು ಇಲ್ಲಿ ನಿರೂಪಿಸಿದ್ದಾರೆ.

ರವೀಂದ್ರ ಕರ್ಜಗಿ **'ಏಳನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡದ ಸಂಯುಕ್ತಾಕ್ಷರ ಪದಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ ಅಧ್ಯಯನ'** ಎನ್ನುವ ಕಿರುಪ್ರಬಂಧದಲ್ಲಿ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮದ ಮಕ್ಕಳು ಸಂಯುಕ್ತಾಕ್ಷರ ಪದಗಳನ್ನು ಗುರುತಿಸುವಲ್ಲಿ ಮಾಡುವ ದೋಷಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಹೆಚ್ಚು ದೋಷಗಳನ್ನು ಮಾಡುತ್ತಾರೆ ಎನ್ನುವುದನ್ನು ಇಲ್ಲಿ ಚರ್ಚಿಸಿದ್ದಾರೆ.

**ಬಸವರಾಜ ಹಿರೇಮಠ 'ಕುಷ್ಟಗಿ ತಾಲೂಕಿನ ಹಿರೇಮನ್ನಾಪುರ ಗ್ರಾಮದ ಐದನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳನ್ನು ಕುರಿತು ಒಂದು ಅಧ್ಯಯನ'** ಎನ್ನುವ ಕಿರುಪ್ರಬಂಧದಲ್ಲಿ ಮಕ್ಕಳು ಓದುವಾಗ ಮಾಡುವ ದೋಷಗಳನ್ನು ಮತ್ತು ಅವುಗಳಿಗೆ ಕಾರಣಗಳನ್ನು ಗುರುತಿಸಿದ್ದಾರೆ. ಮಕ್ಕಳಿಗೆ ಸ್ವರಗಳ ಸ್ಪಷ್ಟವಾದ ತಿಳುವಳಿಕೆಗಳನ್ನು ಮೂಡಿಸಬೇಕೆಂಬುದನ್ನು ತಿಳಿಸಿದ್ದಾರೆ. ಮಕ್ಕಳು ಉಚ್ಚಾರಮಾಡುವಾಗ ದೋಷಗಳನ್ನು ಮಾಡುತ್ತಾರೆ. ಆ ದೋಷಗಳಿಗೆ ಕಾರಣಗಳನ್ನು ಕಂಡು ಹಿಡಿದು ದೋಷಗಳನ್ನು ಮಾಡದಂತೆ ಮಕ್ಕಳ ಸ್ವರಗಳ ಉಚ್ಚಾರದ ಕಡೆಗೆ ಗಮನಹರಿಸಿ ಸ್ಪಷ್ಟ ಉಚ್ಚಾರಣೆ ಮಾಡುವಂತೆ ತಿಳಿಸಿಕೊಡಬೇಕು. ಬಹುತೇಕ ಮಕ್ಕಳಿಗೆ 'ಅ' ಕಾರಕ್ಕೂ 'ಹ' ಕಾರಕ್ಕೂ ಹಾಗೂ 'ರ' ಕಾರಕ್ಕೂ 'ಳ' ಕಾರಕ್ಕೂ ಮತ್ತು 'ಲ' ಕಾರಕ್ಕೂ ವ್ಯತ್ಯಾಸವಿಲ್ಲದಂತೆ ಏಕರೂಪವಾಗಿ ಸ್ವರಗಳನ್ನು ಉಚ್ಚಾರ ಮಾಡುತ್ತಾರೆ. ಇಂತಹ ದೋಷಗಳನ್ನು ಮಕ್ಕಳು ಮಾಡದಂತೆ ಕನ್ನಡದ ಸ್ವರ, ಪದಗಳನ್ನು ಸರಿಯಾದ ರೀತಿಯಲ್ಲಿ ಉಚ್ಚಾರ ಮಾಡಿ ಮಾತನಾಡುವಂತೆ ಕಲಿಸಿಕೊಡಬೇಕೆಂದು ತಿಳಿಸಿದ್ದಾರೆ. ಹಾಗಾದಾಗ ಮಾತ್ರ ಕನ್ನಡ ಮಾಧ್ಯಮ ಕಲಿಕೆಯು ಸ್ಪಷ್ಟವಾಗುತ್ತದೆ ಎಂಬುದನ್ನು ತಿಳಿಯಬಹುದು.

### ೨.೪. ಕೃತಿಗಳು

ಕುವೆಂಪು ಅವರ ಶಿಕ್ಷಣ ತತ್ವವಿಚಾರ ಕೃತಿಯಲ್ಲಿ ಕುವೆಂಪು ಅವರು ಪ್ರಾಥಮಿಕ ಶಿಕ್ಷಣದಲ್ಲಿ ಮೂಡಿರುವ ಭಾಷಾ ಸಮಸ್ಯೆಯನ್ನು, ಶಿಕ್ಷಣದ ಭಾಷೆ, ಸ್ವರೂಪದಿಂದಾಗಿ

ಆಗುತ್ತಿರುವ ಹಾನಿ, ಅವಾಂತರಗಳನ್ನು ಕುರಿತು ಚಿಂತಿಸಿದ್ದಾರೆ. ಶಿಕ್ಷಣದಲ್ಲಿ ಭಾಷೆಯನ್ನು ಕುರಿತು ಹೇಳುವಾಗ ದೇಶಭಾಷಾ ಮಾಧ್ಯಮ ಒಂದೇ ಅನೇಕ ಸಮಸ್ಯೆಗಳಿಗೆ ಸೂಕ್ತ ಪರಿಹಾರವೆಂದು ಸ್ಪಷ್ಟವಾಗಿ ನುಡಿದಿದ್ದಾರೆ. ಸಂಸ್ಕೃತಿಯ ವಿಕಾಸ ಕ್ರಮದಲ್ಲಿ ಅದರ ಪಾತ್ರ ಮಹತ್ತರವಾದದ್ದು. ಆತ್ಮಾಭಿವ್ಯಕ್ತಿಗೆ, ಭಾವಪ್ರಕಾಶನಕ್ಕೆ ಹಾಗೂ ಆಲೋಚನಾ ವ್ಯವಸ್ಥೆಗೆ ಪರಿಣಾಮಕಾರಿ ಸಾಧನ ಮಾತೃಭಾಷೆಯಾಗಿದೆ. ದೇಶಭಾಷೆಗಳಿಗೆ ಯೋಗ್ಯ ಸ್ಥಾನ ಸಿಗಬೇಕು. ಈ ಶಿಕ್ಷಣ ಮಾಧ್ಯಮದ ಪ್ರಶ್ನೆಯನ್ನು ವಿದ್ಯಾ ಪ್ರವೀಣರ ತೀರ್ಮಾನಕ್ಕೆ ಬಿಡುವುದು ಸರಿಯಲ್ಲವೆಂದೇ ಹೇಳಿದ್ದಾರೆ. ಪ್ರಾಥಮಿಕದಿಂದ ವಿಶ್ವವಿದ್ಯಾನಿಲಯ ಹಂತದವರೆಗೂ ಪ್ರತಿಯೊಂದು ಪ್ರಾದೇಶಿಕ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು. ಪರಭಾಷೆಯ ಶಿಕ್ಷಣ ಮಾಧ್ಯಮ ಮಕ್ಕಳ ಶಿಕ್ಷಣವನ್ನು ಬೆಂಡು ಮಾಡುತ್ತದೆ. ಅನ್ಯ ಭಾಷೆಯ ಶಿಕ್ಷಣದಿಂದ ರಾಷ್ಟ್ರಕ್ಕೆ ಆಗುತ್ತಿರುವ ಜ್ಞಾನಹಾನಿ ಮತ್ತು ನೈತಿಕ ನಷ್ಟ ಅಷ್ಟಿಷ್ಟಲ್ಲ. ಆಂಗ್ಲ ಭಾಷಾ ಮಾಧ್ಯಮ ಶಿಕ್ಷಣ ನಮ್ಮ ಮಕ್ಕಳ ಬುದ್ಧಿ ಶಕ್ತಿಯನ್ನು ಕೊಲೆ ಮಾಡಿದಂತಾಗುತ್ತದೆ ಎಂದು ವಿಶ್ಲೇಷಿಸಿದ್ದಾರೆ. ಅದಕ್ಕೆ ಅವರ ಒಂದು ಕವನವನ್ನು ನಿದರ್ಶನದ ಮೂಲಕ ನೋಡಬಹುದು.

**ಬೇಡ, ಬೇಡ, ಬೇಡ !**
**ಮಕ್ಕಳ ಈ ಕೊಲೆ ಬೇಡ !**
**ತುಸು ಯೋಚಿಸೋ, ಹೇ ವಿದ್ವನ್ಮೂಢ !**
**ತಪ್ಪಿಸೊ, ಈ ಇಂಗ್ಲೀಶಿನ ಕೇಡ !**

**(ಕುವೆಂಪು ಅವರ ಶಿಕ್ಷಣ ತತ್ವವಿಚಾರ, ಸಂ: ದೇ. ಜವರೇಗೌಡ, ಪ್ರಸಾರಾಂಗ ಬೆಂ.ವಿ.ವಿ., ೧೯೭೭.)**

**'ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು'**

**ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ ೧೯೮೯.**

**ರಾಜ್ಯದ ಉಚ್ಚ ನ್ಯಾಯಾಲಯದ ನ್ಯಾಯ ಮೂರ್ತಿಗಳಾದ ಶ್ರೀ ರಾಮಾಜೋಯಿಸ್ ಮತ್ತು ಶ್ರೀ ರಾಜೇಂದ್ರ ಬಾಬು** ಅವರ ಪೂರ್ಣ ಪೀಠವು ತೀರ್ಪನ್ನು ಹೊರಡಿಸಿರುತ್ತದೆ. ಈ ತೀರ್ಪಿನ ಪ್ರಕಾರ ಮಾತೃ ಭಾಷೆಯಲ್ಲಿಯೇ ಶಿಕ್ಷಣವನ್ನು ಮಕ್ಕಳಿಗೆ ನೀಡುವುದರಿಂದ ಮಕ್ಕಳು ಯಾವುದೇ ತೊಂದರೆ ಇಲ್ಲದೆಯೇ ಸ್ಪಷ್ಟವಾಗಿ ಆಲೋಚಿಸಬಲ್ಲವರಾಗಿರುತ್ತಾರೆ ಮತ್ತು ಗ್ರಹಿಸಬಲ್ಲವರಾಗಿರುತ್ತಾರೆ. ಮಾತೃಭಾಷೆಯಲ್ಲಿನ ಶಿಕ್ಷಣ ಭಾಷಾ ಅಲ್ಪಸಂಖ್ಯಾತರ ಹಿತದೃಷ್ಟಿಗನುಗುಣವಾಗಿದೆ ಎಂದು ಪೂರ್ಣಪೀಠವು ತೀರ್ಮಾನವನ್ನು ಹೊರಡಿಸಿರುತ್ತದೆ. ಆದರೆ ಸರಕಾರವು ಅನ್ಯಭಾಷೆಯನ್ನು ಹೊರತುಪಡಿಸಿ ಕನ್ನಡ, ಇಂಗ್ಲೀಶ್ ಕಲಿಕೆಗೆ ಒತ್ತಾಯಿಸಿರುವುದನ್ನು ಆಕ್ಷೇಪಿಸಿ ಅಲ್ಪಸಂಖ್ಯಾತರು ಮಾತೃಭಾಷೆ ಕಲಿಕೆ ಕುರಿತು ರಿಟ್ ಅರ್ಜಿ ಸಲ್ಲಿಸಿರುತ್ತಾರೆ. ಅಲ್ಪಸಂಖ್ಯಾತರ ಅರ್ಜಿಯನ್ನು ಪರಿಗಣಿಸಿ, ಸರಕಾರ ಅನ್ಯಭಾಷಾ ಕಲಿಕೆಗೆ ಹೊರಡಿಸಿರುವ ಆದೇಶವು ಸಂವಿಧಾನಾತ್ಮಕ ಹಕ್ಕನ್ನು ಉಲ್ಲಂಘಿಸಿರುವುದಾಗಿ

ಪೂರ್ಣಪೀಠವು ೨೯.೪.೮೯ ರಂದು ಅಂತಿಮ ತೀರ್ಪನ್ನು ನೀಡಿರುತ್ತದೆ. ಈ ತೀರ್ಪಿನಿಂದ ೧ನೇ ತರಗತಿಯಿಂದ ೪ನೇ ತರಗತಿಯವರೆಗೆ ಅನ್ಯಭಾಷಾ ಕಲಿಕೆ ಸೂಕ್ತವಲ್ಲ, ಮಗುವಿನ ಮಾತೃ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು ಎಂಬುದನ್ನು ಸ್ಪಷ್ಟಪಡಿಸಿರುತ್ತದೆ. ಈ ತೀರ್ಪಿನ ಪ್ರಕಾರ

* ೧ರಿಂದ ೪ನೇ ತರಗತಿಯವರೆಗೆ ಮಾತೃಭಾಷಾ ಶಿಕ್ಷಣ ಮಾಧ್ಯಮ. ಒಂದು ಭಾಷೆಯಲ್ಲಿ ಮಾತ್ರ ಅಧ್ಯಯನ ವಿಷಯಗಳನ್ನು ಬೋಧಿಸಬೇಕು.
* ೩ನೇ ತರಗತಿಯಿಂದ ಕನ್ನಡೇತರರಿಗೆ ಕನ್ನಡ ಐಚ್ಛಿಕ ವಿಷಯ, ವರ್ಷದ ಕೊನೆಯಲ್ಲಿ ಕನ್ನಡದಲ್ಲಿ ಪರೀಕ್ಷೆಯಿಲ್ಲ.
* ೫ನೇ ತರಗತಿಯಿಂದ ಎರಡನೆ ಭಾಷೆಯನ್ನು ಕಲಿಸಬೇಕು. ಕನ್ನಡೇತರರಿಗೆ ಕನ್ನಡ ಕಲಿಕೆ ಕಡ್ಡಾಯ. ಕನ್ನಡ ವಿದ್ಯಾರ್ಥಿಗಳಿಗೆ ಇನ್ನೊಂದು ಭಾಷೆ ಕಲಿಕೆ ಕಡ್ಡಾಯ. ಅದೇ ವರ್ಷದಿಂದ ಮೂರನೆ ಭಾಷೆಯ ಕಲೆಕೆಯನ್ನೂ ಕಡ್ಡಾಯಗೊಳಿಸಿರುತ್ತದೆ

**ಕನ್ನಡ ಕನ್ನಡಿಗ ಕರ್ನಾಟಕ ಎಲ್.ಎಸ್. ಶೇಷಗಿರಿರಾವ್** ಅವರಿಂದ ಸಂಪಾದನೆ ಗೊಂಡಿರುವ ಈ ಕೃತಿಯು ಮುಖ್ಯವಾಗಿ ಕನ್ನಡ ಭಾಷೆ ಹಾಗೂ ಮಾಧ್ಯಮ ಕುರಿತಾಗಿ ಹಲವಾರು ವರದಿಗಳು ಏನನ್ನು ತಿಳಿಸಿರುತ್ತವೆ ಎಂಬುದನ್ನು ವಿವರಿಸುತ್ತದೆ. ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮವನ್ನು ಜಾರಿಗೆ ತರುವಲ್ಲಿ ಯಶಸ್ವಿಯಾದ ಗೋಕಾಕ ಚಳುವಳಿ, ಪ್ರಾಥಮಿಕ ಶಿಕ್ಷಣ ಉನ್ನತ ನ್ಯಾಯಾಲಯದ ತೀರ್ಪು, ೧೯೯೪ರ ಸರ್ವೋಚ್ಛ ನ್ಯಾಯಾಲಯ ತೀರ್ಪು ಮುಂತಾದ ಯೋಜನೆಗಳು ಪ್ರಾಥಮಿಕ ೧ನೇ ತರಗತಿಯಿಂದ ೪ನೇ ತರಗತಿವರೆಗೆ ಮಾತೃಭಾಷಾ ಮಾಧ್ಯಮವನ್ನು ಕಡ್ಡಾಯಗೊಳಿಸಿರುವುದನ್ನು ಈ ಕೃತಿಯಲ್ಲಿ ಸ್ಪಷ್ಟವಾಗಿ ಗುರುತಿಸಲಾಗಿದೆ. ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಅನುಸರಿಸ ಬೇಕಾದ ಭಾಷಾ ನೀತಿಯ ಪ್ರಕಾರ ಕನ್ನಡೇತರ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣದ ಪ್ರಥಮ ವರ್ಷದಿಂದ ಕನ್ನಡ ಬೋಧನವು ಕಡ್ಡಾಯವಾಗಿರತಕ್ಕದೆಂದು ಆದೇಶಿಸಿದೆ. ೧೯೯೪-೯೫ನೇ ಶೈಕ್ಷಣಿಕ ವರ್ಷದಲ್ಲಿ ೧ನೇ ತರಗತಿಗೆ ಸೇರುವ ವಿದ್ಯಾರ್ಥಿಗಳಿಗೆ ಮಾತೃಭಾಷೆ ಅಥವಾ ಕನ್ನಡ ಭಾಷಾ ಮಾಧ್ಯಮದಲ್ಲಿಯೇ ಬೋಧಿಸತಕ್ಕದ್ದು. ವಿದ್ಯಾರ್ಥಿಗಳು ೫ನೇ ತರಗತಿಯಿಂದ ತಮ್ಮ ಸ್ವಇಚ್ಛೆಯಂತೆ ಇಂಗ್ಲೀಶ್ ಅಥವಾ ಬೇರೆ ಯಾವುದೇ ಭಾಷಾ ಮಾಧ್ಯಮಕ್ಕೆ ಬದಲಾವಣೆ ಮಾಡಿಕೊಳ್ಳಬಹುದು ಎಂದು ವಿವರಿಸಲಾಗಿದೆ.

**ಶಿಕ್ಷಣ ಮಾಧ್ಯಮ ಸಮಗ್ರ ಚಿಂತನ : ಎ. ಆರ್. ನಾರಾಯಣ ಘಟ್ಟ** ಕೃತಿಯಲ್ಲಿ ಶಿಕ್ಷಣ ಮಾಧ್ಯಮವನ್ನು ಕುರಿತು ಚರ್ಚಿಸಲಾಗಿದೆ. ಮಗುವಿಗೆ ನೀಡುವ ಶಿಕ್ಷಣದಲ್ಲಿ ಮಾತೃಭಾಷೆಯ ಅಗತ್ಯತೆಯನ್ನು ಹೇಳುವಾಗ ತಾಯಿಯ ಹಾಲು ಮಗುವಿಗೆ ಎಷ್ಟು ಅವಶ್ಯಕವೋ, ಅಷ್ಟೇ ಮಾತೃಭಾಷೆ ಮಗುವಿನ ಶಿಕ್ಷಣಕ್ಕೆ ಬೆಂಬಲವಾಗಿ ನಿಲ್ಲುತ್ತದೆ. ಇಂಗ್ಲೀಶ್ ಮಾಧ್ಯಮವನ್ನು ಅಪೇಕ್ಷಿಸುವ ಪೋಷಕರಿಂದಾಗಿ ಮಕ್ಕಳು ಇಂಗ್ಲೀಶ್ ಮಾಧ್ಯಮಕ್ಕೆ

ದೂಡಲ್ಪಟ್ಟು ಮಾತೃಭಾಷೆಯ ಸೊಗಡನ್ನು, ಸೌಂದರ್ಯವನ್ನೂ ಅನುಭವಿಸುವ ಅಮೃತ ಘಳಿಗೆಯಿಂದ ವಂಚಿತರಾಗುತ್ತಾರೆ ಎಂದು ಅನ್ಯ ಭಾಷೆಯಿಂದಾಗುವ ದುಷ್ಪರಿಣಾಮಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ಬೆಳೆಯಬೇಕೆ ಹೊರತು ಇಂಗ್ಲೀಶ್ ಮಾಧ್ಯಮದಲ್ಲಿ ಬೇಡ ಎನ್ನುತ್ತಾರೆ. ಇಂಗ್ಲೀಶ್ ಮಾಧ್ಯಮ ಮಗುವಿನ ಕಲಿಕೆಯ ವೇಗವನ್ನು ತಡೆಯುತ್ತದೆ. ಪರಭಾಷೆ ಕಲಿಕೆಯನ್ನು ಸಹ ಮಗುವಿನ ಮಾತೃಭಾಷೆಯ ಮೂಲಕವೇ ಕಲಿಸಿ ಕೊಡಬೇಕು. ಆ ಮೂಲಕವಾದರು ಮಗುವಿಗೆ ಅನ್ಯ ಭಾಷಾ ಮಾಧ್ಯಮದ ಕಲಿಕೆಯ ಹೊರೆಯನ್ನು ತಪ್ಪಿಸಬಹುದು ಎಂಬುದು ಇವರ ಅಭಿಮತವಾಗಿದ

**ಕನ್ನಡ ಅಧ್ಯಯನ : ಎಚ್. ಎಸ್. ರಾಘವೇಂದ್ರರಾವ್** ಅವರಿಂದ ಸಂಪಾದನೆ ಗೊಂಡಿರುವ ಈ ಕೃತಿಯಲ್ಲಿ ಕನ್ನಡ ಭಾಷಾ ಮಾಧ್ಯಮ ಕುರಿತಾಗಿ ವಿವಿಧ ಲೇಖಕರ ಅಭಿಪ್ರಾಯಗಳನ್ನು ಇಲ್ಲಿ ತಿಳಿಸಿದ್ದಾರೆ. ಶಿಕ್ಷಣ ಮಾಧ್ಯಮವಾಗಿ ಕನ್ನಡ ಎನ್ನುವ ವಿಚಾರ ಸಂಕಿರಣವನ್ನು ಏರ್ಪಡಿಸಿ ಮಾಧ್ಯಮ ವಿಚಾರ ಕುರಿತಾಗಿ ಹಲವಾರು ಲೇಖಕರ ಅಭಿಪ್ರಾಯಗಳನ್ನು ಇಲ್ಲಿ ವ್ಯಕ್ತಪಡಿಸಿರುತ್ತಾರೆ. ಇದರಲ್ಲಿ ಅನ್ಯಭಾಷಾ ಶಿಕ್ಷಣ ಮಾಧ್ಯಮ, ಭಾಷೆಯ ಹತ್ಯೆಯೇ ಜನಾಂಗದ ಹತ್ಯಯೇ ಎನ್ನುವ ಸ್ಕುಟನಾಬ್ ಕಾಂಗಾಸ್ ಅವರ ಲೇಖನ ನಿಜಕ್ಕೂ ಅಚ್ಚರಿಯನ್ನುಂಟು ಮಾಡುತ್ತದೆ. ಮಾತೃಭಾಷೆಯ ಶಿಕ್ಷಣದ ಮಹತ್ವವನ್ನು ನಮಗೆ ಅನ್ಯ ದೇಶದವರು ಅರ್ಥೈಸುವುದು ಒಂದು ದುರಂತರವೇ ಸರಿ. ಮಾತೃಭಾಷೆ ಜನಾಂಗದ ತಳಹದಿ. ಮಾತೃಭಾಷೆಯನ್ನು ಕಳೆದುಕೊಂಡಾಗ ಜನಾಂಗದ ಆತ್ಮಹತ್ಯೆಯಾಗುತ್ತದೆ. ಮಾತೃಭಾಷೆಯನ್ನು ಬಿಟ್ಟು ಅನ್ಯಭಾಷೆಯಲ್ಲಿ ಶಿಕ್ಷಣ ನೀಡಿದರೂ ಭಾವನೆಗಳು ಮಾತೃಭಾಷೆ ಯಲ್ಲಿಯೇ ವ್ಯಕ್ತವಾಗುತ್ತವೆ. ಹೀಗೆ ಅನ್ಯಭಾಷಾ ಶಿಕ್ಷಣವು ಜನರ ಮಾತೃಭಾಷೆಯನ್ನು ಕೊಲ್ಲುತ್ತದೆ ಎಂದಾದರೆ, ಶಿಕ್ಷಣವು ಜನರನ್ನು ಕೊಲ್ಲುತ್ತದೆ ಎಂದಾಗಬಹುದು. ಹಾಗಾಗಿ ಭಾಷೆಯನ್ನು ಶಿಕ್ಷಣ ಕ್ರಮದ ಮೂಲಕ ಪುನರುಜ್ಜೀವನಗೊಳಿಸಬಹುದು ಎನ್ನುತ್ತಾರೆ. ಈ ಕೃತಿಯಲ್ಲಿರುವ ಇತರ ಲೇಖಕರ ಅಭಿಪ್ರಾಯಗಳನ್ನು ಈ ಕೆಳಗಿನಂತೆ ಗಮನಿಸಬಹುದು.

**ಶಿಕ್ಷಣ ಮಾಧ್ಯಮವಾಗಿ ಮಾತೃಭಾಷೆಯ ಪ್ರಾಧಾನ್ಯ : ಪ್ರೊ. ಜಿ.ಟಿ. ನಾರಾಯಣರಾವ್** ಲೇಖಕರು ಮಾತೃಭಾಷೆಯ ಮಹತ್ವವನ್ನು 'ಒಡಲು' ಮತ್ತು 'ನುಡಿ' ಎಂಬ ಎರಡು ಪ್ರತೀಕಗಳ ಮೂಲಕ ವಿವರಿಸುತ್ತಾರೆ. ಒಡಲು ನಿಸರ್ಗದವರ ನುಡಿ, ಕೇಳಿ ಕಲಿತು ಅರ್ಥ ಮಾಡಿಕೊಳ್ಳುವ, ಅಭಿವ್ಯಕ್ತಿಸುವ ಸೂಪ್ತ ಸಾಮರ್ಥ್ಯ. ಇದು ಪ್ರತಿಯೊಂದು ಮಗುವಿಗೂ ಪ್ರಾಪ್ತವಾಗಿರುತ್ತದೆ ಎನ್ನುತ್ತಾ ಮಾತೃಭಾಷಾ ಶಿಕ್ಷಣಕ್ಕೆ ಪ್ರಾಧಾನ್ಯತೆಯನ್ನು ಕಲ್ಪಿಸಿದ್ದಾರೆ. ವಿಷಯ ಬಲ್ಲವನಿಗೆ ಹಾಗೂ ಮಾತೃಭಾಷೆಯಲ್ಲಿ ಪ್ರಭುತ್ವ ಇರುವವನಿಗೆ ಯಾವುದೇ ಆಧುನಿಕ ವಿಷಯವನ್ನು ಕನ್ನಡದಲ್ಲಿ ಅಭಿವ್ಯಕ್ತಿಸುವುದು ಬಲು ಸುಲಭ ಎಂದು ವಿವರಿಸಿದ್ದಾರೆ.

**ಶಿಕ್ಷಣ ಮಾಧ್ಯಮವಾಗಿ ಮಾತೃಭಾಷೆ ಮತ್ತು ಇಂಗ್ಲೀಶ್ : ಅಗ್ನಿ ಶ್ರೀಧರ್** ಈ ವಿಷಯ ಕುರಿತು ವಿವಿಧ ಲೇಖಕರ ಅಭಿಪ್ರಾಯಗಳನ್ನು ತಿಳಿಸುತ್ತಾ ಕನ್ನಡಕ್ಕೆ ಕುತ್ತಾಗಿರುವುದು

ಇಂಗ್ಲೀಶ್ ಕಲಿತ ಕನ್ನಡಿಗರಿಗಿಂತಲೂ ಅನ್ಯಭಾಷಿಕರಿಂದ ಎಂಬುದನ್ನು ಇಲ್ಲಿ ಅರ್ಥೈಸಿದ್ದಾರೆ. ಬೆಂಗಳೂರನ್ನು ಆಕ್ರಮಿಸುತ್ತಿರುವ ಅದರ ಮೇಲೆ ಹಿಡಿತವನ್ನು ಸಡಿಲಗೊಳಿಸುತ್ತಿರುವ ಸಿಂಧಿ, ಮಾರ್ವಡಿ, ಆಂಧ್ರ, ಉತ್ತರಭಾರತ, ಮಲಯಾಳಂಗಳಿಂದಾಗಿಯೇ ಹೊರತು ಕನ್ನಡಿಗರಿಂದಲ್ಲ. ಕಾನ್ವೆಂಟ್‌ಗಳಲ್ಲಿ ಕನ್ನಡ ಕಡ್ಡಾಯ ಶಿಕ್ಷಣ ಮಾಧ್ಯಮವಾಗಿ ಇಂಗ್ಲೀಶ್ ಕೇವಲ ಒಂದು ಭಾಷೆಯಾಗಿ ಉಳಿದರೆ ಕನ್ನಡ ಭಾಷೆಗೆ ಧಕ್ಕೆ ಉಂಟಾಗುವುದಿಲ್ಲ. ಕುರುಡು ಆಕ್ರೋಶವನ್ನು ಬಿಟ್ಟು ಪ್ರಮಾಣಿಕವಾಗಿ ಚಳುವಳಿಗಾರರು ಈ ದಿಸೆಯಲ್ಲಿ ಯೋಚಿಸ ಬೇಕೆಂದು ಕೋರಿದ್ದಾರೆ.

**ಶಿಕ್ಷಣ ಮತ್ತು ವೈಚಾರಿಕತೆ : ಆರ್ಕೆ ಮಣಿಪಾಲ್ (ಕನ್ನಡ ಭಾಷೆ ಮಾಧ್ಯಮ)** ಪದವಿಪೂರ್ವ ಶಿಕ್ಷಣದಲ್ಲಿ ಕಡ್ಡಾಯವಲ್ಲದ ಇಂಗ್ಲೀಶ್ ಬೋಧನೆಯಿಂದ ಪ್ರೌಢಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ಓದಿದ ಮಕ್ಕಳು ಪದವಿಯಲ್ಲಿ ಕಲೆ, ವಾಣಿಜ್ಯ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಕನ್ನಡ ಮಾಧ್ಯಮದಲ್ಲಿ ಓದಿದ ವಿದ್ಯಾರ್ಥಿಗಳು ವಿಜ್ಞಾನ ವಿಷಯಗಳಿಂದ ವಂಚಿತರಾಗುತ್ತಿದ್ದಾರೆ. ಇದರಿಂದ ಸಮಾಜದಲ್ಲಿನ ಮೇಲು, ಕೀಳಿನ ಕಲ್ಪನೆ ಶಿಕ್ಷಣದಲ್ಲೂ ಹಾಸುಹೊಕ್ಕಾಗಿರುವುದನ್ನು ಗಮನಿಸಬಹುದು ಎಂದಿದ್ದಾರೆ. ಗೋಕಾಕ್ ಚಳುವಳಿ ಅಂಕಗಳ ಹಿನ್ನೆಲೆಯಲ್ಲಿ ಪ್ರೌಢಶಾಲಾ ಶಿಕ್ಷಣದಲ್ಲಿ ಅಗ್ರ ಪ್ರಾಶಸ್ತ್ಯ ದೊರಕುವಂತೆ ಪ್ರಯತ್ನಿಸಿತು. ಆದರೆ ಎಲ್ಲಾ ಹಂತಗಳಲ್ಲಿ ಕನ್ನಡದ ಕಲಿಕೆಗೆ ಮಹತ್ವ ನೀಡಲಿಲ್ಲ. ಶಿಕ್ಷಣದಲ್ಲಿ ಕನ್ನಡವನ್ನು ಭಾಷೆಯಾಗಿ ಮಾತ್ರವಲ್ಲ ಶಿಕ್ಷಣದ ಎಲ್ಲ ರೂಪಗಳ ಮಾಧ್ಯಮವಾಗಿ ಕಲ್ಪಿಸಿಕೊಳ್ಳುವ ಅಗತ್ಯವನ್ನು ಈ ಚಳುವಳಿ ತಂದುಕೊಳ್ಳಲಿಲ್ಲ ಎಂದಿದ್ದಾರೆ. ಆಡಳಿತ ಮಾಧ್ಯಮವಾಗಿ ಕನ್ನಡ ಎಲ್ಲಿಯವರೆಗೆ ಜಾರಿಗೆ ಬರುವುದಿಲ್ಲವೋ ಅಲ್ಲಿಯವರೆಗೆ ಕನ್ನಡದ ಪ್ರಗತಿ ಸಾಧ್ಯವಾಗದು. ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಿಗಿಂತ ಕನ್ನಡದ ವಿದ್ಯಾರ್ಥಿಗಳ ಭಾಷಾ ಕೌಶಲಗಳು ತೀವ್ರವಾಗಿ ಕುಸಿದಿದೆ. ಸರಕಾರ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೆ ತರಲಾರದೆ ಉಳ್ಳವರಿಗೆ ಉತ್ಕೃಷ್ಟ ಶಿಕ್ಷಣ, ಇಲ್ಲದವರಿಗೆ ದೂರಶಿಕ್ಷಣ ಸೂತ್ರವನ್ನು ಅನುಸರಿಸುತ್ತಿದೆ ಎಂದು ಹೇಳಿದ್ದಾರೆ.

**ಶಿಕ್ಷಣ ಮಾಧ್ಯಮವಾಗಿ ಕನ್ನಡ ಕಾನೂನಿನ ತೊಡಕು : ಹೇಮಲತಾ ಮಹಿಷಿ** ಕೇರಳ, ಮಹಾರಾಷ್ಟ್ರ, ಆಂಧ್ರಪ್ರದೇಶ, ಬಂಗಾಳ, ತಮಿಳುನಾಡು ಮುಂತಾದ ರಾಜ್ಯಗಳಲ್ಲಿ ಆಯಾ ಭಾಷೆ ಮಾತನಾಡುವ ಜನರ ಪ್ರಮಾಣ ಜಾಸ್ತಿ ಇರುವಲ್ಲೆಲ್ಲಾ ಅಲ್ಲಿಯ ಭಾಷೆಯೇ ಆಡಳಿತ ಹಾಗು ಶಿಕ್ಷಣದ ಮಾಧ್ಯಮವಾಗಿರುವುದು ಪ್ರತ್ಯಕ್ಷವಾಗಿದೆ. ಆದರೆ ಕರ್ನಾಟಕದಲ್ಲಿ ಅದು ನಿಜವಾಗಲಿಲ್ಲ. ಕಾರಣ ನಮ್ಮ ರಾಜಕೀಯ ನಾಯಕರಲ್ಲಿ ರಾಜಕೀಯ ಇಚ್ಚಾಶಕ್ತಿ ಇಲ್ಲದಿರುವುದು ಕನ್ನಡ ಭಾಷೆಯನ್ನು ವ್ಯವಹಾರಿಕ ವಾಸ್ತವ ದೃಷ್ಟಿಯಿಂದ ನೋಡದೇ ರಾಜಕೀಯ ಬಣ್ಣಬರುವಂತೆ ಮಾಡಿರುವುದು. ನಮ್ಮ ರಾಜ್ಯದಲ್ಲಿ ಕಾವೇರಿಯೂ ರಾಜಕೀಯ ವಾಗುತ್ತದೆ, ಕನ್ನಡವೂ ರಾಜಕೀಯವಾಗುತ್ತದೆ. ಅದೇ ನಮ್ಮ ದುರಂತ. ಕನ್ನಡಕ್ಕೆ ತಾನಾಗಿಯೇ ಸಿಗಬೇಕಿದ್ದ ಪ್ರಥಮ ಸ್ಥಾನ ಸಲ್ಲದೆ ಹೋಗಿದ್ದರಿಂದ ಕರ್ನಾಟಕದಲ್ಲಿ ಅನ್ಯ ಭಾಷೆಗಳ ಜನ ಕನ್ನಡದ ಬಗ್ಗೆ ವಿರೋಧ ನೀತಿ ತಳೆದಿದ್ದಾರೆ ಎಂದು ಚರ್ಚಿಸಿದ್ದಾರೆ.

**ಬರಗೂರು ವರದಿ ೨೦೦೧** ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಬರಗೂರು ರಾಮಚಂದ್ರಪ್ಪ ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದಂತೆ ಸಾಕಷ್ಟು ಉತ್ತಮವಾದ ವಿಚಾರಾಂಶ ಗಳನ್ನು ಶಿಫಾರಸ್ಸು ಮಾಡಿದ್ದಾರೆ. ಶಿಕ್ಷಣ ಮಾಧ್ಯಮ ಕುರಿತು ೩೩ ಶಿಫಾರಸ್ಸುಗಳನ್ನು ನೀತಿ ನಿರೂಪಣಾ ವರದಿಯಲ್ಲಿ ಸುದೀರ್ಘವಾಗಿ ವಿಶ್ಲೇಷಿಸಿದ್ದಾರೆ. ಈ ಮುಂಚಿತವಾಗಿ ಬಂದಂತಹ ಎಚ್. ನರಸಿಂಹಯ್ಯ ವರದಿ, ಚಂಪಾವರದಿ, ಗೋಕಾಕ್ ವರದಿಗಳ ಸಾರವನ್ನು ಚರ್ಚಿಸಿದ್ದಾರೆ. ಮುಖ್ಯವಾಗಿ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷಾ ಮಾಧ್ಯಮದಲ್ಲಿಯೇ ನಡೆಯಬೇಕೆಂಬುದನ್ನು ಸೂಚಿಸುತ್ತಾರೆ. ಇದಕ್ಕೆ ರಾಜ್ಯ ಉಚ್ಚನ್ಯಾಯಾಲಯವು, ಖಾಸಗಿ ಶಿಕ್ಷಣ ಸಂಸ್ಥೆಗಳು ಇಂಗ್ಲೀಶ್ ಮಾಧ್ಯಮವನ್ನು ನಡೆಸುವಂತೆ ತಾತ್ಕಾಲಿಕ ತಡೆಯಾಜ್ಞೆಯನ್ನು ತಂದಿರುವುದನ್ನು ವಿರೋದಿಸುತ್ತಾರೆ. ರಾಷ್ಟ್ರದ ಸರ್ವೋಚ್ಚ ನ್ಯಾಯಾಲಯವೇ ಪ್ರಾಥಮಿಕ ಒಂದನೇ ತರಗತಿಯಿಂದ ನಾಲ್ಕನೇ ತರಗತಿಯವರೆಗೆ ಕನ್ನಡ ಮಾಧ್ಯಮವನ್ನು ಅಳವಡಿಸುವಂತೆ ಆದೇಶ ಹೊರಡಿಸಿರುವುದರಿಂದ ರಾಜ್ಯಾದ್ಯಾಂತ ಕನ್ನಡ ಮಾಧ್ಯಮವನ್ನು ಜಾರಿಗೆ ತರುವುದರಲ್ಲಿ ಕಷ್ಟವೇನಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಅದರ ಪ್ರಕಾರ ಮಾತೃಭಾಷಾ ಮಾಧ್ಯಮ ಮಕ್ಕಳ ಜ್ಞಾನ ಗ್ರಹಿಕೆಗೆ ಪೂರಕ ಅಂಶವಾಗುವುದರಿಂದ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮವನ್ನು ಎತ್ತಿ ಹಿಡಿಯಬೇಕು, ಜೊತೆಗೆ ಮಾತೃಭಾಷೆ ಹಾಗೂ ಆಂಗ್ಲ ಮಾಧ್ಯಮದ ಶಿಕ್ಷಣಕ್ಕೆ ಸಾಮಾಜಿಕ, ಆರ್ಥಿಕ ಕಾರಣವಾಗಿರುತ್ತದೆ ಎಂದು ಹೇಳಿದ್ದಾರೆ.

**ಭಾಷೆ ಮತ್ತು ಶಿಕ್ಷಣ : ಡಾ. ಅಶೋಕಕುಮಾರ ರಂಜೇರೆ** ಅವರು ಒಂದನೇ ತರಗತಿಯಿಂದಲೇ ಇಂಗ್ಲೀಶ್ ಭಾಷಾ ಕಲಿಕೆ ಕುರಿತು ನಡೆದಿರುವ ಚರ್ಚೆಯ ಹಿನ್ನೆಲೆಯಲ್ಲಿ ಕೆಲವು ವಿದ್ವಾಂಸರ ಅಭಿಪ್ರಾಯಗಳನ್ನು ವಿಶ್ಲೇಷಿಸಿ ಚರ್ಚೆಯ ಹಿನ್ನೆಲೆಯಲ್ಲಿ ಕಾರಣ, ಪ್ರಯೋಜನಗಳನ್ನು, ಸಮಸ್ಯೆಗಳನ್ನು ಕುರಿತು ವಿವರಿಸಿದ್ದಾರೆ. ಕನ್ನಡದ ಅಭಿವೃದ್ಧಿ ಪ್ರಾಧಿಕಾರದ ಕಾರ್ಯಯೋಜನೆಗಳನ್ನು ಪರೀಕ್ಷಿಸಿ ಮಾಧ್ಯಮ ಕುರಿತು ಒಂದು ಖಚಿತವಾದ ಯಾವುದೇ ನಿರ್ಣಯಗಳನ್ನು ಪ್ರಕಟಿಸದಿರುವುದು ಯೋಚನೆಗೀಡುಮಾಡಿದೆ ಎಂದು ಹೇಳಿದ್ದಾರೆ. ಯಾವುದೇ ಭಾಷೆ ಕೇವಲ ಸಂವಹನದ ಮಾಧ್ಯಮದ ಪರಿಕರವಷ್ಟೇ ಅಲ್ಲ, ಅದು ಆ ಭಾಷೆಯನ್ನು ಬಳಸುವ ಜನಸಮುದಾಯದ ಪ್ರತಿನಿಧಿಯೂ ಆಗಿರುತ್ತದೆ. ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಸರಿಯಾದ ರೂಪದಲ್ಲಿ ನಡೆಯುತ್ತಿದೆಯೇ? ಹಾಗಿದ್ದಲ್ಲಿ ಮಕ್ಕಳಿಗೆ ಉದ್ಯೋಗ ಸಿಗುವುದು ಖಚಿತವೇ ಎನ್ನುವ ಹಲವಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನದಲ್ಲಿ ಅದಕ್ಕೆ ಹಿನ್ನೆಲೆಯಾಗಿರುವ ಸಾಮಾಜಿಕ ರಚನೆ, ಜನರ ಅಗತ್ಯತೆ, ಬೇಡಿಕೆ ಮತ್ತು ರಾಜಕೀಯ ಆರ್ಥಿಕ ಅಂಶಗಳು ಕಾರಣವಾಗಿವೆ ಎಂದು ವಿವರಿಸಿದ್ದಾರೆ.

**ಕನ್ನಡ ಇಂಗ್ಲೀಶ್ : ಭಾಷೆ ಮತ್ತು ಮಾಧ್ಯಮ** ಎನ್ನುವ ಕೃತಿಯಲ್ಲಿ ಕೆ.ಲಕ್ಷ್ಮಣರಾವ್ ಅವರು ಪ್ರಾಥಮಿಕ ಶಿಕ್ಷಣದ ಮಾಧ್ಯಮವಾಗಿ ಇಂಗ್ಲೀಶ್ ಮತ್ತು ಕನ್ನಡದ ಚರ್ಚೆಗೆ

ಪೂರಕವಾಗಿ ಬಂದಿರುವ ಲೇಖನಗಳನ್ನು ಇದರಲ್ಲಿ ಸಂಗ್ರಹಿಸಿರುತ್ತಾರೆ. ಅಗ್ನಿ, ವಿಜಯ ಕರ್ನಾಟಕ, ಸಂಯುಕ್ತ ಕರ್ನಾಟಕ, ಕನ್ನಡ ಪ್ರಭ ಮುಂತಾದ ಪತ್ರಿಕೆಗಳಲ್ಲಿ ಬಂದಿರುವ ವಿವಿಧ ಲೇಖಕರ, ಚಿಂತಕರ ಅಭಿಪ್ರಾಯಗಳನ್ನು ಇಲ್ಲಿ ಅರ್ಥೈಸಿಕೊಳ್ಳಬಹುದಾಗಿದೆ. ಅದರಲ್ಲಿ ಇಂಗ್ಲೀಶ್ ಮಾಧ್ಯಮ ಕುರಿತಂತೆ ಅದರ ಅಗತ್ಯತೆ, ಪ್ರಯೋಜನಗಳನ್ನು ಕುರಿತು ಗೌರಿ ಲಂಕೇಶ್, ರವಿ ಬೆಳಗೆರೆ, ನಟರಾಜ ಹುಳಿಯಾರ್, ಎನ್.ಎಸ್. ರಘುನಾಥ್ ಮುಂತಾದವರು ಇಂಗ್ಲೀಶ್ ಕಲಿಕೆ ಎಷ್ಟು ಅವಶ್ಯಕತೆ ಇದೆ ಎನ್ನುವುದನ್ನು ಕುರಿತು ವಿಶ್ಲೇಷಿಸಿದ್ದಾರೆ. ಕನ್ನಡ ಮಾಧ್ಯಮದ ಅನಿವಾರ್ಯತೆಯನ್ನು ಗುರುತಿಸುವಲ್ಲಿ ಇನ್ನೊಂದು ಗೋಕಾಕ್ ಚಳುವಳಿಯ ಅವಶ್ಯಕತೆ ಇದೆ ಎಂದು ಆನಂದರಾಮಶಾಸ್ತ್ರಿ ಅವರು ಅಭಿಪ್ರಾಯಪಡುತ್ತಾರೆ. ಆದರೆ ಹೆಚ್ಚಾಗಿ ಇಂಗ್ಲೀಶ್ ಕಲಿಕೆಯ ಅವಶ್ಯಕತೆಯನ್ನು ಬಯಸುವವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎನ್ನುವುದು ಇಲ್ಲಿಯ ಲೇಖನಗಳಿಂದ ವ್ಯಕ್ತವಾಗುತ್ತದೆ.

**ಒಂದನೇ ತರಗತಿಯಿಂದಲೇ ಉರುಳು : ಬಿ.ಎಂ. ಪುಟ್ಟಯ್ಯ** ಪ್ರಾಥಮಿಕ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಶಿಕ್ಷಣ ನೀಡಿದರೆ ಮಕ್ಕಳ ಕೊರಳಿಗೆ ಉರುಳಾಕಿದಂತಾಗುತ್ತದೆ ಎಂದಿದ್ದಾರೆ. ಮಕ್ಕಳಿಗೆ ಅನ್ಯಭಾಷಾ ಕಲಿಕೆಯನ್ನು ವಿರೋಧಿಸಿದ್ದಾರೆ. ಪರಭಾಷಾ ಕಲಿಕೆ ಮಕ್ಕಳಿಗೆ ತೊಂದರೆಯಾಗುತ್ತದೆ. ಶಿಕ್ಷಣ ಮಕ್ಕಳ ಕಲಿಕೆಗೆ ಹೊರೆಯಾಗಬಾರದು. ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸಿ ಎಂಬ ಕೂಗು ವಿದ್ಯಾರ್ಥಿಗಳದ್ದಲ್ಲ, ಅದು ವಿದ್ಯಾರ್ಥಿಗಳ ಮೇಲೆ ಹೊರಗಿನಿಂದ ಹೇರಿದ ಯೋಜನೆಯಾಗಿದೆ. ರಾಜ್ಯದಲ್ಲಿ ಬಂಡವಾಳ ಹೂಡಿರುವವರ ಒತ್ತಾಯ ಮತ್ತು ಅವರಿಗೆ ಮುಕ್ತಾವಕಾಶ ಕೊಟ್ಟಿರುವ ಸರಕಾರದ ತಂತ್ರವಾಗಿದೆ. ಆದರೆ ಅದು ಶಿಕ್ಷಣ ವ್ಯವಸ್ಥೆಯ ಒಳಗಿನ ಅಪೇಕ್ಷೆಯಾಗಿಲ್ಲ. ಆದ್ದರಿಂದ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಕಡ್ಡಾಯವಾಗಿ ಜಾರಿಗೆ ತರಬೇಕೆಂದು ತಿಳಿಸಿದ್ದಾರೆ.

**ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು – ೨೦೦೫** ಈ ಕೃತಿಯನ್ನು **ಎಸ್.ಎಸ್. ಯದುರಾಜನ್** ಅನುವಾದ ಮಾಡಿದ್ದಾರೆ. ಮಕ್ಕಳ ಪ್ರಾಥಮಿಕ ಶಿಕ್ಷಣ ಮಗುವಿನ ಮನೆ ಭಾಷೆಯಲ್ಲಿಯೇ ನಡೆಯಬೇಕು. ಮನೆ ಭಾಷೆಗಳನ್ನು ಗೌರವಿಸುವುದು ನಮ್ಮ ಕರ್ತವ್ಯ. ಸಂವಿಧಾನದ ೩೫೦ಎ ಪರಿಚ್ಛೇದದನ್ವಯ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಅವರ ಮಾತೃಭಾಷೆಯಲ್ಲಿಯೇ ಒದಗಿಸಲು ಅಗತ್ಯವಾದ ಸೌಕರ್ಯಗಳನ್ನು ನೀಡುವುದು ಪ್ರತಿರಾಜ್ಯದ ಮತ್ತು ರಾಜ್ಯದ ಒಳಗಿರುವ ಪ್ರತಿ ಸ್ಥಳೀಯ ಪ್ರಾಧಿಕಾರದ ಕರ್ತವ್ಯ.

ಪ್ರಾಥಮಿಕ ಹಂತದಲ್ಲಿ ಮಕ್ಕಳ ಭಾಷೆಗಳನ್ನು ಯಥಾವತ್ತಾಗಿ ಸ್ವೀಕರಿಸಬೇಕು. ಇಲ್ಲಿ ಅದನ್ನು ತಿದ್ದುವ ಕೆಲಸ ಮಾಡಬಾರದು. ನಾಲ್ಕನೇ ತರಗತಿಯಿಂದಾಚೆಗೆ ಸಾಕಷ್ಟು ಸಮೃದ್ಧವಾದ ಮತ್ತು ಆಸಕ್ತಿ ಹುಟ್ಟಿಸುವ ಭಾಷಾ ವಿದ್ಯಾಮಾನಕ್ಕೆ ತೆರೆದುಕೊಂಡಿದ್ದೇ ಆದರೆ ಸಹಜವಾಗಿ ಬರವಣಿಗೆಯ ನಿಯಮಗಳನ್ನು ಮಗು ತಾನಾಗಿಯೇ ಕಲಿತುಕೊಳ್ಳುತ್ತದೆ.

ಬಹುಭಾಷಾ ಪ್ರದೇಶವಾದ ಭಾರತದಲ್ಲಿ ಇಂಗ್ಲೀಶ್‌ನ್ನು ಶಿಕ್ಷಣದ ಯಾವ ಹಂತದಲ್ಲಿ ಅಳವಡಿಸಬೇಕೆಂಬುದು ಜನರ ಆಶೋತ್ತರಗಳಿಗೆ ರಾಜಕೀಯ, ಸ್ಪಂಧನದ ವಿಷಯವಾಗಿದೆಯೇ ಹೊರತು ಶೈಕ್ಷಣಿಕ ಕಾರ್ಯರೂಪಕ್ಕೆ ತರುವ ಸಾಧ್ಯತೆಯ ವಿಷಯವಾಗಿ ಉಳಿದಿಲ್ಲ. ಅಲ್ಲದೆ ಪಠ್ಯಕ್ರಮದ ಯಾವ ಹಂತದಲ್ಲೂ ಅದನ್ನು ಅಳವಡಿಸಬೇಕೆಂಬ ವಿಷಯದಲ್ಲಿ ಅರಿವನ್ನು ಒದಗಿಸಿಕೊಡಲು ಸಾಧ್ಯವಾಗುವಂತಹ ಇಂಗ್ಲೀಶ್‌ನ್ನು ಒಂದು ಭಾಷೆಯಾಗಿ ಕಲಿಸಬಹುದು ಎಂದು ಹೇಳಿದ್ದಾರೆ.

**ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಏಕೆ ಬೇಡ? : ಡಿ.ಎಸ್. ನಾಗಭೂಷಣ** ಈ ಕೃತಿಯಲ್ಲಿ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆಯನ್ನು ಜಾರಿಗೊಳಿಸುವುದಕ್ಕೆ ವಿರೋಧವಾಗಿ ವಿಚಾರವನ್ನು ವ್ಯಕ್ತಪಡಿಸುತ್ತಾ, ವಾಸ್ತವದ ಸಮಸ್ಯೆಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಕನ್ನಡ ಕಲಿಕೆಯನ್ನು ಕಡ್ಡಾಯಗೊಳಿಸುವುದು, ಕನ್ನಡ ಭಾಷಾಭಿಮಾನದ ಭಾವಾವೇಶದ ಪ್ರಶ್ನೆಯಾಗಿ ಉಳಿದಿಲ್ಲ ಎಂದು ಹೇಳಿದ್ದಾರೆ. ಇದು ವಾಸ್ತವದ ಪ್ರಶ್ನೆಯೂ ಹೌದು. 'ಮಗು ಆರಂಭದಲ್ಲಿ ತನ್ನ ಮಾತೃಭಾಷೆ ಅಥವಾ ಪರಿಸರದ ಭಾಷೆಯಲ್ಲಿ ಜ್ಞಾನಕ್ಕೆ ತೆರೆದುಕೊಂಡರೆ ಮಾತ್ರ ಶಿಕ್ಷಣ ಸುಗಮವಾಗುತ್ತದೆ ಇದು ಶಿಕ್ಷಣಶಾಸ್ತ್ರಜ್ಞರ ಮತ್ತು ಭಾಷಾಶಾಸ್ತ್ರಜ್ಞರ ವಿಚಾರವು ಆಗಿದೆ. ಶಿಕ್ಷಣ ಮಾಧ್ಯಮ ಕುರಿತಾಗಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿಗೆ ರಾಜ್ಯದ ಉಚ್ಚನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ಸರ್ಕಾರವು ತೆರವುಗೊಳಿಸದೇ ನಿರಾಸಕ್ತಿಯನ್ನು ತೋರಿಸುತ್ತಿರುವುದು ನಿಜಕ್ಕೂ ವಿಷಾದಕರ. ಪ್ರಾಥಮಿಕ ಹಂತದಲ್ಲಿ ಐದನೇ ತರಗತಿಯ ಬದಲಾಗಿ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಕಲಿಸಲಾರಂಭಿಸಿದರೆ ಮಕ್ಕಳ ಕಲಿಕೆಯಲ್ಲಿ ಜಟಿಲತೆಗಳುಂಟಾಗಿ ಶಿಕ್ಷಣ ಆರಂಭದಲ್ಲಿಯೇ ಮಕ್ಕಳಿಗೆ ಹೊರೆ ಎನಿಸಬಹುದು. ಮಕ್ಕಳ ಮನಸ್ಸಿನಲ್ಲಿ ಮಾತೃ ಭಾಷೆಯ ಬಗೆಗೆ ಕೀಳರಿಮೆ, ಔದಾಸೀನ್ಯವು ಉಂಟಾಗಬಹುದು ಇದರಿಂದ ಸಾಮಾಜಿಕ ನ್ಯಾಯಾಲಯದ ಕಲ್ಪನೆಯಲ್ಲಿ ವ್ಯತ್ಯಾಸಗಳುಂಟಾಗುವ ಸಾಧ್ಯತೆ ಇದೆ ಎಂದು ವಿಶ್ಲೇಷಿಸುತ್ತಾರೆ.

**ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ವಾಗ್ವಾದಗಳು : ಡಾ.ಅಶೋಕಕುಮಾರ ರಂಜೇರೆ** ಅವರು ಶಿಕ್ಷಣ ಮಾಧ್ಯಮ ಕುರಿತಾಗಿ ಇದುವರೆಗು ಬಂದಂತಹ ಲೇಖನಗಳನ್ನು ಒಟ್ಟಿಗೆ ಸಂಗ್ರಹಿಸಿ ಸಂಪಾದನೆ ಮಾಡಿದ್ದಾರೆ. ಇದರಲ್ಲಿ ಸುಮಾರು ೨೦ ಲೇಖನಗಳು ಸಂಗ್ರಹಗೊಂಡಿವೆ. ಅದರಲ್ಲಿ ಕೆಲವು ಲೇಖನಗಳ ವಿಚಾರಗಳನ್ನು ಇಲ್ಲಿ ಗಮನಿಸಬಹುದು. .

**ಕನ್ನಡ ಮಾಧ್ಯಮ : ಪಿ.ಎಸ್. ಶಂಕರ** ಭಾಷಾ ನೀತಿಯನ್ನು ಹೇಳುವಾಗ, ಉಳಿದ ರಾಜ್ಯಗಳ ಭಾಷಾ ನೀತಿ ಅಲ್ಲಿಯ ರಾಜಕೀಯ ಪ್ರಭುತ್ವಗಳ ಬೆಂಬಲದ ಸಹಾಯವಿದೆ. ನಮ್ಮ ರಾಜ್ಯಕ್ಕೂ, ಭಾಷಾ ನೀತಿ ಅನ್ವಯಕ್ಕೂ ರಾಜಕೀಯ ಇಚ್ಛಾಶಕ್ತಿಯ ಅಗತ್ಯತೆ ಇದೆ. ಜನರಿಗೆ ಆಯ್ಕೆ ಸ್ವಾತಂತ್ರ್ಯ ಬಿಟ್ಟರೆ ಅವರು ತಮ್ಮ ಮಾತೃ ಭಾಷೆಯನ್ನೆ ಆಯ್ಕೆ ಮಾಡಿಕೊಳ್ಳುತ್ತಾರೆ. ಭಾಷೆಯು ನಮ್ಮ ಸಾಮಾಜಿಕ ಪ್ರತಿಕ್ರಿಯೆಗಳನ್ನು ಮತ್ತು ವಿಚಾರಗಳನ್ನು

ತಿಳಿಸುತ್ತದೆ. ಇದರಿಂದ ಪ್ರಾಥಮಿಕದಿಂದ ಉನ್ನತ ಶಿಕ್ಷಣದವರೆಗೆ ಕನ್ನಡ ಬೋಧನೆ ನಡೆಯಬೇಕು ಅದು ಸಾಧ್ಯವೂ ಹೌದೆಂದಿದ್ದಾರೆ. ಪೌರಾತ್ಯ ರಾಷ್ಟ್ರಗಳಲ್ಲಿಯೇ ನಡೆಯುತ್ತಿರಬೇಕಾದರೆ ನಮ್ಮಲ್ಲಿ ಏಕೆ ಸಾಧ್ಯವಿಲ್ಲ ಎಂದು ಪ್ರಶ್ನಿಸುವ ಮೂಲಕ ಒಬ್ಬ ಆಂಗ್ಲ ಲೇಖಕರ ಉಲ್ಲೇಖವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. 'ಭಾಷೆ ನಮ್ಮ ವಿಚಾರ ಶಕ್ತಿಯ ಪ್ರಬಲ ಸಾಧನ; ಅದು ನಮ್ಮ ವಿಚಾರಗಳ ಕೊಡುಗೆ' ಎಂದು ಸ್ಯಾಮುಯೆಲ್ ಜಾನಸನ್ ವರ್ಣಿಸಿದ್ದಾರೆ.

**ಮುರಾರಿ ಬಲ್ಲಾಳ** ಭಾಷಾ ನೀತಿಯನ್ನು ರೂಪಿಸುವಲ್ಲಿ ಅನೇಕ ವಿವಿಧ ಸಂಸ್ಥೆಗಳ ಅಧಿಕಾರಶಾಹಿ ತಂತ್ರಜ್ಞಾನದ ವಲಯಗಳು ಮಾಧ್ಯಮಗಳು, ಮಠಮಾನ್ಯಗಳ ಪಾಲು ಇದ್ದಾಗ್ಯೂ ಸಹ ಸರಕಾರ ತನ್ನ ಜವಾಬ್ದಾರಿಯನ್ನು ಸಂಪೂರ್ಣವಾಗಿ ಅರಿತುಕೊಂಡಿಲ್ಲ. ಮತ್ತು ಅದನ್ನು ನಿರ್ವಹಿಸಿಕೊಂಡು ಬಂದಿಲ್ಲ. ಕನ್ನಡ ಮಾಧ್ಯಮದಲ್ಲಿ ವಿಜ್ಞಾನ ಬೋಧನೆಯನ್ನು ಪ್ರಾರಂಭಿಸದ ಹೊರತು ಭಾಷೆ ಆ ನಿಟ್ಟಿನಲ್ಲಿ ಬೆಳೆಯುವುದಿಲ್ಲ. ಭಾಷೆ ಬೆಳೆಯುವುದಕ್ಕೆ ಒತ್ತಡ ಬೇಕು ಎಂದಿದ್ದಾರೆ.

**ಬಸವರಾಜ ಸಬರದ** ಒಂದು ಸಮುದಾಯದ ಭಾಷಾ ನೀತಿಯನ್ನು ರೂಪಿಸುವ ಕೆಲಸದಲ್ಲಿ ಸರಕಾರೇತರ ಒತ್ತಡಗಳು ಕೆಲಸ ಮಾಡುತ್ತಿರುತ್ತವೆ. ಇಂಗ್ಲೀಶ್, ಹಿಂದಿ ಹಾಗೂ ಪ್ರಾದೇಶಿಕ ಭಾಷೆಗಳ ನಡುವಿನ ಸ್ಪರ್ಧೆಯನ್ನು ಕೇವಲ ಭಾಷೆಗಳ ನೆಲೆಯಲ್ಲಿ ಗ್ರಹಿಸದೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ಗ್ರಹಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಭಾಷಾ ಸ್ಪರ್ಧೆ ಇರುವುದು ಭಾಷೆಗಳಲ್ಲಿ ಅಲ್ಲ ಜನತೆಯಲ್ಲಿ, ಜನಸಾಮಾನ್ಯರು ದುಡಿಯುವ ವರ್ಗದ ಜನರು ಭಾಷೆಯ ಬಗೆಗೆ ಮಾಧ್ಯಮದ ಬಗೆಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಮಾತೃಭಾಷೆಯೇ ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮ ಹೆಚ್ಚು ಸೂಕ್ತ ಎಂಬುದು ವೈಜ್ಞಾನಿಕ ಸತ್ಯ. ಇದು ಜನಸಮುದಾಯದಲ್ಲಿ ಹೇರಿಕೆಯಾಗುವುದಿಲ್ಲ ಎಂದಿದ್ದಾರೆ.

**ಬೆಸಗರಹಳ್ಳಿ ರಾಮಣ್ಣ** ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮಕ್ಕೆ ಸರಿಯಾದ ಮನ್ನಣೆ ಸಿಗುತ್ತಿಲ್ಲ. ಕನ್ನಡ ನೆಲದಲ್ಲಿಯೇ ಕನ್ನಡ ಭಾಷೆ ಪರಭಾಷೆಯಾಗಿದೆ. ಅನ್ಯ ಭಾಷೆಯ ದಮನ ಹೆಚ್ಚಾಗಿ ಕನ್ನಡ ಅಧೋಗತಿಗೆ ಇಳಿದಿದೆ. 'ಕನ್ನಡತಿ' ಅವರಿವರ ತೊಟ್ಟಿಲಲ್ಲಿ ತೂಗುವ ತೊತ್ತಾಗಿದ್ದಾಳೆ. ಇವಳು ಕನ್ನಡದಲ್ಲಿ ಜೋಗುಳ ಹಾಡುವಂತಿಲ್ಲ. ತನ್ನ ತೊಟ್ಟಿಲಲ್ಲೆ, ನೆಲದಲ್ಲೇ ಪರರನ್ನು ಮಲಗಿಸಿ ಪರಭಾಷೆಯಲ್ಲಿ ಜೋಗುಳ ಹಾಡಲು ಕನಿಷ್ಟ ಇಂಗ್ಲೀಶ್, ಹಿಂದಿ ಕಲಿಯಬೇಕಾದ ಗುಲಾಮ ಪರಿಸ್ಥಿತಿ ಬಂದಿದೆ.

**ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯ ಸ್ಥಿತಿಗತಿಯನ್ನು** ಕುರಿತು ವಿವರಿಸುತ್ತಾ ವಿವಿಧ ನೆಲೆಗಳಲ್ಲಿ ಕನ್ನಡ ನುಡಿಯನ್ನು ಬಳಕೆ ತರುವ ಪ್ರಯತ್ನ ನಡೆಯಬೇಕಾಗಿದೆ ಎಂಬುದನ್ನು ಒತ್ತಿ ಹೇಳಿದ್ದಾರೆ. ಮಾತೃಭಾಷೆಯ ಶಿಕ್ಷಣ ಮಾಧ್ಯಮದ ಬಗ್ಗೆ ಯಾರೂ ತಾತ್ವಿಕವಾಗಿ ವಿರೋಧಿಸುವುದಿಲ್ಲ. ಮಾಧ್ಯಮದ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ರಾಜಕೀಯ ಹಿತಾಸಕ್ತಿಗಳದ್ದೇ ಆಗಬಾರದು ಎಂದು ಹೇಳಿದ್ದಾರೆ.

**ಜಿ. ನಾರಾಯಣ** ಒಂದು ಸಮುದಾಯದ ಭಾಷಾ ನೀತಿಯನ್ನು ರೂಪಿಸುವ ಕೆಲಸದಲ್ಲಿ ಸರಕಾರದ ರಾಜಕೀಯ ಇಚ್ಛಾಶಕ್ತಿಯ ಜೊತೆಗೆ ಪ್ರಜೆಗಳ ಇಚ್ಛಾಶಕ್ತಿ, ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರದ ನಡುವಿನ ಸಂಬಂಧ ಇವುಗಳ ಒತ್ತಡಗಳು ರಾಜಕೀಯ ಇಚ್ಛಾಶಕ್ತಿಯನ್ನು ಪ್ರಧಾನವಾಗಿ ನಿರ್ಣಯಿಸುತ್ತವೆ.

ಭಾಷೆಗಳ ನಡುವಿನ ಸಂಬಂಧ ಅವುಗಳ ಸ್ವರೂಪ, ಭಾಷೆಯ ಬಗೆಗಿನ ಸಾಮಾಜಿಕ ಕಾಳಜಿ ಎಲ್ಲವನ್ನು ವಿವರಿಸುತ್ತಾ ಪ್ರಾಥಮಿಕ ಶಿಕ್ಷಣದಲ್ಲಿ ಏಳನೇಯ ತರಗತಿಯವರೆಗೆ ಮಾತೃ ಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕು. ಭಾಷೆಯಾಗಿ ಇಂಗ್ಲೀಶ್ ಅಥವಾ ಹಿಂದಿ ಕಲಿಸಲಿ, ಆದರೆ ಮಿಕ್ಕ ಪಠ್ಯ ವಿಷಯಗಳು ಕನ್ನಡ ಮಾಧ್ಯಮದಲ್ಲೆ ಇರಬೇಕು. ಭಾಷೆಯನ್ನು ಕಲಿಸುವಾಗಲೂ ವಿದ್ಯಾರ್ಥಿ ಭಾಷೆಯನ್ನು ಓದಿ ವಿಚಾರ ಗ್ರಹಿಸುವ ಶಕ್ತಿ ಆ ಭಾಷೆಯಲ್ಲಿ ತನ್ನ ಮನಸ್ಸಿನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸುವ ಶಕ್ತಿಯು ಅವರಿಗೆ ದೊರಕುವಂತಾಗ ಬೇಕು. ಭಾಷೆಯಲ್ಲಿ ಈ ಶಕ್ತಿ ಪಡೆದ ವಿದ್ಯಾರ್ಥಿ ಏನನ್ನು ಓದಿದರೂ ಮನನ ಮಾಡಿ ಕೊಳ್ಳುತ್ತಾನೆ ಎಂದು ವಿಶ್ಲೇಷಿಸಿದ್ದಾರೆ.

## ೨.೫. ಲೇಖನಗಳು

**ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ : ಡಿ.ಎನ್. ಶಂಕರಭಟ್** ಕನ್ನಡ ಭಾಷೆ ಬಳಕೆಯ ವಿಧಾನವನ್ನು ಅದರ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ. ಪ್ರಾಚೀನದಿಂದಲೂ ಕನ್ನಡ ಭಾಷೆಯ ಬೆಳವಣಿಗೆಗೆ ಸಂಸ್ಕೃತದ ಪ್ರಭಾವ ಬೆಳೆದು ಬಂದಿರುವುದನ್ನು ಸೂಚಿಸಿ ಕನ್ನಡಕ್ಕೆ ಅದರದ್ದೇ ಆದ ಪ್ರತ್ಯೇಕ ಭಾಷಾ ಬಳಕೆ, ವ್ಯಾಕರಣದ ಅಗತ್ಯತೆ ಇದೆ ಎನ್ನುವುದನ್ನು ಒತ್ತಿ ಹೇಳಿದ್ದಾರೆ. ಸಂಸ್ಕೃತದ ಪ್ರಭಾವದಿಂದ ಕನ್ನಡದ ಪಠ್ಯಪುಸ್ತಕಗಳು ಸಹ ಸಂಸ್ಕೃತದ ಹಿನ್ನೆಲೆಯಲ್ಲಿ ರಚನೆಯಾಗಿವೆ. ಆದರೆ ಸಂಸ್ಕೃತದ ಬಳಕೆ ಸಮಾಜದ ವ್ಯವಸ್ಥೆಯಲ್ಲಿ ಬಳಕೆಯಲ್ಲಿಲ್ಲ. ಸಮಾಜದಲ್ಲಿ ಅವಶ್ಯವಿಲ್ಲದ ಸಂಸ್ಕೃತವನ್ನು ಒಳಗೊಂಡತಂಹ ಕನ್ನಡವನ್ನು ಕಲಿಸುವುದು ಕ್ಲಿಷ್ಟವಾಗುತ್ತದೆ. ಆದ್ದರಿಂದ ಪ್ರತ್ಯೇಕವಾದ ಕನ್ನಡ ಭಾಷೆ ಬಳಕೆಯ ಅಗತ್ಯತೆ ಇದೆ ಎನ್ನುವುದನ್ನು ಒತ್ತಿ ಹೇಳಿದ್ದಾರೆ.

**ಡಾ. ಮಹಾಬಲೇಶ್ವರರಾವ್ : ಒಂದನೆ ತರಗತಿಯಿಂದ ಇಂಗ್ಲೀಶ್ ಮಾಡಬೇಕಾದುದೇನು?** ಎನ್ನುವ ಲೇಖನದಲ್ಲಿ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಬೇಕು ಬೇಡವೇ ಎನ್ನುವ ಚರ್ಚೆಗೆ ಕಾರಣವಾದ ಅಂಶಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಸರಕಾರ ಅದಕ್ಕೆ ಸರಿಯಾದ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಹೇಳಿದ್ದಾರೆ. ಪ್ರಾಥಮಿಕ ಹಂತದ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ನೀಡಬೇಕು. ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಅದು ಮೂರನೇ ತರಗತಿಯಿಂದ ಕಲಿಸಬೇಕು. ಒಂದನೇ ತರಗತಿಯಲ್ಲಿ ಧ್ವನಿ ಪರಿಚಯ, ವರ್ಣಗಳನ್ನು ಪದ್ಯಗಳನ್ನು ಬಾಯಿಪಾಠ ಮೂಲಕ ಕಲಿಸಿಕೊಡಬೇಕು. ಭಾಷೆಯ ಕಲಿಕೆ ಗಳಿಕೆ ಸಂಬಂಧದಲ್ಲಿ ಸಂವಹನ ದೃಷ್ಟಿ ಹಾಗೂ ಸೃಜನಶೀಲ ಸಾಧ್ಯತೆಗಳಿಗೆ ಅಧಿಕ ಒತ್ತು ನೀಡಬೇಕೆಂದಿದ್ದಾರೆ.

ಒಂದನೇ ತರಗತಿಯಿಂದ ಕನ್ನಡದ ಜೊತೆಗೆ ಇಂಗ್ಲೀಶ್ ಕಲಿಸುವುದು ಮಗುವಿನ ಪಾಲಿಗೆ ಹೊರೆ. ಇದರಿಂದ ಕನ್ನಡ ಸಂಸ್ಕೃತಿಗೆ ಬಾಧಕ. ಆದುದರಿಂದ ಇಂಗ್ಲೀಶನ್ನು ಮಾಧ್ಯಮವಾಗಿ ಕಲಿಸಬೇಡಿ. ಈಗಿರುವ ವ್ಯವಸ್ಥೆ ಸರಿಯಾಗಿದೆ. ಒಮ್ಮೆಲೆ ಎರಡು ಭಾಷೆಗಳನ್ನು ಪರಿಚಯಿಸುವುದು ಸರಿಯಲ್ಲ. ಕನ್ನಡ ಉಳಿಯಬೇಕೆಂದರೆ, ಕನ್ನಡ ಶಾಲೆಗಳು ಬದುಕಿ ಉಳಿಯಬೇಕಾದರೆ ಒಂದನೆ ತರಗತಿಯಿಂದ ಇಂಗ್ಲೀಶನ್ನು ಪರಿಚಯಿಸುವುದು ಸೂಕ್ತ. ಹೀಗೆ ಮಾಡಿದರೆ ಕನ್ನಡ ಮಾಧ್ಯಮ ಶಾಲೆಗಳು ಆಂಗ್ಲ ಮಾಧ್ಯಮ ಶಾಲೆಗಳಿಗೆ ತಕ್ಕ ಮಟ್ಟಿಗೆ ಸ್ಪರ್ಧೆ ನೀಡಲು ಸಾಧ್ಯ ಎಂದು ವಿವರಿಸಿದ್ದಾರೆ.

**ಪ್ರೊ. ಬರಗೂರು ರಾಮಚಂದ್ರಪ್ಪ : ಪ್ರಾಥಮಿಕ ಶಿಕ್ಷಣ ಭಾಷೆ ಮತ್ತು ಮಾಧ್ಯಮ** ಲೇಖನದಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಮಾಧ್ಯಮ ಕುರಿತಾಗಿ ಬಂದ ವಿವಾದಗಳ ಹಿನ್ನೆಲೆಯಲ್ಲಿ ಪ್ರಾಥಮಿಕ ಶಿಕ್ಷಣ ಭಾಷೆಯ ಸ್ವರೂಪ ಮತ್ತು ವಿವಿಧ ಚಿಂತಕರುಗಳ ಅಭಿಪ್ರಾಯಗಳಿಗೆ ಕಾರಣಗಳನ್ನು ವಿವರಿಸಿದ್ದಾರೆ. ಇದುವರೆಗು ಶಿಕ್ಷಣದಲ್ಲಿದ್ದ ಭಾಷಾ ನೀತಿಯ ಹಿನ್ನೆಲೆಯನ್ನು ಮತ್ತು ಭಾಷಾ ನೀತಿಯಲ್ಲಿ ಆಗಬೇಕಾದ ವ್ಯತ್ಯಯಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಪ್ರಾಥಮಿಕ ಹಂತದಲ್ಲಿ ಕನ್ನಡ ಮಾಧ್ಯಮ ಶಿಕ್ಷಣ ಜಾರಿಯಾಗಬೇಕು. ಇಂಗ್ಲೀಶ್‌ನ್ನು ಒಂದು ಭಾಷಾ ಕಲಿಕೆಯನ್ನಾಗಿ ಅಳವಡಿಸಬೇಕೆಂದು ಹೇಳುವ ಮೂಲಕ ಮಾತೃಭಾಷಾ ಶಿಕ್ಷಣಕ್ಕೆ ಒತ್ತು ನೀಡಿದ್ದಾರೆ.

**ಡಾ. ದೇ ಜವರೇಗೌಡ : ಕನ್ನಡ ಚಿಂತನೆ** ಕೃತಿಯಲ್ಲಿ ಶಿಕ್ಷಣ ಮಾಧ್ಯಮ, ಶಿಕ್ಷಣ ಭಾಷೆ ಎಂಬ ಲೇಖನದಲ್ಲಿ ಮಾಧ್ಯಮ ಕುರಿತು ಈ ರೀತಿಯಾಗಿ ಅಬಿಪ್ರಾಯ ಪಡುತ್ತಾರೆ. ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡದ ಸ್ಥಾನವನ್ನು ಕುರಿತು ಚರ್ಚಿಸುವಾಗ ವಿಷಯ ಗ್ರಹಣಕ್ಕೆ ಭಾಷಾ ಪ್ರಭುತ್ವ ಅಗತ್ಯ. ಯಾವುದಾದರೂ ಒಂದು ಭಾಷೆಯಲ್ಲಿ ಸಾಮರ್ಥ್ಯ ಪಡೆಯುವುದಕ್ಕೆ ಮುಂಚೆ ಬೇರೊಂದು ಭಿನ್ನವಾದ ಭಾಷೆಯೊಂದನ್ನು ಕಲಿಸಲು ಪ್ರಯತ್ನಿಸಿದರೆ ಮನಸ್ಸು ಗೊಂದಲಕ್ಕೀಡಾಗುತ್ತದೆ. ಅಂತಹ ವಿಷಯದ ಮೂಲಕ ಹೊಸ ಭಾಷೆಯನ್ನು ಸರಾಗವಾಗಿ ಕಲಿಯಬಹುದು. ಕನ್ನಡ ಪರಿಸರದಲ್ಲಿರುವ ಅನ್ಯಭಾಷಿಕರು ಎರಡನೇ ಭಾಷೆಯಾಗಿ ಕನ್ನಡವನ್ನು ಕಲಿಯಬೇಕು. ಅದನ್ನು ದ್ವಿತೀಯ ಮಾತೃಭಾಷೆಯೆಂದು ಕರೆದುಕೊಳ್ಳಬಹುದು. ಇಂಗ್ಲೀಶನ್ನು ಐದನೇ ತರಗತಿಯಿಂದಲೇ ಐಚ್ಛಿಕವಾಗಿ ಕಲಿಸತಕ್ಕದ್ದು. ಕನ್ನಡ ಮತ್ತು ದ್ವಿತೀಯ ಮಾತೃಭಾಷೆ ವಿನಃ ಬೇರಾವ ಭಾಷೆಯೂ ಕಡ್ಡಾಯವಾಗಬಾರದು. ಇತರೆ ಭಾಷೆಗಳನ್ನು ಐಚ್ಛಿಕವಾಗಿ ಪ್ರೌಢಶಾಲೆಗಳಲ್ಲಿ ಕಲಿಯುವ ವ್ಯವಸ್ಥೆಯಾಗಬೇಕು ಇದೇ ಭಾಷಾ ನೀತಿ ಎಂದು ವಿಶ್ಲೇಷಿಸಿದ್ದಾರೆ.

**ನಾಡು-ನುಡಿ : ನಾಡೋಜ ಪಾಟೀಲ ಪುಟ್ಟಪ್ಪ** ಪ್ರಾಥಮಿಕ ಶಿಕ್ಷಣ ಅವರ ಮಾತೃ ಭಾಷೆಯಲ್ಲಿಯೇ ನಡೆಯಬೇಕು. ಇಂಗ್ಲೀಶ್‌ನ್ನು ಯಾವ ಹಂತದಲ್ಲಿ ತರಬೇಕು ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು. ನಮ್ಮ ನಾಡಿನಲ್ಲಿನ ಜನರನ್ನು ಕನ್ನಡದ ಮೂಲಕವೇ ಮುಟ್ಟಬೇಕಲ್ಲದೆ ಇಂಗ್ಲೀಶ್, ಹಿಂದಿ ಭಾಷೆಯ ಮೂಲಕವಲ್ಲ. ಜನರ ಶಿಕ್ಷಣ ಮಾಧ್ಯಮ ಹಾಗೂ ಆಡಳಿತ

ಮಾಧ್ಯಮ ಎರಡೂ ಕನ್ನಡವೇ ಆಗಿರಬೇಕು. ಜನರು ಆಡುವ ಭಾಷೆಯಲ್ಲಿಯೇ ಆಡಳಿತ ನಡೆಯಬೇಕು. ಕರ್ನಾಟಕದ ನೆಲ ಬೇರೆ ಭಾಷೆಗಳ ಆಕ್ರಮಣದಿಂದ ಕರಗಿ ಹೋಗಿಲ್ಲ. ಶಿಕ್ಷಣ ಮಾಧ್ಯಮದಲ್ಲಿ ಕನ್ನಡವೇ ಬೋಧನಾ ಮಾಧ್ಯಮವಾಗಿರಬೇಕು. ಇದು ಎಲ್ಲಾ ಶಾಲೆಗಳಿಗೂ ಸಾರ್ವತ್ರಿಕವಾಗಿ ಅನ್ವಯಿಸಬೇಕೆಂದು ತಿಳಿಸಿದ್ದಾರೆ.

**ಡಾ. ಗುಂಡ್ಮಿ : ಶಿಕ್ಷಣ ಮಾಧ್ಯಮ** ಕೃತಿಯ ಭಾಗದ ಕೆಲವು ಲೇಖನಗಳಲ್ಲಿ ಶಿಕ್ಷಣ ಮಾಧ್ಯಮ ಒಂದು ಸಮಸ್ಯೆಯೇ ಅಲ್ಲ. ಶಿಕ್ಷಣವೇತ್ತರೆನಿಸಿಕೊಂಡವರು ಅದನ್ನೊಂದು ಮಹಾ ಸಮಸ್ಯೆ ಎಂದು ಹೇಳುತ್ತಿದ್ದಾರೆ. ನಾವು ನಮ್ಮ ಸಹಜವಾದ ಭಾವನೆಗಳನ್ನು ಮನೆಮಾತಿನಲ್ಲಿ ಮಾತನಾಡುವ ಹಾಗೆ ಶಿಕ್ಷಣವು ಸಹಜವಾಗಿ ಮೂಡಿ ಬರಬೇಕು. ವಿಷಯವನ್ನು ನಿಜವಾಗಿ ತಿಳಿದುಕೊಂಡವನಿಗೆ ಪರಿಸರದಲ್ಲಿ ಇಂಗ್ಲೀಶ್ ಹಾಗೂ ಕನ್ನಡ ಭಾಷೆಯ ಬಳಕೆ ಮತ್ತು ಅವುಗಳ ಸ್ವರೂಪ ಹೇಗಿದೆ ಎಂಬುದನ್ನು ಕುರಿತು ಇಲ್ಲಿ ಚರ್ಚಿಸಿದ್ದಾರೆ. ಒಂದು ಭಾಷೆಗೆ ಅನ್ಯ ಭಾಷೆಯ ಪದಗಳನ್ನು ಸ್ವೀಕರಿಸುವ ಗುಣವಿದ್ದಾಗಲೇ ಬೆಳವಣಿಗೆ ಹೊಂದಲು ಸಾಧ್ಯ. ಭಾಷೆಗೆ ಮಡಿವಂತಿಕೆ ಇರಬಾರದು. ಇಂಗ್ಲೀಶ್ ಭಾಷೆ ಶ್ರೀಮಂತವಾಗಿರುವುದು ಹೀಗೆ ಪ್ರಪಂಚದ ಹೆಚ್ಚಿನ ಭಾಷೆಗಳ ಮಾತುಗಳು ಅದರಲ್ಲಿ ಜೀವಂತವಾಗಿವೆ. 'ಆನೋ ಭದ್ರಾಃ ಕ್ರತವೋಯಂತು ವಿಶ್ವತಃ' ವಿಶ್ವದ ಒಳ್ಳೆಯದೆಲ್ಲವೂ ಬರಲಿ ಎಂಬ ವಿಶಾಲ ಮನೋಭಾವನೆ ಇಲ್ಲದಿದ್ದರೆ ಕನ್ನಡ ಭಾಷೆ ಸರ್ವಸಮರ್ಥ ವಾಗುವುದಿಲ್ಲ ಎಂದಿದ್ದಾರೆ.

**ದಲಿತರು ಭಾಷೆ ಮತ್ತು ಸಮಾಜ : ಡಾ.ಪಿ.ಮಹಾದೇವಯ್ಯ** ಈ ಕೃತಿಯಲ್ಲಿ ದಲಿತರ ಶಿಕ್ಷಣ ಮತ್ತು ಭಾಷೆ ಕುರಿತಾಗಿ ಕೆಲವು ವಿವಿಧ ಲೇಖಕರ ಲೇಖನಗಳನ್ನು ಇಲ್ಲಿ ಕೊಟ್ಟಿದ್ದಾರೆ. ಅದರಲ್ಲಿ ಬಿ.ಎಂ. ಪುಟ್ಟಯ್ಯ ಅವರ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಡ್ಡಾಯ : ಭ್ರಮೆ ಮತ್ತು ವಾಸ್ತವ ಎಂಬ ಲೇಖನದಲ್ಲಿ ಇಂಗ್ಲೀಶ್ ಭಾಷಾ ಕಲಿಕೆಯನ್ನು ಕಡ್ಡಾಯ ಮಾಡಿರುವುದರ ಹಿಂದಿನ ಉದ್ದೇಶವೇನು? ಈ ಕಲಿಕೆಯ ಅಗತ್ಯ ಮುಖ್ಯವಾಗಿ ಯಾರಿಗಿದೆ? ಈಗಾಗಲೇ ಇಂಗ್ಲೀಶ್ ಶಿಕ್ಷಣ ಪಡೆದವರ ಸ್ಥಿತಿ ಏನಾಗಿದೆ? ಈ ಶಿಕ್ಷಣದ ಹಿನ್ನೆಲೆಯ ಉದ್ದೇಶ ಒಳಿತೇ ಆಗಿದ್ದರು. ಶಾಲಾ ಪರಿಸರದಲ್ಲಿ ಉಳಿದೆಡೆ ಅದರ ಪರಿಣಾಮ ಏನಾಗಿದೆ ಎಂಬುದನ್ನು ಕುರಿತು ವಿಶ್ಲೇಷಿಸಿದ್ದಾರೆ. ಸಾಮಾಜಿಕ ವರ್ಗದ ರಚನೆ ವ್ಯವಸ್ಥೆಯಲ್ಲಿ ಆಳುವ ವರ್ಗ ತನ್ನ ಹಿತಾಸಕ್ತಿಯನ್ನು ಸಾಮಾನ್ಯ ಜನರ ಮತ್ತು ದಲಿತರ ಮೇಲೆ ಹೇರುತ್ತಿದೆ. ಅದನ್ನೇ ದಲಿತರು ಸಹ ಸ್ವೀಕರಿಸುವ ಮನೋಭಾವನೆಯಲ್ಲಿ ದಲಿತ ಮಕ್ಕಳು ಇಂಗ್ಲೀಶ್ ಕಲಿತರೆ ಮಾತ್ರ ಅವರ ವಿಮೋಚನೆ ಎಂಬಂತೆ ಮಾಡುತ್ತಿದ್ದಾರೆ. ಇಂಗ್ಲೀಶ್ ಭಾಷೆಯ ಕಲಿಕೆಯನ್ನು ಶಿಕ್ಷಣದಲ್ಲಿಯೇ ಕಲಿತರೆ ಮಾತ್ರ ಕಲಿಕೆಯಾಗುವುದಿಲ್ಲ. ಅನಕ್ಷರಸ್ಥರು ಇಂದು ಎಷ್ಟು ಸರಾಗವಾಗಿ ಇಂಗ್ಲೀಶನ್ನು ಮಾತನಾಡುತ್ತಿದ್ದಾರೆ. ಇವರ್‍ಯಾರು ಬರಹದ ಮೂಲಕ ಎರಡನೇ ಅಥವಾ ಮೂರನೇ ಭಾಷೆಯನ್ನು ಕಲಿತವರಲ್ಲ. ಈಗಾಗಲೇ ಇಂಗ್ಲೀಶ್ ಕಲಿತವರೆಲ್ಲರೂ ಉದ್ಯೋಗ ಪಡೆದುಕೊಳ್ಳದೇ ಉಳ್ಳವರ ಮನೆಯಲ್ಲಿ ಕೂಲಿನಾಲಿ ಮಾಡಿ ಕೊಂಡಿರುವ ಸ್ಥಿತಿ ಸಾಕಷ್ಟಿವೆ. ಅಂದರೆ ಉತ್ತಮ ಸ್ಥಿತಿಯುಳ್ಳವರು ಉತ್ತಮವರ್ಗದವರಾಗಿಯೇ

ಕೆಳ ಮಟ್ಟದಲ್ಲಿರುವವರು ಕೆಳವರ್ಗದವರಾಗಿಯೇ ಇರಲಿ ಎಂಬ ಧೋರಣೆ ವ್ಯಕ್ತವಾಗತ್ತದೆ. ಈ ಯೋಜನೆಯ ಹಿಂದಿರುವ ಉದ್ದೇಶ ಇಂಗ್ಲೀಶ್ ಕಲಿಸಬೇಕು ಎಂಬುದಲ್ಲ, ವರ್ತಮಾನದಲ್ಲಿ ಯಾರು ಯಾರು ತಮ್ಮ ಕಷ್ಟ ಸಂಕಷ್ಟಗಳಿಗಾಗಿ ಆಳುವ ವರ್ಗದ ವಿರುದ್ಧ ಅಸಹನೆ ಗೊಂಡಿದ್ದಾರೋ ಅಂತಹವರ ಅಸಹನೆ ಮತ್ತು ಆಕ್ರೋಶವನ್ನು ಶಮನಗೊಳಿಸುವುದಾಗಿದೆ ಎಂದು ಹೇಳಿದ್ದಾರೆ. ಇಂಗ್ಲೀಶ್ ಶಿಕ್ಷಣದಿಂದಾಗಿ ಸಮಾಜದಲ್ಲಿ ವರ್ಗ ತಾರತಮ್ಯ ನಿರ್ಮಾಣವಾಗುತ್ತಿದೆ. ಅಲ್ಲದೆ ಇಂಗ್ಲೀಶನ್ನು ಒಂದು ಭಾಷೆಯಾಗಿ ಕೆಳವರ್ಗದವರಿಗೆ ಕಲಿಸುವ ಅಗತ್ಯತೆ ಇದೆ. ಈ ರೀತಿಯ ವ್ಯವಸ್ಥೆಯಿಂದ ಶಿಕ್ಷಣದಲ್ಲಿ ಸಮಾನತೆಯನ್ನು ತರಬೇಕು ಎನ್ನುವುದನ್ನು ವ್ಯಕ್ತಪಡಿಸುತ್ತಿದ್ದಾರೆ.

**ಕನ್ನಡ ನಾಡು ನುಡಿ ರಕ್ಷಣೆ ಯಾಕೆ ಮತ್ತು ಹೇಗೆ? ಸಂ: ಪ್ರಕಾಶ್‌ರಾಮಪಯ್ಯಾರ್** ಈ ಕೃತಿಯಲ್ಲಿ 'ಶಿಕ್ಷಣ ಕನ್ನಡ ಮುಖಿಯಾಗಲಿ' ಎಂಬ ಲೇಖನದಲ್ಲಿ ಇಂಗ್ಲೀಶ್ ಭಾಷೆಯ ಶಿಕ್ಷಣ ಬೇಕು ಎನ್ನುವ ಕೂಗು ಕಂಡು ಬರುತ್ತಿರುವುದೇ ಮೂಲಭೂತವಾಗಿ ಮಧ್ಯಮ ವರ್ಗದವರಲ್ಲಿ. ಇಂಗ್ಲೀಶಿನ ವ್ಯಾಮೋಹ ಅವರಲ್ಲಿ ಉದ್ಯೋಗ, ಉತ್ತಮ ಜೀವನವನ್ನು ಪಡೆಯಬಹುದೆಂಬ ಭ್ರಮೆಯನ್ನು ಹುಟ್ಟು ಹಾಕಿದೆ ಎಂದು ಇಂಗ್ಲೀಶ್ ಭಾಷೆಯು ನಮ್ಮಲ್ಲಿ ನೆಲೆಗೊಳ್ಳಲು ಹಿಂದಿರುವ ಬೇಡಿಕೆ ಅಗತ್ಯತೆಯನ್ನು ಮತ್ತು ಕನ್ನಡ ಭಾಷೆಯ ಇಂದಿನ ಸ್ಥಿತಿಗತಿ ಅದಕ್ಕೆ ಕಾರಣಗಳನ್ನು ಗುರುತಿಸಿದ್ದಾರೆ. ಕನ್ನಡ ಭಾಷೆಯ ಬೆಳವಣಿಗೆ ಕುಸಿತವನ್ನು ಕಾಣಲು ಆ ಭಾಷಿಗರೇ ಕಾರಣ. ಆದ್ದರಿಂದ ಕನ್ನಡ ಭಾಷೆಯ ಬೆಳವಣಿಗೆಯಾಗಬೇಕು. ಕೆಲವು ಯೋಜನೆಗಳು ಕಾರ್ಯರೂಪದಲ್ಲಿ ಬರಬೇಕು. ಕನ್ನಡ ಭಾಷೆಯ ಕಲಿಕೆ ಶಿಕ್ಷಣದಲ್ಲಿ ಜಾರಿಗೊಳ್ಳಬೇಕು ಎಂದಿದ್ದಾರೆ. ಅದೇ ರೀತಿಯಾಗಿ **ಡಾ. ಜಿ.ಎಸ್. ಅಶ್ವಥ್‌ಕುಮಾರ್** ಅವರು **'ಮಾತೃ ಭಾಷೆ ಪ್ರೇಮ ಜಾಗೃತಗೊಳ್ಳಲಿ'** ಎಂಬ ಲೇಖನದಲ್ಲಿ ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕು. ಪ್ರಸ್ತುತ ಸಂದರ್ಭದಲ್ಲಿ ಇಂಗ್ಲೀಶ್ ಅನಿವಾರ್ಯ, ಆದರೆ ಕನ್ನಡವನ್ನು ತೊರೆಯುವಂತಾಗುವುದಿಲ್ಲ. ಎರಡೂ ಭಾಷೆಗಳನ್ನು ಪರಿಣಾಮಕಾರಿಯಾಗಿ ಕಲಿಸುವ ವ್ಯವಸ್ಥೆ ಜಾರಿಯಾಗಬೇಕೆಂದಿದ್ದಾರೆ.

**ಬಹುಮುಖ ಶಿಕ್ಷಣ : ಡಾ. ಮಹಾಬಲೇಶ್ವರರಾವ್** ಶಿಕ್ಷಣತಜ್ಞರಾದ ಡಾ. ಮಹಾಬಲೇಶ್ವರ ರಾವ್ ಅವರು ಮಗು ಒಂದು ಭಾಷೆಯನ್ನು ಕಲಿಯುವ, ಗ್ರಹಿಸುವ ಮತ್ತು ಅಭಿವ್ಯಕ್ತಿಸುವ ಹಿನ್ನೆಲೆಯಲ್ಲಿ ನೋಡಿದರೆ ಶಿಕ್ಷಣ ಮಗುವಿನ ಮಾತೃಭಾಷೆಯಲ್ಲಿ ನಡೆಯಬೇಕು ಎಂದಿದ್ದಾರೆ. ಮಾತೃಭಾಷೆ ಮಗುವಿಗೆ ಸಹಜವಾಗಿ ಬಂದಂತಹ ಭಾಷೆ. ಬೇರಾವುದೇ ಭಾಷೆಯನ್ನು ಓದಿ ಗ್ರಹಿಸುವ ಸಾಮರ್ಥ್ಯವನ್ನು ಪಡೆಯಬಹುದಾದರೂ ನಮ್ಮ ಅಭಿವ್ಯಕ್ತಿ ಪ್ರಭಾವಶಾಲಿ ಯಾಗುವುದು. ಚಿಂತನಾಶೀಲತೆ, ಸ್ವಂತಿಕೆಯನ್ನು ಸಾಧಿಸುವುದು ನಮ್ಮ ಮಾತೃಭಾಷೆಯಲ್ಲಿಯೇ. ಆದ್ದರಿಂದ ಭಾವ, ಪೋಷಣೆ, ಭಾವಾಭಿವ್ಯಕ್ತಿಗೆ ಸೂಕ್ತ ಸಾಧನ: ಮಾತೃಭಾಷೆ ಅದರಲ್ಲಿಯೇ ಶಿಕ್ಷಣ ಒದಗಬೇಕು. ಇಂಗ್ಲೀಶ್ ಭಾಷೆಯ ಅರ್ಥಪೂರ್ಣ ಗ್ರಹಿಕೆಗೆ ಭಾಷಿಕರ ರಚನೆಗಳ ಕಲಿಕೆಗೆ ಸಂಭಾಷಣೆಗೆ ಶಾಲೆಗಳಲ್ಲಿ ಒತ್ತು ಕೊಡಬೇಕು. ಉಳ್ಳವರು ಕೊಡುವ ದುಡ್ಡಿಗೆ

ಇಂಗ್ಲೀಶ್ ಮಾಧ್ಯಮ ಶಿಕ್ಷಣವನ್ನು ಮಾರುವುದಕ್ಕೆ ಅವಕಾಶ ಮಾಡಿ ಕೊಡುವ ಬದಲು ಇಂಗ್ಲೀಶನ್ನು ಒಂದು ಭಾಷೆಯಾಗಿ ನಮ್ಮ ಶಾಲೆಗಳಲ್ಲಿ ಸಮರ್ಥವಾಗಿ ಕಲಿಸುವ ವ್ಯವಸ್ಥೆ ಮೊದಲು ಜಾರಿಗೆ ತರಬೇಕು ಎಂಬುದು ಇವರ ಆಶಯ.

**ಶಿಕ್ಷಣ ನೋಟ : ಸಿ.ಎಚ್. ಕೃಷ್ಣಶಾಸ್ತ್ರಿ ಬಾಳಿಲ** ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಆರಂಭಿಸಬೇಕು ಎನ್ನುವ ವಾದಕ್ಕೆ ಈ ರೀತಿಯಾಗಿ ಪ್ರತಿಕ್ರಿಯೆ ನೀಡಿದ್ದಾರೆ. ಇಂಗ್ಲೀಶನ್ನು ಒಂದನೇ ತರಗತಿಯಿಂದಲೇ ಕಲಿತರೆ ಉದ್ಯೋಗ ದೊರೆಯುತ್ತದೆ ಆರ್ಥಿಕವಾಗಿ ಸಬಲರಾಗುತ್ತಾರೆ ಎನ್ನುವದಕ್ಕೆ ಯಾವ ಖಚಿತತೆಯು ಇಲ್ಲ. ಇದಕ್ಕೆ ಬೇಕಾದುದು ಸತತ ಪ್ರಯತ್ನ, ಪರಿಶ್ರಮ, ಇತ್ಯಾದಿ. ಹಾಗೆಯೇ ಸಾಮಾಜಿಕ ತಾರತಮ್ಯ ಅಸಮಾನತೆಗೂ ಇಂಗ್ಲೀಶ್ ಭಾಷಾ ಕಲಿಕೆಗೂ ಸಂಬಂಧವಿಲ್ಲ. ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಶಿಕ್ಷಣವನ್ನು ಪ್ರಾರಂಭಿಸಿದರೆ ಅದರಿಂದಾಗುವ ಪರಿಣಾಮಗಳನ್ನು ಸೂಚಿಸಿದ್ದಾರೆ. ಇದರಿಂದ ಮಕ್ಕಳು ಬಲಿಯಾಗುತ್ತಾರೆಯೇ, ಹೊರತು ಯಾವ ಅಧಿಕಾರ ವರ್ಗದವರಲ್ಲ. ಆದ್ದರಿಂದ ಇಂಗ್ಲೀಶ್ ಶಿಕ್ಷಣ ಸೂಕ್ತವಲ್ಲ, ಕನ್ನಡ ಭಾಷೆಯನ್ನೇ ಮಕ್ಕಳು ಕಲಿಯುವಂತಾಗಬೇಕು ಎಂದಿದ್ದಾರೆ.

**ವರ್ಧಾಯೋಜನೆ : ಅನು – ಮೇ. ರಾಜೇಶ್ವರಯ್ಯ, ಪ್ರಧಾನ ಗುರುದತ್ತ** ಇಲ್ಲಿ ಲೇಖಕರು ಪ್ರಾಥಮಿಕ ಶಿಕ್ಷಣ ಮಾಧ್ಯಮದ ಭಾಷೆ ಕುರಿತಾಗಿ ಆ ಸಂದರ್ಭದ ರಾಜಕೀಯ, ಆರ್ಥಿಕ ಪರಿಸ್ಥಿತಿಯ ಜೊತೆಗೆ ವಿವಿಧ ಆಯೋಗಗಳ ತೀರ್ಮಾನವನ್ನು ಚರ್ಚೆ ಮಾಡಿದ್ದಾರೆ. ಪ್ರಾಥಮಿಕ ಭಾಷಾ ಮಾಧ್ಯಮವನ್ನು ಕುರಿತಂತೆ ಪ್ರಾಂತೀಯ ಭಾಷೆಗಳನ್ನು ನಿರ್ಲಕ್ಷಿಸಿರುವುದೇ ಭಾರತದಲ್ಲಿ ನಿರಕ್ಷರತೆಗೆ ಕಾರಣ. ೧೯೪೧ರಲ್ಲಿ ಸಾಕ್ಷರತಾ ಪ್ರಮಾಣ ಕೇವಲ ೧೨.೨ ಮಾತ್ರವಾಗಿತ್ತು. ಇಂಗ್ಲೀಶ್ ಭಾಷೆಯನ್ನು ಮಾಧ್ಯಮವಾಗಿ ಬಳಕೆಗೆ ತಂದಿದ್ದರಿಂದ ಭಾರತದ ಪ್ರಗತಿ ವ್ಯಕ್ತಿಗತ ಜೀವನದ ಮೇಲೆ ದುಷ್ಪರಿಣಾಮ ಉಂಟುಮಾಡಿದೆ. ಜನಾಂಗದ ಮಾತೃಭಾಷೆಯೇ ಸುಯೋಗ್ಯ ಶಿಕ್ಷಣ. ವಿಶ್ವದ ಬೇರೆ ಯಾವ ಭಾಗದಲ್ಲಿ ವಿದೇಶಿ ಭಾಷೆಯೊಂದನ್ನು ರಾಷ್ಟ್ರೀಯ ಶಿಕ್ಷಣ ಮಾಧ್ಯಮವನ್ನಾಗಿಟ್ಟುಕೊಂಡಿಲ್ಲ. ೧೯೧೭ರ ಹೊತ್ತಿಗೆ ಗಾಂಧೀಜಿಯವರು ಇಂಗ್ಲೀಶ್ ರಾಷ್ಟ್ರಭಾಷೆಯ ಅವಶ್ಯಕತೆಗಳನ್ನು ಪೂರೈಸಲಾರದು. ಪ್ರಾಥಮಿಕ ಶಾಲೆಗಳ ಪಠ್ಯಕ್ರಮದಲ್ಲಿ ಇಂಗ್ಲೀಶ್ ಭಾಷೆಗೆ ಎಡೆಯಿರಕೂಡದು ಎಂಬ ಸಮಿತಿಯ ಅಭಿಪ್ರಾಯವಿದೆ. ಈ ವಿಚಾರದಲ್ಲಿ ಅಂತಿಮ ತೀರ್ಮಾನವನ್ನು ಕೈಗೊಳ್ಳುವ ಅಧಿಕಾರವನ್ನು ಪ್ರಾಂತೀಯ ಶಿಕ್ಷಣ ವಿಭಾಗಗಳಿಗೆ ಬಿಟ್ಟುಕೊಡುವುದು ಸೂಕ್ತ ಎಂದು ಸಮಿತಿ ಸೂಚಿಸಿರುವುದನ್ನು ಉಲ್ಲೇಖಿಸಿದ್ದಾರೆ.

**ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು : ಸ.ರ.ಸುದರ್ಶನ** ಅವರು ಶಿಕ್ಷಣ ಮಾಧ್ಯಮವನ್ನು ಕುರಿತು ವಿವಿಧ ಲೇಖನಗಳಲ್ಲಿ ಚರ್ಚಿಸಿದ್ದಾರೆ. ಕನ್ನಡ ಶಿಕ್ಷಣ ಮಾಧ್ಯಮವಾಗಬೇಕೆನ್ನುವ ಹಿನ್ನೆಲೆಯಲ್ಲಿ ಅನೇಕ ಲೇಖಕರ ವಿಚಾರಗಳನ್ನು ವರದಿಗಳ ಆಶಯವನ್ನು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಅಭಿಪ್ರಾಯಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ.

ಮಗು ತನ್ನ ಪರಿಸರದ ಸಂಸ್ಕೃತಿ ತಿಳುವಳಿಕೆಯನ್ನು ರೂಢಿಸಿಕೊಳ್ಳಲು, ಗ್ರಹಿಸಿಕೊಳ್ಳಲು ಮತ್ತು ಅರ್ಥೈಸಿಕೊಳ್ಳಲು ಹಾಗೂ ಅಭಿವ್ಯಕ್ತಿಗೆ ಬಳಸಿಕೊಳ್ಳುವುದು ಸಹ ತನ್ನ ಮಾತೃ ಭಾಷೆಯನ್ನೇ. ಅದರ ಸೃಜನಶೀಲ ಸಾಮರ್ಥ್ಯ ವಿಕಾಸಗೊಳ್ಳುವುದು ಸಹ ಅದರ ಮಾತೃ ಭಾಷೆಯಿಂದಲೇ ಸಾಧ್ಯ. ಆದ್ದರಿಂದ ಮಗುವಿಗೆ ಮಾತೃ ಭಾಷೆಯ ಶಿಕ್ಷಣ ಅಗತ್ಯವಾಗಿ ಬೇಕು. ಮಗುವಿನ ಕಲ್ಪನೆಗಳು ಮಾತೃ ಭಾಷೆಯಲ್ಲಿ ರೂಪುಗೊಳ್ಳುತ್ತವೆ. ತನ್ನ ಭಾಷೆಯಲ್ಲಿಯೇ ವ್ಯಕ್ತಪಡಿಸಲು ಕಷ್ಟ ಪಡುತ್ತಿರುವಾಗ ಪರಕೀಯ ಭಾಷೆಯಲ್ಲಿ ಕಲಿಸುವುದರಿಂದ ಅದರ ಗ್ರಹಿಕೆ ಕುಗ್ಗಿ ಹೋಗುವ ಸಾಧ್ಯತೆ ಹೆಚ್ಚು ಎಂದು ಅಭಿಪ್ರಾಯ ಪಡುತ್ತಾರೆ.

**ಮತ್ತೆ ಭಾಷೆಯ ಸುತ್ತಮುತ್ತ : ಡಾ. ಕೆ.ವಿ. ನಾರಾಯಣರು** ಈ ಕೃತಿಯಲ್ಲಿ ಯಾವುದು? ಇಂಗ್ಲೀಶ್ ಅಥವಾ ಕಂಗ್ಲೀಶ್ ಎಂಬ ಲೇಖನದಲ್ಲಿ ಇಂಗ್ಲೀಶ್ ಕಲಿಕೆಯ ಕುರಿತು ವಿರೋಧ ವಾಗಿ ಅಭಿಪ್ರಾಯ ವ್ಯಕ್ತಪಡಿಸುವವರನ್ನು ಪ್ರತಿಗಾಮಿ ನಡೆಯೆಂದು ಟೀಕಿಸುತ್ತಾರೆ. ಆದರೆ ಇಲ್ಲಿ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಇಂಗ್ಲೀಶನ್ನು ಇಂಗ್ಲೀಶ್ ಭಾಷೆಯಾಗಿಯೇ ಸ್ವೀಕರಿಸದೇ ನಮ್ಮದೇ ಆದ ರೀತಿಯಲ್ಲಿ ಬದಲಾಯಿಸಿಕೊಂಡಾಗ ಮಾತ್ರ ಭಾಷಾ ಕಲಿಕೆಯ ಸಮಸ್ಯೆ ಪರಿಹಾರವಾಗುತ್ತದೆ. ಇಲ್ಲದಿದ್ದರೆ ಇಂಗ್ಲೀಶ್ ಎಂಬ ತೊಡಕು ಭಾಷಾ ತೊಡಕಾಗಿ ಹಾಗೆಯೇ ಉಳಿದುಕೊಂಡು ಬಿಡುತ್ತದೆ. ನಾವು ನಮಗಾಗಿ ಆ ಭಾಷೆಯನ್ನು ಬಳಸುತ್ತೇವೆಯೇ ಹೊರತು ಇಂಗ್ಲೀಶನವರಿಗಾಗಿ ಅಲ್ಲ. ಭಾರತದ ಜನಸಂಖ್ಯೆಯಲ್ಲಿ ಇಂಗ್ಲೀಶ್ ಕಲಿಯುತ್ತಿರುವವರ ಸಂಖ್ಯೆ ಬಹಳ ದೊಡ್ಡದು. ಆದ್ದರಿಂದ ಕಲಿಯುವವರ ಹಕ್ಕಾಗಿ ನಾವು ಇಂಗ್ಲಿಶನ್ನು ಪ್ರತಿಪಾದಿಸಬೇಕು. ಮೊದಲು ಮಾತೃಭಾಷೆ ಸಾಮಾಜಿಕ ಪರಿಸರ ಭಾಷೆಯನ್ನು ಚೆನ್ನಾಗಿ ಕಲಿತರೆ ಮುಂದಿನ ಸಂಪರ್ಕಕ್ಕಾಗಿ ಎರಡನೇ ಭಾಷೆಯನ್ನು ಕಲಿಯುವುದು ಕಷ್ಟವೇನಲ್ಲ. ಬೆಳಗಾವಿಯ ಕನ್ನಡ ಉಪಭಾಷೆಯನ್ನು ಮಾತನಾಡುವ ವ್ಯಕ್ತಿ, ಪ್ರಮಾಣ ಕನ್ನಡದ ಪತ್ರಿಕೆಯನ್ನು ಓದುವುದಕ್ಕೆ ಕಷ್ಟಪಡಬೇಕಾಗಿಲ್ಲ. ಹಾಗೆಯೇ ಇಂಗ್ಲೀಶನ್ನು ಅವಶ್ಯವಿರುವಂತೆ ಬಳಸಿಕೊಂಡಾಗ ಜ್ಞಾನಕ್ಕಾಗಿ ಇಂಗ್ಲೀಶನ್ನು ಬಳಸಲು ಸಾಧ್ಯವಿದೆ. ಇಂಗ್ಲೀಶನ್ನು ಕನ್ನಡ ಲಿಪಿಯಲ್ಲಿ ಕಲಿಯುವುದು ಹೆಚ್ಚು ಸೂಕ್ತ. ಈ ವಿಧಾನ ಈಗಾಗಲೇ ಬೇರೆ ಕಡೆಗಳಲ್ಲಿ ಬಳಕೆಯಲ್ಲಿದೆ. ಇಂಗ್ಲೀಶಿಗೆ ಕನ್ನಡ ಲಿಪಿಯನ್ನು ಬಳಸುವುದರಿಂದ ಆ ಭಾಷೆಯನ್ನು ಕಲಿಯುವ ಸಾಧ್ಯತೆ ಹೆಚ್ಚಿದೆ ಎಂಬುದನ್ನು ಇಲ್ಲಿ ಅರ್ಥೈಸಿದ್ದಾರೆ.

**ಪಾಟೀಲ ಪುಟ್ಟಪ್ಪ : ನಾಡು ನುಡಿ** ಕೃತಿಯಲ್ಲಿ ಪ್ರಾಥಮಿಕ ಶಿಕ್ಷಣ ಅವರ ಮಾತೃಭಾಷೆ ಯಲ್ಲಿಯೇ ನಡೆಯಬೇಕು. ಇಂಗ್ಲೀಶ್‌ನ್ನು ಯಾವ ಹಂತದಲ್ಲಿ ತರಬೇಕು ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ನಮ್ಮ ನಾಡಿನಲ್ಲಿನ ಜನರನ್ನು ಕನ್ನಡದ ಮೂಲಕವೇ ಮುಟ್ಟಬೇಕಲ್ಲದೆ ಇಂಗ್ಲೀಶ್, ಹಿಂದಿ ಭಾಷೆಯ ಮೂಲಕವಲ್ಲ. ಜನರ ಶಿಕ್ಷಣ ಮಾಧ್ಯಮ ಹಾಗೂ ಆಡಳಿತ ಮಾಧ್ಯಮ ಎರಡೂ ಕನ್ನಡವೇ ಆಗಿರಬೇಕು. ಜನರು ಆಡುವ ಭಾಷೆಯಲ್ಲಿಯೇ ಆಡಳಿತ ನಡೆಯಬೇಕು. ಕರ್ನಾಟಕದ ನೆಲ ಬೇರೆ ಭಾಷೆಗಳ ಆಕ್ರಮಣದಿಂದ ಕರಗಿ ಹೋಗಿಲ್ಲ. ಶಿಕ್ಷಣ ಮಾಧ್ಯಮದಲ್ಲಿ ಕನ್ನಡವೇ ಬೋಧನಾ ಮಾಧ್ಯಮವಾಗಿರಬೇಕು. ಇದು ಎಲ್ಲಾ ಶಾಲೆಗಳಿಗೂ ಸಾರ್ವತ್ರಿಕವಾಗಿ ಅನ್ವಯಿಸಬೇಕೆಂದು ತಿಳಿಸಿದ್ದಾರೆ.

**ಡಾ. ಕಾ.ವೆಂ.ಶ್ರೀನಿವಾಸಮೂರ್ತಿ : ಕನ್ನಡ ಚಳುವಳಿ ಮತ್ತು ಚಿಂತನೆ ಕೃತಿಯಲ್ಲಿ ಪ್ರಾಥಮಿಕ ಶಿಕ್ಷಣ: ಭಾಷೆ ಮತ್ತು ಮಾಧ್ಯಮದ ಪ್ರಶ್ನೆಗಳು** ಎನ್ನುವ ಲೇಖನದಲ್ಲಿ ಇಂಗ್ಲೀಶ್ ಮಾಧ್ಯಮ ಶಾಲೆಗಳು ಕನ್ನಡ ಭಾಷೆಯನ್ನು ಒಂದು ಪತ್ರಿಕೆಯನ್ನಾಗಿ ಕಡ್ಡಾಯಗೊಳಿಸಬೇಕೆಂಬ ಉತ್ಸಾಹವನ್ನು ಏಕೆ ತೋರುತ್ತಿಲ್ಲ? ಮಾತೃಭಾಷಾ ಮಾಧ್ಯಮದ ಅನುಷ್ಠಾನ ವೈಜ್ಞಾನಿಕವಾದುದು. ಅಂತಹ ಮಾಧ್ಯಮದಲ್ಲಿ ಕಲಿಯುವುದು ಮಕ್ಕಳ ಸಂವಿಧಾನಾತ್ಮಕ ಹಕ್ಕು ಎಂಬುದು ಸರ್ವಸತ್ಯ. ಕನ್ನಡವನ್ನು ಒಂದು ಭಾಷೆಯನ್ನಾಗಿ ಎಲ್ಲಾ ವಿಧದ ಶಾಲೆಗಳಲ್ಲೂ ಅಳವಡಿಸಬೇಕು. ಕನ್ನಡವು ಕರ್ನಾಟಕ ರಾಜ್ಯದ ಅಧಿಕೃತ ಭಾಷೆಯಾಗಿದೆ. ಯಾವುದೇ ಮಾತೃಭಾಷಾ ಮಾಧ್ಯಮದ ಮಕ್ಕಳು ಕನ್ನಡವನ್ನು ಕಲಿಯುವುದು ಸೂಕ್ತ. ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡವನ್ನು ಕಲಿಯುವುದು ಕಡ್ಡಾಯವಾಗಬೇಕು. ಇಂಗ್ಲೀಶನ್ನು ಎರಡನೇ ಭಾಷೆಯನ್ನಾಗಿ ಕಲಿಸಬೇಕು. ಮಗುವಿನ ಪ್ರಾರಂಭದ ಎರಡು ವರ್ಷದಲ್ಲಿ ಮಾತೃ ಭಾಷೆಯನ್ನು, ನಂತರ ಮೂರನೇ ವರ್ಷದಿಂದ ಇಂಗ್ಲೀಶ್ ಭಾಷೆಯನ್ನು ಕಲಿಸಬೇಕೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ನಾಡು ನುಡಿ ಪ್ರತಿನಿಧೀಕರಣದ ಕಥನ : ಡಾ. ಬಿ. ಶಿವರಾಮಶೆಟ್ಟಿ 'ದೇಶ ಭಾಷೆಯಲ್ಲಿ ಶಿಕ್ಷಣ'** ಎಂಬ ಲೇಖನದಲ್ಲಿ ಶಿಕ್ಷಣ ಮಾಧ್ಯಮವನ್ನು ಕುರಿತು ಚರ್ಚಿಸಿದ್ದಾರೆ. ಗಣಿತ, ವಿಜ್ಞಾನ ಮೊದಲಾದ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಕಲಿಸಿದರೆ ವಿಷಯಗಳು ಬೇಗನೇ ಮನದಟ್ಟಾಗುತ್ತವೆ. ಇದರಿಂದ ರಾಷ್ಟ್ರೀಯ ಅಂತರಾಷ್ಟ್ರೀಯ ಆಂಗ್ಲ ಭಾಷಾ ವಿಷಯ ಜ್ಞಾನವೂ ಹೆಚ್ಚುತ್ತದೆ. ದೇಶಿ ಭಾಷೆಯಲ್ಲಿ ಶಿಕ್ಷಣ ಪಡೆಯುತ್ತಿರುವ ವಿದೇಶಿ ರಾಷ್ಟ್ರಗಳಲ್ಲಿ, ವಿಷಯ ಗ್ರಹಣವನ್ನು ಇಲ್ಲಿಯ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಮಟ್ಟದಲ್ಲಿ ಮಾಡಿಕೊಳ್ಳುತ್ತಿದ್ದಾರೆ ಎಂದು ಹೇಳಿದ್ದಾರೆ.

ಈ ಮೇಲಿನ ಎಲ್ಲಾ ಕೃತಿಗಳನ್ನು ಮುಂದಿನ ಅಧ್ಯಾಯದಲ್ಲಿ ಮತ್ತೆ ಹೆಚ್ಚಿನ ವಿಶ್ಲೇಷಣೆಗೆ ಬಳಸಿಕೊಳ್ಳಬೇಕಾಗಿರುವುದರಿಂದ ಇಲ್ಲಿ ಕೆಲವು ಕೃತಿಗಳನ್ನು ಸಮೀಕ್ಷೆ ಭಾಗದಲ್ಲಿ ಗಮನಿಸಲಾಗಿದೆ. ಇನ್ನುಳಿದ ಕೃತಿಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚೆಗೆ ಬಳಸಿಕೊಳ್ಳಲಾಗಿದೆ. ಹೀಗಾಗಿ ಈ ಕೃತಿಗಳನ್ನು ಹೊರತುಪಡಿಸಿ ಇನ್ನುಳಿದ ಪತ್ರಿಕೆ, ಮಾಸಪತ್ರಿಕೆಗಳಲ್ಲಿನ ಲೇಖನಗಳನ್ನು ಸಹ ಇಲ್ಲಿ ಸಮೀಕ್ಷೆಗೆ ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಶಾಲಾ ಶಿಕ್ಷಣದ ಮಾಧ್ಯಮವನ್ನು ಕುರಿತಂತೆ ಇತ್ತೀಚೆಗೆ ಸುಮಾರು ಐದು ವರ್ಷಗಳಿಂದ ಮತ್ತಷ್ಟು ವಿವಾದಗಳನ್ನು ಹುಟ್ಟು ಹಾಕುತ್ತಿರುವುದರಿಂದ ಶಿಕ್ಷಣ ಮಾಧ್ಯಮ ಕುರಿತಾಗಿ ಸರ್ಕಾರ ಹಾಗೂ ಉಚ್ಚ ನ್ಯಾಯಾಲಯವು ಮೇಲಿಂದ ಮೇಲೆ ಆದೇಶಗಳನ್ನು ಹೊರಡಿಸುತ್ತಿವೆ. ಲೇಖಕರು, ವಿದ್ವಾಂಸರು, ಶಿಕ್ಷಣತಜ್ಞರು ಹಾಗೂ ಸಾರ್ವಜನಿಕರು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಲೇ ಇದ್ದಾರೆ. ಹಾಗಾಗಿ ಈ ಪತ್ರಿಕೆಗಳಲ್ಲಿಯ ಮಾಹಿತಿಗಳನ್ನು, ವಿಚಾರಗಳನ್ನು ಸಹ ಇಲ್ಲಿ ಸಮೀಕ್ಷೆ ವಿಭಾಗದಲ್ಲಿ ಗಮನಿಸಲಾಗಿದೆ. ಇತ್ತೀಚಿನ ಎರಡು ಮೂರು ವರ್ಷಗಳಲ್ಲಿಯೇ ಮಾಧ್ಯಮ ವಿಷಯವಾಗಿ ಪರ ಹಾಗೂ ವಿರೋಧ ನೆಲೆಯಲ್ಲಿ ಚರ್ಚೆಗಳು ಬೆಳೆದು ಬಂದಿವೆ. ಅಂತಹ ಅನೇಕ ಲೇಖನಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

## ೨.೬. ನಿಯತಕಾಲಿಕೆಗಳು (ಪತ್ರಿಕೆಯ ಲೇಖನಗಳು)

**ಕನ್ನಡದ ಮೂಲಕ ಇಂಗ್ಲೀಶ್, ಕನ್ನಡ ಪ್ರಭ ೨೩.೧೨.೨೦೦೪**

ಮಾತೃಭಾಷೆಯ ಶಿಕ್ಷಣ ಕುರಿತು ತಿಳುವಳಿಕೆಯುಳ್ಳವರೂ ಅರೆ ಶಿಕ್ಷಣ ಇಂಗ್ಲೀಶ್ ಮೋಹಿನಿಯ ಕಾಟವನ್ನು ಅನುಭವಿಸುತ್ತಾರೆ. ಇದರಿಂದಾಗಿ ಒಳ್ಳೆಯ ಇಂಗ್ಲೀಶ್ ಹೇಳಿ ಕೊಡುವ ಕನ್ನಡ ಮಾಧ್ಯಮ ಶಾಲೆಗಳ ಅಗತ್ಯವಿದೆ. ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳಿಗಿಂತ ಇಂಗ್ಲೀಶನ್ನು ಕನ್ನಡ ಮಾಧ್ಯಮ ಮಕ್ಕಳು ಕಲಿಯುವಂತ ವ್ಯವಸ್ಥೆ ಕನ್ನಡ ಶಾಲೆಗಳಲ್ಲಿ ಬರಬೇಕು. ಶಾಲೆಗಳಲ್ಲಿ ಇಂಗ್ಲೀಶ್‌ನ್ನು ಒಂದು ಭಾಷೆಯಾಗಿ ಕಲಿಸುವ ಮೂಲಕ ಮಕ್ಕಳು ಅಂತಹ ಕೀಳರಿಮೆಯಿಂದ ಹೊರಬರಬೇಕಾಗಿದೆ. ಹಾಗಾದಾಗ ಇಂಗ್ಲೀಶ್‌ನಿಂದ ಮಾತ್ರವೇ ಮೋಕ್ಷ ಎಂಬ ಭ್ರಮೆಯಲ್ಲಿರುವ ವಿದ್ಯಾರ್ಥಿಗಳು, ಪಾಲಕರು 'ಕನ್ನಡವೇ ಸತ್ಯ' ಎಂಬ ನಿಲುವಿಗೆ ಬರುತ್ತಾರೆ.

**ಕನ್ನಡ : ಮರೆತ ಆದ್ಯತೆ, ಎಸ್.ಆರ್. ರೋಹಿಡೇಕರ್, ಪ್ರಜಾವಾಣಿ ೨೮.೧೨.೨೦೦೪**

ಮೊದಲನೇ ತರಗತಿಯಿಂದ ಅಲ್ಪಸಂಖ್ಯಾತರನ್ನು ಒಳಗೊಂಡಂತೆ ಎಲ್ಲರಿಗೂ ಕನ್ನಡ ಕಡ್ಡಾಯವಾಗಬೇಕಾಗಿತ್ತು. ಆದರೆ ೧೯೮೦ರಲ್ಲಿ ಪಠ್ಯಕ್ರಮ ಪುನರಚನಾ ಸಮಿತಿಯ ಚೇರಮನ್ ಐದನೇ ತರಗತಿಯಿಂದ ಕಡ್ಡಾಯಗೊಳಿಸಿದರು. ಇದನ್ನು ಕಾನೂನುಬದ್ಧವಾಗಿ ಮಾಡಲು ತ್ರಿಭಾಷಾ ಸೂತ್ರವನ್ನು ಐದನೇ ತರಗತಿಯಿಂದಲೇ ಸುಪ್ರಿಂಕೋರ್ಟ್‌ಎತ್ತಿ ಹಿಡಿಯಿತು. ಕನ್ನಡವೇ ಎಲ್ಲರಿಗೂ ಪ್ರಥಮ ಭಾಷೆಯಾಗಬೇಕೆನ್ನುವ ಗೋಕಾಕ್ ವರದಿಯ ಶಿಫಾರಸ್ಸಿಗೆ ಕಾನೂನಿನ ಮನ್ನಣೆ ಸಿಗಲಿಲ್ಲ.

**ಕನ್ನಡದ ಮಕ್ಕಳು ಇಂಗ್ಲೀಶ್ ಕಲಿಯುವುದು ಹೇಗೆ? ಲೀಲಾಕೃಷ್ಣಮೂರ್ತಿ, ಉದಯವಾಣಿ ೨೯.೦೩.೨೦೦೫.**

ಇಂಗ್ಲೀಶ್ ಭಾಷೆಯನ್ನು ಕಲಿಸಲು ಇಂಗ್ಲೀಶ್ ಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣ ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಪರಭಾಷೆಯನ್ನು ಮಕ್ಕಳಿಗೆ ಕಲಿಸುವುದು ಮುಖ್ಯವೇ ಅಥವಾ ಜ್ಞಾನಾರ್ಜನೆಗಾಗಿ ತರಬೇತಿ ಕೊಡುವುದು ಮುಖ್ಯವೇ ಎಂಬುದನ್ನು ಜನ ಗಂಭೀರವಾಗಿ ಯೋಚನೆ ಮಾಡಬೇಕಿದೆ. ಇಂಗ್ಲೀಶ್ ಭಾಷೆಯ ಶಬ್ದಗಳನ್ನು ಕೇಳುವ ಮೊದಲೇ ಎಲ್ಲಾ ವಿಷಯಗಳನ್ನು ಆ ಭಾಷೆಯಲ್ಲಿ ಹೇಳಿಕೊಟ್ಟರೆ ಮಕ್ಕಳಿಗೆ ಹೇಗೆ ಅರ್ಥವಾಗುತ್ತದೆ. ಆದ್ದರಿಂದ ಮಕ್ಕಳಿಗೆ ಪರಿಚಯವಿರುವ ಮಾತೃ ಭಾಷೆಯಲ್ಲಿ ಕಲಿಸಬೇಕೆನ್ನುವುದು ಇಲ್ಲಿ ವ್ಯಕ್ತವಾಗುತ್ತದೆ.

**ಸಮಸ್ಯೆ ಮತ್ತಷ್ಟು ಜಟಿಲ, ಡಾ. ಪಂಡಿತಾರಾಧ್ಯ, ಪ್ರಜಾವಾಣಿ ೧೪.೪.೨೦೦೫**

ಮಗುವಿನ ಮಾತೃಭಾಷೆಯಲ್ಲಿ ಅಥವಾ ಎರಡನೇ ಮಾತೃಭಾಷೆಯಾದ ಪರಿಸರ ಭಾಷೆ ಯಲ್ಲಿಯೇ ಶಿಕ್ಷಣ ನೀಡಬೇಕು. ಶಿಕ್ಷಣ ರಾಜ್ಯಸರ್ಕಾರಕ್ಕೆ ಸಂಬಂಧಿಸಿದ್ದು, ಸರ್ಕಾರಕ್ಕೆ

ಏನು ಮಾಡಬೇಕೆಂದು ಗೊತ್ತಿದೆ. ಆಂಗ್ಲೋ ಇಂಡಿಯನ್ನರನ್ನು ಬಿಟ್ಟರೆ ಇಂಗ್ಲೀಶ್ ಯಾರ ಮಾತೃಭಾಷೆಯೂ ಅಲ್ಲ. ಆದ್ದರಿಂದ ಉಳಿದವರಿಗೆ ಇಂಗ್ಲೀಶ್‌ನ್ನು ಒಂದು ಭಾಷೆಯಾಗಿ ಕಲಿಸಬಹುದೇ ಹೊರತು ಮಾಧ್ಯಮವಾಗಿ ಅಲ್ಲ. ಮೂರನೇ ತರಗತಿಯಿಂದಲಾದರೂ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಮಾಧ್ಯಮವನ್ನಾಗಿ ಸ್ವೀಕರಿಸುವ ಯೋಚನೆಯೇ, ವಾಸ್ತವವನ್ನು ತಿರುಗು ಮುರುಗಾಗಿಸುವ ಚಿಂತನೆಯಾಗಿದೆ.

**ನಮಗೆ ಇಂಗ್ಲೀಶ್ ಯಾಕೆ ಅನಿವಾರ್ಯ ಅನಿಸುತ್ತದೆ? ಗೌರಿ ಲಂಕೇಶ್, ಲಂಕೇಶಪತ್ರಿಕೆ ೨೯.೫.೨೦೦೫.**

ಈ ಕಾಲದಲ್ಲಿ ಬರೀ ಇಂಗ್ಲೀಶ್ ಕಲಿಕೆ ಮಾತ್ರ ಅಡಗಿಲ್ಲ ದಲಿತರ ಹಿತಾಸಕ್ತಿ ಗ್ರಾಮೀಣ ವಿದ್ಯಾರ್ಥಿಗಳ ಭವಿಷ್ಯ ಕನ್ನಡದ ಉಳಿವು, ಜಾತಿವ್ಯವಸ್ಥೆ, ಜಾಗತೀಕರಣ, ಸಂಸ್ಕೃತಿ ಎಲ್ಲವೂ ಇದೆ. ಇಂಗ್ಲೀಶ್ ಕಲಿಕೆಯನ್ನು ಜಾತಿದೃಷ್ಟಿಯಿಂದ ನೋಡದೆ ನಗರಗ್ರಾಮೀಣ ಎಂದು ನೋಡಬೇಕಿದೆ. ಇಂಗ್ಲೀಶ್ ಐದನೇ ತರಗತಿಯಿಂದ ಸರಿಯಾಗಿ ಹೇಳಿಕೊಡುವ ವ್ಯವಸ್ಥೆ ಜಾರಿಗೆ ಬರಬೇಕು. ಇದು ನಮ್ಮ ಆರ್ಥಿಕ, ಸಾಮಾಜಿಕ, ಬೌದ್ಧಿಕ ವಲಯಗಳನ್ನು ಕನ್ನಡದಿಂದಲೇ ರೂಪಿಸುವಂತಾಗಲಿ ಎಂದಿದ್ದಾರೆ.

**ಇಂಗ್ಲೀಶ್ ಕಲಿಕೆ : ಗೊಂದಲಗಳು ಸವಾಲುಗಳು, ನರಹಳ್ಳಿ ಬಾಲಸುಬ್ರಹ್ಮಣ್ಯ ಪ್ರಜಾವಾಣಿ ೧೨.೬.೨೦೦೫.**

ಮಕ್ಕಳಿಗೆ ಹಲವು ಭಾಷೆಯನ್ನು ಕಲಿಯಲು ಪ್ರೋತ್ಸಾಹಿಸಬೇಕು. ಆದರೆ ಯಾವುದೇ ಭಾಷೆಯನ್ನು ಕಡ್ಡಾಯ ಮಾಡುವುದು ಸರಿಯಲ್ಲ. ಇಂಗ್ಲೀಶ್‌ನ್ನು ಒಂದು ಭಾಷೆಯನ್ನಾಗಿ ಕಲಿಯಬೇಕು. ಆಂಗ್ಲರ ಆಡಳಿತದಲ್ಲಿ ಐದನೇ ತರಗತಿಗೆ ಇದ್ದ ವ್ಯವಸ್ಥೆ ಇಂದು ಒಂದನೇ ತರಗತಿಯಿಂದಲೇ ಕಲಿಸುತ್ತೇವೆ ಎನ್ನುವುದು ಸ್ವಾಭಿಮಾನಕ್ಕೆ ಚ್ಯುತಿ ತರುವ ಸಂಗತಿ. ಇಂಗ್ಲೀಶ್ ವ್ಯಾಮೋಹ ಸರಿಯಲ್ಲ ಎನ್ನುವುದಾದರೆ ಯಾಕೆ ಅದಕ್ಕೆ ಬಲಿಯಾಗಬೇಕು? ಪೂತನೀಯ ಮೇಲೆ ಹಾಲನ್ನೇಕೆ ಕುಡಿಯಬೇಕು? ಇಡೀ ಶಿಕ್ಷಣ ಕ್ರಮವೇ ವಿದ್ಯಾರ್ಥಿಗಳನ್ನು ಮಾರುಕಟ್ಟೆಯ ಸರಕುಗಳನ್ನಾಗಿಸುವ ಉದ್ದೇಶ ಹೊಂದಿದೆ. ಈ ಮೂಲಕ ಇಂಗ್ಲೀಶ್ ಮಾಧ್ಯಮ ಕಲಿಕೆಯನ್ನು ವಿರೋಧಿಸುತ್ತಿರುವುದು ಇಲ್ಲಿ ಸ್ಪಷ್ಟವಾಗುತ್ತದೆ.

**ಇಂಗ್ಲೀಶ್ ಕಲಿಸದಿದ್ದರೆ ಬೂಸಾ ಚಳುವಳಿ : ಪ್ರಜಾವಾಣಿ ೨೧.೬.೦೫**

ಇಂಗ್ಲೀಶ್ ವಿರೋಧಿಗೆ ಸರ್ಕಾರ ಮಣಿದು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸುವುದನ್ನು ಬಿಟ್ಟರೆ ನಾವು ಪ್ರತಿಯಾಗಿ ಚಳುವಳಿ ಮಾಡುತ್ತೇವೆ ಎಂದು ಸಾಹಿತ್ಯ ಪರಿಷತ್ತು ಕನ್ನಡದ ಏಕೈಕ ಪ್ರಾತಿನಿಧಿಕ ಸಂಸ್ಥೆ ಏನೂ ಅಲ್ಲ ಇಂದು ಅನೇಕ ಸಂಸ್ಥೆಗಳಿವೆ ಎಂದು ಪ್ರೊ. ಕಿ.ರಂ. ನಾಗರಾಜ ಒತ್ತಾಯಿಸಿದ್ದಾರೆ.

ಹಳ್ಳಿ ಮಕ್ಕಳಿಗೆ ಕನ್ನಡದ ಜೊತೆಗೆ ಇಂಗ್ಲೀಶ್ ಕಲಿಸುವ ಮೂಲಕ ಹೊಸ ಅಗತ್ಯಗೆಗಳಿಗೆ ಸಜ್ಜುಗೊಳಿಸಬೇಕು. ಹಳ್ಳಿ-ನಗರಗಳ ಮಕ್ಕಳ ನಡುವಿನ ಶೈಕ್ಷಣಿಕ ಅಂತರ ಕಡಿಮೆ ಮಾಡಲು ಇಂಗ್ಲೀಶ್ ಕಲಿಕೆ ಅಗತ್ಯ ಎಂದು ತಿಳಿಸಿದ್ದಾರೆ. ೯೫% ಸಾಹಿತಿಗಳ ಮಕ್ಕಳೆಲ್ಲರೂ ಇಂಗ್ಲೀಶ್ ಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ ಎಂದು ಅಗ್ರಹಾರ ಕೃಷ್ಣಮೂರ್ತಿ, ಎಸ್.ಜಿ.ಸಿದ್ಧರಾಮಯ್ಯ, ಕೆ.ಎಸ್. ಪುಟ್ಟಣ್ಣಯ್ಯ, ನಟರಾಜ ಹುಳಿಯಾರ್, ಸಿ.ಜಿ.ಕೆ, ಎಸ್. ಚಂದ್ರಶೇಖರ್, ಎಂ. ವೆಂಕಟಸ್ವಾಮಿ, ಲಕ್ಷ್ಮೀನಾರಾಯಣ, ಕಾಳೇಗೌಡ ನಾಗವಾರ ಮುಂತಾದವರು ಜೊತೆಗೆ ಸಹಿ ಹಾಕಿದ್ದಾರೆ. ಅಂದರೆ ಶೈಕ್ಷಣಿಕ ತಾರತಮ್ಯವನ್ನು ಹೋಗಲಾಡಿಸಲು ಇಂಗ್ಲೀಶ್ ಶಿಕ್ಷಣವನ್ನು, ಕಲಿಕೆಯಲ್ಲಿ ಅಗತ್ಯವಾಗಿ ಅಳವಡಿಸಬೇಕು ಎಂದಿದ್ದಾರೆ.

**ಭಾಷಾ ಕಲಿಕೆ ಮತ್ತು ಗುಲಾಮಗಿರಿ : ಪ್ರೊ. ಪಾರ್ವತಿ ಜಿ. ಐತಾಳ್, ಉದಯವಾಣಿ ೨೮.೬.೨೦೦೫**

ಪ್ರಸ್ತುತ ಸಂದರ್ಭದ ಪರಿಸ್ಥಿತಿಯಲ್ಲಿ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಯುವುದರಲ್ಲಿ ಯಾವ ಬಗೆಯ ತೊಂದರೆ ಇಲ್ಲ. ಬದಲಾಗಿ ಇಂಗ್ಲೀಶ್ ಒಂದು ಭಾಷೆಯಾಗಿ ಕಲಿಸುವುದು ಸೂಕ್ತ ಎಂದು ಇಂಗ್ಲೀಶ್ ಕಲಿಕೆ ಪರವಾಗಿ ಅಭಿಪ್ರಾಯವನ್ನು ಮಂಡಿಸುತ್ತಾರೆ. ಭಾಷೆ ಒಂದು ಕೇವಲ ಭಾಷೆಯೇ ಹೊರತು ಅದು ಯಾರ ಪಿತ್ರಾರ್ಜಿತ ಆಸ್ತಿಯೂ ಅಲ್ಲ. ಜಗತ್ತಿನಲ್ಲಿ ಯಾರು ಯಾವ ಭಾಷೆಯನ್ನಾದರೂ ಕಲಿಯಬಹುದು. ಅದರಲ್ಲಿ ಗುಲಾಮಗಿರಿಯ ಪ್ರಶ್ನೆ ಎಲ್ಲಿಂದ ಬಂತು. ಉನ್ನತ ಶಿಕ್ಷಣಕ್ಕೆ ಅನಿವಾರ್ಯವಾಗಿರುವ ಇಂಗ್ಲೀಶ್‌ನ್ನು ಸರಿಯಾಗಿ ಕಲಿಸುವ ವ್ಯವಸ್ಥೆ ಕನ್ನಡ ಮಾಧ್ಯಮದಲ್ಲಿ ಇಲ್ಲದಿರುವುದರಿಂದ ಇಂಗ್ಲೀಶ್ ಮಾಧ್ಯಮಕ್ಕೆ ಕಳಿಸುತ್ತಾರೆ. ಪದವಿ ಹಂತಕ್ಕೆ ಬಂದರೂ ಒಂದು ವಾಕ್ಯವನ್ನು ಇಂಗ್ಲೀಶ್‌ನಲ್ಲಿ ರಚಿಸಲು ಅರ್ಥಮಾಡಿಕೊಳ್ಳಲು ಆಗದಿರುವುದರಿಂದ ಇಂತಹ ಸ್ಥಿತಿಗಳನ್ನು ಕಡಿಮೆ ಮಾಡಲು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ನೀಡಬೇಕಾಗಿರುವುದು ಅವಶ್ಯಕವೆಂದು ತಿಳಿಸಿದ್ದಾರೆ.

ಇಂಗ್ಲೀಶ್ ಕಲಿಕೆ : ಮೂಡದ ಒಮ್ಮತ, ಪ್ರಜಾವಾಣಿ ೯.೭.೦೫

ಧರ್ಮಸಿಂಗ್ ಸೇರಿದಂತೆ ಇಂಗ್ಲೀಶ್‌ನ್ನು ಒಂದು ವಿಷಯವಾಗಿ ಜಾರಿಗೆ ತರುವಂತೆ ಸಾಕಷ್ಟು ಪ್ರತಿನಿಧಿಗಳು ಬೆಂಬಲಿಸಿದರು. ದಲಿತ ಸಂಘರ್ಷ ಸಮಿತಿ, ಸರ್ವೋದಯ ಪಕ್ಷ, ಸಾಮಾಜಿಕ ಸಂಘಟನೆಗಳ ಪ್ರತಿನಿಧಿಗಳು ಹಲವಾರು ಚಿಂತಕರು ಗ್ರಾಮೀಣ ಮತ್ತು ಪಟ್ಟಣ ನಗರಗಳೆಂಬ ತಾರತಮ್ಯದ ಅಂತರವನ್ನು ನಿವಾರಿಸಲು ಒಂದನೇ ತರಗತಿಯಿಂದ ಇಂಗ್ಲೀಶ್‌ನ್ನು ಒಂದು ವಿಷಯವಾಗಿ ಬೋಧಿಸುವುದರ ಪರವಾಗಿ ಪ್ರಬಲ ಹಕ್ಕೊತ್ತಾಯ ಮಂಡಿಸಿದ್ದಾರೆ.

ಸರ್ಕಾರಿ ಶಾಲೆಗಳ ೩೦ ಲಕ್ಷ ಮಕ್ಕಳು ೫ನೇ ತರಗತಿಯಿಂದ ಇಂಗ್ಲೀಶ್‌ನ್ನು ಕಲಿಯಲು ಪ್ರಾರಂಭಿಸುತ್ತಾರೆ. ಇದರಿಂದ ಇಂಗ್ಲೀಶ್‌ಲ್ಲಿ ಫೇಲಾಗುವುದೇ ಹೆಚ್ಚು ನಟರಾಜ ಹುಳಿಯಾರ್ ಹೇಳಿದ್ದಾರೆ. ಬಿಸಿ ಊಟ ಹಾಕಿದ್ರೆ ಶಿಕ್ಷಣ ಬರುವುದಿಲ್ಲ. ಒಂದನೇ

ತರಗತಿಯಿಂದಲೇ ಇಂಗ್ಲೀಶನ್ನು ಭಾಷೆಯಾಗಿ ಕಲಿಸುವ ಆದೇಶ ಮಾಡಿ ಎಂದು ಹಂಪಾ ನಾಗರಾಜಯ್ಯ ಮತ್ತು ಸಿ.ಜಿ.ಕೆ. ಅವರು ತಿಳಿಸಿದ್ದಾರೆ.

**ಭಾಷಾ ಕಲಿಕೆಯನ್ನು ಆತ್ಮಸಾಕ್ಷಿ ನಿರ್ಧರಿಸಲಿ, ವೀರೇಶ್ ತಿಪ್ಪಣ್ಣ, ಉದಯವಾಣಿ ೧೨.೭.೨೦೦೫**

ತಾಯಿ ಭಾಷೆಯ ಹೊಂಗಿರಣಗಳಿಂದ ಅರಳಬೇಕಾದ ಹೂವಿನಂಥ ಎಳೆ ಮಕ್ಕಳು ಇಂಗ್ಲೀಶ್ ತಾಪಕ್ಕೆ ನಲಗುತ್ತಾರೆ. ಸಾಮಾನ್ಯ ಜ್ಞಾನವನ್ನು ಕಳೆದುಕೊಂಡ ನತದೃಷ್ಟರು. ಸಾಹಿತ್ಯ ಸಮ್ಮೇಳನಗಳಲ್ಲಿ ಅಧ್ಯಕ್ಷರ ಮೂಲ ಬಯಕೆಯಾಗಿ ಬಂದ ಚಳುವಳಿ ಪ್ರಾದೇಶಿಕ ಶಿಕ್ಷಣ ಮಾಧ್ಯಮದಲ್ಲೇ ಎಂಬುದನ್ನು ಸರ್ಕಾರ ಗಾಳಿಗೆ ತೂರಿದೆ. ಪರಭಾಷಾ ಪ್ರಭಾವಗಳಿಂದ ಅಳಿವಿನ ಭೀತಿ ಎದುರಿಸುತ್ತಿರುವ ಕನ್ನಡವನ್ನು ಸರ್ಕಾರ ಹೊರ ದೇಶಗಳ ಶೈಕ್ಷಣಿಕ ಆರ್ಥಿಕ ಲಾಭಗಳಿಗೆ ಮಣಿದು ಅವರನ್ನು ಮೆಚ್ಚಿಸಲು ಈ ಚರ್ಚೆಯನ್ನು ಸೃಷ್ಟಿಸಿದೆ, ಎಂದು ಹೇಳುವ ಮೂಲಕ ಕನ್ನಡ ಮಾಧ್ಯಮವನ್ನು ಎತ್ತಿ ಹಿಡಿದಿರುವುದು ಕಂಡು ಬರುತ್ತದೆ. ಈ ಮೂಲಕವಾದರೂ ಇಂಗ್ಲೀಶ್ ಮಾಧ್ಯಮವನ್ನು ಬಿಟ್ಟು ಮಾತೃ ಭಾಷಾ ಶಿಕ್ಷಣವನ್ನು ಜಾರಿಗೊಳಿಸಬೇಕು ಎಂದಿರುವುದು ಇದರಿಂದ ವ್ಯಕ್ತವಾಗುತ್ತದೆ.

**ಇಂಗ್ಲೀಶ್–ಕನ್ನಡ : ಭಿನ್ನಹ, ಪ್ರಜಾವಾಣಿ ೧೫.೭.೨೦೦೫**

ಇಂಗ್ಲೀಶ್ ಕಲಿಕೆಯನ್ನು ಅಗತ್ಯವೆಂದು ಸಮಾಜ ವ್ಯಕ್ತಪಡಿಸಿದೆ. ಆದರೆ ಗಾಂಧಿ, ಲೋಹಿಯಾ, ಕುವೆಂಪು ಅವರ ಮಾತೃಭಾಷಾ ಪರವಾದ ಧೋರಣೆಯನ್ನು ತಳ್ಳಿ ಹಾಕುವಂತಿಲ್ಲ. ಹೈಕೋರ್ಟ್ ತೀರ್ಪನ್ನು ತೆರವುಗೊಳಿಸಿ ಭಾಷಾತಜ್ಞ, ಶಿಕ್ಷಣತಜ್ಞ, ಮನೋವಿಜ್ಞಾನಿ ಸಮಾಜ ವಿಜ್ಞಾನಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿ ಮುಂದಿನ ಕ್ರಮಕೈಗೊಳ್ಳಬೇಕೆಂದು ದೇ.ಜ.ಗೌ, ಹಳೆಮನಿ, ಡಿ.ಎಸ್. ನಾಗಭೂಷಣ, ಜಿ.ಹೆಚ್. ನಾಯಕ್, ಸವಿತಾ ನಾಗಭೂಷಣ, ಜಿ.ಟಿ. ನಾರಾಯಣರಾವ್, ಡಿ.ಎಸ್ ಮುಂತಾದವರು ತಿಳಿಸಿದ್ದಾರೆ.

**ಕನ್ನಡವೆಂಬ ರೊಟ್ಟಿಗೆ ಇಂಗ್ಲೀಶ್ ಬೆಣ್ಣೆ, ಅಗ್ರಹಾರ ಕೃಷ್ಣಮೂರ್ತಿ, ಉದಯವಾಣಿ ೧೫.೭.೨೦೦೫**

ಇಂಗ್ಲೀಶ್‌ನ್ನು ಅನ್ಯಭಾಷೆಯೆಂದು ತಿಳಿಯುವುದೇ ಮೂರ್ಖತನದ ಪರಮಾವಧಿ ಎಂದಿದ್ದಾರೆ. ಭಾಷೆಯ ತಿಳುವಳಿಕೆ, ಜ್ಞಾನ ಅಗತ್ಯ. ಆದರೆ ಕನ್ನಡವನ್ನಾದರೂ ಸರಿಯಾಗಿ ಕಲಿಸಿದ್ದೇವೆಯೇ? ಹಾಗಿರುವಾಗ ಕನ್ನಡವನ್ನು ಉಳಿಸುತ್ತಿರುವ ಮಾತಿಗೆ ಅಪಚಾರ ವಾಗುತ್ತದಲ್ಲವೇ? ಸರ್ಕಾರ ಈ ಬಗ್ಗೆ ಸರಿಯಾಗಿ ವಿವೇಚಿಸಿ ಕನ್ನಡ ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಪೋಷಕವಾಗುವಂತೆ ತೀರ್ಮಾನ ಕೈಗೊಳ್ಳಬೇಕು.

**ಇಂಗ್ಲೀಶ್ ಕಲಿಕೆ ಬೇಕು ಅವಸರ ಬೇಡ, ಉದಯವಾಣಿ ೧೯.೭.೨೦೦೫**

ಅನ್ಯಭಾಷೆಯನ್ನು ಕಲಿಯುವುದು ತಪ್ಪಲ್ಲ. ನಮ್ಮ ಸಂವಿಧಾನದಲ್ಲಿ ಭಾಷಾ ಕಲಿಕೆಗೆ ಮಾರ್ಗದರ್ಶನವಿದೆ. ಆದರೆ ಅದಕ್ಕೂ ಮುಂಚಿತವಾಗಿ ಸರ್ಕಾರಿ ಶಾಲೆಗಳ ಗುಣಮಟ್ಟ ಸುಧಾರಣೆಗೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕು, ಭಾಷಾ ಕಲಿಕೆ ಮಕ್ಕಳಿಗೆ ಹೊರೆಯಾಗಬಾರದು.

**ಕನ್ನಡಕ್ಕೊಂದು ಭಾರಿ ಪೆಟ್ಟು, ಕರ್ಮವೀರ ೨೦.೭.೨೦೦೮**

೧೯೯೪ ಏಪ್ರಿಲ್ ೧೯ರಂದು ಕರ್ನಾಟಕ ಸರ್ಕಾರ ೧ರಿಂದ ೪ನೇ ತರಗತಿವರೆಗೆ ಮಾತೃಭಾಷಾ ಶಿಕ್ಷಣ ಕಡ್ಡಾಯವಾಗಿ ನೀಡಬೇಕೆಂದು ಆದೇಶ ಹೊರಡಿಸಿತ್ತು. ಶಿಕ್ಷಣ ಚಿಂತಕರೂ ಮಕ್ಕಳ ಶಿಕ್ಷಣ ಮಾತೃ ಭಾಷೆಯಲ್ಲಿಯೇ ಇರಬೇಕೆಂದು ತಿಳಿಸಿದ್ದಾರೆ. ಕನ್ನಡದ ಮಕ್ಕಳಲ್ಲಿ ವರ್ಗ ಭೇದ ಉಂಟಾಗುತ್ತದೆ. ರಾಜ್ಯದ ಎಲ್ಲಾ ಶಾಲೆಗಳಿಗೂ ಒಂದೇ ಭಾಷಾ ನೀತಿ ಅನ್ವಯವಾಗುವಂತಾಗಬೇಕು. ಸಂವಿಧಾನದ ೭ನೇ ಶೆಡ್ಯೂಲ್‌ನಲ್ಲಿ ಮಾತೃಭಾಷೆಗೆ ಸಂಬಂಧಿಸಿದಂತೆ ನೀತಿ ಮತ್ತು ನಿರ್ವಹಣೆಯ ಅಧಿಕಾರ ಸಂಪೂರ್ಣ ರಾಜ್ಯಸರ್ಕಾರಗಳಿಗೆ ಸೇರಿದ್ದೆಂದು ಪ್ರಸ್ತಾಪಿಸಲಾಗಿದೆ.

**ಇಂಗ್ಲೀಶ್ ಕಲಿತರೇನೆ ಆತ್ಮವಿಶ್ವಾಸ ಹೆಚ್ಚುವುದೇ? ಸುಭಾಷ್ ಎನ್, ವಿಜಯ ಕರ್ನಾಟಕ ೨೨.೭.೨೦೦೫**

ಕನ್ನಡ ಮಾಧ್ಯಮ ಕಲಿತ ಕೂಡಲೇ ಇಂಗ್ಲೀಶ್ ಮಾತನಾಡಲು ಬರುವುದಿಲ್ಲವೇ? ವಿದ್ಯಾರ್ಥಿಗಳಿಗೆ ಇಂಗ್ಲೀಶ್ ಕಲಿಸಬೇಕಾದುದು ಮುಖ್ಯ ಅಲ್ಲ. ಬದಲಿಗೆ ಆತ್ಮ ವಿಶ್ವಾಸ, ನೈತಿಕತೆ,ಕಾರ್ಯ-ನೈಪುಣ್ಯತೆ, ಶ್ರದ್ಧಾಭಾವನೆಗಳನ್ನು ಮುಖ್ಯವಾಗಿ ಮೂಡಿಸಬೇಕಾಗಿರುವುದು ಅಗತ್ಯ. ಕನ್ನಡಭಾಷೆಯನ್ನು ಉಳಿಸುವುದು ಬಿಟ್ಟು ಸ್ವಾರ್ಥ ಸಾಧನೆಗಾಗಿ ಅಳಿಸಲು ಹೊರಟಿರುವುದು ನೋವಿನ ಸಂಗತಿ ಎಂದು ಅಭಿಪ್ರಾಯಪಟ್ಟಿದ್ದಾರೆ.

**ಇಂಗ್ಲೀಶ್ ಕಲಿಕೆ ವಿವಾದ : ವಿಧಾನ ಸಭೆಯಲ್ಲಿ ಕಾವೇರಿದ ಚರ್ಚೆ, ಉದಯವಾಣಿ ೨೬.೭.೨೦೦೫**

ಕಾಂಗ್ರೆಸ್‌ನ ಎಸ್.ಎಸ್. ಪಾಟೀಲರು ಅಂಗನವಾಡಿಯಿಂದಲೇ ಇಂಗ್ಲೀಶ್ ಕಲಿಸಿದರೆ ಕನ್ನಡ ಮಾಯವಾಗುತ್ತದೆ ಇದು ಸರಿಯಲ್ಲ. ನಾವೆಲ್ಲ ಏಳನೇ ತರಗತಿಯಿಂದ ಇಂಗ್ಲೀಶ್ ಕಲಿತದ್ದು ಎಂದು ತಿಳಿಸಿದ್ದಾರೆ. ಆದರೆ ಇದಕ್ಕೆ ಜೆ.ಡಿ.ಎಸ್, ವಾಟಾಳ ನಾಗರಾಜ್, ರೋಷನ್‌ಬೇಗ್, ಆಂಜನೇಯ ತೀವ್ರ ವಿರೋಧ ವ್ಯಕ್ತಪಡಿಸಿದರು. ದಲಿತರು, ಹಿಂದುಳಿದವರು ಇಂಗ್ಲೀಶ್ ಕಲಿಯಬಾರದು ನಿಮ್ಮ ಮಕ್ಕಳು ಇಂಗ್ಲೀಶ್ ಕಲಿತು ವಿದೇಶಗಳಿಗೆ ಹೋಗಿ ಹಣ ಸಂಪಾದನೆ ಮಾಡಬೇಕು ಅಲ್ಲವೇ. ಸಚಿವ ಪ್ರಕಾಶರು ಮೀಸಲಾತಿಯಲ್ಲಿ ಕೆನೆಪದರ ವ್ಯವಸ್ಥೆ ಬರಬೇಕಾಗಿದೆ ಎಂದು ತಿಳಿಸಿ ಕನ್ನಡದ ೨೯ ಕಾಳಜಿ ಬಗೆಗೆ ತೀವ್ರತೆಯನ್ನು ವ್ಯಕ್ತಪಡಿಸಿದ್ದಾರೆ. ಕನ್ನಡವನ್ನು ಮಾಧ್ಯಮವನ್ನಾಗಿರಿಸಿಕೊಂಡು ಇಂಗ್ಲೀಶ್‌ನ್ನು ಒಂದು ಭಾಷೆಯಾಗಿ ಒಂದನೇ ತರಗತಿಯಿಂದ ಕಲಿಯುವುದರಲ್ಲಿ ತಪ್ಪಿಲ್ಲ ಎಂದು ಡಾ. ಕೆ.ಎಂ. ಶ್ರೀನಿವಾಸಗೌಡ, ಹಮೀದ್‌ಖಾನ್ ಜನತಾವಾಣಿಯಲ್ಲಿ ತಿಳಿಸಿದ್ದಾರೆ.

**ಇಂಗ್ಲೀಶ್ ಕಲಿಯಲು ಶಾಲೆಯೇ ಬೇಕೆ?, ಗೀತಾಶೆಣೈ, ಉದಯವಾಣಿ ೨೭.೭.೦೫**

ಇಂಗ್ಲೀಶ್ ಮಾಧ್ಯಮದಿಂದ ಜ್ಞಾನವರ್ಧನೆ ಆಗುವುದಿಲ್ಲ. ಅಲ್ಲದೆ ಭಾಷೆ ಬರುವುದರಿಂದಲೂ ಜ್ಞಾನವರ್ಧನೆ ಆಗುವುದಿಲ್ಲ. ವಿಷಯ ಗ್ರಹಣ ಮಾಡಿದರೆ ಮಾತ್ರ ಅದು

ಸಾಧ್ಯ. ಇಂಗ್ಲೀಶ್ ಮೀಡಿಯಂಗೆ ಹೋದರೆ ಮಾತನಾಡಲು ಬರುವುದಿಲ್ಲ. ಮಾತನಾಡುವ ಪರಿಸರ ಇರಬೇಕು. ಹುಟ್ಟಿದ ಒಂದೆರಡು ವರ್ಷಗಳಲ್ಲಿ ಮಕ್ಕಳು ಮನೆ ಭಾಷೆ ಕಲಿಯುವುದಿಲ್ಲವೇ? ಆ ಭಾಷೆ ಬರುವುದು ಕೇಳಿ ಮಾತನಾಡಿ ಅಭ್ಯಾಸ ಮಾಡಿಕೊಳ್ಳುವುದರಿಂದ ಭಾಷೆಯನ್ನು ಚೆನ್ನಾಗಿ ಮಾತನಾಡಬಹುದು.

**ನೈತಿಕತೆ ಇಲ್ಲದ ಕನ್ನಡದ ಕಾಳಜಿ, ಕೆ.ಟಿ. ಶಿವಪ್ರಸಾದ, ಜಿ.ವಿ. ಆನಂದಮೂರ್ತಿ, ಎಂ.ಎಸ್. ಶೇಖರ್, ಲಂಕೇಶ್ ಪತ್ರಿಕೆ ೪.೮.೨೦೦೫**

ಪ್ರಾಚೀನ ಕಾಲದಲ್ಲಿ ಸಂಸ್ಕೃತದ ಕಲಿಕೆ ಇಂತವರಿಗೆ ಮಾತ್ರ ಎಂದು ಗುರುತಿಸಿದ್ದು ಇವತ್ತಿನ ಸಂದರ್ಭದಲ್ಲಿ ಗ್ರಾಮೀಣ ಭಾಗದ ಜನರು ದುರ್ಬಲ ವರ್ಗದವರಿಗೆ ಮಾತ್ರ ಕನ್ನಡ ಕಲಿಕೆಯ ಬೋಧನೆ ಮಾಡುತ್ತಿರುವುದು ವಿಪರ್ಯಾಸದ ಸಂಗತಿ. ಸಾಮಾಜಿಕನ್ಯಾಯ, ಸಮಾನತೆಯ ಹಿನ್ನೆಲೆಯಲ್ಲಿ ಇಂಗ್ಲೀಶ್ ಕಲಿಕೆ ಸ್ವೀಕರಿಸಬೇಕಾಗಿರುವುದು ಸದ್ಯದ ಪರಿಸ್ಥಿತಿಯಾಗಿದೆ. ಜಾತಿವ್ಯವಸ್ಥೆಯ ಪರವಾಗಿ ಕಡೆಗೆ ಮನಸ್ಸು ಉಲ್ಬಣಿಸುತ್ತಿರುವುದು ಕನ್ನಡ ಕಾಳಜಿಗೆ ಯಾವುದೇ ನೈತಿಕ ತಳಹದಿಯಿಲ್ಲ.

**ಇಂಗ್ಲೀಶ್ ಕಲಿಕೆ ಉದಯವಾಣಿ ೧೨.೮.೨೦೦೫**

ಯಾವುದೇ ಭಾಷೆಯನ್ನು ಯಾವ ತರಗತಿಯಿಂದ ಕಲಿಸಬೇಕೆನ್ನುವುದು ಶಿಕ್ಷಣತಜ್ಞರು ಚರ್ಚಿಸುವ ವಿಷಯವಾಗಬೇಕೆ ಹೊರತು ಸರಕಾರ/ರಾಜಕೀಯ ಕಾರ್ಯಸೂಚಿಯಾಗಬಾರದು. ಇಂಗ್ಲೀಶ್ ಕಲಿಕೆ ವರ್ಗ, ವರ್ಣ, ಭೇದಗಳ ಸಂಕೇತವಾಗಿ ಬದಲಾಗುತ್ತಿದೆ. ಹೆಚ್ಚುವರಿ ಭಾಷಾ ಕಲಿಕೆ ಹೇರಿಕೆಯಾಗಬಾರದು. C.B.S.E, I.C.S.E ಪಠ್ಯಕ್ರಮಗಳ ಹೆಸರಿನಲ್ಲಿ ಇಂಗ್ಲೀಶ್‌ನ್ನು ಹೇರುತ್ತಿರುವ ಶಾಲೆಗಳಲ್ಲಿ ಕನ್ನಡ ಕಲಿಸುವ ವ್ಯವಸ್ಥೆಯಾಗಬೇಕು. ಇಂಗ್ಲೀಶ್ ಭಾಷೆಯನ್ನು ಕಲಿಸುವ ಜೊತೆಗೆ ಮಾನವಿಕ ವಿಷಯಗಳನ್ನು ಕನ್ನಡದಲ್ಲಿ ಕಲಿಸುವ ವ್ಯವಸ್ಥೆಯ ಬಗ್ಗೆಯೂ ಚಿಂತಿಸಬಹುದು.

**ಆಂಗ್ಲ ಭಾಷೆ ಅನಿವಾರ್ಯವಲ್ಲ : ಪ್ರಭುತ್ವ ಅದನ್ನು ಹೇರುತ್ತದೆ. ಕನ್ನಡ ಪ್ರಭ ೧೯.೮.೦೫**

ಎಳೆಯ ಮಕ್ಕಳಿಗೆ ಆಂಗ್ಲಭಾಷೆ ಹೊರೆ ಎಂಬುದು ತಪ್ಪುವಾದ. ಸರಕಾರಿ ಶಾಲೆಗಳಲ್ಲಿ ಇಂಗ್ಲೀಶ್ ಕಲಿಸುವುದರಿಂದ ಕಾನ್ವೆಂಟ್ ಹಾವಳಿಗಳನ್ನು ತಪ್ಪಿಸಲು ಸಾಧ್ಯ. ಇಂಗ್ಲೀಶ್ ಕಲಿಸುವ ಮೂಲಕ ಶೈಕ್ಷಣಿಕ ಅಸಮಾನತೆ ಹೋಗಲಾಡಿಸಬೇಕೆಂದು ಪ್ರಕಟಿಸಲಾಗಿದೆ.

ಎಂಟರ ನಂತರ ಇಂಗ್ಲೀಶ್ ಕಲಿಯಲಿ : ಡಾ. ವಿ.ಎಸ್. ಚರಣ್ ಮೈಸೂರು. ಕನ್ನಡ ಪ್ರಭ ೨೮.೮.೦೫

ಎಳೆಯ ವಯಸ್ಸಿನಲ್ಲಿ ಮಕ್ಕಳ ತಲೆ ಖಾಲಿಯಿರುತ್ತದೆ. ಆಗ ಅವುಗಳಲ್ಲಿ ಕನ್ನಡ ಇಂಗ್ಲೀಶ್‌ನ ದ್ವಿಭಾಷಾ ಬಲೆಯಲ್ಲಿ ಸಿಕ್ಕಿಸುವುದು ಬೇಡ. ೧-೨ನೇ ತರಗತಿಯಿಂದ ಇಂಗ್ಲೀಶ್

ಕಲಿತರೆ ಸಾಕು. ಜಾಗತಿಕ ಮಟ್ಟದಲ್ಲಿ ಇಂಗ್ಲೀಶ್ ಅಗತ್ಯ ಆದರೆ ಅದಕ್ಕಿಂತ ಒಂದು ಪುಟ್ಟ ಮಾತೃ ಭಾಷೆಯ ಅಗತ್ಯ ಹೆಚ್ಚಿರುತ್ತದೆ ಎಂದು ಎಲ್ಲರೂ ಅರಿಯಬೇಕು. ಹೀಗೆ ಮಾತೃಭಾಷೆಯ ಕಲಿಕೆಗೆ ಹೆಚ್ಚು ಗಮನ ನೀಡಿದ್ದು ಇಂಗ್ಲೀಶನ್ನು ಭಾಷೆಯಾಗಿ ಕಲಿಯುವಲ್ಲಿ ಯಾವುದೇ ತೊಡಕಿಲ್ಲವೆಂದು ವಿ.ಎಸ್. ಚರಣ್ ಅವರು ಅಭಿಪ್ರಾಯಪಟ್ಟಿದ್ದಾರೆ.

**ಈಸ್ಲೇರಿ : ಶಿಕ್ಷಣ ಕ್ಷೇತ್ರದಲ್ಲೊಂದು ಪ್ರಯೋಗ, ಪ್ರಜಾವಾಣಿ ೬.೨.೨೦೦೬ ಪ.ರಾಮಕೃಷ್ಣಶಾಸ್ತ್ರಿ**

ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ಭಾಗದ ಭಾಸ್ಕರ ಅಡ್ವಳ ಅಧ್ಯಾಪಕರು ತ್ರಿಭಾಷಾ ಸೂತ್ರವನ್ನು ಮಾಧ್ಯಮವಾಗಿ ರೂಪಿಸುವಲ್ಲಿ ಪ್ರಯತ್ನಿಸಿದ್ದಾರೆ. ಅಂದರೆ ಹಿಂದಿ, ಇಂಗ್ಲೀಶ್ ಕೇವಲ ಪಠ್ಯವಿಷಯವಾಗಿದೆ. ಅವುಗಳನ್ನು ಮಕ್ಕಳು ಮಾತೃಭಾಷೆಯನ್ನು ಕಲಿತಂತೆ ಇಂಗ್ಲೀಶ್, ಹಿಂದಿಯನ್ನು ಕಲಿಯುತ್ತಾರೆ. ಇದನ್ನು ಅವರು ಕ್ಷೇತ್ರಕಾರ್ಯದ ಪರಿಣಾಮವಾಗಿ 'Indian Social Life and Education Research Institution' ಎಂಬ ವೇದಿಕೆ ಅಡಿಯಲ್ಲಿ ತರಗತಿಪೂರ್ವ ಭಾಷಾ ಕಲಿಕೆ ಸಾಧ್ಯವಿದೆ, ದ್ವಿಭಾಷಾ ಪರಿಸರವುಳ್ಳ ಮನೆ ಮಾತಿನ ಮಕ್ಕಳು ಕಲಿಯಲು ಪ್ರಯಾಸ ಮಾಡಬೇಕಿಲ್ಲ ಎನ್ನುವ ಮೂಲಕ ಚಿಂತನೆ ಬೆಳೆಸಿದ್ದಾರೆ.

**ಕನ್ನಡ ಸಾಕೆ? ಇಂಗ್ಲೀಶ್ ಬೇಕೆ? : ಕೆ.ಜಿ.ಚವ್ಹಾಣ, ಕನ್ನಡಪ್ರಭ ೧೩.೯.೦೫**

ಭಾರತದಲ್ಲಿ ಬೆಳೆಯುತ್ತಿರುವ ಇಂಗ್ಲೀಶ್ ಅದು ಯಾವಾಗಲೂ ಪರೋಪಜೀವಿ ಗಿಡ. ಇನ್ನೊಂದು ಮರವನ್ನು ಆಶ್ರಯಿಸಿ ಬೆಳೆಯುತ್ತದೆ. ಕ್ರಮೇಣ ತನಗೆ ಆಶ್ರಯ ನೀಡಿದ್ದನ್ನು ಕೊಂದು ಹಾಕುತ್ತದೆ. ಅದೇ ರೀತಿ ಇಂಗ್ಲೀಶ್ ಮಾಧ್ಯಮದ ಮೇಲೆ ಅವಲಂಬಿಸಿ ರುವುದು ತುಂಬಾ ಅಪಾಯಕಾರಿ ಎಂಬುದನ್ನು ಕನ್ನಡಿಗರು ತಿಳಿದುಕೊಳ್ಳುವುದು ಅಗತ್ಯ, ಅಂತಹ ಭಾಷೆಯನ್ನು ಅವಲಂಬಿಸುವುದು ಅಪಾಯವೆಂದು ತಿಳಿಸಿ ಇಂಗ್ಲೀಶ್ ಕಲಿಕೆಯನ್ನು ತಳ್ಳಿ ಹಾಕುತ್ತಾರೆ.

**ಕನ್ನಡಕ್ಕೆ ಪ್ರಾಶಸ್ತ್ಯ : ಬಿ.ಇ.ಓ. ತಾಕೀತು ಪ್ರಜಾವಾಣಿ ೧೩. ೬.೨೦೦೭**

ಪ್ರಾಥಮಿಕ ಪೂರ್ವ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಬೋಧಿಸುವಂತೆ ಕ್ಷೇತ್ರ ಶಿಕ್ಷಣಾಧಿಕಾರಿ ಉಮೇಶ್ ಪೂಜಾರ ಸ್ಥಳೀಯ ಕ್ರೈಸ್ಥ ಕಿಂಗ್ ಶಾಲೆಯ ಆಡಳಿತಕ್ಕೆ ಸೂಚನೆ ನೀಡಿದ್ದಾರೆ. ಕನ್ನಡ ಮಾಧ್ಯಮದಲ್ಲಿ ಪರವಾನಗಿ ಪಡೆದು ಇಂಗ್ಲೀಶ್ ಮಾಧ್ಯಮದಲ್ಲಿ ಶಾಲೆಗಳನ್ನು ನಡೆಸುತ್ತಿವೆ. ಇವುಗಳ ವಿರುದ್ಧ ರಕ್ಷಣಾ ವೇದಿಕೆ ದೂರು ಸಲ್ಲಿಸಿದೆ. ಇಂತಹ ಪ್ರವೃತ್ತಿ ಮತ್ತೆ ಕಂಡು ಬಂದರೆ ಉಗ್ರ ಚಳುವಳಿ ನಡೆಸುವುದಾಗಿ ಕರವೇ ಜಿಲ್ಲಾಧ್ಯಕ್ಷ ಬಸನಗೌಡ ತಿಳಿಸಿದರು.

**ಭಾಷಾ ಮಾಧ್ಯಮ : ಉಲ್ಲಂಘನೆ ಮಾನ್ಯತೆ ರದ್ದು ತಡೆ ವಿಸ್ತರಣೆ, ಪ್ರಜಾವಾಣಿ ೧.೭.೦೭**

ಭಾಷಾ ಮಾಧ್ಯಮದ ಉಲ್ಲಂಘನೆಯ ಆರೋಪದಿಂದ ಮಾನ್ಯತೆ ಕಳೆದುಕೊಂಡಿರುವ ಖಾಸಗಿ ಶಾಲೆಗಳ ಮಾನ್ಯತೆ ರದ್ಧತಿಗೆ ಈ ಹಿಂದೆ ನೀಡಿದ್ದ ತಡೆಯಾಜ್ಞೆಯನ್ನು ಹೈಕೋರ್ಟ್

ಜೂನ್ ೧೪ರವರೆಗೆ ವಿಸ್ತರಿಸಿದೆ. ಸರ್ಕಾರದ ಅನುಮತಿ ಪಡೆದ ಶಾಲೆ ತಾನು ಯಾವ ಮಾಧ್ಯಮದಲ್ಲಿ ಬೋಧನೆ ನೀಡುತ್ತದೆ ಅದೇ ರೀತಿಯಾಗಿ ಪ್ರಮಾಣಪತ್ರದಲ್ಲಿ ಸ್ಪಷ್ಟ ಉಲ್ಲೇಖ ನೀಡಬೇಕು. ಭಾಷಾ ಮಾಧ್ಯಮವನ್ನು ಪ್ರಸಕ್ತ ಶೈಕ್ಷಣಿಕ ವರ್ಷದಿಂದ (೨೦೦೭-೦೮) ಪಾಲಿಸುತ್ತೇವೆ ಎಂದು ಖಾಸಗಿ ಶಾಲೆಗಳು ತಿಳಿಸಿರುತ್ತವೆ. ಆದರೆ ಹೈಕೋರ್ಟ್ ಇದನ್ನು ಮಾನ್ಯ ಮಾಡುವುದಿಲ್ಲ ಎಂದು ನ್ಯಾಯಮೂರ್ತಿಗಳು ತಿಳಿಸಿದರು.

**ಶಾಲಾ ಮಾನ್ಯತೆ ರದ್ದು : ಪ್ರಜಾವಾಣಿ ೨.೬.೨೦೦೭**

ಕನ್ನಡ ಮಾಧ್ಯಮದಲ್ಲಿ ಶಾಲೆಗಳನ್ನು ನಡೆಸುತ್ತೇವೆಂದು ಮುಚ್ಚಳಿಕೆ ಬರೆದುಕೊಟ್ಟು ಇಂಗ್ಲೀಶ್ ಮಾಧ್ಯಮದಲ್ಲಿ ನಡೆಸುತ್ತಿದ್ದುದ್ದನ್ನು ಪ್ರಶ್ನಿಸಿದ ಸರ್ಕಾರ ಈ ಶಾಲೆಗಳ ಮಾನ್ಯತೆಯನ್ನು ರದ್ದುಪಡಿಸಿತ್ತು. ಹೈಕೋರ್ಟ್ ನ್ಯಾಯಮೂರ್ತಿಗಳು ಸರ್ಕಾರದ ಆದೇಶದಂತೆ ಪ್ರಮಾಣಪತ್ರ ಸಲ್ಲಿಸಲು ಆದೇಶಿಸಿತ್ತು. ಆದರೆ ಅರ್ಜಿದಾರರ ಅಧ್ಯಕ್ಷ ಪಿ. ಪ್ರಕಾಶ ಅದಕ್ಕೆ ವಿರುದ್ಧವಾಗಿ ಹೈಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಲಾಗುವುದು. ಇಲ್ಲವಾದಲ್ಲಿ ಸುಪ್ರೀಂ ಕೋರ್ಟ್‌ಗೂ ಹೋಗಲಾಗುವುದು ಎಂದಿದ್ದಾರೆ.

**ಶಿಕ್ಷಣ ಸಂಸ್ಥೆಗಳಿಗೆ ಹೈಕೋರ್ಟ್ ತರಾಟೆ : ಪ್ರಜಾವಾಣಿ ೬.೬.೦೭**

ಇಂದಿನ ದುಬಾರಿ ಶಿಕ್ಷಣದಿಂದಾಗಿ ಶುಲ್ಕ ಭರ್ತಿ ಮಾಡುವಷ್ಟರಲ್ಲಿ ಪಾಲಕರು ಬೀದಿಗೆ ಬೀಳುವ ಸ್ಥಿತಿ ಉಂಟಾಗಿದೆ ಎಂದು ಹೈಕೋರ್ಟ್ ಅಭಿಪ್ರಾಯಪಟ್ಟಿದೆ. ಭಾಷಾ ಮಾಧ್ಯಮ ಉಲ್ಲಂಘಿಸಿರುವ ಆರೋಪ ಹೊತ್ತ ನಗರದ ಚಿದಾನಂದ ಎಜ್ಯೂಕೇಶನ್ ಟ್ರಸ್ಟ್ ತನಗೆ ಪ್ರಮಾಣಪತ್ರ ಸಲ್ಲಿಸುವುದಕ್ಕೆ ಕೋರ್ಟ್ ನಿರ್ದೇಶನ ಮೇರೆಗೆ ಹೆಚ್ಚಿನ ಕಾಲಾವಕಾಶ ಕೋರಿದೆ.

**ಭಾಷಾ ನೀತಿ ಉಲ್ಲಂಘನೆ : ಕಾನೂನು ಅಸ್ತ್ರ ತಪ್ಪಿಸಿಕೊಳ್ಳಲು ಯತ್ನ, ಎಸ್. ಸಂಪತ್, ಪ್ರಜಾವಾಣಿ ೮.೬.೦೭**

ಭಾಷಾ ನೀತಿ ಉಲ್ಲಂಘಿಸಿರುವ ಶಾಲೆಗಳ ಮಾನ್ಯತೆಯನ್ನು ರದ್ದುಪಡಿಸಲು ಸರ್ಕಾರ ಕಾನೂನಿನ ಅಸ್ತ್ರ ಉಪಯೋಗಿಸಿದ್ದರೆ. ಇವು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಶೈಕ್ಷಣಿಕ ಪದ್ಧತಿಯೊಂದನ್ನು ಅಳವಡಿಸಿಕೊಳ್ಳುವ ಪ್ರಯತ್ನ ನಡೆಸಿವೆ. ತಮ್ಮ ಶಾಲೆಗಳನ್ನು ಅನೌಪಚಾರಿಕ ಶಿಕ್ಷಣಗಳನ್ನಾಗಿ ಪರಿವರ್ತಿಸುತ್ತಿವೆ. ಈ ಅನೌಪಚಾರಿಕ ಶಿಕ್ಷಣದ ಮೂಲಕ ಆರನೇ ತರಗತಿಯಿಂದ ತಮ್ಮ ಶಾಲೆಯಲ್ಲಿಯೇ ಔಪಚಾರಿಕ ಶಿಕ್ಷಣಕ್ಕೆ ಪ್ರವೇಶ ಒದಗಿಸುತ್ತೇವೆಂದು ಶಾಲಾ ಸಂಘಟನೆಗಳು ತಿಳಿಸುತ್ತಿವೆ.

**ಇಂಗ್ಲೀಶ್ ಎಂಬ ಚಟ : ಸಾಮಗ ದತ್ತಾತ್ರಿ ಬೆಂಗಳೂರು, ಪ್ರಜಾವಾಣಿ ೨೦೦೭**

ಪ್ರಾಥಮಿಕ ಶಿಕ್ಷಣ ಮಾತೃ ಭಾಷೆಯಲ್ಲೆ ಎನ್ನುವುದು ಜಗತ್ತಿನಾದ್ಯಂತ ಅಂಗೀಕರಿಸಲ್ಪಟ್ಟಿದೆ. ಮಾತೃಭಾಷಾ ಮಾಧ್ಯಮ ಶಿಕ್ಷಣ ನೀತಿಯನ್ನು ತಾವೂ ಅನುಸರಿಸುತ್ತೇವೆಂದು ಖಾಸಗಿ ಶಾಲೆಯವರು ಘೋಷಿಸಿದ್ದರೆ ಪಾಲಕರು ಏನು ಮಾಡುತ್ತಿದ್ದರು ಎಂದು ಪ್ರಶ್ನಿಸಿದ್ದಾರೆ.

ಅನುದಾನ ರಹಿತ ಶಾಲೆಗಳು ಸರಕಾರದ ಷರತ್ತುಗಳನ್ನು ಒಪ್ಪಿಕೊಂಡು ಈ ಸಾಲಿನಿಂದ ಕನ್ನಡ ಮಾಧ್ಯಮವನ್ನೇ ಅಳವಡಿಸಲಿ. ಮೂರ್ನಾಲ್ಕು ವರ್ಷಗಳಲ್ಲಿ ಇವು ಸಂಪೂರ್ಣವಾಗಿ ಕನ್ನಡ ಮಾಧ್ಯಮ ಶಾಲೆಗಳಾಗಿ ಪರಿವರ್ತನೆಗೊಳ್ಳುತ್ತವೆ ಎಂದು ಸ್ಪಷ್ಟಪಡಿಸಿದ್ದಾರೆ.

**ಹೈಕೋರ್ಟ್ : ಭಾಷಾ ಮಾಧ್ಯಮ ಇಂದು ತೀರ್ಪು, ಪ್ರಜಾವಾಣಿ ೨.೭.೦೮**

ಪ್ರಾಥಮಿಕ ಶಾಲೆಗಳಲ್ಲಿ ಮಾತೃಭಾಷಾ ಬೋಧನೆ ಬಳಸಬೇಕೆಂದು ೧೯೯೪ರಲ್ಲಿ ಸರ್ಕಾರ ಹೊರಡಿಸಿದ್ದ ಸುತ್ತೋಲೆಯನ್ನು ಪ್ರಶ್ನಿಸಿ ಸಲ್ಲಿಸಲಾದ ಅರ್ಜಿಯ ತೀರ್ಪನ್ನು ಹೈಕೋರ್ಟ್ ಬುಧವಾರ (ಜೂನ್೨) ಪ್ರಕಟಿಸಿದೆ.

**ಭಾಷಾ ಮಾಧ್ಯಮ ಹೇರಿಕೆ : ಸಂವಿಧಾನಬಾಹಿರ ಹೈಕೋರ್ಟ್, ಪ್ರಜಾವಾಣಿ ೩.೭.೦೮**

ಕನ್ನಡ ಕಡ್ಡಾಯವಲ್ಲ ಎಂಬ ಹೈಕೋರ್ಟ್‌ನ ತೀರ್ಪು ಕನ್ನಡಿಗರಿಗೆ ಕರ್ನಾಟಕಕ್ಕೆ ಅನ್ಯಾಯವಾಗಿದೆ. ಈ ಹಿಂದೆ ಸುಪ್ರೀಂಕೋರ್ಟ್ ಮಾತೃ ಭಾಷಾಮಾಧ್ಯಮದ ಪರವಾಗಿ ಎಲ್ಲ ಕಡೆಗೂ ಏಕರೂಪದ ಶಿಕ್ಷಣ ನೀತಿ ಇರಬೇಕು ಎಂಬ ನೀತಿಗೆ ಇದು ವಿರುದ್ಧವಾಗಿದೆ. ಈ ತೀರ್ಪಿನ ವಿರುದ್ಧ ಸುಪ್ರೀಂಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಲಾಗುವುದು ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಮುಖ್ಯಮಂತ್ರಿ ಚಂದ್ರು ಅವರು ತಿಳಿಸಿದ್ದಾರೆ.

ಅದೇ ರೀತಿಯಾಗಿ ಸುಪ್ರೀಂ ಕೋರ್ಟ್ ಪರಿಹಾರ ಒದಗಿಸಬೇಕೆಂದು ಸಿದ್ಧಲಿಂಗಯ್ಯನವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. ಈ ತೀರ್ಪಿನಿಂದಾಗಿ ಖಾಸಗಿ ಶಾಲೆಗಳ ಪಾಳೆಗಾರಿಕೆಗೆ ಮುಕ್ತ ಅವಕಾಶ ಸಿಕ್ಕಂತಾಗುತ್ತದೆ. ಇದು ಶೈಕ್ಷಣಿಕ ಅವಾಂತರಗಳಿಗೆ ಅವಕಾಶ ಮಾಡಿ ಕೊಟ್ಟಂತಾಗುತ್ತದೆ. ಈ ವಿರುದ್ಧ ಸುಪ್ರೀಂ ಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಬೇಕು. ಮಧ್ಯಂತರ ಪರಿಹಾರಕ್ಕೂ ಅರ್ಜಿ ಸಲ್ಲಿಸಬೇಕೆಂದು ತಿಳಿಸಿದ್ದಾರೆ.

ಈ ತೀರ್ಪಿನಿಂದ ಮುಕ್ತ ಮಾರುಕಟ್ಟೆ ಖಾಸಗೀಕರಣ ನೀತಿಯನ್ನು ಶಿಕ್ಷಣ ಕ್ಷೇತ್ರದಲ್ಲೂ ಎತ್ತಿ ಹಿಡಿದಂತಾಗುತ್ತದೆ. ಶೈಕ್ಷಣಿಕ ಅಸಮಾನತೆಗೆ ನೀಡಿದ ಮನ್ನಣೆಯಾಗಿದ್ದು ಸುಪ್ರೀಂಕೋರ್ಟಿನ ಆದೇಶಕ್ಕೆ ವಿರುದ್ಧವಾಗಿದೆ ಎಂದು ಹಂಪಾ ನಾಗರಾಜಯ್ಯ ತಿಳಿಸಿದ್ದಾರೆ.

೧೯೯೪ರಲ್ಲಿ ಸುಪ್ರೀಂಕೋರ್ಟ್ ತೀರ್ಪಿನ ಆಧಾರದ ಮೇಲೆ ರಾಜ್ಯ ಸರ್ಕಾರ ಜಾರಿಗೊಳಿಸಿದ್ದ ಭಾಷಾ ನೀತಿಯನ್ನು ಹೈಕೋರ್ಟ್ ಅನೂರ್ಜಿತಗೊಳಿಸಿರುವುದು ಕಾನೂನು ಬಿಕ್ಕಟ್ಟಿಗೆ ಆಸ್ಪದ ಕೊಟ್ಟಿದೆ. ಸಮಾನ ಶಿಕ್ಷಣ ನೀತಿಗೂ ವಿರುದ್ಧವಾಗಿದೆ. ಕನ್ನಡಪರ ಸಂಘಟನೆಗಳ ಹೋರಾಟಕ್ಕೂ ಹಿನ್ನೆಡೆಯಾಗಿದೆ ಎಂದು ಕ.ಸಾ.ಪ. ಮಾಜಿ ಅಧ್ಯಕ್ಷ ಚಂಪಾ ತಿಳಿಸಿದ್ದಾರೆ.

**ಭಾಷಾ ಮಾಧ್ಯಮದ ಹೇರಿಕೆ : ಸಂವಿಧಾನ ಬಾಹಿರ ಹೈಕೋರ್ಟ್, ಪ್ರಜಾವಾಣಿ ೩.೭.೦೮**

ಭಾಷಾ ನೀತಿ ಸಂಬಂಧ ಹೈಕೋರ್ಟ್ ನೀಡಿರುವ ತೀರ್ಪು ಸ್ವಾಗತಾರ್ಹ. ತಮ್ಮ ಮಗು ಯಾವ ಭಾಷೆಯಲ್ಲಿ ಕಲಿಯಬೇಕು ಎಂದು ನಿರ್ಧರಿಸುವ ಹಕ್ಕು ಪ್ರತಿಯೊಬ್ಬ ತಂದೆ ತಾಯಿಗೂ ಇದೆ ಎಂದು ಜಿ.ಎಸ್. ಶರ್ಮಾ ತಿಳಿಸಿದ್ದಾರೆ.

ಹೈಕೋರ್ಟ್ ನೀಡಿರುವ ತೀರ್ಪು ೧೯೯೪ಕ್ಕೂ ಮುನ್ನ ಇದ್ದ ೧,೧೦೦ ಅನುದಾನರಹಿತ ಶಾಲೆಗಳಿಗೆ ಅನ್ವಯವಾಗುತ್ತದೆ. ೧೯೯೪ರ ಭಾಷಾ ನೀತಿ ಕಾಯ್ದೆಯನ್ವಯ ರಚನೆಯ ನಂತರ ಪ್ರಾರಂಭಿಸಿದ ಅನುದಾನರಹಿತ ಶಾಲೆಗಳು ಘೋಷಣೆ ಪರವಾಗಿ ಸರ್ಕಾರಕ್ಕೆ ಮನವಿ ಸಲ್ಲಿಸಿವೆ. ಅದರ ಪ್ರಕಾರ ಇಂಗ್ಲೀಶ್ ಮಾಧ್ಯಮದಲ್ಲಿ ಶಾಲೆಯನ್ನು ಆರಂಭಿಸಲು ಅನುಮತಿಯನ್ನು ಕೋರಲು ಅವಕಾಶವಿದೆ ಎಂದು ಕೆ.ಎ.ಎಂಎಸ್. ಕಾರ್ಯದರ್ಶಿ ಕೃಷ್ಣಯ್ಯಾರ್ ಹೇಳಿದ್ದಾರೆ.

**ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಅನ್ಯಾಯ, ಪ್ರಜಾವಾಣಿ ೦೪.೦೭.೨೦೦೮**

ಮಾತೃಭಾಷಾ ಶಿಕ್ಷಣ ಮಾಧ್ಯಮದ ವಿರುದ್ಧವಾಗಿ ಹೈಕೋರ್ಟ್ ನೀಡಿರುವ ತೀರ್ಪು ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಘೋರ ಅನ್ಯಾಯವಾಗಿದೆ ಎಂದು ವಿವಿಧ ಚಿಂತಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ತೀರ್ಪಿನಿಂದ ಮುಕ್ತ ಮಾರುಕಟ್ಟೆಯ ಖಾಸಗೀಕರಣ ನೀತಿಯನ್ನು ಶಿಕ್ಷಣದಲ್ಲೂ ಎತ್ತಿ ಹಿಡಿದಂತಾಗಿದೆ. ಇದರಿಂದ ಶೈಕ್ಷಣಿಕ ಅಸಮಾನತೆಗೆ ಮನ್ನಣೆ ನೀಡಿದಂತಾಗಿದೆ ಎಂದು ಬರಗೂರು ರಾಮಚಂದ್ರಪ್ಪ ಹೇಳಿದ್ದಾರೆ.

ಹೈಕೋರ್ಟ್‌ನ ತೀರ್ಪು ಕನ್ನಡಿಗರ ಮೇಲೆ ಬರೆ ಎಳೆದಂತಾಗಿದೆ. ನ್ಯಾಯಾಲಯಗಳು ಆಯಾ ರಾಜ್ಯದ ಪ್ರಾದೇಶಿಕ ಭಾಷೆಗಳಿಗೆ ಸ್ಪಂದಿಸುವ ಅಗತ್ಯ ಈಗ ಹೆಚ್ಚಾಗಿದೆ ಎಂದು ಹಂಪ ನಾಗರಾಜಯ್ಯ ಹೇಳಿದ್ದಾರೆ.

ಭಾಷಾನೀತಿಯ ವಿರುದ್ಧವಾಗಿ ಗಾಯದ ಮೇಲೆ ಉಪ್ಪು ಸವರಿದಂತಾಗಿದೆ. ಜಾಗತೀಕರಣ ಹಾಗೂ ಅನ್ಯ ಭಾಷಿಕರ ಹಾವಳಿಯಿಂದಾಗಿ ಕನ್ನಡಿಗರಿಗೆ ಅನ್ಯಾಯವಾಗುತ್ತಿದ್ದ ಸಂದರ್ಭಲ್ಲಿ ಖಾಸಗಿ ಶಾಲೆಗಳ ಲಾಭಕೋರತನ, ಶಿಕ್ಷಣದ ವ್ಯಾಪಾರೀಕರಣ ಮತ್ತು ಕನ್ನಡ ದ್ರೋಹಕ್ಕೆ ಈ ತೀರ್ಪು ಇನ್ನಷ್ಟು ಪುಷ್ಟಿ ನೀಡಿದಂತಾಗಿದೆ ಎಂದು ಕನ್ನಡ ನಾಡು ನುಡಿ ಸಮಿತಿಯ ಜಿ. ಅಶ್ವತ್ಥನಾರಾಯಣ ನುಡಿದಿದ್ದಾರೆ.

ಹೈಕೋರ್ಟ್‌ನ ತೀರ್ಪು ಕನ್ನಡಕ್ಕೆ ಬರೆದ ಮರಣ ಶಾಸನವಾಗಿದೆ. ಇವರಿಂದ ಇಂಗ್ಲೀಶ್ ಪ್ರಾಬಲ್ಯ ಹೆಚ್ಚಲು ಸಹಾಯಕವಾಗಿದೆ. ಇದರ ವಿರುದ್ಧ ಸುಪ್ರೀಂ ಕೋರ್ಟಿಗೆ ಮನವಿ ಸಲ್ಲಿಸಬೇಕು ಎಂದು ದಂಡು ಪ್ರದೇಶದ ಕನ್ನಡ ಸಂಘಟನೆಗಳ ಒಕ್ಕೂಟದ ಅಧ್ಯಕ್ಷ ಕೆ.ಸಿ. ಜಗನ್ನಾಥರೆಡ್ಡಿ ಹೇಳಿದ್ದಾರೆ.

**ಭಾಷಾ ಮಾಧ್ಯಮ ಸುಗ್ರೀವಾಜ್ಞೆ ಹೊರಡಿಸಲು ರಾಜ್ಯ ಚಿಂತನೆ, ಕನ್ನಡ ಪ್ರಭ ೦೭.೦೭.೨೦೦೮**

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಮುಖ್ಯಮಂತ್ರಿ ಚಂದ್ರು ಭಾಷಾ ಮಾಧ್ಯಮ ಕುರಿತ ಹೈಕೋರ್ಟ್ ತೀರ್ಪಿನ ವಿರುದ್ಧ ಸುಗ್ರೀವಾಜ್ಞೆ ಹೊರಡಿಸಿ ಕನ್ನಡಿಗರಿಗೆ ನ್ಯಾಯ ದೊರಕಿಸುವ ಬಗ್ಗೆ ಚಿಂತಿಸಲಾಗುತ್ತಿದೆ. ಕನ್ನಡ ಭಾಷಾ ಕಲಿಕೆ ಅತಿ ಮುಖ್ಯವಾದ್ದರಿಂದ

ಕನ್ನಡಕ್ಕೆ ಯಾವ ಅನ್ಯಾಯವಾಗಲು ಪ್ರಾಧಿಕಾರ ಬಿಡುವುದಿಲ್ಲ. ಕನ್ನಡ ಮಾಧ್ಯಮ ಹೆಸರಿನಲ್ಲಿ ಇಂಗ್ಲೀಶ್ ಬೋಧನೆ ನಡೆಸುವ ಶಾಲೆಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಿದ್ದು ಇದರಿಂದ ವಿದ್ಯಾರ್ಥಿಗಳು ಅಂತಂತ್ರರಾಗದಂತೆ ಬದಲಿ ವ್ಯವಸ್ಥೆ ಕಲ್ಪಿಸಲಾಗುವುದೆಂದು ಹೇಳಿದ್ದಾರೆ.

**ಇಂಗ್ಲೀಶ್ ವ್ಯಾಮೋಹ, ಕನ್ನಡ ಪ್ರಭ ೦೭.೦೭.೨೦೦೮**

ಮಕ್ಕಳ ಮತ್ತು ಹೆತ್ತವರ ಇಂಗ್ಲೀಶ್ ವ್ಯಾಮೋಹದಿಂದಾಗಿ ಗ್ರಾಮೀಣ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಇಳಿಮುಖವಾಗುತ್ತಿದೆ. ಸರ್ಕಾರ ಇಂಗ್ಲೀಶ್ ಮಾಧ್ಯಮ ಶಾಲೆಗಳಿಗೆ ಕಡಿವಾಣ ಹಾಕಬೇಕು. ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶ್ ಕಲಿಸುವ ವ್ಯವಸ್ಥೆ ಆದಾಗ ಗ್ರಾಮೀಣ ಪ್ರದೇಶದ ಮಕ್ಕಳು ಈ ಕಾಲಕ್ಕೆ ಅಗತ್ಯವಾಗಿರುವ ಇಂಗ್ಲೀಶ್ ಭಾಷೆ ಕಲಿಯುವಂತಾಗುತ್ತದೆ. ಕನ್ನಡ ಮಾಧ್ಯಮ ಶಾಲೆಗಳು ಉಳಿಯುತ್ತವೆ.

**ಭಾಷಾ ಮಾಧ್ಯಮ ಸಲಹೆ, ಪ್ರಜಾವಾಣಿ ೦೮.೦೭.೨೦೦೮**

ಶಿಕ್ಷಣದಲ್ಲಿ ಕನ್ನಡವನ್ನು ಭಾಷಾ ಮಾಧ್ಯಮವನ್ನಾಗಿ ಜಾರಿಗೆ ತರಬೇಕೆಂದು ಸಾಹಿತಿಗಳು, ಕನ್ನಡಪರ ಚಿಂತನೆಗಳು, ಸಂಘಟನೆಗಳು ರಾಜ್ಯಸರ್ಕಾರದ ಮೇಲೆ ಒತ್ತಡ ಹಾಕಲು ಸುಪ್ರೀಂ ಕೋರ್ಟ್‌ನಲ್ಲಿ ನ್ಯಾಯ ಸಿಗುವವರೆಗೂ ಹೋರಾಟ ನಡೆಸುವುದಾಗಿ ತಿಳಿಸಿದರು.

**ಭಾಷಾ ಮಾಧ್ಯಮ ತೀರ್ಪು ಸರಿ, ಪ್ರಜಾವಾಣಿ ೧೪.೦೭.೨೦೦೮**

ಕನ್ನಡ ಮಾಧ್ಯಮದ ಕಲಿಕೆಯೆ ಮುಂದುವರೆಯ ಬೇಕೆನ್ನುವ ಆಶಯದಲ್ಲಿ ಕೆ.ಟಿ.ತಮ್ಮಾರೆಡ್ಡಿ ಈ ರೀತಿಯಾಗಿ ವಿವರಿಸಿದ್ದಾರೆ. ಭಾಷಾ ಮಾಧ್ಯಮ ಸಂಬಂಧ ಪೋಷಕರು ಹಾಗೂ ವಿದ್ಯಾರ್ಥಿಗಳಿಗೆ ಆಯ್ಕೆಯನ್ನು ನೀಡಬೇಕು. ಇದು ಪ್ರಜಾಪ್ರಭುತ್ವದ ಆಶಯವು ಹೌದು. ಈ ನಿಟ್ಟಿನಲ್ಲಿ ಕನ್ನಡವನ್ನು ಮೊದಲ ಭಾಷೆಯಾಗಿ ಕಲಿಸಲು ಯಾವ ಅಭ್ಯಂತರವಿಲ್ಲ. ಆದರೆ ಕನ್ನಡ ಭಾಷಾ ಕಲಿಕೆ ೧೯೫೦ರ ದಶಕದ ಪಠ್ಯಕ್ರಮದಂತಿರಬೇಕು. ಆಗ ಕನ್ನಡದ ನೈಜ ಬೆಳವಣಿಗೆ ತಂತಾನೆ ಆಗುತ್ತದೆ. ಭಾಷಾ ಮಾಧ್ಯಮದ ಹೊರತಾಗಿಯೂ ಭಾಷೆ ಬೆಳೆಯಬಹುದು ಎನ್ನುವುದು ಇವರ ಅಭಿಪ್ರಾಯವಾಗಿದೆ.

**ಕನ್ನಡ ಮಾಧ್ಯಮ : ಸುಪ್ರೀಂಗೆ ರಾಜ್ಯ ಮೇಲ್ಮನವಿ, ಕನ್ನಡ ಪ್ರಭ ೨೪.೭.೦೮**

ರಾಜ್ಯ ಹೈಕೋರ್ಟ್‌ನ ತೀರ್ಪನ್ನು ಪ್ರಶ್ನಿಸಿ ರಾಜ್ಯ ಸರ್ಕಾರ ಬುಧವಾರ ಸರ್ವೋಚ್ಛ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿತು. ಉಚ್ಛ ನ್ಯಾಯಾಲಯದ ತೀರ್ಪಿಗೆ ತಕ್ಷಣದ ಪರಿಹಾರವಾಗಿ ತಡೆಯಾಜ್ಞೆ ನೀಡಬೇಕು, ಅನುದಾನರಹಿತ ಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಕಡ್ಡಾಯಗೊಳಿಸಬೇಕು ಎಂಬುದು ಅದರ ಸಾರಾಂಶ.

ಭಾಷಾ ಮಾಧ್ಯಮ ನೀತಿಯನ್ನು ಜಾರಿಗೊಳಿಸುವ ಅಧಿಕಾರ ಸರ್ಕಾರಕ್ಕೆ ಇದೆ, ಆದರೆ ಸಾರ್ವಜನಿಕ ಮೂಲಭೂತ ಹಕ್ಕುಗಳಿಗೆ ಚ್ಯುತಿ ತರುವಂತಿರಬಾರದು. ಹೈಕೋರ್ಟ್‌ನ ಈ ತೀರ್ಪು ಕನ್ನಡಕ್ಕೆ ಮರಣ ದಂಡನೆ, ಸರ್ಕಾರದ ಭಾಷಾ ನೀತಿಗೆ ಆದ ದೊಡ್ಡ

ಸೋಲು, ಸಾಮಾಜಿಕ ಅಸಮಾನತೆಗೆ ಎಡೆ ಮಾಡಿಕೊಡುವ ದುರದೃಷ್ಟಕರ ತೀರ್ಪು ಎಂದು ಬಣ್ಣಿಸಲಾಗಿದೆ.

**ಪ್ರಾಥಮಿಕ ಶಿಕ್ಷಣ: ಕನ್ನಡ ಮಾಧ್ಯಮದಲ್ಲಿಯೇ ಬೋಧನೆ, ಪ್ರಜಾವಾಣಿ ೧೦.೦೧.೨೦೦೯**

ಬರುವ ಶೈಕ್ಷಣಿಕ ಸಾಲಿನಿಂದ ಕನ್ನಡದಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡುವ ವ್ಯವಸ್ಥೆ ಮಾಡುತ್ತೇವೆ ಎಂದು ಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ಅವರು ತಿಳಿಸಿದ್ದಾರೆ. ಇಂಗ್ಲೀಶನ್ನು ಭಾಷೆಯನ್ನಾಗಿ ಕಲಿಸುವುದಕ್ಕೆ ಅಭ್ಯಂತರವಿಲ್ಲ. ಆದರೆ ಮಾತೃಭಾಷೆ ನಮ್ಮ ಸಂಸ್ಕೃತಿ ಮತ್ತು ವ್ಯಕ್ತಿತ್ವ ನಿರ್ಮಾಣದಲ್ಲಿ ಬಹು ದೊಡ್ಡ ಪಾತ್ರವಹಿಸುತ್ತದೆ. ಈ ಬಗ್ಗೆ ಸಮಾಜದಲ್ಲಿ ಅರಿವು ಮೂಡಿಸಬೇಕಿದೆ.

**ಶಿಕ್ಷಣ ಒಂದಿಷ್ಟು ಚಿಂತನೆ : ಶಂ.ಗು. ಬಿರಾದಾರ, ಪ್ರಜಾವಾಣಿ**

ಒಂದನೇ ತರಗತಿಯಿಂದಲೇ ಇಂಗ್ಲೀಶ್ ಶಿಕ್ಷಣ ಕಡ್ಡಾಯ ಮಾಡಿರುವುದು ಇದು ಕನ್ನಡಕ್ಕೆ ಕೊಡಲಿಯೇಟು ನೀಡುವ ಧೋರಣೆಯಾಗಿದೆ. ಇಂತಹ ಧೋರಣೆಯನ್ನು ಕುವೆಂಪು ಅಂತಹ ಮಹಾಕವಿಗಳು ಎಂದೋ ತ್ರಿಭಾಷಾ ತ್ರಿಶೂಲವೇ ಸರಿ ಎಂದು ಟೀಕಿಸಿದ್ದು, ಒಂದನೇ ತರಗತಿಯಿಂದ ಕಲಿಸುವುದು ಬೇಡ ಎಂದು ಬಿರದಾರ ಹೇಳಿದ್ದಾರೆ. ಇಂದು ಅದು ವಾಸ್ತವವಾಗಿ ಕನ್ನಡ ಮಕ್ಕಳ ಎದೆಗೆ ತ್ರಿಶೂಲ ಸದೃಶ್ಯವೇ ಆಗಿದೆ.

**ಮಾತೃಭಾಷೆ ಮತ್ತು ಶಿಕ್ಷಣ, ಡಾ. ಸರಸ್ವತಿ ವಿಜಯಕುಮಾರ್, ಪ್ರಜಾವಾಣಿ**

ಮಾತೃಭಾಷೆ ಮತ್ತು ಶಿಕ್ಷಣ ಪೂರಕ ಅಂಶಗಳು. ಮಗುವಿನ ಮಾನಸಿಕ ವಿಕಾಸ ತಾಯ್ನುಡಿಯ ಪರಿಸರದಿಂದಲೇ ಉಂಟಾಗುತ್ತದೆ. ತನ್ನ ಪರಿಸರದ ಮೂಲಕವೇ ಹಲವಾರು ವಿಷಯಗಳನ್ನು ಕಲಿಯುತ್ತದೆ. ಕಾಲಕ್ರಮೇಣ ರಾಷ್ಟ್ರದ ಅಗತ್ಯಕ್ಕೆ ತಕ್ಕಂತೆ ದ್ವಿಭಾಷೆ ಬಹುಭಾಷೆ ಗಳನ್ನು ಕಲಿಯಲಿ. ಆದರೆ ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಾದರೆ ಹೆಚ್ಚು ಆತ್ಮವಿಶ್ವಾಸದಿಂದ ಮುನ್ನಡೆಯುತ್ತದೆ. ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತು ರೂಪಿಸಿರುವ ವ್ಯಾಸಂಗ ಕ್ರಮದ ಚೌಕಟ್ಟು ೨೦೦೫ ನಮ್ಮ ಸಂವಿಧಾನದ ೩೫೦ಎ ಆರ್ಟಿಕಲ್, ಶಾಲೆಗಳಲ್ಲಿ ಮಾತೃಭಾಷೆಯು ಶಿಕ್ಷಣ ಮಾಧ್ಯಮವಾಗಬೇಕೆಂದು ತನ್ನ ಖಚಿತ ಅಭಿಪ್ರಾಯವನ್ನು ಮಂಡಿಸುತ್ತದೆ ಎಂದು ತಿಳಿಸಿದ್ದಾರೆ. ಅಂದರೆ ಮಾತೃಭಾಷಾ ಶಿಕ್ಷಣ ಅಗತ್ಯ ಎಂದಿದ್ದಾರೆ.

**ಕಲಿಕೆಯ ಮಾಧ್ಯಮ ಯಾವುದಿರಬೇಕು? ಡಾ. ಜಿ.ಎಂ. ಗಣೇಶ್, ಪ್ರಜಾವಾಣಿ**

ಶಿಕ್ಷಣ ಮಾಧ್ಯಮ ಕುರಿತಂತೆ ಸುಪ್ರೀಂ ಕೋರ್ಟ್ ೧೯೯೩ ಡಿಸೆಂಬರ್ ೩ರಂದು ಮಹತ್ವದ ತೀರ್ಪನ್ನು ನೀಡಿದೆ. ಆಂಗ್ಲೋ ಇಂಡಿಯನ್ನರನ್ನು ಹೊರತುಪಡಿಸಿದಂತೆ ಇಂಗ್ಲೀಶ್

ಯಾರ ಮಾತೃಭಾಷೆಯೂ ಅಲ್ಲ ಎಂದು ನ್ಯಾಯಾಲಯ ಸ್ಪಷ್ಟಪಡಿಸಿದೆ. ಕರ್ನಾಟಕ ಸರ್ಕಾರ ೨೯.೪.೧೯೯೪ರಂದು ಒಂದರಿಂದ ನಾಲ್ಕನೇ ತರಗತಿವರೆಗೆ ಕನ್ನಡ ಮಾತೃಭಾಷಾ ಮಾಧ್ಯಮ ಕಡ್ಡಾಯವಾಗಿರಬೇಕು. ಐದನೇ ತರಗತಿಯಿಂದ ವಿದ್ಯಾರ್ಥಿಗಳು ತಮಗೆ ಬೇಕಾದ ಮಾಧ್ಯಮಗಳನ್ನು ಆಯ್ಕೆ ಮಾಡಿಕೊಳ್ಳಬಹುದು ಎಂದು ಆದೇಶ ಹೊರಡಿಸಿದೆ. ಆದರೆ ಹೈಕೋರ್ಟ್ ೨.೭.೨೦೦೮ ರಂದು ಇದಕ್ಕೆ ವ್ಯತಿರಿಕ್ತ ತೀರ್ಪನ್ನು ನೀಡಿ ಗೊಂದಲ ಸೃಷ್ಟಿಸಿದೆ. ಸರ್ಕಾರದ ಆಜ್ಞೆಗಳು ಕಾಗದದ ಹುಲಿಗಳೇ ವಿನಃ ನಿಜವಾದ ಹುಲಿಗಳಲ್ಲ ಎಂಬುದು ಜನರಿಗೆ ತಿಳಿದಿದೆ. ಇಂಗ್ಲೀಶ್ ಭಾಷೆಯನ್ನು ಕಲಿಯುವಲ್ಲಿ ಮಕ್ಕಳು ವ್ಯಯಿಸುವ ಶ್ರಮ ಮತ್ತು ಸಮಯವನ್ನು ಉಳಿದ ವಿಷಯಗಳನ್ನು ತಮ್ಮ ಮಾತೃ ಭಾಷೆಯಲ್ಲಿ ಕಲಿಯಲು ವಿನಿಯೋಗಿಸಿದರೆ ಮತ್ತಷ್ಟು ಪ್ರಭಾವಶಾಲಿಗಳಾಗುತ್ತಾರೆ. ಮಕ್ಕಳ ಭವಿಷ್ಯ ಮತ್ತು ಭಾಷಾ ಹಿತದೃಷ್ಟಿಯಿಂದ ಆಲೋಚಿಸಿದಾಗ ಮಾತೃಭಾಷಾ ಶಿಕ್ಷಣದ ಮಹತ್ವದ ಅರಿವಾಗುತ್ತದೆ.

**ಕನ್ನಡ ಇಂಗ್ಲೀಶ್ : ವಿಚಾರ ಕ್ರಾಂತಿಗೆ ಆಹ್ವಾನ, ಡಾ. ಎಂ. ರವೀಂದ್ರ**

ಮಾತೃಭಾಷಾ ಮಾಧ್ಯಮದಿಂದ ಕನ್ನಡ ಮಕ್ಕಳ ಶಿಕ್ಷಣ ಸುಲಭವಾಗುತ್ತದೆ. ವಿದ್ಯಾರ್ಥಿಗಳ ಶ್ರಮ ಕಡಿಮೆಯಾಗುತ್ತದೆ. ಸೃಜನಶೀಲತೆ ಬೆಳೆಯಲು ಸಹಕಾರಿಯಾಗುತ್ತದೆ ಎಂದು ಕುವೆಂಪುರವರ ವಿಚಾರವನ್ನು ಇಲ್ಲಿ ಸ್ಮರಿಸಿದ್ದಾರೆ. ಇಂಗ್ಲೀಶ್ ಮೂಲಕವಾದ ಶಿಕ್ಷಣ ಕುಂಡದಲ್ಲಿ ನೆಟ್ಟ ಗಿಡದಂತೆ ಬೇರು ಕೆಳಕ್ಕಿಳಿಯುವುದಿಲ್ಲ. ಭೂಮಿಯ ಸಾರವನ್ನು ಅವು ಗ್ರಹಿಸುವುದಿಲ್ಲ. ಹಾಕಿದ ಹಿಡಿ ಗೊಬ್ಬರದಲ್ಲಿಯೇ ಜೀವಮಾನವನ್ನು ಕಳೆಯಬೇಕು. ಅತ್ತಲೂ ಅಲ್ಲದ, ಇತ್ತಲೂ ಸಲ್ಲದ ತ್ರಿಶಂಕುಗಳನ್ನು ನಮ್ಮ ಶಿಕ್ಷಣ ನಿರ್ಮಿಸಿದೆ ಎಂದು ಹಾ.ಮಾ. ನಾಯಕ ಹೇಳಿರುವ ವಿಚಾರದೊಂದಿಗೆ ಕನ್ನಡ ಮಾಧ್ಯಮದ ಅಗತ್ಯತೆಯನ್ನು ಗುರುತಿಸಿದ್ದಾರೆ. ಪರಕೀಯ ಭಾಷೆಯಲ್ಲಿ ಚಿಂತನೆ ಮಾಡುವುದು. ಬೌದ್ಧಿಕ ಶಕ್ತಿಯನ್ನು ಕುಂಠಿತಗೊಳಿಸುತ್ತದೆ. ಇಂಗ್ಲೀಶ್ ನಮಗೆ ಪ್ರಪಂಚಕ್ಕಿರುವ ಕಿಟಕಿ ಎಂಬುದರಲ್ಲಿ ಸಂದೇಹವಿಲ್ಲ. ಇಂಗ್ಲೀಶ್ ಬೇಕು, ಆದರೆ ನಮ್ಮ ಭಾಷೆಯ ಬದಲಾಗಿ ಅಲ್ಲ. ಇಂಗ್ಲೀಶನ್ನು ಭಾಷೆಯನ್ನಾಗಿ ಕಲಿಸಿ ನಮ್ಮ ಭಾಷೆಯಲ್ಲಿಯೇ ವಿಷಯಗಳನ್ನು ಕಲಿಸಬೇಕು ಎಂದು ಮಾಧ್ಯಮದ ಪ್ರಶ್ನೆ ಬಗೆಹರಿಯಲಾರದ ಸಮಸ್ಯೆಯಾಗಿದೆ ಎಂದು ಹೇಳಿದ್ದಾರೆ.



**ಇಂಗ್ಲಿಶ್ ಕಲಿಕೆ ಯಾರಿಗೆ? ಎಷ್ಟು ಅಗತ್ಯ? ಸ.ರ.ಸುದರ್ಶನ, ಪ್ರಜಾವಾಣಿ**

ಕುವೆಂಪುರವರು ಹೇಳಿರುವ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಪ್ರಾಥಮಿಕ ಹಂತದ ನಂತರ ಶಾಲೆ ಬಿಡುವವರು ಇಂಗ್ಲೀಶ್‌ನ ಅನಿವಾರ್ಯತೆಯನ್ನು ಎದುರಿಸಬೇಕಾಗಿಲ್ಲ. ಪದವಿ ತರಗತಿಯಲ್ಲಿ ಇಂಗ್ಲೀಶ್ ಬೋಧನೆ ಮತ್ತು ಸ್ವಂತವಾಗಿ ಬರವಣಿಗೆಯಲ್ಲಿ ತೊಡಗಿಸಿ ಕೊಳ್ಳುವ ಸಾಧ್ಯತೆಯಿರುತ್ತದೆ. ಅವರಿಗೆ ಚೆನ್ನಾಗಿ ಕಲಿಸಬೇಕು. ಅದನ್ನು ಮಾಡದೇ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಪ್ರಾರಂಭಿಸುವುದರಿಂದ ಈ ಅಗತ್ಯ ಈಡೇರಿತೇ? ಎಂಬುದನ್ನು ಯೋಚಿಸಬೇಕು. ಅಮೇರಿಕಾ, ಚೀನಾ, ಜಪಾನ್‌ಗಳಲ್ಲಿ ಇಂಗ್ಲೀಶ್‌ನ್ನು ಅಥವಾ

ಎರಡನೇ ಭಾಷೆಯನ್ನು ಐದು ಮತ್ತು ಆರನೇ ತರಗತಿಯಿಂದ ಆರಂಭಿಸುತ್ತಾರೆ. ಆದ್ದರಿಂದ ಆರಂಭದಲ್ಲಿ ಮಾತೃಭಾಷಾ ಶಿಕ್ಷಣ ನೀಡುವುದು ಉಚಿತ. ಅಂಬೆಗಾಲು ಇಡುವಾಗಲೇ ಇಂಗ್ಲೀಶ್ ಕಲಿಕೆ ಚಪ್ಪಡಿಯ ಭಾರವನ್ನು ಹೊರಿಸುವುದರ ಬದಲು ನಡೆಯುವಂತಾದಾಗ ಚೆನ್ನಾಗಿ ನಡೆಯುವಂತೆ ಶಕ್ತಿ ತುಂಬುವ ರೀತಿಯಲ್ಲಿ ಕಲಿಸುವುದು ಉತ್ತಮ.

ಪ್ರಾಥಮಿಕ ಹಂತದಲ್ಲಿ ಇಂಗ್ಲೀಶ್ ಶಿಕ್ಷಣ ನೀಡುವಂತೆ ಪ್ರೋತ್ಸಾಹಿಸಿ ನೀಡಿದ ಇಂಗ್ಲೀಶ್ ಪರ ವಾದಗಳನ್ನು ಈ ಕೆಳಗೆ ನೋಡಬಹುದು.

**ಒಂದನೇ ತರಗತಿ ಇಂಗ್ಲೀಶ್ ಪಠ್ಯ ಬದಲು, ಪ್ರಜಾವಾಣಿ**

ಒಂದನೇ ತರಗತಿಯ ಇಂಗ್ಲೀಶ್ ಮಕ್ಕಳಿಗೆ ಕ್ಲಿಷ್ಟವಾಗಿದೆ. ಸರಳ ಮತ್ತು ಮಕ್ಕಳ ಜ್ಞಾನ ವೃದ್ಧಿಗೆ ಪೂರಕವಾಗುವ ಅಂಶಗಳನ್ನು ಒಳಗೊಂಡ ಹೊಸ ಪಠ್ಯ ಕ್ರಮವನ್ನು ಅಳವಡಿಸಲು ಸಂಬಂಧಪಟ್ಟವರಿಗೆ ಸೂಚಿಸಲಾಗಿದೆ ಎಂದು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ತಿಳಿಸಿದ್ದಾರೆ. ಅಂದರೆ ಒಂದನೇ ತರಗತಿಯಲ್ಲಿ ಇಂಗ್ಲೀಶ್ ಕಲಿಕೆಯನ್ನು ಸ್ವೀಕರಿಸಲಾಗಿದೆಯೇ? ಅಥವಾ ಕೈಬಿಡಲಾಗಿದೆಯೇ? ಎನ್ನುವ ವಿಚಾರದಲ್ಲಿ ಗೊಂದಲವಿದೆ. ಏಕೆಂದರೆ ರಾಜ್ಯ ಸರ್ಕಾರ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಬೇಡ ಎಂದು ವಿರೋಧಿಸುವುದು ಸಾಮಾನ್ಯವಾದ ಸಂಗತಿಯಾಗಿದೆ. ಇದರಿಂದ ಇಲ್ಲಿ ಶಿಕ್ಷಣ ಸಚಿವರ ಹೇಳಿಕೆ ಗೊಂದಲಕ್ಕೆ ಸಿಲುಕಿಸಿದೆ.

**ಎಳೆಯ ವಯಸ್ಸಿನಲ್ಲಿಯೇ ಇಂಗ್ಲೀಶ್ ಕಲಿಕೆ ಅಗತ್ಯ : ಹೈಕೋರ್ಟ್**

ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಮಾತೃ ಭಾಷೆಯ ಜೊತೆಗೆ ಎಳೆಯ ವಯಸ್ಸಿನಲ್ಲಿ ಮಕ್ಕಳಿಗೆ ಇಂಗ್ಲೀಶ್ ಕಲಿಸುವುದು ಅಗತ್ಯವೆಂದು ಹೇಳಲಾಗುತ್ತಿದೆ. ೧೯೯೪-೯೫ ಮತ್ತು ೨೦೦೭-೦೮ ರಾಜ್ಯ ಸರ್ಕಾರದಿಂದ ಅಂಗೀಕೃತವಾಗಿರುವ ಶಾಲೆಗಳೆಲ್ಲ ೧ರಿಂದ ೫ನೇ ತರಗತಿಯವರೆಗೆ ಮಾತೃಭಾಷಾ ಮಾಧ್ಯಮಶಿಕ್ಷಣ ಜಾರಿಯಾಗಬೇಕೆಂಬ ಸರ್ಕಾರಿ ಆದೇಶವನ್ನು ಹೈಕೋರ್ಟ್ ರದ್ದುಪಡಿಸಿದೆ. ಇಂಗ್ಲೀಶ್ ಮಾತೃಭಾಷೆಯಾಗಿರದ ವಿದ್ಯಾರ್ಥಿಗಳಿಗೆ ಅಂಗೀಕೃತ ಇಂಗ್ಲೀಶ್ ಮಾಧ್ಯಮ ಶಾಲೆಗಳಲ್ಲಿ ೧ರಿಂದ ೫ರವರೆಗೆ ಇಂಗ್ಲೀಶ್ ಮಾಧ್ಯಮ ವ್ಯಾಸಂಗ ಮಾಡಲು ಅನುಮತಿ ನೀಡಬಹುದು. ಇಲ್ಲದಿದ್ದರೆ ಅವುಗಳನ್ನು ಮುಚ್ಚಬೇಕು ಎಂಬ ಸರ್ಕಾರದ ಆದೇಶವನ್ನು ನ್ಯಾಯಮೂರ್ತಿ ಹುಲುವಾಡಿ ಜಿ. ರಮೇಶ್ ಅನೂರ್ಜಿತ ಗೊಳಿಸಿದ್ದಾರೆ.

## 'ನಮ್ಮ ಕನ್ನಡ' ಪತ್ರಿಕೆ

ಕನ್ನಡ ಭಾಷಾಧ್ಯಯನ ವಿಭಾಗದಿಂದ ಪ್ರಕಟಣೆಗೊಳ್ಳುತ್ತಿರುವ 'ನಮ್ಮ ಕನ್ನಡ' ಮಾಸಪತ್ರಿಕೆಯಲ್ಲಿ ನಮ್ಮ ಅಧ್ಯಾಪಕರುಗಳು ಒಂದನೇ ತರಗತಿಯಿಂದ ಇಂಗ್ಲೀಶ್ ಭಾಷಾ ಕಲಿಕೆ ಕುರಿತು ಲೇಖನಗಳಲ್ಲಿ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ನಮ್ಮ ಕನ್ನಡ ೬೧ನೇ

ಸಂಚಿಕೆ ಭಾಷಾ ವಿದ್ವಾಂಸರಾದ **ಡಾ. ಕೆ.ವಿ. ನಾರಾಯಣ** ಅವರು **ಪ್ರಾಥಮಿಕ ಹಂತದಲ್ಲಿ ಇಂಗ್ಲೀಶ್ ಕಲಿಕೆ ಕುರಿತಾಗಿ** ಕರ್ನಾಟಕ ಸರಕಾರವು ಭಾಷಾ ನೀತಿಯಲ್ಲಿ ತಂದ ಬದಲಾವಣೆಗಳನ್ನು ಕುರಿತು ತಾತ್ವಿಕವಾಗಿ ವಿಶ್ಲೇಷಿಸಿದ್ದಾರೆ. ಮಕ್ಕಳಿಗೆ ಯಾವ ಯಾವ ಹಂತದಲ್ಲಿ ಭಾಷಾ ಕಲಿಕೆಯ ಅಗತ್ಯತೆ, ಪೂರೈಕೆಗಳು ಯಾವ ರೀತಿಯಲ್ಲಿರಬೇಕು ಎಂಬುದನ್ನು ಚರ್ಚಿಸಿದ್ದಾರೆ.

ಶಾಲಾ ಶಿಕ್ಷಣದ ಮೊದಲ ಹಂತದಿಂದ ಇಂಗ್ಲೀಶ್ ಭಾಷೆ ಕಲಿಕೆಯ ಒತ್ತಾಯ. ಇದು ಭಾಷಾ ಕಲಿಕೆಯ ಸಮಸ್ಯೆಯಾಗಿದ್ದು ಶೈಕ್ಷಣಿಕ ನೆಲೆಯಿಂದ ಸಾಮಾಜಿಕ ನೆಲೆಗೆ ದಾಟಿದ್ದು ಹೇಗೆ? ಎಂಬುದನ್ನು ಜಾಗತಿಕ ವಿದ್ಯಾಮಾನಗಳ ಹಿನ್ನೆಲೆಯಲ್ಲಿ ಭಾಷೆಗಳ ನಡುವಣ ಸಂಬಂಧವನ್ನು ಸಾಮಾಜಿಕ ನೆಲೆಯಲ್ಲಿ ಗುರುತಿಸಿದ್ದಾರೆ. ಕನ್ನಡವಾಗಲಿ, ಇಂಗ್ಲೀಶ್ ಆಗಲಿ ಸಾಮಾಜಿಕ ವಿನ್ಯಾಸಗಳು ಸೂಚಕಗಳಾಗಿರುತ್ತವೆಯೇ ಹೊರತು ಕಾರಣಗಳಲ್ಲ.

**ಒಂದನೇ ತರಗತಿಯಿಂದ ಇಂಗ್ಲೀಶ್ : ಒಂದು ಚಿಂತನೆ** ಎನ್ನುವ ಲೇಖನದ ಮೂಲಕ **ಡಾ. ಸಾಂಬಮೂರ್ತಿಯವರು** ಪುಸ್ತಕದಲ್ಲಿ ಇಂಗ್ಲೀಶ್ ಕಲಿಕೆಯ ಅಗತ್ಯತೆ/ಅನಿವಾರ್ಯತೆ ಎಲ್ಲಿ ಉಂಟಾಗುತ್ತದೆ ಎನ್ನುವುದನ್ನು ಈ ಸ್ಪರ್ಧಾತ್ಮಕ ಯುಗದಲ್ಲಿ ಎಲ್ಲದರಲ್ಲೂ ಮುಂದಿದ್ದವನು ಮಾತ್ರ ಗೆಲ್ಲಬಲ್ಲ ಪದವಿ ವಿದ್ಯಾರ್ಹತೆಯೇ ಉದ್ಯೋಗಕ್ಕೆ ರಹದಾರಿಯಲ್ಲ. ವ್ಯಕ್ತಿತ್ವ, ಸಾಮರ್ಥ್ಯ ಪ್ರದರ್ಶನ ಬಹುಮುಖ್ಯ. ಅದಕ್ಕಾಗಿ ಇಂಗ್ಲೀಶ್ ಬೇಕೆ ಬೇಕು ಎನ್ನುವ ದಿಸೆಯಲ್ಲಿ ಸಮಾಜ ನಿಂತಿದೆ. ಇನ್ನು ಇಂಗ್ಲೀಶ್ ಕಲಿಕೆಗೆ ಸೂಕ್ತ ವಾತಾವರಣವೇ ಪರಿಣಾಮಕಾರಿಯಾಗದು, ಅದು ಬಿಟ್ಟು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸಬೇಕೆನ್ನುವ ತರ್ಕಕ್ಕೆ ಎಂತಹ ಇಂಗ್ಲೀಶ್ ಕಲಿಸಬೇಕಾಗಿದೆ. ಎಂಬುದನ್ನು ಈಗಾಗಲೇ ಐದನೇ ತರಗತಿಯಿಂದ ಕಲಿಯುತ್ತಿರುವ ಮಕ್ಕಳು ಪಠ್ಯ ಯಾವ ರೀತಿಯದ್ದು ಅಂದರೆ ಭಾಷೆ ಕಲಿಯದಿದ್ದರೂ ಮುಂದಿನ ತರಗತಿಗೆ ತೇರ್ಗಡೆಯಾಗುವ ಮೌಲ್ಯಮಾಪನ ಪದ್ಧತಿ ಇದೆ. ಈ ರೀತಿಯ ಬೋಧನೆಯು ಅನೌಪಚಾರಿಕವಾಗಿ ವ್ಯವಹಾರಕ್ಕೆ ಬೇಕಾಗುವಂತಹ ಬಳಕೆಯ ಇಂಗ್ಲೀಶ್ ಕಲಿಸುವ ವ್ಯವಸ್ಥೆ ಬೇಕು. ಇಂತಹ ಇಂಗ್ಲೀಶ್‌ನ್ನು ಕಲಿಸುವುದಾದರೆ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆಯನ್ನು ಸ್ವಾಗತಿಸಬಹುದು. ಅದರ ಜೊತೆಗೆ ಇಂಗ್ಲೀಶ್‌ನ್ನು ನಾಲ್ಕನೇ ತರಗತಿಯವರೆಗೆ ಅನೌಪಚಾರಿಕವಾಗಿ (ಓದು, ಬರಹ) ಕಲಿಸಬಹುದು ಎಂದಿದ್ದಾರೆ.

**ಡಾ. ಪಿ. ಮಹಾದೇವಯ್ಯ** ಅವರು **ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲೀಶ್ ಕಲಿಕೆ** ಕುರಿತು ಈ ರೀತಿ ಹೇಳಿದ್ದಾರೆ. ವಾಸ್ತವವಾಗಿ ಕರ್ನಾಟಕದಲ್ಲಿ ಕನ್ನಡ ಮಾಧ್ಯಮದಲ್ಲೇ ಪ್ರಾಥಮಿಕ ಶಿಕ್ಷಣ ಎನ್ನುವುದೇ ನಗೆಪಾಟಲಿನ ವಿಷಯ. ನಾವು ಹೋರಾಟ ಮಾಡಬೇಕಾಗಿರುವುದರಿಂದ ಕನ್ನಡೇತರರಿಗೆ ಕನ್ನಡ ಕಲಿಕೆ ಕಡ್ಡಾಯಗೊಳಿಸುವುದರ ಕಡೆಗೆ ಶಿಕ್ಷಣ ನೀತಿಯಲ್ಲಿ ಇಡೀ ರಾಜ್ಯದಲ್ಲಿ ಕನ್ನಡ ಮತ್ತು ಆಂಗ್ಲ ಮಾಧ್ಯಮಗಳ ನಡುವಿನ ತಾರತಮ್ಯ ದೂರವಾಗುತ್ತದೆ. ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲೀಶ್ ಭಾಷೆ ಕಲಿಕೆ ನಮಗೆ ಅತಿ ಅವಶ್ಯಕ. ಆದರೆ ಇಂಗ್ಲೀಶ್

ಮಾಧ್ಯಮದ ಬೋಧನೆಗೆ ನಮ್ಮ ತೀವ್ರ ವಿರೋಧವಿದೆ. ಪ್ರಾಥಮಿಕ ತರಗತಿಯಲ್ಲಿನ ಮಕ್ಕಳ ಕಿವಿಯ ಮೇಲೆ ಬೀಳುವಷ್ಟು ಇಂಗ್ಲೀಶ್‌ನ್ನು ಬೋಧಿಸಬೇಕು. ಇದರಿಂದ ಬಡವ ಮತ್ತು ಶ್ರೀಮಂತರ ಮಕ್ಕಳಿಗೆ ಸಮಾನ ಭಾಷೆ ಮತ್ತು ಮಾಧ್ಯಮ ಎರಡರ ನೆಲೆಯಲ್ಲೂ ಶಿಕ್ಷಣ ಸಿಕ್ಕಿದಂತಾಗುತ್ತದೆ. ಮನೆ ಮತ್ತು ಸಾರ್ವಜನಿಕ ಆವರಣದ ಬಳಕೆ ಭಾಷೆಯಾದ ಕನ್ನಡ ಜೊತೆಗೆ ಶಾಲೆ ಆವರಣದ ಭಾಷೆಯಾಗಿ ಜಾಗತಿಕ, ಮಾಧ್ಯಮವಾಗಿರುವ ಇಂಗ್ಲೀಶ್ ಭಾಷೆಯ ಕಲಿಕೆ ಅಗತ್ಯ ಎಂದು ತಿಳಿಸಿದ್ದಾರೆ.

**ಡಾ. ಅಶೋಕಕುಮಾರ ರಂಜೇರೆ** ಅವರು ತಿಳಿಸುವಂತೆ **ಪ್ರಾಥಮಿಕ ಶಿಕ್ಷಣದ ಇಂಗ್ಲೀಶ್ ಕಲಿಕೆ** ಕುರಿತು ಚರ್ಚೆ ಮುಖ್ಯವಾಗಿ ಯಾರಲ್ಲಿ ಕಂಡು ಬರುತ್ತದೆ ಅದರ ಹಿನ್ನೆಲೆಯ ಉದ್ದೇಶವೇನು? ಈಗ ಇದ್ದಂತಹ ಭಾಷಾ ನೀತಿಯಿಂದ ಶಿಕ್ಷಣದಲ್ಲಿ ಆದ ಪರಿಣಾಮಗಳೇನು ಎಂಬುದನ್ನು ಕುರಿತು ಇಲ್ಲಿ ಚರ್ಚಿಸಿದ್ದಾರೆ. ಇಂಗ್ಲೀಶ್ ಭಾಷೆಯ ಕಲಿಕೆ ಐದನೇ ತರಗತಿಯಿಂದ ಅಳವಡಿಸಿದ್ದಾಗಲು ಮಕ್ಕಳಿಗೆ ಸರಿಯಾದ ಇಂಗ್ಲೀಶ್ ಶಿಕ್ಷಣ ನೀಡಲು ಸಾಧ್ಯವಾಗಿಲ್ಲದಿರುವುದು ಕಲಿಕೆಯಲ್ಲಿಯೇ ಸಮಸ್ಯೆಗಳಿವೆ ಎಂಬುದು ವ್ಯಕ್ತವಾಗುವುದಿಲ್ಲವೇ ಎಂದು ಚರ್ಚಿಸಿದ್ದಾರೆ. ಭಾಷಾ ವಿಜ್ಞಾನಿಗಳ ಪ್ರಕಾರ ಒಂದು ಮಗು ಭಾಷೆಯನ್ನು ಕಲಿಯಲು ಹೆಚ್ಚು ಸಮಯ ಬೇಕಾಗಿಲ್ಲ. ಆ ಭಾಷಿಕ ಪರಿಸರವಿದ್ದಾಗ ಕೆಲವು ತಿಂಗಳಲ್ಲಿ ಭಾಷೆ ಕಲಿಯುವ ಸಾಧ್ಯತೆ ಇದೆ. ಇದುವರೆಗು ಇದ್ದ ಇಂಗ್ಲೀಶ್ ಶಿಕ್ಷಣ ಕಲಿಸುವ ಪದ್ಧತಿ ಬದಲಾಗಬೇಕು. ಇಲ್ಲದೆ ಹೋದರೆ ಒಂದನೇ ತರಗತಿಯಿಂದ ಇಂಗ್ಲೀಶ್ ಶಿಕ್ಷಣದ ಕುರಿತು ಚರ್ಚೆ ಅಪ್ರಸ್ತುತ ಎಂದು ಹೇಳಿದ್ದಾರೆ.

**ಡಾ. ಡಿ. ಪಾಂಡುರಂಗಬಾಬು** ಅವರು **ಪ್ರಾಥಮಿಕ ಶಿಕ್ಷಣ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ** ಕುರಿತಾಗಿ ಉಂಟಾಗಿರುವ ಚರ್ಚೆಯ ಹಿನ್ನೆಲೆಯನ್ನು ಕುರಿತು ಇಲ್ಲಿ ಚರ್ಚಿಸಿದ್ದಾರೆ. ಈ ಚರ್ಚೆಯಲ್ಲಿ ಪರ–ವಿರೋಧಗಳು ಕಂಡು ಬಂದರೂ ವಾಸ್ತವವಾಗಿ ಪರಸ್ಪರ ಕಾಳಜಿಗಳನ್ನು ವಿರೋಧಿಸುತ್ತಿಲ್ಲ. ಈ ಸಮಸ್ಯೆಯ ಸೂಕ್ಷ್ಮ ಗ್ರಹಿಕೆಯನ್ನು ಇಲ್ಲಿ ಅರ್ಥೈಸಿಕೊಳ್ಳಬೇಕಾಗಿದೆ ಎಂದಿದ್ದಾರೆ. ಇಂತಹ ಕಲಿಕೆಯ ವಿಷಯದಲ್ಲಿ ಶಿಕ್ಷಣಕ್ಕೂ ಮತ್ತು ಉದ್ಯೋಗಕ್ಕೂ ಆ ಮೂಲಕ ಗಳಿಕೆಯಾಗುವ ಸಾಮಾಜಿಕ ಸ್ಥಾನಮಾನಕ್ಕೂ ನಿಕಟ ಸಂಬಂಧವಿದೆ. ಕನ್ನಡ ಭಾಷೆಯ ಸ್ಥಾನಮಾನ ಕುಸಿಯುತ್ತದೆ. ಇದಕ್ಕೂ, ಇಂಗ್ಲೀಶ್ ಭಾಷೆಯನ್ನು ಆರೋಪಿಯ ಸ್ಥಾನದಲ್ಲಿರಿಸುವುದು ಒಳಿತಲ್ಲ. ಭಾಷೆಯ ಕುಸಿತಕ್ಕೆ ಸಾಮಾಜಿಕ ಸಾಮರ್ಥ್ಯದ ಪ್ರಮಾಣ ಮುಖ್ಯವಾಗುತ್ತದೆ. ಸಾಮಾಜಿಕ ಸಂಬಂಧದಲ್ಲಿನ ಬದಲಾವಣೆಯ ಪಲ್ಲಟಗಳು ಭಾಷಿಕ ಸಾಮರ್ಥ್ಯದ ಕುಸಿತಕ್ಕೆ ಕಾರಣ. ಆರ್ಥಿಕ ಲಾಭ ಮತ್ತು ಔದ್ಯೋಗಿಕ ಹಿನ್ನೆಲೆಯಲ್ಲಿ ಇಂಗ್ಲೀಶ್ ಶಿಕ್ಷಣದ ಅಪೇಕ್ಷೆ ಸಾಮಾಜಿಕ ನೆಲೆಯಲ್ಲಿ ಕಂಡು ಬರುತ್ತಿರುವುದು ಸಹಜ. ಆದರೆ ಕನ್ನಡದ ಅಸ್ತಿತ್ವ ಔದ್ಯೋಗಿಕ, ಆರ್ಥಿಕ, ರಾಜಕೀಯ ಆಡಳಿತದ ವಿವಿಧ ವಲಯಗಳಲ್ಲಿದೆಯೇ ಹೊರತು ಕೇವಲ ಶಿಕ್ಷಣ ರಂಗದಲ್ಲಿಲ್ಲ ಎಂದು ಅರ್ಥೈಸಿದ್ದಾರೆ.

ಹೀಗೆ ಪ್ರಾಥಮಿಕ ಶಿಕ್ಷಣ ಮಾಧ್ಯಮ ಕುರಿತಾಗಿ ನಡೆದ ನೇರ ಅಧ್ಯಯನಗಳು ಕಡಿಮೆ ಪ್ರಮಾಣದಲ್ಲಿ ಲಭ್ಯವಿರುವುದು ನಮಗೆ ಕಂಡು ಬರುತ್ತದೆ. ಹೆಚ್ಚಾಗಿ ಇದಕ್ಕೆ ಅನ್ವಯವಾಗುವಂತಹ ಅಧ್ಯಯನಗಳಿಂದ ನಾವು ಪೂರಕವಾದ ಮಾಹಿತಿಗಳನ್ನು ಪಡೆದುಕೊಳ್ಳಲು ಸ್ವಲ್ಪಮಟ್ಟಿಗೆ ಅವಕಾಶವಿದೆ. ಆದರೂ ಅಂತಹ ಅಧ್ಯಯನಗಳು ಕಡಿಮೆ ಸಂಖ್ಯೆಯಲ್ಲಿವೆ. ಪ್ರಾಥಮಿಕ ಶಿಕ್ಷಣ, ಮಾಧ್ಯಮದ ಚರ್ಚೆಯ ಹಿನ್ನೆಲೆಯಲ್ಲಿ ಬಂದ ಕೃತಿಗಳು, ಲೇಖನಗಳು ಅಭಿಪ್ರಾಯಗಳು, ಪ್ರತಿಕ್ರಿಯೆಗಳನ್ನು ಇದುವರೆಗು ಈ ಮೇಲಿನ ಸಮೀಕ್ಷೆಯ ಭಾಗದಲ್ಲಿ ನೋಡಲಾಗಿದೆ. ಇವೇ ಮೂಲ ಆಕರ ಅಧ್ಯಯನಗಳಾಗಿವೆ. ಇದುವರೆಗಿನ ಈ ಎಲ್ಲಾ ಅಧ್ಯಯನಗಳಿಂದ ವ್ಯಕ್ತವಾಗುವ ಅಂಶಗಳನ್ನು ಈ ಕೆಳಗಿನಂತೆ ಗಮನಿಸಲಾಗಿದೆ. ಅವುಗಳನ್ನು ಈ ರೀತಿಯಾಗಿ ಪಟ್ಟಿಮಾಡಬಹುದು.

## ಕನ್ನಡ ಪರವಾದ ಅಂಶಗಳು

* ಪ್ರಾಥಮಿಕ ಶಿಕ್ಷಣ ಕನ್ನಡ ಮಾಧ್ಯಮದಲ್ಲಿಯೇ ನಡೆಯಬೇಕು. ಆದರೆ ಈ ಮಾಧ್ಯಮದ ಕಲಿಕೆ ೩, ೪ ಹಾಗೂ ೫ರಲ್ಲಿ ಯಾವ ತರಗತಿಯಿಂದ ಪ್ರಾರಂಭವಾಗಬೇಕು ಎಂಬುದರಲ್ಲಿ ಕೆಲವು ಗೊಂದಲಗಳಿವೆ.
* ಮಾತೃಭಾಷೆ ಕಲಿಕೆಯಿಂದಾಗಿ ಇಂಗ್ಲೀಶ್ ಮಾಧ್ಯಮದ ಮಕ್ಕಳಿಗಿಂತ ಕನ್ನಡ ಮಾಧ್ಯಮದ ಮಕ್ಕಳಲ್ಲಿ ಓದು, ಬರಹ, ಕಲಿಕೆ, ಗ್ರಹಿಕೆ, ಸಾಮರ್ಥ್ಯ ಹೆಚ್ಚಾಗಿರುತ್ತದೆ.
* ಮಾತೃಭಾಷೆ ಕಲಿಕೆಯಿಂದ ಇತರ ಭಾಷೆಗಳನ್ನು ಮಕ್ಕಳು ಸುಲಭವಾಗಿ ಗ್ರಹಿಸುವ ಮತ್ತು ಅಭಿವ್ಯಕ್ತಿಸುವ ಕ್ರಮ ಉತ್ತಮವಾಗಿರುತ್ತದೆ.
* ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯುವುದರಿಂದ ಭಾಷಿಕ ಮತ್ತು ಸಂಸ್ಕೃತಿಯ ಅಭಿವೃದ್ಧಿಗೆ ಸಹಾಯಕವಾಗುತ್ತದೆ.
* ಮಾತೃಭಾಷೆಯ ಶಿಕ್ಷಣ ಮಗುವಿನ ಸಾಮಾಜಿಕ ಹಾಗೂ ವೈಯಕ್ತಿಕ ಅಭಿವೃದ್ಧಿಗೆ ಹೆಚ್ಚು ಸಹಕಾರಿಯಾಗುತ್ತದೆ.
* ಮಗುವಿನ ಸೃಜನಶೀಲ ಸಾಮರ್ಥ್ಯ ವಿಕಾಸಗೊಳ್ಳುವುದು, ಕಲ್ಪನೆಗಳು ರೂಪಗೊಳ್ಳುವುದು ಅದರ ಮಾತೃ ಭಾಷೆಯಿಂದಲೇ.
* ಮಾತೃಭಾಷೆ ಕಲಿಕೆಯಿಂದ ಮಕ್ಕಳಲ್ಲಿ ಭಾಷೆ ಕಲಿಕೆಯ ದೋಷಗಳು ಕಂಡು ಬರುವುದು ಕಡಿಮೆ.
* ಕನ್ನಡ ಭಾಷಾ ಕಲಿಕೆ ೧೯೫೦ರ ಪಠ್ಯಕ್ರಮದಂತಿರಬೇಕು. ಆಗ ಕನ್ನಡದ ನೈಜ ಬೆಳವಣಿಗೆಯ ತಂತಾನೇ ಆಗುತ್ತದೆ.
* ಕನ್ನಡ ಮತ್ತು ದ್ವಿತೀಯ ಮಾತೃಭಾಷೆ ವಿನಃ ಬೇರಾವ ಭಾಷೆಯು ಕಡ್ಡಾಯವಾಗ ಬಾರದು.

* ಪರಭಾಷಾ ಕಲಿಕೆ ಮಗುವಿನ ಮಾತೃಭಾಷೆಯಲ್ಲಿಯೇ ನಡೆಯಬೇಕು.
* ಜನರ ಶಿಕ್ಷಣ ಮತ್ತು ಆಡಳಿತ ಮಾಧ್ಯಮ ಕನ್ನಡವೇ ಆಗಬೇಕು.
* ಒಂದನೇ ತರಗತಿಯಿಂದ ಕನ್ನಡದ ಜೊತೆಗೆ ಇಂಗ್ಲೀಶ್ ಕಲಿಸುವುದು ಮಗುವಿನ ಪಾಲಿಗೆ ಹೊರೆ ಮತ್ತು ಸಂಸ್ಕೃತಿಗೆ ಬಾಧಕ.
* ಯಾವುದೇ ಭಾಷೆಯನ್ನು ಕಡ್ಡಾಯಗೊಳಿಸುವುದು ಸೂಕ್ತವಲ್ಲ. ಆಂಗ್ಲರ ಆಡಳಿತದಲ್ಲಿ ಐದನೇ ತರಗತಿಗೆ ಇದ್ದ ವ್ಯವಸ್ಥೆ ಇಂದು ಒಂದನೇ ತರಗತಿಯಿಂದಲೇ ಮಾಡುತ್ತಿರುವುದು ಸ್ವಾಭಿಮಾನಕ್ಕೆ ಚ್ಯುತಿ ತರುವ ಸಂಗತಿ.
* ಐದನೇ ತರಗತಿಯವರೆಗೆ ಮಾತೃಭಾಷಾ ಮಾಧ್ಯಮವನ್ನು ಕಲಿಸಬೇಕು. ಐದರ ನಂತರ ಅವರ ಇಚ್ಛೆಯಂತೆ ಯಾವ ಮಾಧ್ಯಮವನ್ನಾದರೂ ಆಯ್ಕೆ ಮಾಡಿಕೊಳ್ಳಬಹುದು.
* ಇಂಗ್ಲೀಶ್ ಮೇಲಿನ ವ್ಯಾಮೋಹದಿಂದಾಗಿ ಭಾಷಾ ತಾರತಮ್ಯ ನಿರ್ಮಾಣವಾಗುತ್ತಿದೆ. ಆದ್ದರಿಂದ ಕನ್ನಡ ಮಾಧ್ಯಮ ಜಾರಿಗೆ ತರಲು ಉಗ್ರ ಹೋರಾಟದ ಅಗತ್ಯತೆ ಇದೆ.
* ಕನ್ನಡವನ್ನು ಬಿಟ್ಟು ಇಂಗ್ಲೀಶನ್ನು ಅನುಸರಿಸುತ್ತಿರುವುದರಿಂದ ಕನ್ನಡ ಭಾಷೆಯು ಕುಸಿಯುತ್ತಿದೆ. ಇದಕ್ಕೆ ಕನ್ನಡಿಗರೇ ಕಾರಣ.
* ಇಂಗ್ಲೀಶ್ ಮಾಧ್ಯಮದಿಂದಾಗಿ ಮಕ್ಕಳು ಕಲಿಕೆಯಲ್ಲಿ ಅತಂತ್ರರಾಗುತ್ತಾರೆ ಮತ್ತು ಸಂಸ್ಕೃತಿಯಿಂದ ವಂಚಿತರಾಗುತ್ತಾರೆ.
* ಕನ್ನಡ ಮಾಧ್ಯಮವನ್ನು ಜಾರಿಗೆ ತರದೇ ಕನ್ನಡ ಪ್ರಗತಿ ಸಾಧ್ಯವಾಗದು.
* ದೇಶ ಭಾಷಾ ಮಾಧ್ಯಮವೊಂದೇ ಎಲ್ಲಾ ಸಮಸ್ಯೆಗಳಿಗೂ ಸೂಕ್ತ ಪರಿಹಾರ.

ಇಂಗ್ಲೀಶ್ ಪರವಾದ ಅಂಶಗಳು

* ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಮಾತ್ರ ಕಲಿಸುವುದು. ಅದು ಯಾವ ತರಗತಿಯಿಂದ ಎಂಬುದರಲ್ಲಿ ಗೊಂದಲವಿದೆ.
* ಜಾಗತೀಕರಣ, ಔದ್ಯೋಗಿಕರಣ, ಆರ್ಥಿಕ ಹಿನ್ನೆಲೆಯ ಅನಿವಾರ್ಯತೆಯಿಂದಾಗಿ ಇಂಗ್ಲೀಶ್ ಭಾಷೆಯ ಕಲಿಕೆ ಮಕ್ಕಳಿಗೆ ಅಗತ್ಯ
* ಶಿಕ್ಷಣ ಮಾಧ್ಯಮ ಒಂದು ಸಮಸ್ಯೆಯೇ ಅಲ್ಲ. ವಿಷಯವನ್ನು ಚೆನ್ನಾಗಿ ತಿಳಿದುಕೊಂಡವನಿಗೆ ಇಂಗ್ಲೀಶ್ ಮತ್ತು ಕನ್ನಡದ ವ್ಯತ್ಯಾಸ ಇರುವುದಿಲ್ಲ. ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಯಬೇಕು.
* ಇಂಗ್ಲೀಶನ್ನು ಒಂದು ಭಾಷೆಯಾಗಿ ಐದನೇ ತರಗತಿಯಿಂದ ಕಲಿಸುವ ವ್ಯವಸ್ಥೆ ಜಾರಿಗೆ ಬರಬೇಕು.

* ಇಂಗ್ಲೀಶ್ ಭಾಷೆಯ ಅರ್ಥಪೂರ್ಣ ಗ್ರಹಿಕೆಗೆ, ಭಾಷಿಕರ ರಚನೆಗಳ ಕಲಿಕೆಗೆ, ಸಂಭಾಷಣೆಗೆ ಶಾಲೆಗಳಲ್ಲಿ ಒತ್ತು ಕೊಡಬೇಕು.
* ಉಳ್ಳವರು ಕೊಡುವ ದುಡ್ಡಿಗೆ ಇಂಗ್ಲೀಶ್ ಮಾಧ್ಯಮ ಶಿಕ್ಷಣವನ್ನು ಮಾರುವುದಕ್ಕೆ ಬದಲು ಇಂಗ್ಲೀಶನ್ನು ಒಂದು ಭಾಷೆಯಾಗಿ ಶಾಲೆಗಳಲ್ಲಿ ಸಮರ್ಥವಾಗಿ ಕಲಿಸುವ ವ್ಯವಸ್ಥೆ ಮೊದಲು ಜಾರಿಗೆ ಬರಬೇಕು.
* ಪ್ರಾಥಮಿಕ ಶಿಕ್ಷಣ ಇಂಗ್ಲೀಶ್ ಮಾಧ್ಯಮ ಆಗಬಾರದು ಎಂಬುದಕ್ಕೆ ಬಹುಮತ ಅಭಿಪ್ರಾಯವಿದೆ.
* ಇಂಗ್ಲೀಶ್ ಮಾಧ್ಯಮದಿಂದಾಗಿ ಮಕ್ಕಳು ಕಲಿಕೆಯಲ್ಲಿ ಅತಂತ್ರರಾಗುತ್ತಾರೆ ಮತ್ತು ಸಂಸ್ಕೃತಿಯಿಂದ ವಂಚಿತರಾಗುತ್ತಾರೆ.
* ಸಾಮಾಜಿಕ ವ್ಯವಹಾರದ ಸಂಪರ್ಕ ಭಾಷೆಯಾಗಿ ಇಂಗ್ಲೀಶ್ ಬೆಳೆಯುತ್ತಿರುವುದರಿಂದ ಮಕ್ಕಳಲ್ಲಿ ಇಂಗ್ಲೀಶ್ ಭಾಷೆಯ ತಿಳುವಳಿಕೆಯನ್ನು ಮೂಡಿಸಲು ಒಂದು ಭಾಷೆಯನ್ನಾಗಿ ಕಲಿಸುವ ಅವಶ್ಯಕತೆ ಏರ್ಪಟ್ಟಿದೆ.
* ಇಂತಹ ಶಿಕ್ಷಣ ಗ್ರಾಮೀಣ ನಗರ ಶಾಲಾ ಮಕ್ಕಳಲ್ಲಿ ತಾರತಮ್ಯ ಉಂಟು ಮಾಡಿದೆ. ರಾಜ್ಯದ ಎಲ್ಲಾ ಶಾಲೆಗಳಲ್ಲಿ ಶಿಕ್ಷಣ ಸಮಾನತೆಗೆ ಸರ್ಕಾರ ಸಮರ್ಪಕವಾದ ಕ್ರಮಗಳನ್ನು ಜಾರಿಗೆ ತರಬೇಕು.

ಈ ನಿಟ್ಟಿನಲ್ಲಿ ಹಲವಾರು ವಿಚಾರಗಳು ವ್ಯಕ್ತವಾಗಿವೆ. ಈ ಅಂಶಗಳನ್ನು ಪ್ರಮುಖವಾಗಿರಿಸಿಕೊಂಡು ಇಲ್ಲಿ ಪ್ರಾಥಮಿಕ ಶಿಕ್ಷಣದ ಚರ್ಚೆ ಮುಖ್ಯವಾಗಿ ಬೆಳೆದದ್ದು ಮಾಧ್ಯಮವಾಗಿಯೇ? ಅಥವಾ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಂಡು ಕೊಳ್ಳಬೇಕಾಗಿದೆ. ಮತ್ತು ಈ ಚರ್ಚೆ ಮುಖ್ಯವಾಗಿ ಬೆಳೆದು ನಿಂತಿರುವುದು ಯಾರಲ್ಲಿ? ಪ್ರಾಥಮಿಕ ಶಿಕ್ಷಣಕ್ಕಾಗಿ ರಾಜ್ಯಸರ್ಕಾರ ಮತ್ತು ಕೇಂದ್ರಸರ್ಕಾರ ಆಯೋಜಿಸಿರುವ ಭಾಷಾನೀತಿ ಜಾರಿಗೆ ಬರದೆ ವಿಳಂಬವಾಗುತ್ತಿರಲು ಕಾರಣವೇನು? ಬ್ರಿಟಿಷರ ಆಡಳಿತ ಸಂದರ್ಭದಲ್ಲಿಯೇ ಪ್ರಾದೇಶಿಕ ಭಾಷಾ ಕಲಿಕೆಗೆ ಅನುಕೂಲ ಮಾಡಿಕೊಟ್ಟಿರುವಾಗ ಪ್ರಸ್ತುತ ಸಂದರ್ಭದಲ್ಲಿ ಸ್ವಂತ ನೆಲದಲ್ಲಿಯೇ ಸ್ವ ಭಾಷೆಗಾಗಿ ಇಷ್ಟು ವರ್ಷಗಳ ಕಾಲದ ನಿರಂತರ ಹೋರಾಟ ನಡೆಸುತ್ತಿರುವುದರ ಹಿನ್ನೆಲೆಯ ಉದ್ದೇಶವೇನು? ಈ ಎಲ್ಲಾ ಗೊಂದಲಗಳ ಸೃಷ್ಟಿಗೆ ಕಾರಣವಾಗಿರುವ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಹಿನ್ನೆಲೆಗೆ ಕಾರಣಗಳನ್ನು ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

• • •

## ಅಧ್ಯಾಯ : ಮೂರು

# ಸ್ವಾತಂತ್ರ ಪೂರ್ವಕಾಲದಲ್ಲಿನ ಶಿಕ್ಷಣ ಪದ್ಧತಿಯ ಸ್ವರೂಪ

೩.೧. ಪ್ರಾಚೀನ ಕಾಲದಲ್ಲಿದ್ದ ಶಿಕ್ಷಣ ಸ್ವರೂಪ

ಅ. ವೇದಕಾಲದ ಶಿಕ್ಷಣ

ಬ. ಬೌದ್ಧರ ಕಾಲದ ಶಿಕ್ಷಣ

ಕ. ಮುಸ್ಲಿಮರ ಕಾಲದ ಶಿಕ್ಷಣ

೩.೨. ಬ್ರಿಟೀಷರ ಕಾಲದ ಶಿಕ್ಷಣ ಸ್ವರೂಪ

೩.೩. ಕರ್ನಾಟಕದಲ್ಲಿನ ಶಿಕ್ಷಣ ಸ್ವರೂಪ

# ಅಧ್ಯಾಯ : ಮೂರು

# ಸ್ವಾತಂತ್ರ ಪೂರ್ವಕಾಲದಲ್ಲಿನ ಶಿಕ್ಷಣ ಪದ್ಧತಿಯ ಸ್ವರೂಪ

## ೩.೧. ಪ್ರಾಚೀನ ಕಾಲದಲ್ಲಿದ್ದ ಶಿಕ್ಷಣ ಸ್ವರೂಪ

ಭಾರತೀಯ ಇತಿಹಾಸ ಪರಂಪರೆಯಲ್ಲಿ ಶಿಕ್ಷಣಕ್ಕೆ ವಿಶೇಷವಾದ ಮಹತ್ವವಿದೆ. ಶಿಕ್ಷಣ ಸಮಾಜದ ಅವಿಭಾಜ್ಯ ಅಂಗ. ಸಮಾಜದ ಶ್ರೇಯೋಭಿವೃದ್ಧಿಗೆ ಶಿಕ್ಷಣವೇ ಮೂಲ. ಶಿಕ್ಷಣದಿಂದಾಗಿ ಸಮಾಜದ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಬೆಳವಣಿಗೆಯನ್ನು ಗುರುತಿಸುತ್ತಾ ಬರಲಾಗಿದೆ. ಶಿಕ್ಷಣ ಎಂದರೆ ವಿದ್ಯಾಭ್ಯಾಸ ಪದ್ಧತಿ, ವಿದ್ಯಾಭ್ಯಾಸ ಕ್ರಮ ಎಂದರ್ಥವಾಗುತ್ತದೆ. ಮಾನವನ ಜ್ಞಾನವಿಕಾಸಕ್ಕೆ ಈ ಶಿಕ್ಷಣ ಅತ್ಯಂತ ಪ್ರಮುಖವಾದುದುದಾಗಿದೆ. ಈ ಕ್ಷೇತ್ರಕ್ಕೆ ಸೇವೆಯನ್ನು ಸಲ್ಲಿಸುವುದು ಅತಿ ಪವಿತ್ರವಾದ ಕರ್ತವ್ಯ ಎಂದು ಪ್ರಾಚೀನರು ಭಾವಿಸಿದ್ದರು. ಪ್ರಾಚೀನರು ಶಿಕ್ಷಣಕ್ಕೆ ಕಲ್ಪಿಸಿದ್ದ ಮಹತ್ವವನ್ನು ಈ ಕೆಳಗೆ ನೀಡಿದ ಕೆಲವು ನಿದರ್ಶನಗಳ ಮೂಲಕ ನೋಡಬಹುದು.

* **ಸ್ಮೃತಿಕಾರನಾದ ವಿಷ್ಣು** 'ಈ ಜನ್ಮದಲ್ಲಿ ಯಾರು ತನ್ನ ವಿದ್ಯೆಯಿಂದ ಜೀವಿಸಲೆಳೆಸುವನೋ ಅವನಿಗೆ ಮುಂದಿನ ಜನ್ಮದಲ್ಲಿ ಯಾವ ಆಧ್ಯಾತ್ಮಿಕ ಬೌದ್ಧಿಕಗಳಿಕೆಯೂ ಸಾಧ್ಯವಾಗದು' ಎಂದು ಎಚ್ಚರಿಸಿರುವನು. (ಎನ್.ಎಸ್. ವೀರಪ್ಪ, ಭಾರತೀಯ ಶಿಕ್ಷಣದ ಇತಿಹಾಸ, ಪುಟ–೧೨)

* **ಮಹಮ್ಮದ್ ಪೈಗಂಬರರು** 'ಬಂಗಾರವನ್ನು ದಾನವಾಗಿ ನೀಡುವುದಕ್ಕಿಂತಲೂ ತನ್ನ ಮಕ್ಕಳಿಗೆ ಶಿಕ್ಷಣವನ್ನು ನೀಡುವುದು ಹೆಚ್ಚು ಪುಣ್ಯದ ಕೆಲಸ' ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. (ಕೆ.ಜಿ.ಕುಲಕರ್ಣಿ, ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು ಪುಟ–೧೪)

* ಅದೇ ರೀತಿ **ಕಾಳಿದಾಸನು** ತನ್ನ ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ತನ್ನ ವಿದ್ಯೆಯನ್ನು, ಜ್ಞಾನವನ್ನು ಕೇವಲ ಧನಾರ್ಜನೆಗಾಗಿಯೇ ಬಳಸುವವರನ್ನು ತಿರಸ್ಕರಿಸುವನು'. (ಎನ್ ಎನ್ ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪು–೧೨)

ಪ್ರಾಚೀನರ ಆದರ್ಶ ಜೀವನ, ಶಿಕ್ಷಣ ಕ್ರಮಗಳು, ರೀತಿ ನೀತಿಗಳು ಮತ್ತು ಅದಕ್ಕೆ ಕಾರಣವಾಗಿದ್ದ ಉನ್ನತ ಮೌಲ್ಯಗಳ ವ್ಯವಸ್ಥಿತ ಅಳವಡಿಕೆ ಯಾವ ರೀತಿಯಾಗಿತ್ತು ಎನ್ನುವುದು ಅವರ ಶಿಕ್ಷಣ ಪದ್ಧತಿಯಿಂದ ತಿಳಿದು ಬರುತ್ತದೆ. ಅವರ ದೃಷ್ಟಿಯಲ್ಲಿ ಶಿಕ್ಷಣ ಪಡೆಯದವ ಪಶು ಸದೃಶನಾಗಿದ್ದ. ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿ, ಮುಕ್ತಿಗೆ ಪೋಷಕನಾದ ಜ್ಞಾನಾರ್ಜನೆ ಅವರ ಶಿಕ್ಷಣದ ಧ್ಯೇಯವಾಗಿತ್ತು. ಜೀವನದ ಉದ್ದೇಶಗಳ ಸಾಧನೆಗೆ ಶಿಕ್ಷಣ ಒಂದು ಮಾರ್ಗವಾಗಿತ್ತು. ಈ ನಿಟ್ಟಿನಲ್ಲಿ ಶಿಕ್ಷಣ ಬೆಳೆದು ಬಂದ ಸ್ವರೂಪ, ಭಾಷಾ ಮಾಧ್ಯಮ, ಪಠ್ಯಕ್ರಮದ ಮೇಲೆ ಒತ್ತು ಕೊಡಲಾಗಿದೆ. ಶಿಕ್ಷಣ ಮಾಧ್ಯಮದ ಪರಿಕಲ್ಪನೆ ಮತ್ತು ಸ್ವರೂಪವನ್ನು ಮುಖ್ಯವಾಗಿ ವಿಶ್ಲೇಷಣೆ ಮಾಡುವುದಾಗಿದೆ. ಆದ್ದರಿಂದ ಇಲ್ಲಿ ಪ್ರಾಚೀನ ಕಾಲದ ಶಿಕ್ಷಣ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಏಕೆಂದರೆ ಭಾಷೆ ಮತ್ತು ಕಾಲ ಎರಡೂ ತಟಸ್ಥವಾಗಿರದೆ ಕಾಲದಿಂದ ಕಾಲಕ್ಕೆ ಬದಲಾವಣೆಯನ್ನು ಪಡೆದು ಕೊಳ್ಳುತ್ತಾ ಬಂದಿರುವುದರಿಂದ ಶಿಕ್ಷಣದಲ್ಲಿಯೂ ಸಹ ಬದಲಾವಣೆಯನ್ನು ಗುರುತಿಸಬಹುದು. ಶಿಕ್ಷಣದ ಇತಿಹಾಸ ಪರಂಪರೆ ಪ್ರಾರಂಭವಾಗುವುದೇ ವೇದಗಳ ಕಾಲದಿಂದ ಎನ್ನುವುದು ಸರ್ವವಿಧಿತ. ನಂತರ ಬೌದ್ಧ ಹಾಗೂ ಮುಸ್ಲಿಂ ಕಾಲದ ಮೂಲಕ ಶಿಕ್ಷಣದ ಬೆಳವಣಿಗೆಯ ಘಟ್ಟಗಳು ಕಂಡು ಬರುತ್ತವೆ. ಈ ಎಲ್ಲಾ ಕಾಲಘಟ್ಟಗಳಲ್ಲಿ ಶಿಕ್ಷಣ ಬೆಳೆದು ಬಂದಂತೆ ಅನೇಕ ಭಿನ್ನತೆಗಳನ್ನು ಗುರುತಿಸಬಹುದಾಗಿದೆ. ಇದರಲ್ಲಿ ವೇದಗಳ ಕಾಲದ ಶಿಕ್ಷಣ ಪರಂಪರೆಯನ್ನು ನೋಡಬಹುದು.

### ಅ. ವೇದ ಕಾಲದ ಶಿಕ್ಷಣ ಸ್ವರೂಪ

ವೇದಕಾಲೀನ ಶಿಕ್ಷಣವು ಪ್ರಾಚೀನ ಭಾರತೀಯರ ಜೀವನವನ್ನು ನೋಡುವ ದೃಷ್ಟಿ ಹಾಗೂ ಅವರ ಜೀವನ ಮೌಲ್ಯಗಳ ಪರಿಣಾಮವಾಗಿತ್ತು. 'ಬ್ರಾಹ್ಮಣರ ಕಾಲದ ಶಿಕ್ಷಣವು ಪಾವಿತ್ರ್ಯವೂ ಹಾಗೂ ಧಾರ್ಮಿಕ ಭಾವನೆಯನ್ನು ಬೆಳೆಸುವುದು, ಚಾರಿತ್ರ್ಯ ರೂಪಿಸುವುದು, ಸಾಮಾಜಿಕ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ರಾಷ್ಟ್ರೀಯ ಸಂಸ್ಕೃತಿಯನ್ನು ಉಳಿಸಿಕೊಂಡು ಅದನ್ನು ಪ್ರಸಾರ ಮಾಡುವುದು ಇಲ್ಲಿಯ ಶಿಕ್ಷಣದ ಮುಖ್ಯ ಉದ್ದೇಶವಾಗಿತ್ತೆಂದು ಎ.ಎಸ್. ಆಲ್ಟೇಕರ್ ಅಭಿಪ್ರಾಯವನ್ನು ಎಸ್.ಬಿ.ಯಾದವಾಡ ಅವರು ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ ಎನ್ನುವ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಪ್ರಾಚೀನ ಭಾರತೀಯ ಶಿಕ್ಷಣವನ್ನು ಅಂತಿಮವಾಗಿ ಜ್ಞಾನದ ಬಗೆಗೆ ಭಾರತೀಯರಲ್ಲಿದ್ದ ತತ್ವದ ಪರಿಣಾಮ ಹಾಗೂ ಅದಕ್ಕೆ ಸರಿಹೋಗುವ ಜೀವನದ ಮೌಲ್ಯಗಳ ಯೋಜನೆಯ ಅಂಶವೆಂದು ತಿಳಿಯಬಹುದಾಗಿದೆ. ಅದು ಅವರ ನೈತಿಕ ಭಾವನೆಗಳನ್ನು ವ್ಯಕ್ತಿತ್ವವನ್ನು ಪೋಷಿಸುವುದರಲ್ಲಿ ಸಹಕಾರಿಯಾಗಿದೆ ಎಂದು ಬಿದರಿಯವರು ಪ್ರಾಚೀನ ಭಾರತದಲ್ಲಿ ಶಿಕ್ಷಣ ಕೃತಿಯಲ್ಲಿ ಚರ್ಚಿಸಿದ್ದಾರೆ.

ಪ್ರಾಚೀನ ಕಾಲದಲ್ಲಿ ಆಧ್ಯಾತ್ಮಿಕ ಜ್ಞಾನಸಂಪಾದನೆಯೇ ಶಿಕ್ಷಣದ ಮುಖ್ಯ ಗುರಿಯಾಗಿತ್ತು. ವೈದಿಕ ಕಾಲದ ಶಿಕ್ಷಣ ವ್ಯವಸ್ಥೆಯಲ್ಲಿ ಮನೆಯೇ ಮೊದಲ ಪಾಠ ಶಾಲೆಯಾಗಿತ್ತು. ತಂದೆ

ಮೊದಲ ಗುರುವಾಗಿದ್ದನು. ನಂತರ ಗುರುಕುಲಗಳಲ್ಲಿ ಗುರುಗಳ ಬಳಿ ಶಿಷ್ಯನಾದವನು ಶಿಕ್ಷಣ ವನ್ನು ಪಡೆಯುತ್ತಿದ್ದನು. ಈ ಗುರುಕುಲಗಳಿಗೆ ಸೇರಲು ಉಪನಯನ ಎಂಬ ಸಂಸ್ಕಾರ ಕಡ್ಡಾಯವಾಗಿತ್ತು. ಎಂಟನೇ ವಯಸ್ಸಿನಲ್ಲಿ ಸಂಸ್ಕಾರದ ಮೂಲಕ ಶಿಕ್ಷಣವನ್ನು ಆರಂಭಿಸುತ್ತಿದ್ದರು. ಗುರುಕುಲದ ವಿದ್ಯಾಭ್ಯಾಸ ಕ್ರಮವು ವೈಯಕ್ತಿಕವಾಗಿತ್ತು. ಶಿಷ್ಯನು ಬ್ರಹ್ಮಚರ್ಯದ ಮೂಲಕ ಗುರುವಿನ ಸೇವೆಯನ್ನು ಮಾಡಬೇಕಾಗಿತ್ತು. ಶಿಸ್ತನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಹೇಳಿ ಕೊಡುತ್ತಿದ್ದರು. ಇದು ಕೇವಲ ತತ್ವಗಳ ಮೂಲಕವಾಗಿರದೇ ಉದಾಹರಣೆಗಳ ಮೂಲಕ ನೀಡಲಾಗಿತ್ತು. ಕಸುಬಿನ ಮೂಲಕವೂ ಶಿಕ್ಷಣವನ್ನು ನೀಡುತ್ತಿದ್ದರು ಎನ್ನುವುದು ಕಂಡು ಬರುತ್ತದೆ. ನೈತಿಕ ಶಿಕ್ಷಣವು ಉಪದೇಶ ಹಾಗೂ ಗುರುವಿನ ರೀತಿ ನೀತಿಗಳನ್ನು ಅನುಕರಣೆ ಮಾಡುವುದರಿಂದ ದೊರೆಯುತ್ತಿತ್ತು. ಭಿಕ್ಷೆ ಬೇಡುವುದರ ಮೂಲಕ ಶಿಷ್ಯನ ವ್ಯಕ್ತಿತ್ವದ ವಿಕಾಸವೂ ಶಿಕ್ಷಣದಿಂದ ಆಗುತ್ತಿತ್ತು. ಅಂದಿನ ಎಲ್ಲಾ ವಿದ್ಯೆಯನ್ನು ಕೇಳಿ ಕಲಿತುಕೊಳ್ಳುವ ಮತ್ತು ಸ್ವ ಅನುಭವದ ಮೂಲಕ ಕಲಿಯುವ ಅವಶ್ಯಕತೆ ಕಂಡು ಬಂದಿತ್ತು. ವಿದ್ಯಾರ್ಥಿಯು ಗುರುವನ್ನು ಆಧ್ಯಾತ್ಮಿಕ ಹಾಗೂ ಬೌದ್ಧಿಕ ತಂದೆ ಎಂದು ತಿಳಿಯುತ್ತಿದ್ದನು. ಗುರು ಎಂದರೆ ಅಜ್ಞಾನವನ್ನು ಹೋಗಲಾಡಿಸುವನಾಗಿದ್ದನು. ಎಲ್ಲವನ್ನು ಗುರುವೇ ಕಲಿಸಿಕೊಡಬೇಕಾಗಿದ್ದರಿಂದ ವಿದ್ಯಾರ್ಥಿಯ ಗುಣದೋಷಗಳಿಗೆ ಗುರುವೇ ಹೊಣೆಗಾರನೆಂದು ಭಾವಿಸುವ ಪರಿಪಾಠವಿತ್ತು. ಗುರುವಾದವನು ತನ್ನ ಬಳಿ ಬಂದಂತಹ ಶಿಷ್ಯರನ್ನು ಪರೀಕ್ಷಿಸಿ ಸ್ವೀಕರಿಸುತ್ತಿದ್ದನು. 'ಅನರ್ಹ ಶಿಷ್ಯರನ್ನು ಸ್ವೀಕರಿಸುವ ಶಿಕ್ಷಕ ಅಯೋಗ್ಯನೆಂದೇ ಭಾವಿಸಬೇಕು' ಎಂದು ಕಾಳಿದಾಸನು ತನ್ನ ಮಾಳವಿಕಾಗ್ನಿ ಮಿತ್ರ ನಾಟಕದಲ್ಲಿ ಹೇಳಿರುವುದನ್ನು ಎನ್.ಎಸ್. ವೀರಪ್ಪ ಭಾರತೀಯ ಶಿಕ್ಷಣ ಇತಿಹಾಸ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. (ಪುಟ–೧೨) ಉಪನಯನವಾದ ನಂತರವೇ ಧಾರ್ಮಿಕ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡಲಾಗುತ್ತಿತ್ತು. ಅನ್ಯಜಾತಿಯವರಿಗೆ ಶಾಸ್ತ್ರೋಕ್ತವಾಗಿ ಉಪನಯನ ಮಾಡಿದ ನಂತರವೇ ವೇದಗಳ ಜ್ಞಾನ ಅವರಿಗೆ ಪೊರೈಕೆಯಾಗುತ್ತಿತ್ತು ಎಂದಿರುವಲ್ಲಿ ಜಾತಿಯ ಪ್ರಶ್ನೆ ಮೂಲಭೂತವಾಗಿ ಗೋಚರಿಸುತ್ತದೆ.

ಧಾರ್ಮಿಕ ವಿಧಿಯಂತೆ ಈ ಶಿಕ್ಷಣ ಬ್ರಾಹ್ಮಣರಿಗೆ ಎಂಟು ವರ್ಷ, ಕ್ಷತ್ರಿಯರಿಗೆ ಹನ್ನೊಂದು ವರ್ಷ, ವೈಶ್ಯರಿಗೆ ಹನ್ನೆರಡು ವರ್ಷಗಳೆಂದು ಅವಧಿಯನ್ನು ನಿಗದಿಪಡಿಸಲಾಗಿತ್ತು. ಈ ಅವಧಿಯನ್ನು ಬ್ರಹ್ಮಚರ್ಯ ಎಂದು ಕರೆಯಲಾಗುತ್ತದೆ. ಈ ಅವಧಿಯಲ್ಲಿ ಧಾರ್ಮಿಕ ಆಚರಣೆ ಕೈಗೊಳ್ಳುವುದು, ಪ್ರಾರ್ಥನೆ ಸಲ್ಲಿಸುವುದು ವೇದ, ಮಂತ್ರ ಪಠಿಸುವುದು, ಸರಳ ಜೀವನ, ಉನ್ನತ ಚಿಂತನೆ ಮುಂತಾದವುಗಳನ್ನು ಹೇಳಿ ಕೊಡಲಾಗುತ್ತಿತ್ತು. ಆ ಕಾಲದ ಶಿಕ್ಷಣ ಶಿಷ್ಯರಲ್ಲಿ ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕ ಹಾಗೂ ಲೌಕಿಕ ಬೆಳವಣಿಗೆಗೆ ನೆರವಾಗಿತ್ತು. ಇದನ್ನು ವೇದಗಳನ್ನು ಅಭ್ಯಾಸಿಸುವ ಕಾಲವೆಂದು ಪರಿಗಣಿಸಲಾಗಿತ್ತು. (ಅನು: ಐ. ಎಸ್. ಬಿದರಿ, ಪ್ರಾಚೀನ ಭಾರತದ ಶಿಕ್ಷಣ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪುಟ–೧೧೯)

ಪ್ರಮುಖವಾಗಿ ಧಾರ್ಮಿಕ ಶಿಕ್ಷಣವೇ ಪ್ರಧಾನವಾಗಿತ್ತು. ಮತೀಯ ಶಿಕ್ಷಣಕ್ಕೆ ಪ್ರಾಧಾನ್ಯತೆ ಯಿದ್ದದ್ದರಿಂದ ಪ್ರಾರ್ಥನೆ ವಿಧಾನ ಹೋಮ ಮುಂತಾದ ಧಾರ್ಮಿಕ ಕಾರ್ಯಗಳು ವಿಧಾನ, ಪೌರೋಹಿತ್ಯ ಮಂತ್ರ, ಯಜ್ಞಯಗಾದಿಗಳಿಗೆ ಬೇಕಾದ ರೇಖಾಗಣಿತ, ಸೌರಮಾನ ಚಂದ್ರಮಾನ ಗಣನೆಗೆ ಸಹಾಯವಾಗುವ ವೇದಾಧ್ಯಯಗಳನ್ನು ಕಂಠಪಾಠದ ಮೂಲಕ ಹೇಳಿ ಕೊಡಲಾಗುತ್ತಿತ್ತು.

ಕಾಲಕ್ರಮದಲ್ಲಿ ವೈದಿಕ ಸಾಹಿತ್ಯದ ಜೊತೆಗೆ ಇತಿಹಾಸ, ಪುರಾಣ, ಮಹಾಕಾವ್ಯಗಳು ಅಭಿವೃದ್ಧಿ ಹೊಂದಿ ಪಠ್ಯಕ್ರಮದಲ್ಲಿ ಸೇರ್ಪಡೆಯಾದವು. ಅದೇ ರೀತಿ ಖಗೋಲಶಾಸ್ತ್ರ, ಭೂಮಿತಿ, ಛಂದಸ್ಸು ಬೆಳವಣಿಗೆ ಹೊಂದಿದ್ದವು. ಆರು ವೇದಾಂಗಗಳಾದ ಶಿಕ್ಷಾ, ಛಂದಸ್ಸು, ವ್ಯಾಕರಣ, ನಿರುಕ್ತಿ, ಜ್ಯೋತಿಷ್ಯ, ಶಿಲ್ಪಗಳನ್ನು ಹೇಳಿಕೊಡಲಾಗುತಿತ್ತು. ಅಂಕಗಣಿತ, ತತ್ವಜ್ಞಾನ, ಅರ್ಥಶಾಸ್ತ್ರ, ಕಾವ್ಯ, ಪುರಾಣ, ಸ್ಮೃತಿ, ರಾಜ್ಯಶಾಸ್ತ್ರ, ಕೃಷಿಶಾಸ್ತ್ರ, ಶಿಲ್ಪಕೆತ್ತನೆ, ಧನುರ್ವಿಧ್ಯೆ, ಪ್ರಾಣಿಶಾಸ್ತ್ರ, ವೈದ್ಯ, ತರ್ಕಶಾಸ್ತ್ರ ಮುಂತಾದ ವಿಷಯಗಳೇ ಪಠ್ಯಕ್ರಮಗಳಲ್ಲಿ ಸೇರ್ಪಡೆಯಾಗಿದ್ದವು. ಇವುಗಳನ್ನು ಪಠ್ಯ ವಿಷಯಗಳಾಗಿ ಹೇಳಿ ಕೊಡುತ್ತಿದ್ದರು. ಇವುಗಳನ್ನು ಅಭ್ಯಾಸ ಮಾಡಿದವರಿಗೆ 'ದಶಗ್ರಂಥೀ' ಬ್ರಾಹ್ಮಣ ಎನ್ನುತ್ತಿದ್ದರು. ಕ್ರಮೇಣ ಈ ಪಠ್ಯವಸ್ತು ವಿವಿಧ ರೀತಿಯಲ್ಲಿ ಬದಲಾವಣೆಯಾಯಿತು. ಜನರ ದೃಷ್ಟಿಕೋನ ಬದಲಾದಂತೆ ಜಿಜ್ಞಾಸೆಗಳ ಮೂಲಕ ವೇದ, ಉಪನಿಷತ್ತು ಶಾಸ್ತ್ರಗಳಿಗೆ ಟೀಕೆ ಟಿಪ್ಪಣಿಗಳು ಬೆಳೆಯತೊಡಗಿದವು. ಇವೆಲ್ಲವೂ ಕಂಠಪಾಠದ ಮೂಲಕವೇ ಬಾಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದಂತಹ ಕಲಿಕೆಯ ವಿಷಯಗಳು ಮಾತ್ರವಾಗಿದ್ದವು. ಎಲ್ಲಿಯೂ ಇವು ಬರಹದ ರೂಪದಲ್ಲಿ ಕಾಣಲು ಸಿಗುವುದಿಲ್ಲ. ಏಕೆಂದರೆ ಲಿಪಿ ಬೆಳವಣಿಗೆ ಆ ಕಾಲದಲ್ಲಿ ಇನ್ನು ರೂಪ ಪಡೆದಿರಲಿಲ್ಲ.

ವೈದಿಕ ಕಾಲದಲ್ಲಿ ಸಂಸ್ಕೃತ ಪ್ರಾತಿನಿಧಿಕ ಭಾಷೆಯಾಗಿತ್ತು. ದೈವದತ್ತ ಭಾಷೆಯಾಗಿತ್ತೆಂದು ನಂಬಲಾಗಿದೆ. 'ಸಂಸ್ಕೃತ'ವೇ ಧಾರ್ಮಿಕ ಹಾಗೂ ಸಾಂಸ್ಕೃತಿಕ ಭಾಷೆಯಾಗಿತ್ತು. ವೇದಗಳು, ಉಪನಿಷತ್ತುಗಳು, ಕಾವ್ಯ, ಪುರಾಣ ಮುಂತಾದವುಗಳೆಲ್ಲವನ್ನೂ ಸಂಸ್ಕೃತ ಭಾಷೆಯ ಮೂಲಕವೇ ಮೌಖಿಕವಾಗಿ ಹೇಳಿ ಕೊಡಲಾಗುತ್ತಿತ್ತು. ವೇದ ಮಂತ್ರಗಳು ಇತಿಹಾಸ, ಇತಿಹಾಸ ಪುರಾಣ, ನಾರಾಶಾಂಸಿ ಗಾಥಾ ಮುಂತಾದವುಗಳನ್ನು ನಿರೂಪಿಸಿದ್ದ ಪಠ್ಯ, ಲಾವಣಿ ಅಂದಿನ ಪಠ್ಯ ವಿಷಯವಾಗಿದ್ದು ಸಾಹಿತ್ಯಾಭಿರುಚಿಯನ್ನು ಸಾಹಿತ್ಯಾ ರಚನಾ ಶಕ್ತಿಯನ್ನು ಮೂಡಿಸಲು ಆದರ್ಶ ಪಠ್ಯ ವಿಷಯಗಳಾಗಿ ಬಳಕೆಯಲ್ಲಿದ್ದವು. ಗುರುವಾದವರು ಪ್ರತಿ ವಿದ್ಯಾರ್ಥಿಗೆ ಪ್ರತ್ಯೇಕವಾಗಿ ಉಚ್ಚಾರಣೆ ಕ್ರಮವನ್ನು ಹೇಳಿಕೊಡುತ್ತಿದ್ದರು. ಅಭ್ಯಾಸದ ಸಂದರ್ಭದಲ್ಲಿ ಸಾಮೂಹಿಕವಾಗಿ ಕಲಿಸುತ್ತಿದ್ದರು. ವೇದಗಳನ್ನು ಕಂಠಪಾಠ ಮಾಡುವ ರೂಢಿ ಪರಂಪರಾಗತ ವಾಗಿ ಬೆಳೆದುಕೊಂಡು ಬಂದಿತ್ತು. ಮುದ್ರಣ ಕಲೆ ಮತ್ತು ಬರವಣಿಗೆ ಇನ್ನೂ ಬೆಳವಣಿಗೆ ಹೊಂದದ ಆ ಕಾಲದಲ್ಲಿ ಬೋಧನೆ ಬಾಯ್ದೆರೆಯಾಗಿ ಹೇಳುವ ವ್ಯವಸ್ಥೆ ರೂಢಿಗತವಾಗಿ ಬಂದಿತು. ವೇದಗಳನ್ನು ಸರಿಯಾಗಿ, ಶುದ್ಧ ರೂಪದಲ್ಲಿ ಕಾಯ್ದಿಡುವುದಕ್ಕಾಗಿ ಸಂಹಿತಾಪಾಠ, ಪದಪಾಠ, ಕ್ರಮಪಾಠ, ಜಟಾಪಾಠ ಹಾಗೂ ಘನಪಾಠ ಎಂಬ ವಿಭಾಗ ಕ್ರಮಗಳಿದ್ದವು.

ವೇದಾಧ್ಯಯನ ಸುಲಭವಾಗಲು ಈ ಕ್ರಮಗಳ ವಿಂಗಡಣೆಯನ್ನು ಮಾಡಿಕೊಂಡಿರಬಹುದು. ವೇದಾಧ್ಯಯನಗಳ ಸಂದರ್ಭದಲ್ಲಿ ಚರ್ಚೆಯ ಪದ್ಧತಿ ಜಾರಿಯಲ್ಲಿತ್ತು. ತತ್ವಜ್ಞಾನದ ಬೋಧನೆಯಲ್ಲಿ ಕಥೆ, ಪ್ರಸಂಗಗಳ ಮೂಲಕ ಅರ್ಥೈಸಲಾಗುತ್ತಿತ್ತು. ಗಣಿತ ವಿಷಯದಲ್ಲಿ ದೈನಂದಿನ ವ್ಯವಹಾರಕ್ಕೆ ಅಗತ್ಯವಿರುವಷ್ಟು ಲೆಕ್ಕಪತ್ರಗಳ ವ್ಯವಹಾರವನ್ನು ಹೇಳಿಕೊಡಲಾಗುತ್ತಿತ್ತು. **(ಎನ್.ಎಸ್. ವೀರಪ್ಪ ಭಾರತೀಯ ಶಿಕ್ಷಣ ಇತಿಹಾಸ, ಮೈಸೂರು ವಿಶ್ವವಿದ್ಯಾಲಯ, ೧೯೮೮ ಪುಟ–೬೪,೬೫)**

ಈ ಸಂದರ್ಭದಲ್ಲಿ ಕೇವಲ ಸಂಸ್ಕೃತ ಭಾಷೆಯೊಂದೇ ಎಲ್ಲಾ ವರ್ಗದವರ ಸಂಪರ್ಕ ಭಾಷೆ ಹಾಗೂ ಮಾತೃ ಭಾಷೆಯಾಗಿರಲಿಲ್ಲ. ಸಂಸ್ಕೃತದ ಪ್ರಾಬಲ್ಯದಿಂದಾಗಿ ಧಾರ್ಮಿಕವಾಗಿಯೂ, ಆಡಳಿತಾತ್ಮಕವಾಗಿಯೂ 'ಸಂಸ್ಕೃತವೇ' ಅಧಿಕೃತತೆಯನ್ನು ಪಡೆದುಕೊಂಡಿತ್ತು. ಶಿಕ್ಷಣದ ಭಾಷೆ ಹಾಗೂ ಮಾಧ್ಯಮವಾಗಿ ಸಂಸ್ಕೃತವೇ ಜಾರಿಯಾಗಿದ್ದುದು ಪ್ರಮುಖ ಅಂಶ. ಸಂಸ್ಕೃತ ಕೇವಲ ಮೇಲ್ವರ್ಗದವರು ಆಡುವ ಜನಭಾಷೆಯಾಗಿ ಬಳಕೆಯಲ್ಲಿತ್ತು. ಆ ಸಂದರ್ಭದಲ್ಲಿ ಕೆಳವರ್ಗದವರ ಹಾಗೂ ಜನಸಾಮಾನ್ಯರ ಆಡುಭಾಷೆಯಾಗಿ 'ಪ್ರಾಕೃತ' ಚಾಲ್ತಿಯಲ್ಲಿತ್ತು. ಸಂಸ್ಕೃತವನ್ನು ಅಭ್ಯಾಸ ಮಾಡುವವರು ಕೇವಲ ಮೇಲ್ವರ್ಗದವರು ಮಾತ್ರ ಆಗಿದ್ದರು. ವೇದಾಧ್ಯಯನಗಳನ್ನು ಅಭ್ಯಾಸ ಮಾಡುವ ಅವಕಾಶ ತಳ ಸಮುದಾಯದವರಿಗಿರಲಿಲ್ಲ. ಸಂಸ್ಕೃತವೇ ಭಾಷೆ, ಧರ್ಮ, ಆಡಳಿತ, ರಾಜಕೀಯವಾಗಿ ಪ್ರಭುತ್ವವನ್ನು ಪಡೆದಿದ್ದರಿಂದ ಎಲ್ಲಾ ಕ್ಷೇತ್ರಗಳಲ್ಲಿ ಅಧಿಕೃತವಾಗಿ ಅಸ್ತಿತ್ವವನ್ನು ಪಡೆದುಕೊಂಡಿತ್ತು. ಜನರ ಅನುಕೂಲತೆಗಾಗಿ ವೇದಾಧ್ಯಯನಗಳ ಅವಕಾಶ ಮತ್ತು ಅವರ ಆಡು ಭಾಷೆಯಲ್ಲಿ ವಿದ್ಯಾಭ್ಯಾಸ ನೀಡುವ, ದೊರಕಿಸಿಕೊಡುವ ಪ್ರಯತ್ನಗಳು ಬೆಳೆದು ಬರಲಿಲ್ಲ. ಆರಂಭದಲ್ಲಿ ಬ್ರಾಹ್ಮಣರಲ್ಲಿ ಪ್ರಚಲಿತವಿದ್ದ ಪೌರೋಹಿತ್ಯದ ಭಾಷೆಯಾಗಿ ಸಂಸ್ಕೃತ ಬಳಕೆಯಲ್ಲಿತ್ತು. ಇನ್ನೊಂದು, ಜನರಲ್ಲಿ ವ್ಯವಹಾರಿಕವಾಗಿ ಬಳಕೆಯಾಗುತ್ತಿದ್ದ ಜನಪ್ರಿಯ ಸಂಸ್ಕೃತ. ಬ್ರಾಹ್ಮಣರ ಸಂಸ್ಕೃತ ಭಾಷೆಯನ್ನು ಮಾತನಾಡುವುದಕ್ಕಿಂತ ಉಚ್ಚರಿಸುವುದು ಕಠಿಣವೆಂದು ಕೆಳವರ್ಗದವರು ಪ್ರಾಕೃತವನ್ನು ಬಳಕೆ ಮಾಡತೊಡಗಿದ್ದರು. ಅಲ್ಬೇರುನಿ ಹೇಳುವಂತೆ ಪ್ರಾಕೃತಕ್ಕೆ ಗೌರವ ಸ್ಥಾನವಿಲ್ಲದೆ ಕೇವಲ ಜನಸಾಮಾನ್ಯರ ಭಾಷೆಯಲ್ಲಿ ಮಾತ್ರ ಉಳಿದಿರುವ, ಕೆಲಸಕ್ಕೆ ಬಾರದ ಭಾಷೆಯಾಗಿತ್ತು. ಸಂಸ್ಕೃತವು ವಿದ್ಯಾವಂತರೂ ಸುಸಂಸ್ಕೃತರೂ ಆದ ಮೇಲ್ವರ್ಗದವರ ಭಾಷೆಯಾಗಿ ಮಾತ್ರ ಬಳಕೆಯಲ್ಲಿತ್ತು. ಸಂಸ್ಕೃತವನ್ನು ಅಪಾರ ಸಂಖ್ಯೆಯಲ್ಲಿ ಬಹುಸಂಖ್ಯಾತರು ಆಡುವ ಭಾಷೆಯಾಗಿ ಅಧಿಕೃತವಾಗಿ ಬಳಕೆ ಯಾಗುತ್ತಿದ್ದುದರಿಂದ ಶಿಕ್ಷಣದ ಭಾಷೆ ಹಾಗೂ ಮಾಧ್ಯಮವಾಗಿ ಸಂಸ್ಕೃತ ಭಾಷೆಯೇ ಬೆಳೆದು ಬಂದಿರಲು ಸಾಧ್ಯವಿದೆ. ಇದರಿಂದಾಗಿ ವೇದಗಳ ಕಾಲದಲ್ಲಿ ವಿದ್ಯಾಭ್ಯಾಸ ಕ್ರಮ ಜಾತಿಯಾಧಾರಿತವಾಗಿದ್ದು, ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿದ್ದುದನ್ನು ಗುರುತಿಸಬಹುದು. ಇದರಿಂದ ಜನಸಾಮಾನ್ಯರಲ್ಲಿ ಪ್ರಾದೇಶಿಕ ಹಾಗೂ ಸಾಮಾಜಿಕ ಅಗತ್ಯತೆಗಳ ಕೊರತೆ ಎದ್ದು ಕಾಣುತ್ತಿತ್ತು ಎನ್ನಬಹುದು.

ವೈದಿಕ ಯುಗದಲ್ಲಿ 'ಶಿಕ್ಷಣ' ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕೇಂದ್ರ ಬಿಂದುವಾಗಿತ್ತು. ಭಾಷಿಕವಾಗಿ 'ಸಂಸ್ಕೃತ' ಪ್ರಾಮುಖ್ಯತೆಯನ್ನು ಪಡೆದಿತ್ತು. ಶಿಕ್ಷಣ ವಲಯದಲ್ಲಿ ಗುರು ಶಿಷ್ಯ ಪರಂಪರೆ ವಿಶಾಲಾರ್ಥದಲ್ಲಿ ಬಳಕೆಯಾದ್ದರಿಂದ ಹೆಚ್ಚಿನ ಪ್ರಾಶಸ್ತ್ಯ ಲಭ್ಯವಾಗಿದೆ ಎನ್ನಬಹುದು. ಪ್ರಸ್ತುತದಲ್ಲಿ ಕೆಲವು ಸಂದರ್ಭಗಳಲ್ಲಿಯೂ ಸಹ ಅದರ ಮಹತ್ವವನ್ನು ಗುರುತಿಸಬಹುದು. ಈ ಬಗೆಯ ಗುರು ಶಿಷ್ಯ ಪರಂಪರೆ ಮುಂದಿನ ಕಾಲಘಟ್ಟಗಳಲ್ಲಿಯೂ ಸ್ವಲ್ಪಮಟ್ಟಿನ ಬದಲಾವಣೆಯೊಂದಿಗೆ ಬೆಳೆದು ಬಂದಿದೆ. ಅದರಲ್ಲಿ ಕರ್ನಾಟಕದಲ್ಲಿ ಈ ಗುರು ಶಿಷ್ಯ ಪರಿಕಲ್ಪನೆಗೆ ವಿಶೇಷವಾದ ಮಹತ್ವವನ್ನು ಕಲ್ಪಿಸಲಾಗಿದೆ. ಶಿಕ್ಷಣ ಕೇವಲ ಅಕ್ಷರಗಳ ಕಲಿಕೆಯಾಗಿರದೇ ಮಗುವಿನ/ವ್ಯಕ್ತಿಯ ಸಾಮಾಜಿಕ ವ್ಯಕ್ತಿತ್ವವನ್ನು ನಿರೂಪಿಸುವುದೂ ಆಗಿತ್ತು. ಈ ನಿಟ್ಟಿನಲ್ಲಿ ಶಿಕ್ಷಣ ಬಹುಮಟ್ಟಿಗೆ ಗುರಿಯನ್ನು ಸಾಧಿಸಿತ್ತು ಎಂದು ಹೇಳಬಹುದಾಗಿದೆ. ಆದರೆ ಸಾರ್ವತ್ರಿಕ ಶಿಕ್ಷಣ ನಿರ್ಲಕ್ಷ್ಯಕ್ಕೊಳಪಟ್ಟಿತ್ತೆಂದು ಹೇಳಬಹುದು. ದೇಶೀ ಭಾಷೆಗಳು ನಿರ್ಲಕ್ಷಿಸಲ್ಪಟ್ಟಿದ್ದವು. ಇದರಿಂದಾಗಿ ದೇಶೀ ಭಾಷೆಗಳ ಅಸ್ತಿತ್ವಕ್ಕಾಗಿ ಪ್ರಾದೇಶಿಕವಾಗಿ, ಸಾಮಾಜಿಕ ವರ್ಗ ಹೋರಾಟಗಳು ಮುಖ್ಯವಾಗಿ ಕಂಡು ಬಂದಿರುವುದನ್ನು ಗುರುತಿಸಲು ಸಾಧ್ಯವಿದೆ.

ವೇದಗಳ ಕಾಲದಲ್ಲಿ ಜಾತಿ, ಮತ, ಬೇಧವಿಲ್ಲದೆ ಎಲ್ಲರಿಗೂ ಶಿಕ್ಷಣ ಪಡೆಯುವ ಅವಕಾಶವಿತ್ತು. ಜಾತಿಪದ್ಧತಿ ಅಷ್ಟಾಗಿ ಬಲಗೊಂಡಿರಲಿಲ್ಲ. ಋಗ್ವೇದದ ಪ್ರಕಾರ ಆರ್ಯ ಸಮುದಾಯವನ್ನು ಹೊರತುಪಡಿಸಿ ಎಲ್ಲರೂ ಶಿಕ್ಷಣ ಪಡೆಯಲು ಅರ್ಹರಾಗಿದ್ದರು ಎಂದು ಹೇಳಿರುವುದು ಗೊಂದಲದ ವಾತಾವರಣವನ್ನು ನಿರ್ಮಾಣಮಾಡಿದೆ. ಅನ್ಯಜಾತಿಯವರಿಗೆ ಉಪನಯನದ ದೀಕ್ಷೆ ಕೊಡುವ ಮೂಲಕ ಅವರನ್ನು ವಿದ್ಯಾಭ್ಯಾಸಕ್ಕೆ ಅರ್ಹರನ್ನಾಗಿಸುತ್ತಿದ್ದರು ಎನ್ನುವಲ್ಲಿಯೇ ಜಾತಿ ಪ್ರಶ್ನೆ ಎದ್ದು ಕಾಣುತ್ತದೆ. ಅಲ್ಲದೆ ಸಂಸ್ಕೃತ ಭಾಷೆಯನ್ನು ಮಾತನಾಡು ವುದಕ್ಕಿಂತ ಉಚ್ಚರಿಸುವುದೇ ಕಠಿಣವೆಂದು ತಿಳಿದು ತಳಸಮುದಾಯದವರು ಹಿಂಜರಿಯುತ್ತಿದ್ದರು. ಇದರಿಂದ ಕೆಲವರು ಮಾತ್ರ ಶಿಕ್ಷಣ ಪಡೆಯುತ್ತಿದ್ದರು. ಇನ್ನು ಉಳಿದಂತೆ ಬಹುತೇಕ ಸಾಮಾನ್ಯರು ಶಿಕ್ಷಣದಿಂದ ವಂಚಿತರಾಗಿಯೇ ಉಳಿದಿದ್ದರು ಎಂದು ಹೇಳಬಹುದು. ಜಾತಿಯಾಧಾರಿತ ವೃತ್ತಿಶಿಕ್ಷಣವನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಹೇಳಿ ಕೊಡುವ ಪದ್ಧತಿಯಿತ್ತು. ಜೀವನದ ವಿವಿಧ ಅಗತ್ಯಗಳಾದ ವ್ಯವಸಾಯ, ಪಶುಪಾಲನೆ, ಕರಕುಶಲ ಕಲೆಗಳನ್ನು ಹೇಳಿಕೊಡಲಾಗುತ್ತಿತ್ತು. ಇವು ಯಾವೂ ಬ್ರಾಹ್ಮಣ ಅಥವಾ ಮಧ್ಯಮ ವರ್ಗದವರ ವೃತ್ತಿಯಾಗಿ ಕಂಡು ಬರುತ್ತಿರಲಿಲ್ಲ. ಅಷ್ಟೇ ಅಲ್ಲದೆ ವೃತ್ತಿ ಆಧಾರಿತ ಶಿಕ್ಷಣ ಬ್ರಾಹ್ಮಣರಿಗಿರಲಿಲ್ಲ ಎಂಬ ಅಂಶವು ಕಂಡು ಬರುತ್ತದೆ.

ವೇದಗಳ ಕಾಲದಲ್ಲಿ ವರ್ಣಾಶ್ರಮ ಧರ್ಮ ಆಚರಣೆಯಲ್ಲಿತ್ತು. ಆಯಾ ಜಾತಿಗೆ ನಿಗದಿಪಡಿಸಲ್ಪಟ್ಟ ಉದ್ಯೋಗ ಹಾಗೂ ಕೆಲಸಗಳಿಗೆ ಅನುಗುಣವಾಗಿ ಶಿಕ್ಷಣ ದೊರೆಯುತ್ತಿತ್ತು. ಅಲ್ಲದೆ ಸ್ತ್ರೀಯರ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟಿರುವುದು ಪ್ರಮುಖ ಅಂಶವಾಗಿದೆ. ಸ್ತ್ರೀಯರ ಸ್ಥಾನಮಾನಗಳು ಉನ್ನತ ಮಟ್ಟದ್ದಾಗಿತ್ತು 'ಅರ್ಧೋಹವಾ ಏಷ ಆತ್ಮನೋಯಜ್ಞಾಯ'

ಎಂಬಂತೆ ಯಜ್ಞಾರಂಭದಲ್ಲಿ ಪತಿಯಂತೆ ಪತ್ನಿಯೂ ದೀಕ್ಷೆ ಪಡೆಯುತ್ತಿದ್ದಳಂತೆ. 'ವ್ರತೋಪ ನಯನದಲ್ಲಿ ನೂತನ ಯಜ್ಞೋಪವಿತ ಧಾರುಣವಾಗುತ್ತಿತ್ತು ಎಂದು ತೈತ್ತರೀಯ ಬ್ರಾಹ್ಮಣದಲ್ಲಿ ಹೇಳಿದೆ ಎಂದು ಶಿಕ್ಷಣದ ಬುನಾದಿ ಕೃತಿಯಲ್ಲಿ ಬಿ.ಎಸ್. ರೇಣುಕಪ್ಪ ವಿವರಿಸುತ್ತಾರೆ. ಅದರಂತೆ ಗಾರ್ಗಿ, ಮೈತ್ರೇಯಿ, ಬ್ರಹ್ಮವಾದಿನಿ, ಋಷಿಕಾ ಮುಂತಾದವರು ವೇದಾಭ್ಯಾಸ ಮಾಡಿದವರಾಗಿದ್ದರು. ವೇದಗಳ ಶ್ಲೋಕಗಳನ್ನು ಮಹಿಳೆಯರು ರಚಿಸಿದ್ದರೆಂದು ನಂಬಿಕೆಯಿದೆ. ರೋಮಸ, ಲೋಪಮುದ್ರ, ಅಪಾಲ, ಕದ್ರು, ಕಾಮಾಯಿನಿ, ದೇವಯಾನಿ, ಸಾರಂಗ, ಗೌಪಯಾನ, ಊರ್ವಶಿ, ಮುಂತಾದವರ ಹೆಸರುಗಳು ಚತುರ್ವೇದದಲ್ಲಿ ಅನೇಕ ಸ್ತ್ರೀಯರು ಪರಿಣಿತರಾಗಿದ್ದರೆಂದು ಎನ್,ಎಸ್, ವೀರಪ್ಪ, ಪ್ರಾಚೀನ ಭಾರತದ ಶಿಕ್ಷಣ ಕೃತಿಯಲ್ಲಿ ಉಲ್ಲೇಖಿಸಿರುವುದು ಕಂಡು ಬರುತ್ತದೆ. ಆದರೆ ಸ್ತ್ರೀಯರಿಗೆ ಈ ವಿದ್ಯಾಕೇಂದ್ರಗಳಲ್ಲಿ ಅವಕಾಶ ಕಲ್ಪಿಸಿ ಕೊಟ್ಟಿದ್ದಕ್ಕೆ ಯಾವ ನಿದರ್ಶನಗಳಾಗಲಿ ಆಧಾರಗಳಾಗಲಿ ಕಂಡು ಬಂದಿಲ್ಲ. ಸ್ತ್ರೀಯರು ತಮ್ಮ ಗೃಹಗಳಲ್ಲಿ ವಿಶೇಷವಾಗಿ ಲಲಿತಕಲೆಗಳನ್ನು ಅಭ್ಯಾಸಿಸುತ್ತಿದ್ದರು. ಹೀಗಾಗಿ ಪ್ರಾಚೀನ ಶಿಕ್ಷಣ ಕ್ರಮದಲ್ಲಿ ಸ್ತ್ರೀ ಶಿಕ್ಷಣವನ್ನು ನಿರ್ಲಕ್ಷಿಸಲಾಗಿದೆ. ನಂತರ ೧೨ನೇ ಶತಮಾನದಲ್ಲಿ ಸ್ತ್ರೀ ಶಿಕ್ಷಣಕ್ಕೆ ಅನುವು ಮಾಡಿ ಕೊಟ್ಟರು ಎಂದು ಎಂ.ಬಸವರಾಧ್ಯ ಉಲ್ಲೇಖಿಸಿದ್ದಾರೆ. **(ಡಾ. ಎಸ್. ವಿದ್ಯಾಶಂಕರ, ಸಂ:ಎನ್. ಬಸವರಾಧ್ಯ ಸಮಗ್ರ ಸಾಹಿತ್ಯ ಸಂಪುಟ, ೨೦೦೫, ಪುಟ-೯೯೭)**

ಈ ಎಲ್ಲಾ ನಿದರ್ಶನಗಳು ಕೇವಲ ಬ್ರಾಹ್ಮಣ ವರ್ಗದವರಾಗಿದ್ದರೆಂಬುದನ್ನು ತಿಳಿಯಪಡಿಸುತ್ತದೆ. ಅಂದರೆ ಶಿಕ್ಷಣ ಕೇವಲ ಬ್ರಾಹ್ಮಣ ವರ್ಗದವರಿಗೆ ಸೀಮಿತವಾಗಿತ್ತು. ಉಳಿದಂತೆ ಇತರ ವರ್ಗದ ಸ್ತ್ರೀಯರು ಶಿಕ್ಷಣ ಪಡೆದವರಾಗಿದ್ದರು ಎಂಬುದು ತಿಳಿದು ಬರುವುದಿಲ್ಲ. ಈ ಸ್ತ್ರೀಯರಿಗೆ ಧಾರ್ಮಿಕ ಆಚರಣೆಗೆ ಅನುಕೂಲವಾಗುವಂತಹ ಶ್ಲೋಕ, ಪದ್ಯಗಳನ್ನು ಹೇಳಿಕೊಡಲಾಗುತ್ತಿತ್ತು. ಆದರೆ ಪುರುಷರಿಗೆ ಹೇಳಿಕೊಡುತ್ತಿದ್ದ ಇತರ ವಿಷಯಗಳನ್ನು ಸ್ತ್ರೀಯರಿಗೆ ಬೋಧಿಸುವ ಪರಂಪರೆ ವ್ಯವಸ್ಥೆ ಇರಲಿಲ್ಲ. ಕೊನೆಗೆ ವೇದಗಳ ಕಾಲದ ನಂತರದಲ್ಲಿ ಸ್ತ್ರೀಯರ ಸಾಮಾಜಿಕ ಅವನತಿ ಪ್ರಾರಂಭವಾಯಿತು. ಅಲ್ಲದೆ ವಿವಿಧ ಧಾರ್ಮಿಕ ನಿರ್ಬಂಧಗಳಿಗೆ ಒಳಪಡಬೇಕಾಯಿತು. ಮೂಢನಂಬಿಕೆಗಳು ಬಾಲ್ಯವಿವಾಹ, ಆಚರಣೆ, ಪದ್ಧತಿಗಳು ಜಾರಿಗೆ ಬಂದದ್ದರಿಂದ ಸಹಜವಾಗಿ ಸ್ತ್ರೀಯರು ಶಿಕ್ಷಣದಿಂದ ವಂಚಿತರಾಗ ತೊಡಗಿದರು ಎಂದು ತಿಳಿಸಲಾಗಿದೆ.

ವೇದಗಳ ಕಾಲದ ಶಿಕ್ಷಣ ಪದ್ಧತಿ ಮುಖ್ಯವಾಗಿ ಸಾಮಾಜಿಕ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದು ಸೂಚಿತವಾಗುತ್ತದೆ. ಶಿಕ್ಷಣ ಮನುಷ್ಯನ ಅಭಿವೃದ್ಧಿಯನ್ನು ನಿರ್ಧರಿಸುತ್ತದೆ. ಅದರಂತೆ ಧರ್ಮ ಅಥವಾ ಸಂಸ್ಕೃತಿಯು ಆತನ ವ್ಯಕ್ತಿತ್ವವನ್ನು ರೂಪಿಸುವುದಲ್ಲದೆ ನಿಯಂತ್ರಕವೂ ಹೌದು. ವೇದಗಳ ಕಾಲದಲ್ಲಿ ಬ್ರಾಹ್ಮಣರ ಧರ್ಮ ಪ್ರಭುತ್ವವನ್ನು, ಪ್ರಾಬಲ್ಯವನ್ನು ಪಡೆದದ್ದರಿಂದ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕ ಹಾಗೂ ರಾಜಕೀಯವಾಗಿ ನಿಯಂತ್ರಿಸುತಿತ್ತು.

ಆದ್ದರಿಂದಲೇ ಆ ಕಾಲದಲ್ಲಿ ಸಂಸ್ಕೃತ ಶಿಕ್ಷಣದ ಮಾಧ್ಯಮವಾಗಿ ಬಳಕೆಗೊಂಡಿತ್ತು. ಸಂಸ್ಕೃತ ಭಾಷೆ ಜನಸಾಮಾನ್ಯರ ಆಡುಭಾಷೆ ಸಂಪರ್ಕ ಭಾಷೆಯಾಗಿರದೆ ಕೇವಲ ಮೇಲ್ವರ್ಗದವರ ಭಾಷೆಯಾಗಿ ಕಂಡು ಬಂದದ್ದರಿಂದ ಕೇವಲ ಗ್ರಂಥಸ್ಥ ಭಾಷೆಯಾಗಿಯೇ ಉಳಿದಿರಲು ಸಾಧ್ಯವಾಗಿರಬಹುದು. ಸಂಸ್ಕೃತ ಜನಭಾಷೆಯಾಗಿ ಬಳಕೆಗೊಳ್ಳಲಿಲ್ಲ. ಇಂದಿಗೂ ಸಹ ಕೇವಲ ಗ್ರಂಥಸ್ಥ ಭಾಷೆಯಾಗಿಯೇ ಉಳಿದಿದೆ.

ಈ ಹಿನ್ನೆಲೆಯಲ್ಲಿ ವೈದಿಕ ಧರ್ಮದ ಕಠಿಣವಾದ ಭಾಷೆ, ತತ್ವ, ಸಿದ್ಧಾಂತಗಳನ್ನು ಜನಸಾಮಾನ್ಯರು ಅನುಸರಿಸಲಾಗದಿದ್ದರಿಂದ ಕ್ರಮೇಣ ಅವುಗಳನ್ನು ಕಡೆಗಣಿಸುತ್ತಾ ಬರಲಾಯಿತು. ಅಂತಹ ಸಂದರ್ಭದಲ್ಲಿ ಉದಯವಾದ ಬೌದ್ಧಧರ್ಮ, ತನ್ನದೇ ಆದ ಸರಳ ತತ್ವಾನುಷ್ಠಾನಗಳನ್ನು ಜಾರಿಗೆ ತರುವ ಮೂಲಕ ಹೊಸ ತಿರುವನ್ನು ಪಡೆದುಕೊಂಡಿತು. ಕೆಲವು ಸರಳವಾದ ತತ್ವ, ಸಿದ್ಧಾಂತಗಳನ್ನು ಜಾರಿಗೆ ತರುವಲ್ಲಿ ಹಾಗೂ ಜನಸಾಮಾನ್ಯರೂ ಅನುಸರಿಸಿ ಆಚರಣೆಗೆ ತರುವಲ್ಲಿ ಈ ಧರ್ಮ ಎಲ್ಲರಿಗೂ ಹತ್ತಿರವಾಯಿತು. ಈ ನಿಟ್ಟಿನಲ್ಲಿ ರಚನೆಗೊಂಡ ಬೌದ್ಧ ಧರ್ಮದ ಕೆಲವು ವಿಶೇಷತೆಗಳನ್ನು ಇಲ್ಲಿ ಗುರುತಿಸಬಹುದು.

**ಬ. ಬೌದ್ಧ ಕಾಲದ ಶಿಕ್ಷಣ ಸ್ವರೂಪ**

ಕ್ರಿ.ಪೂ. ೬೦೦ರ ಸುಮಾರಿನಲ್ಲಿ ಅಂದರೆ ಆರನೇ ಶತಮಾನದಿಂದ ಅರಂಭವಾದ ಬೌದ್ಧ ಧರ್ಮ ಹಿಂದೂಧರ್ಮದ ಮತ್ತೊಂದು ರೂಪವಾಗಿ ಅಸ್ತಿತ್ವಕ್ಕೆ ಬಂದಿತು. ಇದು ವೇದಕಾಲದ ಶಿಕ್ಷಣ ಪದ್ಧತಿಯ ಪ್ರತಿರೂಪವಾಗಿ ಜನ್ಮ ತಾಳಿತು. ಆದರೆ ವೈದಿಕ ಧರ್ಮದ ಶಿಕ್ಷಣ ಪದ್ಧತಿಗೆ ವಿರೋಧವಾಗಿ ಬೆಳೆಯಲು ಆರಂಭಿಸಿತು. ಜೈನ ಹಾಗೂ ಬೌದ್ಧ ಧರ್ಮಗಳು ಆಗಿನ ಕಾಲದ ವೈದಿಕ ಧರ್ಮದ ಶಿಕ್ಷಣ ಪದ್ಧತಿಗೆ ವಿರೋಧವಾಗಿ ಒಂದು ಸಾಮಾಜಿಕ ಕ್ರಾಂತಿಯಾಗಿ ರೂಪ ಗೊಂಡಿತ್ತು. ವೇದಗಳ ಕಾಲದಲ್ಲಿ ವೇದಗಳನ್ನು, ಉಪನಿಷತ್ತು, ಶ್ಲೋಕ ಮುಂತಾದವುಗಳನ್ನು ಪಠಣ ಮಾಡುವುದು ಕಠಿಣವಾಗಿತ್ತು. ಸಂಸ್ಕೃತ ಭಾಷೆ ಉಚ್ಚಾರಣೆಗೆ ತೊಂದರೆಯಾಗುತ್ತಿದ್ದರಿಂದ ಜನಸಾಮಾನ್ಯರಿಗೆ ಕ್ರಮೇಣ ಜಿಗುಪ್ಸೆ ಮೂಡ ತೊಡಗಿತು. ಇದರ ಪರಿಣಾಮವಾಗಿ ಬೌದ್ಧ ಧರ್ಮದಲ್ಲಿಯ ಶಿಕ್ಷಣ ಪದ್ಧತಿಗಳು ಸುಲಭ ರೀತಿಯಲ್ಲಿ ರಚನೆಗೊಂಡವು. ಬೌದ್ಧ ಧರ್ಮದಲ್ಲಿ ವೇದಗಳಿಗೆ ಪ್ರಾಶಸ್ತ್ಯ ನೀಡಲಿಲ್ಲ. ಎಲ್ಲಾ ಜಾತಿಯವರಿಗೂ ಜಾತಿ ಭೇದಗಳಿಲ್ಲದೇ ಶಿಕ್ಷಣಕ್ಕೆ ಅವಕಾಶ ನೀಡಿದ್ದು ಈ ಪದ್ಧತಿಯ ಉತ್ತಮ ಸಾಧನೆ ಎಂದು ಹೇಳಬಹುದು. ಈ ಪದ್ಧತಿಯ ಮತ್ತೊಂದು ವಿಶೇಷತೆ ಎಂದರೆ, ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ಬೋಧನೆಗೆ ಅವಕಾಶ ಕಲ್ಪಿಸಿದ್ದರು.

ವೇದಕಾಲದಲ್ಲಿಯ ಪದ್ಧತಿಯಂತೆ ಈ ಕಾಲದಲ್ಲಿಯೂ ಸಹ 'ಪಪ್ಪಜ್ಜ' ಎನ್ನುವ ಸಂಸ್ಕಾರದ ಮೂಲಕ ಶಿಕ್ಷಣಕ್ಕೆ ಪ್ರವೇಶ ಕಲ್ಪಿಸಲಾಗಿತ್ತು. ಇಲ್ಲಿಯೂ ಸಹ ಗುರು ಶಿಷ್ಯ ಪರಂಪರೆ ರೂಢಿಗತವಾಗಿ ಬಂದಿದೆ. ಪಪ್ಪಜ್ಜ ಎಂದರೆ ವಿದ್ಯಾರ್ಥಿಯು ಪೂರ್ವಸಿದ್ಧತೆಯಿಂದ ಹೊರ ಬರುವುದು ಎಂದರ್ಥ. ವೈದಿಕ ಶಿಕ್ಷಣ ಪದ್ಧತಿಯ ಉಪನಯನ ಸಂಸ್ಕಾರಕ್ಕೆ ಇದು

ತತ್ಸಮಾನವಾಗಿತ್ತು. ವಿದ್ಯಾರ್ಥಿಯನ್ನು ಶ್ರವಣ ಎಂದು ಕರೆಯುತ್ತಿದ್ದರು. ಬೌದ್ಧಮಠ, ವಿಹಾರಗಳು ಆಗಿನ ಶಿಕ್ಷಣ ಕೇಂದ್ರಗಳಾಗಿದ್ದವು. ಈ ಬೌದ್ಧ ವಿಹಾರಗಳಲ್ಲಿ ಸನ್ಯಾಸವನ್ನು ಸ್ವೀಕರಿಸುವ ಭಿಕ್ಷುಗಳಿಗೆ ದೀಕ್ಷೆ ನೀಡುವುದು ಶಿಕ್ಷಣ ರೂಪದಲ್ಲಿ ಬೆಳೆಯಿತು. ದೀಕ್ಷೆ ಸ್ವೀಕರಿಸುವ ಮೂಲಕ ಧರ್ಮದಲ್ಲಿ ಮತ್ತು ಸಂಘದಲ್ಲಿ ತನ್ನ ಶರಣಾಗತಿಯನ್ನು ಒಪ್ಪಿಸಬೇಕಿತ್ತು. ಅದನ್ನು 'ಬುದ್ಧಂ ಶರಣಂ ಗಚ್ಛಾಮಿ' ಎಂಬ ಮೂರು ಪ್ರಮಾಣ ವಚನಗಳ ಮೂಲಕ ಗುರುಗಳ ಬಳಿಯಲ್ಲಿದ್ದೇ ಶಿಕ್ಷಣವನ್ನು ಪಡೆಯಬೇಕಾಗಿತ್ತು. ಧಾರ್ಮಿಕ ಶಿಕ್ಷಣ ಕೇಂದ್ರಬಿಂದುವಾಗಿತ್ತು. ಯಾವ ನಿರ್ಬಂಧನೆ ಇಲ್ಲದೆ ಶಿಕ್ಷಣವನ್ನು ಕೈಕೊಳ್ಳಬೇಕೆಂದು ಹೇಳಲಾಗಿತ್ತು. ಈ ಕಾಲದಲ್ಲಿಯೂ ವೇದಕಾಲೀನ ಪದ್ಧತಿಯಲ್ಲಿದ್ದಂತೆಯೇ ಗುರುಶಿಷ್ಯರ ಸಂಬಂಧ ಕಂಡು ಬರುತ್ತದೆ. ಶಿಷ್ಯನು ಗುರುವಿನ ನಡತೆ ಹಾಗೂ ಧರ್ಮದಲ್ಲಿಯ ಅವನ ನಿಷ್ಠೆಯನ್ನು ಸದಾ ನೋಡಿ ಅದರಂತೆಯೇ ನಡೆಯಬೇಕಾಗಿತ್ತು. ಇಲ್ಲಿ ಧಾರ್ಮಿಕ, ತಾಂತ್ರಿಕ ಹಾಗೂ ಲೌಕಿಕ ವಿಷಯಗಳ ಶಿಕ್ಷಣ ಸಾಗುತ್ತಿತ್ತು. ಹಾಗೆಯೇ ವಿಹಾರಗಳ ವಸತಿ ಗೃಹದಲ್ಲಿ ಇರದೇ ಇರುವ ವಿದ್ಯಾರ್ಥಿಗಳು ಸಹ ಇಲ್ಲಿ ಶಿಕ್ಷಣ ಪಡೆಯುತ್ತಿದ್ದರು.

ವೈದಿಕ ಶಿಕ್ಷಣದಂತೆ ಬೌದ್ಧ ಶಿಕ್ಷಣವೂ ಆಧ್ಯಾತ್ಮಿಕ ದೃಷ್ಟಿಯುಳ್ಳದ್ದಾಗಿತ್ತು. ಶಿಕ್ಷಣ ಎರಡು ಹಂತಗಳಲ್ಲಿ ವ್ಯವಸ್ಥಿತಗೊಂಡಿತ್ತು. ಪ್ರಾಥಮಿಕ ಹಂತದಲ್ಲಿ ಓದು, ಬರಹ, ಲೆಕ್ಕವನ್ನು ಕಲಿಸುತ್ತಿದ್ದರು. ಅದೇ ಉನ್ನತ ಹಂತದಲ್ಲಿ ಬೌದ್ಧ ಧರ್ಮದ ಗ್ರಂಥಗಳನ್ನು ಮುಖ್ಯವಾಗಿ ಸೂಕ್ತ ಪೀಟಕ, ಧರ್ಮಪೀಟಕ ವಿನಯ ಎಂಬ ತ್ರಿಪೀಟಕಗಳ ಅಧ್ಯಯನ ಹೇಳಿ ಕೊಡ ಲಾಗುತ್ತಿತ್ತು. ಇದರ ಜೊತೆಗೆ ಧಾರ್ಮಿಕ ಶಿಕ್ಷಣ, ಬೌದ್ಧ ಸಾಹಿತ್ಯಭ್ಯಾಸ, ಗಣಿತಶಾಸ್ತ್ರ, ನೇಯ್ಗೆ, ಹೊಲಿಗೆ, ವೈದ್ಯಶಾಸ್ತ್ರ, ತರ್ಕಶಾಸ್ತ್ರ, ಅರ್ಥಶಾಸ್ತ್ರ, ಸಮರ ಶಾಸ್ತ್ರವನ್ನು ಬೋಧಿಸುತ್ತಿದ್ದರು ಎನ್ನಲಾಗಿದೆ. ಧಾರ್ಮಿಕ ಶಿಕ್ಷಣದ ಜೊತೆಗೆ ಕುಶಲಕಲೆ ಮತ್ತು ತಾಂತ್ರಿಕ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಈ ಪದ್ಧತಿಯ ಪಠ್ಯಕ್ರಮದಲ್ಲಿ ಬೌದ್ಧ ಧಾರ್ಮಿಕ ಸಾಹಿತ್ಯ ಅಧ್ಯಯನ ಅನಿವಾರ್ಯವಾಗಿತ್ತು. ತಕ್ಷಶಿಲೆಯಲ್ಲಿ ಅಸ್ತ್ರವಿದ್ಯೆ, ಮಂತ್ರಗಾರಿಕೆ, ಶಕುನವಿದ್ಯೆ, ಬಿಲ್ವಿದ್ಯೆ, ಜ್ಯೋತಿಷ್ಯೆ, ಸರ್ಪವಿದ್ಯೆ, ವೇದ ಮುಂತಾದವುಗಳನ್ನು ಬೋಧಿಸುತ್ತಿದ್ದರು. ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಶಿಕ್ಷಣಕ್ಕೆ ಅವಕಾಶವಿದ್ದತು. ಮಕ್ಕಳು ಶಸ್ತ್ರ ಚಿಕಿತ್ಸೆಯಲ್ಲಿ ಪರಿಣಿತರಾಗಿದ್ದರು. "ವೇದ, ಪುರಾಣ, ಇತಿಹಾಸ, ಕಾವ್ಯ, ವ್ಯಾಕರಣ, ಜ್ಯೋತಿಷ್ಯ, ವೇದಾಂಗ, ಸಾಂಖ್ಯ, ಶಕುನ, ನ್ಯಾಯ, ವೈಶೇಷಿಕ, ಸಂಗೀತ, ವೈದ್ಯ ಮುಂತಾದ ವಿಷಯಗಳು ಬೌದ್ಧ ಶಿಕ್ಷಣದಲ್ಲಿ ಸೇರಿಕೊಂಡಿದ್ದವು ಎಂದು ಫಾಯಿಯಾನ ಮತ್ತು ಹ್ಯೂಯತ್ಸಾಂಗ್ ಇಬ್ಬರೂ ಸೂಚಿಸಿದ್ದಾರೆ." **(ಎನ್.ಎಸ್.ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಮೈಸೂರು ವಿಶ್ವವಿದ್ಯಾಲಯ, ೧೯೮೪ ಪುಟ-೧೭೩)**

ಇಲ್ಲಿ ವೇದಕಾಲದಲ್ಲಿದ್ದ ಪಠ್ಯಕ್ರಮವೇ ಇಲ್ಲಿಯೂ ಮುಂದುವರೆದಿದೆ. ಆದರೆ ತಕ್ಷಶಿಲೆಯಲ್ಲಿ ಅಸ್ತ್ರವಿದ್ಯೆ, ಮಂತ್ರಗಾರಿಕೆ, ಶಕುನವಿದ್ಯೆ, ಬಿಲ್ವಿದ್ಯೆ, ಜ್ಯೋತಿಷ್ಯೆ, ಸರ್ಪವಿದ್ಯೆ ಮುಂತಾದವುಗಳು ಪಠ್ಯ ವಿಷಯಗಳಾಗಿ ಬೌದ್ಧರ ಕಾಲದಲ್ಲಿ ಸೇರ್ಪಡೆಗೊಂಡಿವೆ. ಯುದ್ಧಕ್ಕೆ ಸನ್ನದ್ಧರಾಗುವಂತೆ ಬೇಕಾಗುವ ತರಬೇತಿಯನ್ನು ಈ ವಿಷಯಗಳ ಮೂಲಕ ಹೇಳಿಕೊಡುತ್ತಿದ್ದರು. ಈ ವಿಷಯಗಳ

ಬೋಧನೆ ವೇದಗಳ ಕಾಲದ ಶಿಕ್ಷಣ ವ್ಯವಸ್ಥೆಯಲ್ಲಿ ಕಾಣಸಿಗುವುದಿಲ್ಲ. ಈ ಕಾಲದಲ್ಲಿ ಅನೇಕ ರಾಜರುಗಳ ಆಳ್ವಿಕೆ ಪ್ರಾರಂಭವಾಗಿ ಯುದ್ಧಗಳು ಸಾಮಾನ್ಯವಾಗತೊಡಗಿದ್ದವು. ಇದರಿಂದಾಗಿ ಯುದ್ಧಕ್ಕೆ ಸಂಬಂಧಿಸಿದ ವಿಷಯಗಳನ್ನು ಹೇಳಿಕೊಡಲು ಆರಂಭಿಸಿದರು ಎಂದು ಹೇಳಬಹುದು.

ಈ ಬೋಧನೆಯು ಮೌಖಿಕ ಪ್ರಧಾನವಾಗಿತ್ತು. ಉಪನ್ಯಾಸ ಹಾಗೂ ಚರ್ಚೆಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿತ್ತು. ಹಿಂದಿನ ಪಾಠ ಹೇಳಿದ ಮೇಲೆ ಮುಂದಿನ ಪಾಠ ಹೇಳಿಕೊಡುತ್ತಿದ್ದರು. ಆ ಕಾಲದಲ್ಲಿ ಪ್ರಚಾರದಲ್ಲಿದ್ದ 'ಪಾಲಿ' ಭಾಷೆಯನ್ನು ಬೋಧನಾ ಮಾಧ್ಯಮವನ್ನಾಗಿ ಅಳವಡಿಸಿಕೊಂಡಿದ್ದರು. ಅಂದರೆ ಪೂರ್ವದಲ್ಲಿನ ಸಂಸ್ಕೃತವನ್ನು ಅನುಸರಿಸಲಿಲ್ಲ. ಜನಭಾಷೆಯಾಗಿ ಬಳಕೆಯಲ್ಲಿದ್ದ 'ಪಾಲಿ' ಭಾಷೆಯಲ್ಲಿಯೇ ಶಿಕ್ಷಣ ಕೊಡಲು ಪ್ರಾರಂಭಿಸಿದರು. ದೇಸಿ ಅಥವಾ ಮಾತೃಭಾಷೆಯಲ್ಲಿ ಶಿಕ್ಷಣ ಬೆಳೆದು ಬಂದಿರುವುದು ಈ ಕಾಲದಿಂದ ಎನ್ನುವುದು ಖಚಿತವಾಗುತ್ತದೆ. ಇದರ ಜೊತೆಗೆ ವೈದ್ಯ, ಬಿಲ್ವಿದ್ಯೆ, ಶಿಲ್ಪ, ಚಿತ್ರಕಲೆ, ಮೂರ್ತಿಶಿಲ್ಪಕ್ಕೆ ಪ್ರಾಧಾನ್ಯತೆ ಕಲ್ಪಿಸಿ ವೃತ್ತಿ ಆಧಾರಿತ ಶಿಕ್ಷಣವನ್ನು ಹೇಳಿಕೊಡುತ್ತಿದ್ದರು. ಪಶುವೈದ್ಯೆ, ವ್ಯವಸಾಯ, ವಾಣಿಜ್ಯ, ಕೈಗಾರಿಕೆ ಆಯುರ್ವೇದಕ್ಕೆ ಸಂಬಂಧಿಸಿದ ವಿಷಯಗಳನ್ನು ಶಿಕ್ಷಣದ ವಿಷಯಗಳಾಗಿ ಹೇಳಿಕೊಡುತ್ತಿದ್ದರು.

ಆರಂಭದಲ್ಲಿ ಸ್ತ್ರೀ ಶಿಕ್ಷಣ ಇದ್ದಿರಲಿಲ್ಲ. ಕ್ರಮೇಣ ಭಿಕ್ಷುಣಿ ಸನ್ಯಾಸಿಗಳಿಗೆ ಶಿಕ್ಷಣದಲ್ಲಿ ಅನುಮತಿ ನೀಡಲಾಗಿತ್ತು. ಅವರಿಗಾಗಿಯೇ ಪ್ರತ್ಯೇಕ ಮಠ ವಿಹಾರಗಳು ಆರಂಭವಾದವು. ಅನಂತರ ವಿಹಾರಗಳು ಜ್ಞಾನ ಕೇಂದ್ರಗಳಾಗಿ ನಿರ್ಮಾಣವಾಗತೊಡಗಿದವು. ದೇಶ, ವಿದೇಶದ ಪ್ರಾಜ್ಞರು ಸಹ ಇಲ್ಲಿ ನೆರೆಯುತ್ತಿದ್ದರು. ಸ್ತ್ರೀಯರು ಕಠಿಣ ಕೆಲಸಗಳಿಗೆ ಅಸಮರ್ಥರೆಂದು ಪರಿಭಾವಿಸಿ, ಸ್ತ್ರೀಯರು ವಿಹಾರಗಳನ್ನು ತ್ಯಜಿಸುವಂತೆ ಮಾಡಲಾಗಿತ್ತು. ಅಶೋಕನ ತಂಗಿ ಸಂಘಮಿತ್ರೆ ಸಿಂಹಳ ಮುಂತಾದ ದೇಶಗಳಿಗೆ ಹೋಗಿ ಬೌದ್ಧ ಧರ್ಮ ಪ್ರಚಾರ ಮಾಡಿದ್ದರು. ಕವಿಯತ್ರಿಯಾದ ವಿಜಯಾಂಕಾ, ಸುಭ, ಸುಮೇದ ಅನುಪಮ ಮುಂತಾದವರು ಬ್ರಹ್ಮಜ್ಞಾನಿಗಳಾಗಿದ್ದರು. ನಂತರ ಶ್ರೀಮಂತ ವರ್ಗದ ಹಾಗೂ ವ್ಯಾಪಾರಿ ವರ್ಗದ ಸ್ತ್ರೀಯರು ಮಾತ್ರ ಶಿಕ್ಷಣ ಪಡೆಯುವಲ್ಲಿ ಮುಂದಾದರು. ಕ್ರಿ.ಶ.೪ನೇ ಶತಮಾನದ ವೇಳೆಗೆ ಭಿಕ್ಷುಣಿಯರ ಮಠಗಳು ಕಣ್ಮರೆಯಾದವು. ಇದರಿಂದ ಸ್ತ್ರೀಶಿಕ್ಷಣವೂ ಕೂಡಾ ಹಿನ್ನಡೆಯಾಯಿತು ಎಂದು ಎನ್.ಎಸ್. ವೀರಪ್ಪನವರು ಭಾರತೀಯ ಶಿಕ್ಷಣ ಕೃತಿಯಲ್ಲಿ ವಿವರಿಸಿದ್ದಾರೆ. (ಪುಟ-೧೭೫)

ಈ ಧರ್ಮದಲ್ಲಿ ಕಂಡು ಬಂದ ವಿನೂತನ ವಿಧಾನವೆಂದರೆ ಪ್ರವಾಸದ ಮೂಲಕ ಬೋಧನೆಯನ್ನು ಭಿಕ್ಷುಗಳಿಗೆ ಸೈದ್ಧಾಂತಿಕವಾಗಿ ಹಾಗೂ ಪ್ರಾಯೋಗಿಕವಾಗಿ ಜ್ಞಾನ ಪ್ರಸಾರ ಮಾಡುತ್ತಿದ್ದರು. ಜಾತಿಯ ಸಂಕುಚಿತ ವ್ಯವಸ್ಥೆಗೆ ಅವಕಾಶವೀಯದೆ ಮುಕ್ತವಾಗಿರಿಸಿದರು. ಸಾರಿಪುತ್ರ, ಮಹಾಮಗ್ಗಲನ್, ಅನಿರುದ್ಧ, ಆನಂದ, ರಾಹುಳ ಇವರೆಲ್ಲ ಅಂತಹ ಪರಿವ್ರಾಜಕ ಅಧ್ಯಾಪಕರಾಗಿ ಶಿಕ್ಷಣ ಮುಗಿಸಿದ ವಿದ್ಯಾರ್ಥಿಗಳೊಂದಿಗೆ ಪ್ರವಾಸ ಕೈಗೊಂಡು ಚರ್ಚೆ

ನಡೆಸುತ್ತಿದ್ದರು ಎಂಬ ಅಂಶಗಳು ಬೆಳಕಿಗೆ ಬರುತ್ತಿವೆ. ಈ ಕಾಲದಲ್ಲಿಯೇ ನಳಂದಾ, ವಲ್ಲಭಿ, ಮಿಥಿಲಾ, ತಕ್ಷಶಿಲಾ, ವಿಕ್ರಮಶಿಲಾ ಮುಂತಾದ ವಿಶ್ವವಿದ್ಯಾಲಯಗಳು ಪ್ರಾರಂಭ ಗೊಂಡವು. ಈ ಧರ್ಮದಲ್ಲಿ ಲೌಕಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಯಿತು. ವಿಶ್ವವಿದ್ಯಾಲಯಗಳಲ್ಲಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಧರ್ಮಶಾಸ್ತ್ರ ಮುಂತಾದ ಲೌಕಿಕ ವಿಷಯಗಳನ್ನು ಬೋಧನೆ ಮಾಡುತ್ತಿದ್ದರು. ಮುಖ್ಯವಾಗಿ ಇಲ್ಲಿಯೂ ಸಹ ಧಾರ್ಮಿಕ ಶಿಕ್ಷಣ ಪದ್ಧತಿ ಪ್ರಧಾನವಾಗಿತ್ತು. ಶಿಕ್ಷಣದ ಮೂಲಕ ಪ್ರವಾಸ ಕೈಗೊಂಡು ಬೌದ್ಧಧರ್ಮವನ್ನು ಪ್ರಸಾರ ಮಾಡುವುದು ಮುಖ್ಯ ಉದ್ದೇಶವಾಗಿತ್ತು. ಬೌದ್ಧ ಶಿಕ್ಷಣ ಸಂಸ್ಥೆಗಳು ದೂರ ದೇಶಗಳಾದ ಬರ್ಮಾ, ಸಿಲೋನ್, ಟಿಬೇಟ್, ಚೀನಾ, ಕೊರಿಯಾ, ಜಾವಾ ಮುಂತಾದ ದೇಶಗಳಿಂದ ವಿದ್ವಾಂಸರನ್ನು ಆಕರ್ಷಿಸಿತ್ತು. ವಿದೇಶಿ ವಿದ್ಯಾರ್ಥಿಗಳು ಭಾರತೀಯ ಸಂಸ್ಕೃತಿ, ಧರ್ಮ, ಸಾಹಿತ್ಯ, ಶಿಕ್ಷಣ ಕ್ರಮಗಳ ಬಗ್ಗೆ ಆಳವಾದ ಅಧ್ಯಯನ ಮಾಡಿ ಭಾರತೀಯ ಸಂಸ್ಕೃತಿಯನ್ನು ತಮ್ಮ ದೇಶದಲ್ಲಿಯೂ ಬಿತ್ತಿ ಬೆಳೆಸಿಕೊಂಡರು. ಫಾಹಿಯಾನ್, ಹುಯನ್‌ತ್ಸಾಂಗ್, ಇಟ್ಸಿಂಗ್ ಮುಂತಾದ ಯಾತ್ರಿಕರು ಬೌದ್ಧ ವಿಹಾರಗಳಲ್ಲಿ ತಮ್ಮ ಅವಲೋಕನ ಅನುಭವಗಳಿಗೆ ಅನುಗುಣವಾಗಿ ಶಿಕ್ಷಣ ಕ್ರಮದ ಮಹತ್ವಗಳನ್ನು ವರ್ಣಿಸಿ ಪ್ರಶಂಸಿಸಿದ್ದಾರೆ.

ಒಟ್ಟಿನಲ್ಲಿ ವೈದಿಕ ಹಾಗೂ ಬೌದ್ಧ ಕಾಲದ ಸಾಮಾಜಿಕ ವ್ಯವಸ್ಥೆ ಮುಖ್ಯವಾಗಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಷಯಗಳ ಮೇಲೆ ಹೆಚ್ಚು ಪ್ರಭಾವ ಬೀರಿತ್ತು. ಹಾಗಾಗಿ ಸಮಾಜದಲ್ಲಿ ಭಾಷಿಕವಾಗಿ ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಆಯಾ ಧರ್ಮಗಳ ಅಸ್ತಿತ್ವ ಪ್ರಬಲವಾಗಿತ್ತು. ಭಾಷೆಯಾಗಲಿ, ಧರ್ಮವಾಗಲಿ, ಸದಾ ಕಾಲಕ್ಕೆ ತಟಸ್ಥವಾಗಿರದೆ ಕಟ್ಟುಪಾಡುಗಳು ಕಠಿಣವಾಗಿದ್ದು ಎಲ್ಲರಿಗೂ ಸರಳ ರೀತಿಯಲ್ಲಿ ಅರ್ಥವಾಗುವಂತೆ ಬೌದ್ಧ ಧರ್ಮವು ತನ್ನ ಸಾಮಾಜಿಕ ವ್ರತಾಚರಣೆಗಳನ್ನು ಜನಸಾಮಾನ್ಯರಿಗೆ ಪರಿಚಯಿಸಿದರು. ಹೀಗೆ ಪರಿಚಯಿಸುವ ಮೂಲಕ ಜನಸಾಮಾನ್ಯರ ಆಡು ಭಾಷೆಯಾದ 'ಪಾಲಿ' ಭಾಷೆಯಲ್ಲಿ ಶಿಕ್ಷಣ ನೀಡಲು ಪ್ರಾರಂಭಿಸಿದರು. ಆದರೆ ಉನ್ನತ ಶಿಕ್ಷಣವನ್ನು 'ಸಂಸ್ಕೃತ' ಭಾಷೆಯಲ್ಲಿ ನೀಡುತ್ತಿದ್ದರು. ಅಂದರೆ ಮುಂದಿನ ಸಾಧನೆಗೆ ಹೆಚ್ಚು ಅನುಕೂಲವಾಗಲಿ ಎಂದು ಸಂಸ್ಕೃತವನ್ನು ಬೋಧಿ ಸುತ್ತಿದ್ದಿರಬಹುದು. ಹಾಗೂ ಸಂಸ್ಕೃತದ ಗಾಢ ಪ್ರಭಾವ ಸಹ ಅಷ್ಟರ ಮಟ್ಟಿಗಿತ್ತು ಎಂಬುದನ್ನು ಇಲ್ಲಿ ಅರ್ಥೈಸಿಕೊಳ್ಳಬಹುದು. ಒಂದು ಧರ್ಮ ಅಥವಾ ಭಾಷೆ ಹಲವಾರು ವ್ಯತ್ಯಾಸ ಅಥವಾ ವೈಷಮ್ಯಗಳಿಂದ ಪರಿವರ್ತನೆಗೊಳ್ಳಲು ಕಾರಣವಾಗುತ್ತದೆ. ಅದೇ ರೀತಿಯಲ್ಲಿ ವೈದಿಕ ಹಾಗೂ ಶಿಕ್ಷಣ ಪದ್ಧತಿಗಳೆರಡಲ್ಲೂ ಧಾರ್ಮಿಕ ತಳಹದಿಯೆ ಆಧಾರವಾಗಿದ್ದರೂ ಕೆಲವು ಪ್ರಧಾನ ವ್ಯತ್ಯಾಸಗಳುಂಟು. ವೈದಿಕ ಪದ್ಧತಿಯಲ್ಲಿ ಗುರುಕುಲ ವ್ಯವಸ್ಥೆ ಜಾರಿಯಲ್ಲಿದ್ದು ಶಿಕ್ಷಣವನ್ನು ವೈಯಕ್ತಿಕ ಉಪಕ್ರಮವಾಗಿ ಉಳಿಯುವಂತೆ ಮಾಡಿದ್ದವು. ಆದರೆ ಬೌದ್ಧ ಪದ್ಧತಿ ಮಠಗಳನ್ನು ಆರಂಭಿಸಿ ಶಿಕ್ಷಣಕ್ಕೆ ಸಾಮೂಹಿಕ ಸ್ವರೂಪವನ್ನು ಕೊಟ್ಟು ಶಿಕ್ಷಣ ಕೇಂದ್ರಗಳನ್ನು ಸಂಘಟಿಸಿತ್ತು ಎನ್ನುವುದು ತಿಳಿದು ಬರುತ್ತದೆ.

ವೈದಿಕ ಪದ್ಧತಿ ಕುಟುಂಬದ ಜೀವನವನ್ನೇ ಆಧಾರವಾಗಿರಿಸಿಕೊಂಡು ಮಕ್ಕಳನ್ನು ಕುಟುಂಬ ಜೀವನಕ್ಕೆ ಸಿದ್ಧಪಡಿಸುತ್ತಿದ್ದರು. ಬೌದ್ಧ ಪದ್ಧತಿಯಲ್ಲಿ ಕುಟುಂಬ ಜೀವನವನ್ನು ತ್ಯಜಿಸಿ ಸನ್ಯಾಸಿ ಜೀವನವನ್ನು ಆಧಾರ ಮಾಡಿಕೊಂಡು ಮೋಕ್ಷ ಸಾಧಿಸುವುದು ಮುಖ್ಯ ಗುರಿಯಾಗಿತ್ತು. ಬೌದ್ಧರಲ್ಲಿ ಕುಟುಂಬ ಜೀವನದ ಸೊಗಸು ಸೌಂದರ್ಯಗಳು ಇಲ್ಲವಾದವು. ಬಂಧುತ್ವ ಪ್ರೀತಿ ವಿಶ್ವಾಸಗಳು ದೂರವಾಗುತ್ತಾ ಬಂದು ಕೇವಲ ದೇಹ ದಂಡನೆ ಪ್ರಮುಖ ವಾಯಿತು. ಇದರಿಂದ ಐಹಿಕ ಸಾಧನೆ ಕಡೆಯ ಪ್ರಚೋದನೆ ದೊರೆಯದೇ ಹೋದದ್ದು ಬೌದ್ಧ ಧರ್ಮದ ಕ್ಷೀಣತೆಗೆ ಪ್ರಮುಖ ಕಾರಣವಾಗುತ್ತ ಬಂತು.

ವೈದಿಕ ಶಿಕ್ಷಣ ಪದ್ಧತಿಯಲ್ಲಿ ತ್ಯಾಗಜೀವನದ ಸನ್ಯಾಸಿಗಳಾಗಲು ಶಕ್ತರಾದವರಿಗೆ ಮಾತ್ರ ಅನುಮತಿ ನೀಡಿದ್ದರು. ಬೌದ್ಧರಲ್ಲಿ ದೋಷರಹಿತ ನೈತಿಕ ಜೀವನ ನಡೆಸುವ ಎಲ್ಲ ಮತದವರೂ ಬಂದು ಸಂಘಕ್ಕೆ ಸೇರುತ್ತಿದ್ದರು. ವೃತ್ತಿ ಮತ್ತು ತಾಂತ್ರಿಕ ಶಿಕ್ಷಣಕ್ಕೆ ಅವರ ಶಿಕ್ಷಣ ಸಂಸ್ಥೆಗಳಲ್ಲಿ ಪ್ರಾಮುಖ್ಯವಿದ್ದರೂ ಮೇಲ್‌ವರ್ಗದವರು ವೃತ್ತಿಗಳನ್ನು ವೈದಿಕ ಪದ್ಧತಿಯಂತೆ ಕಡೆಗಣಿಸುತ್ತ ಬಂದರು. ಅದರಿಂದ ಅವನ್ನು ಪಠ್ಯಕ್ರಮದಲ್ಲಿ ಸೇರಿಸುವುದನ್ನು ಕೈಬಿಡಲಾಯಿತು. ಶಿಕ್ಷಣ ಕೇವಲ ಗ್ರಾಂಥಿಕವಾಗುತ್ತ ಬಂತು.

ಬೌದ್ಧ ತತ್ವಗಳಲ್ಲಿ ಅಹಿಂಸೆ ಪರಮಧರ್ಮವೆನಿಸಿದ್ದು ಯುದ್ಧ ಕಾರ್ಯಗಳಿಗೆ ಸಮ್ಮತಿಸಲಿಲ್ಲ. ಅದಕ್ಕೆ ಸಂಬಂಧಿಸಿದ ಕೈಗಾರಿಕೆಗಳನ್ನು ಆ ಸಂಸ್ಥೆಗಳು ಪ್ರೋತ್ಸಾಹಿಸಲಿಲ್ಲ. ಬೌದ್ಧ ಯತಿಗಳು ಕೃತಕ ರೀತಿಯ ಸಾಧನೆಯಲ್ಲಿ ತೊಡಗಿದಂತೆ ತೋರುತ್ತಿತ್ತು. ಕುಟುಂಬ ಜೀವನದ ಪಾವಿತ್ರ್ಯದಲ್ಲಿ ಆಸಕ್ತಿಯಿದ್ದವರಿಗೆ ಆ ಶಿಕ್ಷಣ ಕ್ರಮವಾಗಿ ನಿರಾಸಕ್ತಿ ಹುಟ್ಟಿಸಿತು. ಹೀಗೆ ಬೌದ್ಧ ಧರ್ಮ ಕ್ಷೀಣಿಸುತ್ತ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತ ಬಂದಿತು ಎನ್ನಬಹುದು.

**ಕ. ಮುಸ್ಲಿಂ ಕಾಲದ ಶಿಕ್ಷಣ ಸ್ವರೂಪ**

ಕ್ರಿ.ಶ. ೮ನೇ ಶತಮಾನದಿಂದ ಮಹಮ್ಮದೀಯರ, ಆಕ್ರಮಣ ಭಾರತದ ಮೇಲೆ ಪ್ರಾರಂಭವಾಗಿತ್ತು. ಆಕ್ರಮಣದ ಮುಖ್ಯ ಉದ್ದೇಶ ಸಂಪತ್ತನ್ನು ಕೊಳ್ಳೆ ಹೊಡೆಯುವುದುದಾಗಿತ್ತು ಎಂಬುದನ್ನು ಚರಿತ್ರೆಯುದ್ಧಕ್ಕೂ ಅಭ್ಯಾಸ ಮಾಡುತ್ತಲೇ ಬಂದಿದ್ದೇವೆ. ಘಜ್ನಿ ಮಹಮ್ಮದ ಭಾರತದ ಮೇಲೆ ಅನೇಕ ಬಾರಿ ದಾಳಿ ಮಾಡಿ ತನ್ನ ದೇಶದ ಶೈಕ್ಷಣಿಕ ವ್ಯವಸ್ಥೆಯನ್ನು ಉತ್ತಮ ಪಡಿಸಿಕೊಂಡನೆಂದು ತಿಳಿದು ಬರುತ್ತದೆ. ನಂತರ ೧೧೯೨ರಲ್ಲಿ ಘೋರಿ ಮಹಮ್ಮದನು ಇಲ್ಲಿಯೇ ಆಡಳಿತ ಮಾಡಲು ಪ್ರಾರಂಭಿಸಿದ. ಇದರಿಂದ ಪ್ರಾಚೀನ ಶಿಕ್ಷಣ ಪದ್ಧತಿಯ ಜೊತೆಯಲ್ಲಿ ಅನ್ಯ ದೇಶೀಯ ಶಿಕ್ಷಣ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಘೋರಿ ಮಹಮ್ಮದನ ದಳವಾಯಿಗಳಲ್ಲಿ ಒಬ್ಬನಾದ ಭಕ್ತಿಯಾರ್ ಬೌದ್ಧ ವಿಹಾರಗಳನ್ನು ನಾಶಮಾಡಿ ಆ ಜಾಗದಲ್ಲಿ ಮಸೀದಿಗಳನ್ನು ನಿರ್ಮಾಣ ಮಾಡಿದನು. ಅವುಗಳೊಂದಿಗೆ 'ಮಕ್ತಾಬ್' ಎಂಬ ಪ್ರಾಥಮಿಕ ಶಾಲೆಗಳನ್ನು ಆರಂಭಿಸಿದನು. ಮಹಮ್ಮದೀಯರ ಪ್ರಾಬಲ್ಯ ಹೆಚ್ಚಿದಂತೆಲ್ಲ ಹಿಂದೂ ಬೌದ್ಧ ಶಿಕ್ಷಣ ಸಂಸ್ಥೆಗಳು ನಶಿಸುತ್ತ ಬಂದವು.

ಗುಲಾಮಿ, ಖಿಲ್ಜಿ, ತುಘಲಕ್, ಸೈಯದ್, ಮೊಗಲ್ ವಂಶದವರು ದೆಹಲಿಯಲ್ಲಿ ತಮ್ಮ ರಾಜಧಾನಿಯನ್ನು ಸ್ಥಾಪಿಸಿಕೊಂಡು ಉತ್ತರ ಭಾರತವನ್ನು ಆಳಲು ಆರಂಭಿಸಿದರು. ಬಿಜಾಪುರದಲ್ಲಿ ಬಹುಮನಿ ರಾಜ್ಯಗಳು ತಲೆ ಎತ್ತಿದ್ದವು. ಇವರದು 'ಖುರಾನ' ಪವಿತ್ರ ಗ್ರಂಥ. ಇದರಲ್ಲಿ ಶಿಕ್ಷಣವನ್ನು ಪವಿತ್ರ ಕರ್ತವ್ಯವೆಂದು ಹೇಳಲಾಗಿದೆ. ಸುವರ್ಣದಾನಕ್ಕಿಂತ ವಿದ್ಯಾದಾನ ಮಾಡುವುದು ಉತ್ಕೃಷ್ಟವೆಂದು ಖುರಾನಿನಲ್ಲಿ ಒಂದು ಕಡೆ ಹೇಳಲಾಗಿದೆ. ತಂದೆ ಮಗನಿಗೆ ಆಸ್ತಿಗಿಂತ ವಿದ್ಯೆ ನೀಡುವುದು ಮುಖ್ಯವೆಂದು ಪರಿಗಣಿಸಲ್ಪಟ್ಟಿತ್ತು ಎಂದು ಭಾರತೀಯ ಶಿಕ್ಷಣ ಇತಿಹಾಸ ಕೃತಿಯಲ್ಲಿ ತಿಳಿಸಲಾಗಿದೆ. ಮುಸ್ಲಿಂ ಶಿಕ್ಷಣ ಪದ್ಧತಿ ಹಿಂದೂ ಧರ್ಮದ ಮೇಲೂ ತನ್ನ ಪ್ರಭಾವ ಬೀರಿತು. ಹಿಂದೂಗಳು ಕೂಡಾ ರಾಜಾಶ್ರಯ ಪಡೆಯಲು, ಉನ್ನತ ಹುದ್ದೆಗಳನ್ನು ಪಡೆದುಕೊಳ್ಳಲು ಪರ್ಶಿಯನ್ ಮತ್ತು ಅರೇಬಿಕ್ ಭಾಷೆಗಳನ್ನು ಕಲಿಯುತ್ತಿದ್ದರು.

ಧಾರ್ಮಿಕ ತಳಹದಿಯೇ ಶಿಕ್ಷಣದ ಮುಖ್ಯ ಗುರಿಯಾಗಿತ್ತು. ಜ್ಞಾನದ ಮೂಲಕವೇ ಮುಕ್ತಿ ಸಾಧ್ಯ ಎಂಬುದು ಇಸ್ಲಾಂ ಧರ್ಮದ ನಂಬಿಕೆಯಾಗಿತ್ತು. ಹಾಗೆಯೇ ಇಸ್ಲಾಂ ಧರ್ಮವನ್ನು ಪ್ರಚಾರ ಮಾಡುವುದು ಪ್ರಮುಖವಾದ ಮೂಲ ಉದ್ದೇಶವಾಗಿತ್ತು. ಇತರ ಧರ್ಮಗಳಿಗಿಂತ ಇಸ್ಲಾಂ ಧರ್ಮ ಉನ್ನತ ಮಟ್ಟದ್ದು ಎಂದು ಮನದಟ್ಟು ಮಾಡುವುದು ಮುಸ್ಲೀಮರ ಇನ್ನೊಂದು ಗುರಿಯಾಗಿತ್ತು. ಅದಕ್ಕನುಗುಣವಾಗಿ ಸಾಮಾಜಿಕ ಸಂಪ್ರದಾಯಗಳನ್ನು ರೂಪಿಸಲಾಯಿತು. ಈ ಧರ್ಮದಲ್ಲಿ ಲೌಕಿಕ ಜೀವನಕ್ಕೆ ಹೆಚ್ಚು ಮಹತ್ವ ನೀಡಲಾಯಿತು.

ವೇದ ಹಾಗೂ ಬೌದ್ಧ ಕಾಲದಲ್ಲಿ ಸಂಸ್ಕಾರದ ಮೂಲಕ ಮಗುವಿನ ಶಿಕ್ಷಣ ಪ್ರಾರಂಭವಾಗುವಂತೆ ಇಲ್ಲಿಯೂ ಸಹ ಮಗುವಿಗೆ ನಾಲ್ಕು ವರ್ಷ, ನಾಲ್ಕು ತಿಂಗಳು, ನಾಲ್ಕು ದಿನಗಳ ನಂತರ 'ಬಿಸ್ಮಿಲ್ಲಾ' ಎಂಬ ಕಾರ್ಯಕ್ರಮದ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸುತ್ತಿದ್ದರು. ಈ ಧರ್ಮದಲ್ಲಿ ಪ್ರಾಥಮಿಕ ಹಾಗೂ ಉನ್ನತ ಶಿಕ್ಷಣ ಪದ್ಧತಿಗಳೆರಡು ಕಂಡು ಬರುತ್ತವೆ. ಮಸೀದಿಗಳಿಗೆ ಸೇರಿಕೊಂಡಿರುವ 'ಮಕ್ತಾಬ್' ಪ್ರಾಥಮಿಕ ಶಿಕ್ಷಣ ಹಾಗೂ 'ಮದ್ರಾಸಾ' ಎಂಬ ಉನ್ನತ ಶಿಕ್ಷಣ ಪದ್ಧತಿಗಳು ಚಾಲ್ತಿಯಲ್ಲಿದ್ದವು. ಇವೆರಡು ರಾಜಾಶ್ರಯದಿಂದಲೂ, ಸರ್ಕಾರದ ಸಹಾಯದಿಂದಲೂ ನಡೆಯುತ್ತಿದ್ದವು. ಇವುಗಳ ಜೊತೆ ಜೊತೆಯಾಗಿ ಪಾಠಶಾಲೆಗಳೂ ಇದ್ದವು. ಪ್ರಾಥಮಿಕ ಶಿಕ್ಷಣದಲ್ಲಿ ಅಕ್ಷರಮಾಲೆಯ ಕಲಿಕೆಯನ್ನು ಹೇಳಿಕೊಡುತ್ತಿದ್ದರು, ಖುರಾನಿನ ಪವಿತ್ರ ಗ್ರಂಥದ ಭಾಗಗಳಿಂದ ಶಿಕ್ಷಣವನ್ನು ಪ್ರಾರಂಭಿಸುತ್ತಿದ್ದರು. ಮೊದಲು ಅಕ್ಷರ ಜ್ಞಾನವನ್ನು ತಿಳಿಸಿದ ನಂತರ ಧಾರ್ಮಿಕ ಪ್ರಾರ್ಥನೆಗಳನ್ನು ಕಂಠಪಾಠ ಮಾಡಿಸುವುದು ಮುಖ್ಯವಾಗಿತ್ತು.

ಸಮಾಜದಲ್ಲಿ ಶಿಕ್ಷಕರಿಗೆ ಉತ್ತಮ ಸ್ಥಾನವಿತ್ತು. ವಿದ್ಯಾರ್ಥಿಗಳು ಶಿಕ್ಷಕರನ್ನು ತುಂಬಾ ಗೌರವದಿಂದ ಕಾಣುತ್ತಿದ್ದರು. ವೇದಕಾಲ ಹಾಗೂ ಬೌದ್ಧ ಕಾಲದಲ್ಲಿ ಇದ್ದಂತೆ ಗುರು ಶಿಷ್ಯ ಪರಂಪರೆ ಬಹಳ ಕಟ್ಟುನಿಟ್ಟಾಗಿ ಇರಲಿಲ್ಲವೆಂಬುದು ತಿಳಿದು ಬರುತ್ತದೆ. ಒಬ್ಬ ಗುರು ಒಬ್ಬ

ಶಿಷ್ಯರಿದ್ದಂತೆ ಪ್ರತ್ಯೇಕತೆ ಕಂಡುಬರುವುದಿಲ್ಲ. ಪ್ರಾರ್ಥನಾ ಮಂದಿರವಾದ ಮಸೀದಿ ಮೂಲಕ ಸಾಮೂಹಿಕ ಶಿಕ್ಷಣ ಹೆಚ್ಚು ಕಂಡು ಬರುತ್ತಿತ್ತು. ವಿದ್ಯೆಯ ಮೂಲಕ ಗುರುಗಳು ಶಿಷ್ಯರನ್ನು ನೈತಿಕವಾಗಿ ಹಾಗೂ ಲೌಕಿಕವಾಗಿ ಒಳ್ಳೆಯವರನ್ನಾಗಿ ಮಾಡುತ್ತಿದ್ದರು. ವಿದ್ಯಾಭ್ಯಾಸದ ಕೊನೆ ಘಟ್ಟದಲ್ಲಿ ವಿದ್ಯಾರ್ಥಿಗಳಿಂದ ಗುರುಸೇವೆಯನ್ನು ಅಪೇಕ್ಷಿಸುತ್ತಿದ್ದರು. ಇದು ಎಲ್ಲಾ ಕಾಲದಲ್ಲಿಯೂ ಯಥಾರೀತಿಯಾಗಿ ನಡೆದುಕೊಂಡು ಬಂದಿದೆ.

ಪ್ರಾಥಮಿಕ ಹಂತದಲ್ಲಿ ಓದು, ಬರಹ ಹಾಗೂ ಸುಲಭ ಅಂಕ ಗಣಿತವನ್ನು ಹೇಳಿಕೊಡಲಾಗುತ್ತಿತ್ತು. ಎರಡು ರೀತಿಯ ಕಲಿಕೆಯನ್ನು ಶಿಕ್ಷಣದಲ್ಲಿ ಅಳವಡಿಸಲಾಗಿತ್ತು. ಧಾರ್ಮಿಕ ಶಿಕ್ಷಣ ಅಡಿಯಲ್ಲಿ ಖುರಾನಿನ ಭಾಗಗಳನ್ನು ಅದರ ವ್ಯಾಖ್ಯಾನವನ್ನು ಆಳವಾಗಿ ಅಧ್ಯಯನ ಮಾಡಲು ಕಲಿಸುತ್ತಿದ್ದರು. ನಂತರ ಮಾಧ್ಯಮಿಕ ಹಾಗೂ ಉನ್ನತ ಶಿಕ್ಷಣದ ಹಂತದಲ್ಲಿ ಅನೇಕ ವಿಷಯಗಳನ್ನು ಕಲಿಸುತ್ತಿದ್ದರು. ಬ್ರಹ್ಮಜ್ಞಾನ, ಖಗೋಲ, ನೀತಿಶಾಸ್ತ್ರ, ಆಡಳಿತ ಪದ್ಧತಿ, ಬೀಜಗಣಿತ, ಭೂಮಿತಿ, ಅಂಕಗಣಿತ, ಭೌತಶಾಸ್ತ್ರ, ವೈದ್ಯಶಾಸ್ತ್ರ, ಅಲಂಕಾರ, ನ್ಯಾಯಶಾಸ್ತ್ರ, ನೈಸರ್ಗಿಕ ತತ್ವಶಾಸ್ತ್ರ, ಕರ್ಮ ತಂತ್ರ ಶಾಸ್ತ್ರ, ಜಮಾ ಖರ್ಚು, ಕೃಷಿ, ಅರ್ಥಶಾಸ್ತ್ರ, ಇತಿಹಾಸ ಮುಂತಾದ ಪಠ್ಯ ವಿಷಯಗಳನ್ನು ಬೋಧಿಸುತ್ತಿದ್ದರು ಎನ್ನಲಾಗಿದೆ. ವಿದ್ಯಾರ್ಥಿ ತನ್ನ ಒಲವಿಗೆ ತಕ್ಕಂತೆ ಬೇಕಾದ ವಿಷಯಗಳನ್ನು ಕಲಿಯುತ್ತಿದ್ದರು. ಮಾಧ್ಯಮಿಕ ಹಾಗೂ ಉಚ್ಚ ಶಿಕ್ಷಣವು ಸಾಮಾನ್ಯವಾಗಿ ಹನ್ನೆರಡು ವರ್ಷವಿದ್ದಿತು. ಆಗ ಈ ಪಠ್ಯವಿಷಯ ಗಳನ್ನೇ ಪ್ರಕಾರಗಳಾಗಿ ವಿಂಗಡಿಸಿ ಹೇಳುವ ವ್ಯವಸ್ಥೆಯಿತ್ತು ಎಂಬುದು ಪ್ರಾಚೀನ ಭಾರತದ ಶಿಕ್ಷಣ ಕೃತಿಯಿಂದ ತಿಳಿದು ಬರುತ್ತದೆ.

ಅಕ್ಬರನ ಕಾಲದಲ್ಲಿ ಮಧ್ಯಯುಗದ ಶಿಕ್ಷಣ ನೂತನವಾಗಿ ಆರಂಭವಾಯಿತು. ಕಲೆ, ಸಾಹಿತ್ಯ, ತತ್ವಶಾಸ್ತ್ರ, ಧಾರ್ಮಿಕ ಜ್ಞಾನ, ಶಿಕ್ಷಣ, ಲಲಿತ ಕಲೆ, ಇತಿಹಾಸ ಮುಂತಾದ ಕ್ಷೇತ್ರಗಳಲ್ಲಿ ಪ್ರಗತಿ ಕಂಡು ಬಂದಿತು. ಅಕ್ಬರನ ಸಚಿವ ಅಬ್ದುಲ್ ಫಜಲ್ ಸಹಾಯದಿಂದ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳಿಗೆ ಉಚಿತವೆನಿಸುವ ಪಠ್ಯಕ್ರಮವನ್ನು ರೂಪಿಸಿದನು. ಅಸ್ತಿತ್ವದಲ್ಲಿದ್ದ ಅಂದಿನ ಶಿಕ್ಷಣ ಸ್ವರೂಪದಲ್ಲಿ ಆಗಬೇಕಾಗಿದ್ದ ಸುಧಾರಣೆಗಳನ್ನು ತಂದನು. ಅದನ್ನು ಸರ್ಕಾರದ ನಿರ್ದೇಶನಗಳ ಮೂಲಕ ರಾಷ್ಟ್ರದಾದ್ಯಂತ ಪ್ರಚಾರ ಮಾಡಿದನು.

ಮುಸ್ಲಿಂ ಜನಜೀವನವನ್ನು ಸುಧಾರಿಸಲು, ಭಾರತೀಯ ಶಿಕ್ಷಣ ಪದ್ಧತಿಯಲ್ಲಿದ್ದ ಹಲವು ನೂತನ ಪಠ್ಯಗಳನ್ನು ಮುಸ್ಲಿಂ ಪಾಠಶಾಲೆಗಳಲ್ಲಿ ಸೇರಿಸಲಾಯಿತು. ಹಿಂದೂಗಳು ಮಕ್ತಾಬ್ ಮತ್ತು ಮದ್ರಾಸಾಗಳಲ್ಲಿ ಸೇರಿ ಅರಬ್ಬೀ ಮತ್ತು ಪರ್ಷಿಯನ್ ಭಾಷೆಗಳನ್ನು ಅಭ್ಯಾಸಿಸುತ್ತಿದ್ದರು. ಈತನ ಆಡಳಿತ ಕ್ಷೇತ್ರಗಳಲ್ಲಿ ಹಿಂದೂಗಳಿಗೂ ಅನುಕೂಲವಾಗುವುದಕ್ಕೆಂದು ಹಿಂದೂ ಪಾಠಶಾಲೆಗಳನ್ನು ಏರ್ಪಡಿಸಿದ್ದನು.

ಅರೇಬಿಕ್ ಹಾಗೂ ಪರ್ಷಿಯನ್ ಭಾಷೆಯಲ್ಲಿ ಶಿಕ್ಷಣವನ್ನು ಬೋಧಿಸುತ್ತಿದ್ದರು. ಪ್ರಶ್ನೋತ್ತರ ಮತ್ತು ಉಪನ್ಯಾಸ ಪದ್ಧತಿಗಳನ್ನು ಅಳವಡಿಸಲಾಗಿತ್ತು. ಅರಬ್ಬೀ ಭಾಷೆ ಪ್ರಮುಖವಾಗಿ

ಶಿಕ್ಷಣ ಮಾಧ್ಯಮವಾಗಿತ್ತು. ಅಕ್ಷರಗಳನ್ನು ತೋರಿಸಿ, ಉಚ್ಚರಿಸಿ, ಅಕ್ಷರಾಭ್ಯಾಸ ಮಾಡಿಸುತ್ತಿದ್ದರು. ಉಚ್ಚಾರಣೆಯ ಸ್ಪಷ್ಟತೆಗೆ ಹೆಚ್ಚು ಗಮನ ಕೊಡಲಾಗಿತ್ತು. ಅದರ ಅರ್ಥದ ಕಲಿಕೆಗೆ ಗಮನ ಹರಿಸುತ್ತಿರಲಿಲ್ಲ. ಅನಂತರ ಬರವಣಿಗೆಯನ್ನು ಕಲಿಸಲಾಗುತ್ತಿತ್ತು. ಗುಲಿಸ್ಥಾನ್ ಮತ್ತು ಬೇಸ್ಥಾನ್ ಕಥೆಗಳ ಮೂಲಕ ನೀತಿ ಪಾಠಗಳನ್ನು ಹೇಳಿಕೊಡುತ್ತಿದ್ದರು. ಸರಳ ಅಂಕಗಣಿತ, ಪರಿವರ್ತನ ವಿಧಾನ, ಪತ್ರ ವ್ಯವಹಾರ, ಅರ್ಜಿ ಬರೆಯುವುದನ್ನು ಅರಬ್ಬಿ ಭಾಷೆಯಲ್ಲಿ ಹೇಳಿಕೊಡಲಾಗುತ್ತಿತ್ತು. 'ಖುರಾನ್' ಜೊತೆ 'ಕಾಲಕಬ್ರಿ' 'ಕರಿಯ' 'ಮಮ್ಕಿಯಾ' ಗಳನ್ನು ಹೇಳಿಕೊಡುತ್ತಿದ್ದರೆನ್ನಲಾಗಿದೆ. ಪರ್ಶಿಯನ್ ವ್ಯಾಕರಣವನ್ನು ಕಂಠಪಾಠ ಮಾಡಿಸುತ್ತಿದ್ದರು. ಬರವಣಿಗೆಯನ್ನು ಸ್ಪಷ್ಟವಾಗಿ ಕಲಿಯುವಂತೆ ಹೆಚ್ಚು ಕಾಲ ಕಲಿಸುತ್ತಿದ್ದರು. ಒಟ್ಟಾರೆಯಾಗಿ ಪ್ರಾಥಮಿಕ ಶಿಕ್ಷಣ ಮುಗಿಯುವುದ ರೊಳಗಾಗಿ ಕೇವಲ ಅಕ್ಷರ ಕಲಿಕೆ, ಓದು, ಬರಹ ಅಷ್ಟೇ ಅಲ್ಲದೇ ಜೀವನಕ್ಕೆ ಅಗತ್ಯವಾಗಿ ಬೇಕಾಗುವಂತಹ ಮಾಹಿತಿಗಳನ್ನು ಕಲಿಸಿಕೊಡುತ್ತಿದ್ದರು. ಆ ಕಲಿಕೆ ಮಗುವಿನ ಜೀವನದಲ್ಲಿ ದೈನಂದಿಕವಾಗಿ ಬಳಕೆಯಾಗುವ ರೀತಿಯಲ್ಲಿ ವಿಷಯಗಳನ್ನು ಹೇಳಿಕೊಡುತ್ತಿದ್ದರು ಎನ್ನುವುದು ಇದರಿಂದ ವ್ಯಕ್ತವಾಗುತ್ತದೆ.

ಕಾಲಾಂತರದಲ್ಲಿ ಮಕ್ತಾಬ್ ಹಾಗೂ ಮದ್ರಾಸಾಗಳು ಜನಸಾಮಾನ್ಯರಿಗೆ ಸಾರ್ವತ್ರಿಕ ಶಿಕ್ಷಣ ನೀಡುತ್ತಿರಲಿಲ್ಲ. ಅಗತ್ಯವಿದ್ದವರಿಗೆ ಮಾತ್ರ ಪೂರೈಕೆಯಾಗುತ್ತಿತ್ತು. ೧೩ನೇ ಶತಮಾನದಿಂದ ಸುಮಾರು ವರ್ಷಗಳವರೆಗೆ ಕೇವಲ ದಂಗೆಗಳು ನಡೆಯುತ್ತಾ ಬಂದಿರುವುದರಿಂದ ರಾಜರು ಶಿಕ್ಷಣಕ್ಕೆ ಹೆಚ್ಚಿನ ಆಸಕ್ತ ನೀಡಲಿಲ್ಲ. ಇದರಿಂದಾಗಿ ಸರ್ಕಾರಕ್ಕಿಂತ ಖಾಸಗಿ ಸಂಸ್ಥೆಯವರು ಆರಂಭಿಸಿದ ಶಿಕ್ಷಣ ಸಂಸ್ಥೆಗಳು ದೃಢವಾಗಿ ಬೆಳೆದು ಬರಲು ಸಾಧ್ಯವಾಯಿತು.

ಮುಸ್ಲಿಂರಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ಕಲ್ಪಿಸದೇ ಇದ್ದುದು, ಅವರಲ್ಲಿ ಜಾರಿಯಲ್ಲಿದ್ದ 'ಪರದಾ' ಪದ್ಧತಿಯಿಂದಾಗಿದೆ. ಈ ವ್ಯವಸ್ಥೆಯಿಂದಾಗಿ ಅನೇಕ ಹೆಣ್ಣು ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದರು. ಮಸೀದಿಗಳಿಗೆ ಸೇರಿದ ಮಕ್ತಾಬ್‌ಗಳಲ್ಲಿ ಕೆಲವರು ಮಾತ್ರ ಪ್ರಾಥಮಿಕ ಭಾಷಾಭ್ಯಾಸವಾದ ಓದು, ಬರಹ, ಲೆಕ್ಕಗಳನ್ನು ಕಲಿಯುತ್ತಿದ್ದರು. ಧಾರ್ಮಿಕ ವಿಷಯಗಳು, ಗೃಹಪಯೋಗಿ ವಿಷಯಗಳನ್ನು ಖಾಸಗಿಯಾಗಿ ತಮ್ಮ ಮನೆಯಲ್ಲಿಯೇ ಪಡೆಯುತ್ತಿದ್ದರು. ಸ್ತ್ರೀಯರು ಪುರುಷರಿಗಿಂತ ಕಡಿಮೆ, ಅವರ ಸ್ಥಾನ ಕೇವಲ ಅಡುಗೆ ಮನೆಗೆ ಮಾತ್ರ ಸೀಮಿತವಾಗಿದೆ ಎಂಬ ತಾರತಮ್ಯಗಳೇ ಸ್ತ್ರೀ ಶಿಕ್ಷಣ ಕುಂದಲು ಕಾರಣಗಳಾಗಿವೆ. ಅಂತಹ ಪರಿಸ್ಥಿತಿಯಲ್ಲಿಯೂ ಕೆಲವು ಸ್ತ್ರೀಯರು ಶಿಕ್ಷಣ ಪಡೆದಿದ್ದರು. ಉದಾಹರಣೆಗೆ : ಬಾಬರನ ಮಗಳು ಗುಲ್ಬದನ ಬೇಗಂ, ಸುಲ್ತಾನ್ ರಜಿಯಾ, ನೂರಜಹಾನ್, ಮಮ್ತಾಜ್, ಷಹಜಹಾನ್ ಮಗಳು ಜಹಾನರ, ಔರಂಗಜೇಬನ ಮಗಳು ಜೇಬುನ್ನಿಸಾ ಮುಂತಾದವರು ಶಿಕ್ಷಣ ಪಡೆದವರಾಗಿದ್ದರು. ಔರಂಗಜೇಬನ ಮಗಳು ಜೇಬುನ್ನಿಸಾ ಅರೇಬಿಕ್ ಹಾಗೂ ಪರ್ಶಿಯನ್ ಭಾಷೆಯಲ್ಲಿ ಕವಯಿತ್ರಿ ಆಗಿದ್ದಳು. ಅದಕ್ಕೆ ದಿವಾ-ನಿ-ಮಶಾಪಿ ಎಂಬ ಕೃತಿ ನಿದರ್ಶನವಾಗಿದೆ ಎಂದಿರುವುದು ಎನ್.ಆರ್. ಗಂಗಾಧರಪ್ಪ ಅವರ ಶಿಕ್ಷಣದ ಮೂಲ

ತತ್ವಗಳು ಕೃತಿಯಿಂದ ತಿಳಿದು ಬರುತ್ತದೆ. ಇವರೆಲ್ಲರೂ ಶ್ರೀಮಂತ ಮೇಲ್ವರ್ಗದವರಾಗಿದ್ದು, ಜನಸಾಮಾನ್ಯ ಮಹಿಳೆಯರಿಗೆ ಶಿಕ್ಷಣ ಲಭ್ಯವಿರಲಿಲ್ಲ ಎಂಬುದು ಇದರಿಂದ ತಿಳಿದು ಬರುತ್ತದೆ. ಮಹಮ್ಮದೀಯರು ಕೇವಲ ಧಾರ್ಮಿಕ, ಲೌಕಿಕ ಶಿಕ್ಷಣಗಳಲ್ಲಿ ಆಸಕ್ತಿ ತೋರದೆ, ದಲಿತ ಕಲೆಗಳ ಶಿಕ್ಷಣಕ್ಕೂ ಪ್ರೋತ್ಸಾಹ ಕಲ್ಪಿಸಿದ್ದರು. ಸಂಗೀತ, ನೃತ್ಯ, ಚಿತ್ರಕಲೆ, ನೇಯ್ಗೆಯ ಕೆಲಸ, ಲೋಹದ ಕೆಲಸ, ಕಟ್ಟಡದ ಕೆಲಸ, ಶಯ್ಯಾಗಾರ, ಕ್ರೀಡಾಗಾರ, ಉದ್ಯಾನ ಮುಂತಾದ ಕಲೆಗಳ ಶಿಕ್ಷಣ, ಬೆಳವಣಿಗೆಗೆ ಉತ್ಸುಕರಾಗಿದ್ದರು. ಜೊತೆಗೆ ಸಾಹಿತ್ಯ ಕೃತಿಗಳ ರಚನೆಗೆ ಪ್ರೇರಣೆ ನೀಡಿದರು. ಅಮೀರ್ ಖುಸ್ರು, ಅಲ್ಬೇರುನಿ, ಫಿರೋಜ್ ಷಾ, ಬಾಬರ್, ಅಬ್ದುಲ್ ಫಜಲ್ ಮುಂತಾದ ಪಂಡಿತರಿದ್ದರು. ಅಕ್ಬರನ ಕಾಲದಲ್ಲಿ ಅನೇಕ ಸಂಸ್ಕೃತ ಗ್ರಂಥಗಳು ಪಾರ್ಸಿ ಭಾಷೆಗೆ ಭಾಷಾಂತರಿಸಲಾಗಿದೆಂದು ಉಲ್ಲೇಖಿಸಿದ್ದಾರೆ. ಆಗ್ರ, ಡೆಲ್ಲಿ, ಔದ್‌ಪುರ್, ಬೀದರ್, ಬಿಜಾಪುರ, ಸಯಾಲ್ಕೋಟ್, ಬಂಗಾಳ ಮುಂತಾದ ಶಿಕ್ಷಣ ಕೇಂದ್ರಗಳಾಗಿದ್ದವು.

ಇದುವರೆಗೂ ನೋಡಿದಂತೆ ವೇದ, ಬೌದ್ಧ ಹಾಗೂ ಮುಸ್ಲಿಂ ಈ ಮೂರು ಕಾಲಘಟ್ಟಗಳಲ್ಲಿಯೂ ಶಿಕ್ಷಣ ಎನ್ನುವುದು ಪ್ರಮುಖವಾಗಿ ಬೆಳೆದು ಬಂದಿದ್ದು ಧಾರ್ಮಿಕ ನೆಲೆಗಟ್ಟಿನಲ್ಲಿಯೇ. ಅದು ಆಡಳಿತದಲ್ಲಿ ಪ್ರಚಲಿತವಿದ್ದ ವರ್ಗವೇ ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ತನ್ನ ಧರ್ಮದ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದೆ. ಹಾಗೆಯೇ ಅಲ್ಲಿಯ ಶಿಕ್ಷಣವು ಸಹ ಧರ್ಮದ ಹಿನ್ನೆಲೆಯುಳ್ಳದ್ದಾಗಿದೆ. ಆ ಧರ್ಮದ ಭಾಷೆಯಲ್ಲಿಯೇ ಶಿಕ್ಷಣವನ್ನು ಬೋಧಿಸಲಾಗಿತ್ತು. ಮಾಧ್ಯಮವು ಸಹ ಆ ಧರ್ಮದ ಭಾಷೆಯೇ ಆಗಿತ್ತೆಂಬುದನ್ನು ಕಾಣಬಹುದಾಗಿದೆ. ಆದರೆ ಮುಸ್ಲಿಂ ಕಾಲದಲ್ಲಿ ಪಾರಸಿ ಭಾಷೆಯಲ್ಲಿಯೇ ಶಿಕ್ಷಣ ಮಾಧ್ಯಮವು ನಡೆಯುತ್ತಿದ್ದುದರಿಂದ ದೇಶಭಾಷೆಯನ್ನು ಅಲ್ಲಗಳೆಯುತ್ತಾ ಬರಲಾಯಿತು. ಈ ಮೂರು ಕಾಲಘಟ್ಟಗಳಲ್ಲಿಯೂ ಶಿಕ್ಷಣವು ಸಂಪೂರ್ಣವಾಗಿ ಸಾರ್ವತ್ರಿಕವಾಗಲಿಲ್ಲ. 'ಉಳ್ಳವರು ಶಿವಾಲಯವ ಮಾಡುವರಯ್ಯ' ಎಂಬ ಉಕ್ತಿಯಂತೆ ಅವಕಾಶವಿದ್ದವರು ಮಾತ್ರ ಶಿಕ್ಷಣವನ್ನು ಪಡೆಯುವಂತಾಗಿತ್ತು. ಕಾರಣ ಪ್ರಾಚೀನ ಕಾಲದಲ್ಲಿ ಶಿಕ್ಷಣ ವ್ಯವಸ್ಥೆ ಹೆಚ್ಚು ಅನುಕೂಲವಾಗದೇ ಇರುವುದು. ಲಿಪಿಯ ಬೆಳವಣಿಗೆ ಸಾಕಷ್ಟು ಸುಧಾರಿಸದಿರುವುದರಿಂದ ಜನಸಾಮಾನ್ಯರು ಶಿಕ್ಷಣದಿಂದ ವಂಚಿತರಾಗಿ ಉಳಿಯುವಂತಾಯಿತು. ಇನ್ನು, ಇದ್ದಂತಹ ಅವಕಾಶದಲ್ಲಿಯೇ ಉತ್ತಮ ಸಮಾಜ ಹಾಗೂ ವ್ಯಕ್ತಿತ್ವ ನಿರ್ಮಾಣದ ಉದ್ದೇಶದಿಂದ ಎಲ್ಲಾ ವಿಷಯಗಳ ಜ್ಞಾನವನ್ನು ಕಡಿಮೆ ಸೌಲಭ್ಯದಲ್ಲಿ ಪೂರೈಸಿದ್ದು ನಿಜಕ್ಕೂ ಪ್ರಶಂಸನೀಯ. ವ್ಯಕ್ತಿಯನ್ನು ಪರಿಪೂರ್ಣನನ್ನಾಗಿಸುವುದು, ವ್ಯಕ್ತಿತ್ವದ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗುವಂತೆ ಶಿಕ್ಷಣದ ಉದ್ದೇಶ ಬೆಳೆದು ಬಂದದ್ದು ಅಂದಿನ ಸಮಾಜದ ಹಿತಕರ ಚಿಂತನೆಯಾಗಿದೆ.

ಈ ಹಿನ್ನೆಲೆಯಲ್ಲಿ ನೋಡುವುದಾದರೆ ಪ್ರತಿಯೊಂದು ಕಾಲಘಟ್ಟದಲ್ಲಿಯೂ ಅನ್ಯರ ಭಾಷಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕವಾಗಿ ಅನ್ಯರಿಂದ ದಬ್ಬಾಳಿಕೆಗೊಳಪಟ್ಟು ದೇಶೀ ಭಾಷೆ ಅನೇಕ ಸಮಸ್ಯೆಗಳಿಗೆ ಗುರಿಯಾಗಿರುವುದನ್ನು ಈ ಮೂಲಕ ಕಂಡುಕೊಳ್ಳಬಹುದು.

ಇದರಿಂದ ಅನಾದಿ ಕಾಲದಿಂದಲೂ ಆಯಾ ದೇಶೀ ಭಾಷೆಗಳು ಪರಿಣಾಮಗಳನ್ನು ಎದುರಿಸುತ್ತಲೇ ಬಂದಿರುವುದು ಇತಿಹಾಸದ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.

## ೩.೨. ಬ್ರಿಟೀಷರ ಕಾಲದ ಶಿಕ್ಷಣದ ಸ್ವರೂಪ

ಕ್ರಿ.ಶ. ಸುಮಾರು ೧೬ನೇ ಶತಮಾನದಲ್ಲಿ ಬ್ರಿಟೀಷರು ಭಾರತಕ್ಕೆ ಬಂದರು. ಅವರೊಂದಿಗೆ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಸಹ ಆಗಮಿಸಿದ್ದರು. ವ್ಯಾಪಾರದ ದೃಷ್ಟಿಯ ಹಿನ್ನೆಲೆಯಿಂದಾಗಿ ಭಾರತಕ್ಕೆ ಬಂದು ಕ್ರಮೇಣ ವಸಾಹತುಶಾಹಿಯ ಕಂಪನಿಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಅದಕ್ಕಾಗಿ ಭಾರತವನ್ನು ಸಂಪೂರ್ಣವಾಗಿ ತಮ್ಮ ಅಧೀನಕ್ಕೆ ಒಳಪಡಿಸಿ ಕೊಂಡರು. ಭಾರತೀಯರಲ್ಲಿ ತಮ್ಮ ವಸಾಹತುಶಾಹಿ ಮನೋಧರ್ಮವನ್ನು ಬೆಳೆಸಲು ಆರಂಭಿಸಿದರು. ಕ್ರೈಸ್ತಧರ್ಮ ಪ್ರಚಾರದ ಮೂಲಕ ಮತಾಂತರ ಪ್ರಕ್ರಿಯೆಯನ್ನು ನಡೆಸಿದರು. ಅದರ ಸಲುವಾಗಿ ಅನೇಕ ಚರ್ಚುಗಳನ್ನು ಸ್ಥಾಪಿಸಿದರು. ಕಂಪನಿಗಳ ಅಭಿವೃದ್ಧಿಗಾಗಿ ಭಾರತೀಯರನ್ನು ಕೆಲಸಗಾರರನ್ನಾಗಿ ನೇಮಿಸಿಕೊಂಡರು. ಅದಕ್ಕಾಗಿ ಭಾರತೀಯರಿಗೆ ಆಂಗ್ಲಭಾಷಾ ಮಾದರಿಯ ಶಿಕ್ಷಣ ನೀಡಲು ಮುಂದಾದರು. ಮೂಲತಃ ಉದ್ದೇಶ ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿ ಧಾರ್ಮಿಕ ಶಿಕ್ಷಣವನ್ನು ನೀಡುವುದಾಗಿತ್ತು. ಆ ಹಿನ್ನೆಲೆಯಲ್ಲಿ ಆಂಗ್ಲಭಾಷೆಯನ್ನು ಬೋಧಿಸಲು ಪ್ರಾರಂಭಿಸಿದರು. ಜೊತೆಗೆ ಆಂಗ್ಲಭಾಷೆಯ ಶಾಲೆಗಳನ್ನು ನಿರ್ಮಿಸಿ, ನೂತನವಾದ ಔಪಚಾರಿಕ ಶಿಕ್ಷಣವನ್ನು ಜಾರಿಗೆ ತಂದರು.

ಈ ಹೊಸ ಮಾದರಿಯ ಶಿಕ್ಷಣ ನೀತಿಯಿಂದಾಗಿ ಪಾಶ್ಚಿಮಾತ್ಯ ಶಿಕ್ಷಣ ಮಾದರಿಯ ಶಾಲೆಗಳನ್ನು ಪ್ರಾರಂಭಿಸಲು ಮುಂದಾದರು. ಅದರಲ್ಲಿ ಪೋರ್ಚುಗೀಸರು ಪ್ರಮುಖರು. ಕ್ರಿ.ಶ.೧೬೭೫ರಲ್ಲಿ ಸಂತಕ್ಸೇವಿಯನ್ನರು ಫ್ರೆಂಚರು, ಮುಖ್ಯವಾಗಿ ಮತ ಪ್ರಚಾರದ ಹಿನ್ನೆಲೆಯಾಗಿ ಶಾಲೆಗಳನ್ನು ತೆರೆದರು. ೧೭೯೨ರಲ್ಲಿ ಚಾರ್ಲ್ಸ್‌ಗ್ರಾಂಟ್ ಎಂಬುವವರು ಶಿಕ್ಷಣದ ಅಡಿಯಲ್ಲಿ ಹಲವಾರು ವಿಷಯಗಳನ್ನು ಇಂಗ್ಲೀಶ್ ಮಾಧ್ಯಮದಲ್ಲಿ ನಡೆಸಲು ಸೂಚಿಸಿದರು. ಇದರಿಂದಾಗಿ ಈ ಮುಂಚೆ ಪ್ರಾಚೀನದಲ್ಲಿದ್ದ ವರ್ಣ, ಜಾತಿ, ಧರ್ಮದ ಹಿನ್ನಲೆಯಲ್ಲಿನ ಶಿಕ್ಷಣ ಪದ್ಧತಿಗಳು ಕ್ರಮೇಣ ನಶಿಸಿ ಹೋದವು. ಈ ಶಿಕ್ಷಣ ನೀತಿಯಿಂದಾಗಿ ಭಾರತೀಯ ಸಾಮಾಜಿಕ ಬದಲಾವಣೆಯಲ್ಲಿ ಪರಿವರ್ತನೆಗೊಳ್ಳಲು ಆರಂಭವಾಯಿತು. ಇದರಿಂದ ಶಿಕ್ಷಣದ ಕನಸು ಕಾಣದವರು ಸಹ ಶಿಕ್ಷಣ ಪಡೆಯಲು ಅರ್ಹರು ಎಂಬುದನ್ನು ಬ್ರಿಟೀಷರ ಶಿಕ್ಷಣ ಪದ್ಧತಿ ನಿರೂಪಿಸಿತು ಎಂಬ ಅಂಶಗಳು ಕಾಣಿಸಿ ಕೊಳ್ಳುತ್ತವೆ.

ಭಾರತೀಯ ಶಿಕ್ಷಣ ಪದ್ಧತಿಯನ್ನು ನಿವಾರಿಸುವಲ್ಲಿ ಆಂಗ್ಲರು ಮುಂಚೂಣಿಯಲ್ಲಿದ್ದರು. ೧೮೧೩ರಲ್ಲಿ ಚಾರ್ಟರ್ ಶಾಸನ ಕಾಯ್ದೆ ಅನ್ವಯ, ಯುರೋಪಿಯನ್ನರು ಶಿಕ್ಷಣ ಪ್ರಚಾರ ಮಾಡಲು ಆರಂಭಿಸಿದರು. ಜೊತೆಗೆ ಪ್ರತಿ ವರ್ಷ ಒಂದು ಲಕ್ಷ ರೂಪಾಯಿಗಳನ್ನು ಸಾಹಿತ್ಯದ ಪುನರುಜ್ಜೀವನಕ್ಕಾಗಿ ಬಳಸುವಂತೆ ಆದೇಶಿಸಲಾಯಿತು. ಅದಕ್ಕಾಗಿಯೇ ಸುಮಾರು ವರ್ಷಗಳವರೆಗೆ ಪ್ರತಿಯೊಂದು ಪ್ರದೇಶಗಳಲ್ಲಿ ಸರಕಾರ ಹಾಗೂ ಖಾಸಗಿಯವರಿಂದ

ಸಾಹಿತ್ಯಕವಾದ ಉತ್ತಮ ಚಟುವಟಿಕೆಗಳು ಬೆಳಕಿಗೆ ಬಂದವು. ಈ ರೀತಿಯಲ್ಲಿ ಕಾಲ ಕ್ರಮೇಣ ಶಿಕ್ಷಣ ವ್ಯವಸ್ಥೆಯಲ್ಲೂ ಸುಧಾರಣೆಗಳನ್ನು ಮಾರ್ಪಾಡುಗೊಳಿಸಿದರು. ಈ ಹಿನ್ನೆಲೆಯಲ್ಲಿ ಶಿಕ್ಷಣದ ಭಾಷೆ, ಮಾಧ್ಯಮ, ಬೋಧನೆ, ಪಠ್ಯಕ್ರಮಗಳ ಸುಧಾರಣೆ, ಕುರಿತು ಸಾಕಷ್ಟು ಚರ್ಚೆಗಳು ನಡೆದವು. ಈ ಚರ್ಚೆಗಳ ಫಲವಾಗಿ ವುಡ್ಸ್ ವರದಿ, ಮೆಕಾಲೆ ವರದಿಗಳು ಪ್ರಧಾನವಾಗಿ ಜಾರಿಗೆ ಬಂದವು.

ಈ ವುಡ್ಸ್ ವರದಿಯ ತೀರ್ಪಿನಂತೆ ಬ್ರಿಟೀಷ್ ಸರ್ಕಾರದ ಶಿಕ್ಷಣದಲ್ಲಿ ಹೊಸ ಬದಲಾವಣೆಗಳನ್ನು ತರಲಾಯಿತು. ಈ ವರದಿ ಅನ್ವಯ ಶಾಲೆಗಳಲ್ಲಿ ಎಲ್ಲ ವಿಷಯಗಳನ್ನು ಇಂಗ್ಲೀಶ್ ಮಾಧ್ಯಮದಲ್ಲಿ ಬೋಧಿಸುವಂತೆ ಸಲಹೆ ನೀಡಲಾಯಿತು. ಅಂದರೆ ಶಿಕ್ಷಣ ಮಾಧ್ಯಮವಾಗಿ ಇಂಗ್ಲೀಶ್ ಭಾಷೆಯನ್ನು ಜಾರಿಗೆ ತರುವಂತೆ ಒತ್ತಾಯಿಸಲಾಯಿತು. ಈ ಮೂಲಕ ಇಂಗ್ಲೀಶ್ ಸಾಹಿತ್ಯ, ಸಂಸ್ಕೃತಿಯನ್ನು ಭಾರತೀಯರಲ್ಲಿ ನೆಲೆಗೊಳಿಸಬಹುದು ಎನ್ನುವುದು ಹಿಂದಿನ ಉದ್ದೇಶವಾಗಿತ್ತು. ಜೊತೆಗೆ ಕಂಪೆನಿಗಳಲ್ಲಿ ಕೆಲಸಗಾರರನ್ನಾಗಿ ನೇಮಿಸಿ ಕೊಳ್ಳಲು ಇಂಗ್ಲೀಶ್ ಶಿಕ್ಷಣ ಪ್ರೇರಣೆಯಾಗುತ್ತದೆಂದು ನಂಬಿದ್ದರು. ಆ ರೀತಿಯಲ್ಲಿಯೇ ಪ್ರಾರಂಭದಲ್ಲಿ ಭಾರತೀಯರಿಗೆ ಇಂಗ್ಲೀಶ್ ಶಿಕ್ಷಣವನ್ನು ನೀಡಲು ಆರಂಭಿಸಿದ್ದರು. ಸಾಮಾನ್ಯವಾಗಿ ಶಿಕ್ಷಣ ಸಾರ್ವತ್ರಿಕವಾಗದೇ ಇದ್ದಂತಹ ಸಮಯದಲ್ಲಿ ಪ್ರಾದೇಶಿಕ ಭಾಷೆಯಲ್ಲಿ ವಿಷಯಗಳನ್ನು ಅರ್ಥೈಸಿಕೊಳ್ಳುವುದು ಸುಲಭದ ಮಾತಾಗಿರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ, ಇನ್ನು ಇಂಗ್ಲೀಶ್ ಮಾಧ್ಯಮದಲ್ಲಿ ವಿಷಯವನ್ನು ಮನನ ಮಾಡಿಕೊಳ್ಳುವುದು ಅಸಾಧ್ಯವಾಗಿತ್ತು. ಈ ಪ್ರಯತ್ನದಲ್ಲಿ ಬ್ರಿಟೀಷರು ವಿಫಲತೆಯನ್ನು ಮನಗಂಡರು. ನೀರಿಳಿಯದ ಗಂಟಲೊಳು ಕಡುಬಂ ತುರುಕಿದಂತಾಯ್ತು, ಎನ್ನುವಂತೆ ಪ್ರಾದೇಶಿಕ ಭಾಷೆಯಲ್ಲಿ ಸಾಧ್ಯವಾಗದೇ ಇದ್ದುದು ಅನ್ಯಭಾಷೆಯಲ್ಲಿ ರಚಿಸುವುದು ಅಸಾಧ್ಯವಾಗಿತ್ತು. ಇದನ್ನು ಸ್ವತಃ ಬ್ರಿಟೀಷರೇ ಈ ಸತ್ಯವನ್ನು ಮನಗಂಡಿದ್ದರು. ಭಾರತೀಯರು ಇಂಗ್ಲೀಶ್ ಭಾಷೆಯ ಮೂಲಕ ಶಿಕ್ಷಣ ಪಡೆಯುವಲ್ಲಿ ಹಿಂದಾದರು. ಹೀಗಾಗಿ ಬ್ರಿಟೀಷರು ಮೊದಲು ಭಾರತೀಯರ ಭಾಷೆ, ಸಂಸ್ಕೃತಿಗಳನ್ನು ಅಭ್ಯಾಸ ಮಾಡಲು, ಅರ್ಥೈಸಿಕೊಳ್ಳಲು ಪ್ರಾರಂಭಿಸಿದರು.

ಬ್ರಿಟೀಷರು ತಮ್ಮ ಧರ್ಮ, ಸಂಸ್ಕೃತಿ ಹಾಗೂ ಭಾಷೆಯನ್ನು ಭಾರತೀಯರಲ್ಲಿ ಬಿತ್ತಿ ಬೆಳೆಯಬೇಕಾದರೆ, ಭಾರತೀಯ ಭಾಷೆಯಿಂದಲೇ ಅದು ಸಾಧ್ಯವೆಂದು ಅರಿತರು. ದೇಶಿಯ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೇ ಕೆಲವೇ ಜನರು ಅದರ ಪ್ರಯೋಜನ ಪಡೆಯುತ್ತಿದ್ದುದನ್ನು ಕಂಡರು. ಪ್ರಾಥಮಿಕ ಮಟ್ಟದ ಅಕ್ಷರ ತಿಳುವಳಿಕೆ, ಲೆಕ್ಕಗಳ, ಶಾಸ್ತ್ರ ಗ್ರಂಥಗಳ ಪಠಣ, ಇವಿಷ್ಟೇ ಪಠ್ಯಗಳು ಇವರ ತಿಳುವಳಿಕೆಯ ಪರಿಧಿಯಾಗಿದೆ. ಪ್ರಪಂಚದ ಆಗುಹೋಗುಗಳ ಮತ್ತು ಉಪಯುಕ್ತ ವಿಷಯಗಳ ಪರಿಜ್ಞಾನ ಇವರಿಗೆ ತಿಳಿದಿಲ್ಲವೆಂದು ಅರಿತರು. ಉಪಾಧ್ಯಾಯರಿಗೆ ಮೂಲಭೂತ ತರಬೇತಿಯಾಗಲೀ ತಕ್ಕ ಯೋಗ್ಯತೆಯಾಗಲಿ ಇಲ್ಲವೆಂದು ಭಾವಿಸಿದರು. ಮಕ್ಕಳು ಕಲಿಯಲು ಯಾವುದೇ ಬಗೆಯ ಪಠ್ಯ ಪುಸ್ತಕಗಳು

ಇಲ್ಲವೆಂದು ಪರಿಗಣಿಸಿ ಈ ಎಲ್ಲಾ ಅಂಶಗಳು ಶಿಕ್ಷಣ ಪದ್ಧತಿಯಲ್ಲಿನ ದೋಷಗಳೆಂದು ಕಂಡುಕೊಂಡರು. ಇದರೊಂದಿಗೆ ಶಿಕ್ಷಣ ಪದ್ಧತಿಯಲ್ಲಿನ ದೋಷಗಳ ನಿವಾರಣೆಗಾಗಿ ಸುಧಾರಣೆಗಳನ್ನು ಜಾರಿಗೆ ತಂದರು. (ಶ್ರೀನಿವಾಸ ಹಾವನೂರು ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೦,ಪುಟ-೬೫) ಅದರಲ್ಲಿ ಶಿಕ್ಷಣದ ಮಾಧ್ಯಮ ಅಥವಾ ಭಾಷೆಯನ್ನು ಕುರಿತಂತೆ ಹೆಚ್ಚು ಕಾರ್ಯ ಯೋಜನೆಗಳನ್ನು ರೂಪಿಸಿದರು. ಈ ಅವಧಿಯಲ್ಲಿ ಇದ್ದಂತಹ ಶಿಕ್ಷಣ ವ್ಯವಸ್ಥೆ ಭಾಷೆ ಹಾಗೂ ಮಾಧ್ಯಮಗಳ ಕುರಿತಾಗಿ ನೀಡಿದಂತಹ ಹೊಸ ಯೋಜನೆಗಳನ್ನು ಅರ್ಥೈಸಿಕೊಳ್ಳಬಹುದು. ಅದೇ ರೀತಿಯಲ್ಲಿ ಪ್ರಾದೇಶಿಕ ಭಾಷೆಯನ್ನು ಹೊರತುಪಡಿಸಿ ಇಂಗ್ಲೀಶ್ ಭಾಷಾ ಶಿಕ್ಷಣವನ್ನು ಪ್ರೋತ್ಸಾಹಿಸಿ ಹಲವು ಯೋಜನೆಗಳು ಜಾರಿಗೆ ಬಂದದ್ದನ್ನು ಗಮನಿಸಬಹುದು.

ಇದರಿಂದ ಭಾರತೀಯ ಶಿಕ್ಷಣ ಪರಂಪರೆಗೆ ಒಂದು ಹೊಸ ವ್ಯವಸ್ಥೆಯನ್ನು ಕಲ್ಪಿಸಿಕೊಡುವ ಪ್ರಯತ್ನ ನಡೆದದ್ದು ಬ್ರಿಟಿಷರಿಂದಲೇ. ಅದುವರೆಗೂ ಜಾರಿಯಲ್ಲಿದ್ದ ಶಿಕ್ಷಣ ವ್ಯವಸ್ಥೆಯನ್ನು ಹೊಸದಾಗಿ ಆರಂಭಿಸಿದರು. ಶಿಕ್ಷಣದ ಭಾಷೆಯನ್ನು ಬದಲಿಸಿದರು. ಪಠ್ಯಪುಸ್ತಕಗಳನ್ನು ಹೊಸದಾಗಿ ರಚಿಸಿದರು. ಇಲ್ಲಿಯ ಸಂಸ್ಕೃತಿಯ ಅಧ್ಯಯನಗಳ ಪ್ರೇರಣೆಯೇ ಈ ಎಲ್ಲಾ ಅಂಶಗಳ ಬದಲಾವಣೆಗೆ ಕಾರಣವಾಯಿತೆನ್ನಬಹುದು. ಭಾರತೀಯ ಪರಿಸರದಲ್ಲಿ ಶಿಕ್ಷಣ ಪದ್ಧತಿಯಲ್ಲಿ ಪ್ರಾದೇಶಿಕ ಭಾಷೆಯನ್ನೇ ಶಿಕ್ಷಣದ ಮಾಧ್ಯಮವಾಗಿ ಜಾರಿಗೆ ತರುವಲ್ಲಿ ಅನೇಕ ಬ್ರಿಟೀಷ್ ಅಧಿಕಾರಿಗಳು ಸಾಕಷ್ಟು ಪ್ರೇರಣೆ, ಪ್ರೋತ್ಸಾಹಗಳನ್ನು ಕಲ್ಪಿಸಿದರು. ಅದರಲ್ಲಿ ಮದ್ರಾಸಿನ ಮನ್ರೋ ಮತ್ತು ಮುಂಬಯಿಯ ಎಲಫಿನ್‌ಸ್ಟನ್, ಲಾರ್ಡ್ ಕರ್ಜನ್, ಜೇಮ್ಸ್‌ಮಿಲ್, ಸರ್‌ಥಾಮಸ್ ಮನ್ರೋ, ವಾಲ್ಟರ್‌ಎಲಿಯಟ್, ಗ್ಯಾರೆಟ್, ಜೆ.ಎಫ್.ಫ್ಲೀಟ್, ಹಡ್ಸನ್ ಮುಂತಾದವರು ಪ್ರಮುಖರಾಗಿದ್ದಾರೆ.

ಮದ್ರಾಸಿನ ಮನ್ರೋ ಮತ್ತು ಮುಂಬಯಿಯ ಎಲ್‌ಫಿನ್‌ಸ್ಟನ್ ಇಬ್ಬರೂ ಒಂದೇ ಕಾಲಾವಧಿಯಲ್ಲಿ ಗವರ್ನರಾಗಿದ್ದರು. ಎಲ್‌ಫಿನ್‌ಸ್ಟನ್ ತನ್ನ ಪ್ರಾಂತ್ಯದಲ್ಲಿ ಬಾಂಬೆ ಎಜ್ಯುಕೇಶನ್ ಸೊಸೈಟಿ ಮತ್ತು ನೇಟಿವ್ ಸ್ಕೂಲ್ ಎಂಡ್ ಬುಕ್ ಸೊಸೈಟಿಗಳ ಮೂಲಕ ಶಿಕ್ಷಣದ ಸೂತ್ರ ಸಪ್ತಕವನ್ನು ಅನುಷ್ಠಾನದಲ್ಲಿ ತಂದನು. ಅವುಗಳಲ್ಲಿ ಪಠ್ಯಪುಸ್ತಕಗಳನ್ನು ಬರೆಯಿಸಿ ಅನುವಾದಿಸಿ ಮುದ್ರಿಸುವ ಯೋಜನೆಯನ್ನೂ ತಂದನು. ದೇಶ ಭಾಷೆಗಳಲ್ಲಿಯೇ ಶಿಕ್ಷಣವನ್ನು ನೀಡಬೇಕು ಮತ್ತು ಅದಕ್ಕೆ ಪೂರಕವಾಗಿ ದೇಶೀ ಪದಗಳನ್ನೇ ಅಣಿಗೊಳಿಸಬೇಕೆಂದು ಪ್ರತಿಪಾದಿಸಿದನು.

ಮ್ಯಾಕ್ಡೊನಾಲ್ಡ್ 'ವಿದ್ಯಾಭ್ಯಾಸ ಎಂದರೆ ಕೇವಲ ಜ್ಞಾನವನ್ನು ವಿತರಣೆ ಮಾಡುವುದಲ್ಲ, ಅದು ತನ್ನದೇ ಆದ ನೆಲದಲ್ಲಿ ಬೆಳೆದು ಬಾಳುವ ವಿಶಿಷ್ಟ ಸಂಸ್ಕೃತಿ. ಹೊಸ ಪದ್ಧತಿಯೊಂದನ್ನು ಬಿತ್ತಿ, ದೇಶೀಯವಾಗಿದ್ದ ಸಹಜ ಸಂಸ್ಕೃತಿಯನ್ನು ನಿರ್ನಾಮಗೊಳಿಸುವುದರ ಮೂಲಕ ಭಾರತೀಯರನ್ನು ವಿದ್ಯಾವಂತರನ್ನಾಗಿಸಬಹುದೆಂದು ಭಾವಿಸುವುದೇ ತಪ್ಪು. ಭಾರತೀಯ

ಮನೋಭೂಮಿಯಲ್ಲಿ ಪಾಶ್ಚಾತ್ಯ ನಾಗರೀಕತೆಯನ್ನು ಬಿತ್ತುವಂತಹ ಪ್ರಯತ್ನಕ್ಕೆ ಸೋಲು ಕಟ್ಟಿಟ್ಟ ಗಂಟು' ಎಂದು ಅಭಿಪ್ರಾಯ ಪಡುತ್ತಾರೆ. **(ಕೆ.ಎಲ್.ಶ್ರೀಮಾಲಿ; ವರ್ಧಾಯೋಜನೆ ಮೈಸೂರು ವಿಶ್ವವಿದ್ಯಾಲಯ,೧೯೬೯, ಪು.೬೭)** ಅಂದರೆ ಭಾರತೀಯರಿಗೆ ಅವರ ಮೂಲಭಾಷೆ ಯಲ್ಲಿಯೇ ಶಿಕ್ಷಣ ಒದಗಿಸುವುದು ಹೆಚ್ಚು ಉಪಯುಕ್ತ ಎಂಬುದನ್ನು ಅರಿತಿದ್ದರು.

ದೇಶ ಭಾಷೆಗಳು ಬೆಳೆಯದಿದ್ದುದಕ್ಕೆ ಇಂಗ್ಲೀಶ್ ಕಲಿತವರೇ ಕಾರಣರೆಂದು, ಇಂಗ್ಲೀಶ್ ಹಿಂದಕ್ಕೆ ಸರಿದರೆ ದೇಶ ಭಾಷೆಗಳ ಶಕ್ತಿ ಸಾಮರ್ಥ್ಯಗಳು ವ್ಯಕ್ತವಾಗುತ್ತವೆಂದು ಮ್ಯಾಕ್ಡೊನಾಲ್ಡ್ ಸ್ಪಷ್ಟಪಡಿಸಿದ್ದರು. ಇಂಗ್ಲೀಶ್ ಮಾಧ್ಯಮದಿಂದ ಜ್ಞಾನ ಪ್ರಗತಿ ನಿಧಾನವಾಗುತ್ತದೆಂದು ೧೮೮೨ನೆಯ ಭಾರತೀಯ ಶಿಕ್ಷಣತಜ್ಞ ಮಂಡಲಿಯ ವರದಿ ಸೂಚಿಸಿತ್ತು. ಮಾತೃಭಾಷೆಯಲ್ಲಿ ಸಂಪೂರ್ಣವಾಗಿ ತರಬೇತಿ ಪಡೆಯುವ ತನಕ ಪರಭಾಷೆಯನ್ನು ಕಲಿಯಲು ಯಾವ ಮಗುವಿಗೂ ಅವಕಾಶ ನೀಡಕೂಡದೆಂದು ೧೯೦೪ನೆಯ ಇಸವಿಯ ಇಂಡಿಯಾ ಸರಕಾರದ ನಿರ್ಣಯ ತಿಳಿಸಿತು. ದೇಶ ಭಾಷೆಯ ಮೂಲಕವೇ ಇಂಗ್ಲೀಶ್ ಭಾಷೆಯನ್ನು ಕಲಿಸಬೇಕೆಂದು ೧೮೫೪ನೆಯ ವರ್ಷದ ಈಸ್ಟ್ ಇಂಡಿಯಾ ಕಂಪೆನಿಯ ದಾಖಲೆಯೊಂದು ಸ್ಪಷ್ಟಪಡಿಸಿತ್ತು.

ಮಾತೃಭಾಷೆಯ ಮೂಲಕ ಆಲೋಚನೆಯ ಸ್ವಂತಿಕೆಯನ್ನು ಮತ್ತು ಅಭಿಪ್ರಾಯ ಶಕ್ತಿಯನ್ನು ಬೆಳೆಸಿಕೊಳ್ಳಬಹುದು. ಮಾತೃಭಾಷೆಯ ಮೂಲಕವೇ ಸಾಮಾಜಿಕ ವಿಷಯಗಳನ್ನು ಹಾಗೂ ಅನ್ಯ ದೇಶಿಯ ಸಂಸ್ಕೃತಿಯನ್ನು ಅರಿತುಕೊಳ್ಳಲು ಹೆಚ್ಚು ಉಪಯುಕ್ತವಾಗುತ್ತದೆ. ಮಾತೃಭಾಷೆಯ ಮೂಲಕವೇ ಜನಸಾಮಾನ್ಯರ ಬಳಿಗೆ ಶೀಘ್ರವಾಗಿ ಜ್ಞಾನವಾಹಿನಿಯನ್ನು ಕೊಂಡೊಯ್ಯಲು ಸಾಧ್ಯ ಎಂಬುದು ಹಲವು ಅಧಿಕಾರಿಗಳ ಅಭಿಪ್ರಾಯವಾಗಿದೆ.

ಬ್ರಿಟೀಷರಿಗೆ ಭಾರತೀಯರಲ್ಲಿ ಸಾಮಾಜಿಕ ತಿಳುವಳಿಕೆ, ಇಂಗ್ಲೀಶ್ ಭಾಷೆ, ಸಾಹಿತ್ಯ, ಸಂಸ್ಕೃತಿ, ಧರ್ಮದ ಬಗೆಗಿನ ವಿಚಾರಗಳನ್ನು ಮುಖ್ಯವಾಗಿ ತಿಳಿಸುವುದಾಗಿತ್ತು. ಕ್ರಿ.ಶ. ೧೭೬೧ರಲ್ಲಿ ವಾರಾಣಾಸಿಯಲ್ಲಿ ಮಿ.ಜೊನಾಥನ್ ಡಂಕನ್ ಸಂಸ್ಕೃತ ಕಾಲೇಜನ್ನು ಆರಂಭಿಸಿದನು. ಪುಣೆಯಲ್ಲಿ ಸಂಸ್ಕೃತ ಕಾಲೇಜು ಆರಂಭದೊಂದಿಗೆ ಕೆಲವು ಇಂಗ್ಲೀಶ್ ಶಾಲೆಗಳು ಆರಂಭಗೊಂಡವು. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರಿಂದ ಕ್ರಮೇಣ ಶಿಕ್ಷಣ ಕೆಳಗಿಳಿಯುವುದೆಂಬುದು ಸರಕಾರದ ವಿಚಾರವಾಗಿತ್ತು. ಅದೇ ಸಮಯದಲ್ಲಿ ಶಿಕ್ಷಣ ಮಾಧ್ಯಮದ ಬಗೆಗೆ ಮಾತೃಭಾಷೆಯೆ?ಇಂಗ್ಲೀಶೆ? ಎಂಬ ಒಂದು ದೊಡ್ಡ ತಿಕ್ಕಾಟವೇ ನಡೆದು, ಮಾತೃಭಾಷಾ ಮಾಧ್ಯಮಕ್ಕೆ ಹೆಚ್ಚು ಸಮ್ಮತಿಯೂ ಒದಗಿ ಬಂದಿತು. ಮುಂಬಯಿಯ ಗವರ್ನರ್ ಎಲ್‌ಫಿನ್‌ಸ್ಟನ್ ಶಿಕ್ಷಣದ ಬಗೆಗೆ ಆಸಕ್ತಿ ತಾಳಿ ಕ್ರಿ.ಶ.೧೮೨೭ರಲ್ಲಿ ಶಿಕ್ಷಕರನ್ನು ತರಬೇತಿಗೊಳಿಸುವ ವ್ಯವಸ್ಥೆಯನ್ನು ಮಾಡಿದನು.

೧೮೨೨ರಷ್ಟು ಹಿಂದೆಯೇ ಭಾರತದಲ್ಲಿ ಒಂದು ನಿರ್ದಿಷ್ಟ ಶಿಕ್ಷಣ ನೀತಿಯನ್ನು ರೂಪಿಸುವಲ್ಲಿ ಚರ್ಚೆಗಳು ನಡೆದಿವೆ. ಮನ್ರೊ, ಎಲ್ಫಿಸ್ಟನ್, ವಿಲಿಯಂ ಬೆಂಟಿಂಕ್, ರಾಜಾರಾಂ ಮೋಹನರಾಯ, ಲಾರ್ಡ್‌ಕರ್ಜನ್, ಚಾರ್ಲ್ಸ್‌ವುಡ್ ಮುಂತಾದವರು ಭಾರತದ ಆಧುನಿಕ

ಶಿಕ್ಷಣ ಇತಿಹಾಸದಲ್ಲೇ ಉಲ್ಲೇಖಾರ್ಹರು. ನಮ್ಮ ದಾಸ್ಯ ಪ್ರವೃತ್ತಿಯಿಂದಾಗಿಯೇ ಭಾರತದಲ್ಲಿ ಇಂಗ್ಲೀಶ್ ಶಿಕ್ಷಣ ಮಾಧ್ಯಮವಾಗಿ ಪರಿಣಮಿಸಿದೆ. ಭಾರತದಲ್ಲಿ ಇಂಗ್ಲೀಶ್ ಶಿಕ್ಷಣ ಮಾಧ್ಯಮ ವಿದ್ದಾಗ್ಯೂ ಪ್ರಾದೇಶಿಕ ಭಾಷೆಗಳಿಗೆ ಅನೇಕ ಅಧಿಕಾರಿಗಳು ಒತ್ತಾಯ ಹೇರಿರುವುದು ಸ್ಪಷ್ಟ ತಿಳುವಳಿಕೆಯಾಗಿದೆ. **(ಎಸ್.ವಿ.ಜೇವೂರ, ಕರ್ನಾಟಕ ಶೈಕ್ಷಣಿಕ ಇತಿಹಾಸ, ಸುದರ್ಶನ ಕಂಪನಿ, ಬೆಂಗಳೂರು, ೧೯೭೧, ಪುಟ ಸಂಖ್ಯೆ, ೨೬೬-೨೬೭)**

ಲಾರ್ಡ್ ಕರ್ಜನ್ ಅವರು ಮಾತೃಭಾಷೆ ಅಗತ್ಯ ಕುರಿತು ಕೆಲವು ವಿಚಾರಗಳನ್ನು ಈ ರೀತಿಯಾಗಿ ಹೇಳಿದ್ದಾರೆ. ಎಲ್ಲ ಕಡೆಗಳಲ್ಲಿ ಪದ್ಯಗಳನ್ನು ಅಭ್ಯಾಸ ಮಾಡುತ್ತಾರೆಯೇ ಹೊರತು ಆಲೋಚನೆಗಳನ್ನಲ್ಲ. ಕಾಳುಗಳನ್ನು ಚೆಲ್ಲಾಡಿ ಪೋಲು ಮಾಡಿ ಹೊಟ್ಟನ್ನು ಸ್ವೀಕರಿಸಲಾಗುತ್ತಿದೆ. ಮಾತೃಭಾಷೆಯಲ್ಲಿ ಅಗತ್ಯ ಜ್ಞಾನಗಳಿಸುವವರೆಗೂ ಶಾಲೆಗಳಲ್ಲಿ ಇಂಗ್ಲೀಶ್ ಬೋಧನೆ ಮಾಡಕೂಡದೆಂದು ಸ್ಪಷ್ಟಪಡಿಸಿರುತ್ತಾರೆ.

ಭಾರತದ ಶಿಕ್ಷಣ ವ್ಯವಸ್ಥೆಯ ಬಗ್ಗೆ ಅತ್ಯಂತ ಕಾಳಜಿ ವಹಿಸಿದವರೆಂದರೆ ಜೇಮ್ಸ್ ಮಿಲ್‌ರೂ ಒಬ್ಬರು. ಜನರ ಶಿಕ್ಷಣವನ್ನು ಪ್ರಾದೇಶಿಕ ಭಾಷೆಯಲ್ಲಿಯೇ ನಡೆಸಬೇಕೆಂಬುದು ಇವರ ಒತ್ತಾಸೆ. ಭಾರತೀಯ ಸಮಾಜದಲ್ಲಿ ಆಂಗ್ಲೀಕರಣ ಮಾಡಬೇಕೆಂಬ ನಿರ್ಧಾರ ತಳೆದಿದ್ದ ಕೆಲವು ಅಸ್ಪಷ್ಟ ನಂಬಿಕೆಗಳಲ್ಲಿ ಇವರು ವಿಶ್ವಾಸ ತಳೆದಿರಲಿಲ್ಲ. ೧೮೧೩ರ ಚಾರ್ಟರ್ ನಿಬಂಧನೆಯ ಪ್ರಕಾರ ಭಾರತೀಯರನ್ನು ಸುಶಿಕ್ಷಿತರನ್ನಾಗಿಸುವ ಜವಾಬ್ದಾರಿಯನ್ನು ಈಸ್ಟ್ ಇಂಡಿಯಾ ಕಂಪನಿಗೆ ವಹಿಸಿಕೊಡಲಾಯಿತು. ಈಸ್ಟ್ ಇಂಡಿಯಾ ಕಂಪನಿಯು ಬ್ರಿಟೀಷ್ ಪಾರ್ಲಿಮೆಂಟಿನ ಸಹಯೋಗದೊಂದಿಗೆ ಭಾರತದಲ್ಲಿ ಶಾಲೆಗಳನ್ನು ತೆರೆಯಲಾಯಿತು. ೧೮೩೮ರ ಮೆಕಾಲೆ ವರದಿಗೆ ಮುನ್ನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಪರ್ಯಾಯಾಲೋಚನೆಗಳು ನಡೆದಿದ್ದವು. ಅನೇಕ ಮತ ಪ್ರಚಾರಕರು ೧೮೧೫ಕ್ಕೂ ಹಿಂದೆ ಬಂಗಾಳದಾದ್ಯಂತ ಶಾಲೆಗಳನ್ನು ಆರಂಭಿಸಿದರು. ಕ್ರೈಸ್ತ ಮತ ಪ್ರಚಾರವೇ ಇವರ ಮೂಲ ಉದ್ದೇಶವಾಗಿತ್ತು. ಹೀಗೆ ಆರಂಭಿಸಿದ ಶಾಲೆಗಳಲ್ಲಿ ಇಂಗ್ಲೀಶಿಗಿಂತ ಭಾರತದ ಭಾಷೆಗಳನ್ನು ಕಲಿಸಲು ಹೆಚ್ಚು ಒತ್ತು ಕೊಡಲಾಯಿತು. ೧೮೧೫ರಲ್ಲಿ ಶ್ರೀರಾಂಪುರದಲ್ಲಿ (ಬಂಗಾಳ) ಒಂದು ಕಾಲೇಜನ್ನು ಸ್ಥಾಪಿಸಿದರು. ಸಂಸ್ಕೃತ ಮತ್ತು ಪ್ರಾದೇಶಿಕ ಭಾಷೆಗಳನ್ನು ಕಲಿಸುವುದು ಅದರ ಮೂಲ ಉದ್ದೇಶವಾಗಿತ್ತು. ಆದರೆ ವಿದ್ಯಾರ್ಥಿಗಳು ಮಾತ್ರ ಇಂಗ್ಲೀಶ್ ಭಾಷೆಯನ್ನು ಕಲಿಯುವುದರಲ್ಲೇ ಹೆಚ್ಚು ಆಸಕ್ತಿವಹಿಸಿದ್ದರು. ಅದರಲ್ಲಿ ಸ್ವಾರ್ಥ ಮತ್ತು ಭಾಷಾ ವ್ಯಾಮೋಹವೇ ಮುಖ್ಯವಾಗಿತ್ತು. ಆದರೆ ಮುಂಬಯಿಯ ಪ್ರಾಂತ್ಯದಲ್ಲಿ ಅಷ್ಟಾಗಿರಲಿಲ್ಲ. ಎಲ್‌ಫಿನ್‌ಸ್ಟನ್ ಆಡಳಿತದಲ್ಲಿ ೧೮೧೯ ರಿಂದ ೧೮೨೮ರವರೆಗೆ ಹೆಚ್ಚಾಗಿ ಪ್ರಾದೇಶಿಕ ಭಾಷೆಗಳ ಮೂಲಕ ಶಿಕ್ಷಣವನ್ನು ನೀಡಲು ಪ್ರೋತ್ಸಾಹ ಕಲ್ಪಿಸಲಾಯಿತು. ಪ್ರಾದೇಶಿಕ ಭಾಷೆಗಳಲ್ಲಿ ಶಿಕ್ಷಣ ನೀಡುತ್ತಿದ್ದ ಶಾಲೆಗಳು ಗಣನೀಯ ಫಲಿತಾಂಶಗಳನ್ನು ತೋರಿದವು. ೧೮೪೦ರವರೆಗೆ ಮುಂಬಯಿ ದೇಶೀಯ ಶಿಕ್ಷಣ ಸಂಘವು ದೇಶೀಯ ಶಿಕ್ಷಣ ವ್ಯವಸ್ಥೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಬ್ರಿಟೀಷರ

ಆಡಳಿತದಲ್ಲಿ ಕೆಲಸಗಳನ್ನು ಪಡೆಯುವ ಆಸೆಯೊಂದೇ ಇಂಗ್ಲೀಶ್ ಶಿಕ್ಷಣಕ್ಕೆ ಪ್ರೇರಣೆ ಒದಗಿಸಿತ್ತು.

೧೮೫೨–೫೩ರ ಅವಧಿಯಲ್ಲಿ ಭಾರತದ ಶಿಕ್ಷಣದ ಬಗ್ಗೆ ಪಕ್ವವಾದ ಆಲೋಚನೆಗಳು ಕಾಣಿಸತೊಡಗಿದವು. ಈ ಅವಧಿಯಲ್ಲಿ ಬ್ರಿಟೀಷ್ ಪಾರ್ಲಿಮೆಂಟ್ ಕಂಪನಿ ಸರ್ಕಾರದಲ್ಲಿ ಭಾರತದ ಶಿಕ್ಷಣ ಸ್ಥಿತಿಗತಿಗಳನ್ನು ಪರಿಶೀಲಿಸಲು 'ಸೆಲೆಕ್ಟ್ ಸಮಿತಿ'ಯನ್ನು ರಚಿಸಿತು. ಸರ್. ಚಾರ್ಲ್ಸ್‌ವುಡ್ ಡಿಸ್ಪ್ಯಾಚ್ ಸಮಿತಿಯ ವರದಿಯಲ್ಲಿ 'ವಿದ್ಯಾವಂತ ಜನರಲ್ಲಿ ನೈತಿಕ ಮಟ್ಟವನ್ನು ಹೆಚ್ಚಿಸುವುದರಿಂದ ಹಾಗೂ ಪ್ರಾದೇಶಿಕ ಭಾಷೆಗಳಿಗೆ ಗಮನ ಕೊಡುವುದರಿಂದ ಕಂಪನಿ ಸರ್ಕಾರದ ಕಛೇರಿಗಳಲ್ಲಿ ಜವಾಬ್ದಾರಿಯುತ ಕೆಲಸಗಳನ್ನು ನಿರ್ವಹಿಸಲು ಭಾಷೆಗಳ ಪೂರ್ಣ ಅಧ್ಯಯನವನ್ನು ಕಡೆಗಣಿಸಲು ಸಾಧ್ಯವಿಲ್ಲ ಎನ್ನಲಾಗಿದೆ. ಪರಭಾಷೆಯ ಮೂಲಕ ಪಾಶ್ಚಾತ್ಯ ಜ್ಞಾನವನ್ನು ಗಳಿಸಿದವರು ಉನ್ನತ ಶಿಕ್ಷಣವನ್ನು ಪಡೆಯುವಾಗ ಬಹಳಷ್ಟು ಮಂದಿಗೆ ತಮ್ಮ ಜ್ಞಾನವನ್ನು ಪ್ರಾದೇಶಿಕ ಭಾಷೆಗಳ ಮೂಲಕ ಪ್ರಸಾರ ಮಾಡಬೇಕು ಎಂಬುದು ಗಮನಾರ್ಹ ವಿಚಾರವಾಗಿದೆ.

ಆದರೆ ಈ ಭಾವನೆಗಳಿಗೆ ಇಂಬು ಕೊಡುವ ಉತ್ತೇಜನ ಭಾರತೀಯರಿಂದ ದೊರಕಲಿಲ್ಲ ವಾದ್ದರಿಂದ ಇಂಗ್ಲೀಶ್ ಮತ್ತಷ್ಟು ಪ್ರಬಲವಾಗತೊಡಗಿತು ಎಂದು ಚಾರ್ಲ್ಸ್‌ವುಡ್ ಸಮಿತಿಯು ಅಭಿಪ್ರಾಯ ಪಡುತ್ತದೆ.

೧೮೮೨ರ ಶಿಕ್ಷಣ ಆಯೋಗವು ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿ ಅಭ್ಯಾಸ ಮಾಡಿದ ವಿದ್ಯಾರ್ಥಿಯು ಹೆಚ್ಚು ಬುದ್ಧಿವಂತನಾಗಲು ಸಾಧ್ಯವೆಂದು ತೀರ್ಮಾನಿಸಿತು. ೧೯೦೨ರಲ್ಲಿ ಭಾರತದ ವಿಶ್ವವಿದ್ಯಾಲಯಗಳ ಆಯೋಗವು ಉಚ್ಚ ಶಿಕ್ಷಣದಲ್ಲಿ ಎಂ.ಎ. ಮಟ್ಟದವರೆಗೂ ಪ್ರಾದೇಶಿಕ ಭಾಷೆಗಳನ್ನು ಶಿಕ್ಷಣ ವಿಷಯಗಳಲ್ಲಿ ಅಳವಡಿಸಬೇಕೆಂಬುದನ್ನು ಪ್ರತಿಪಾದಿಸಿತು. ೧೯೦೪ರ ಭಾರತ ಸರ್ಕಾರದ ಗೊತ್ತುವಳಿಯಲ್ಲಿ ಹದಿಮೂರು ವರ್ಷಗಳಿಗಿಂತ ಒಳಪಟ್ಟ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಶಿಕ್ಷಣ ಮಾಧ್ಯಮವಾಗಕೂಡದೆಂದೂ, ಪ್ರೌಢಶಾಲಾ ಶಿಕ್ಷಣದಲ್ಲಿ ಯಾರೊಬ್ಬರೂ ಪ್ರಾದೇಶಿಕ ಭಾಷೆಯನ್ನು ನಿರ್ಲಕ್ಷಿಸಲು ಅವಕಾಶ ಕೊಡಕೂಡದೆಂದು ಹೇಳಲಾಯಿತು. ಮಾತೃಭಾಷೆಯಲ್ಲಿ ಅಗತ್ಯ ಜ್ಞಾನಗಳಿಸುವವರೆಗೂ ಶಾಲೆಗಳಲ್ಲಿ ಇಂಗ್ಲೀಶ್ ಬೋಧನೆ ಮಾಡಕೂಡದೆಂದು ಲಾರ್ಡ್ ಕರ್ಜನ್ ತಿಳಿಸಿದ್ದರು.

ಕ್ರಿ.ಶ. ೧೯೧೭ರಲ್ಲಿ ಲಾರ್ಡ್‌ಜೇಮ್ಸ್ ಫರ್ಡ್‌ರವರು ಸಾಡ್ಲರ್ ಕಮಿಷನ್‌ನ್ನು ಶಿಕ್ಷಣದಲ್ಲಿ ಸುಧಾರಣೆ ಕುರಿತು ನಿಯಮಿಸಿದರು. ೧೯೧೪ರಂದು 'ಈಸ್ಟ್ ಆ್ಯಂಡ್ ವೆಸ್ಟ್ ಸೊಸೈಟಿ'ಯಲ್ಲಿ (ಲಂಡನ್) ಸರ್ ಥಿಯೋಡರ್ ಮಾರಿಸನ್ ಒಂದು ಪ್ರಬಂಧವನ್ನು ಮಂಡಿಸಿ ಅದರಲ್ಲಿ ಭಾರತದ ದೇಶ ಭಾಷೆಗಳಿಗೆ ಉತ್ತೇಜನ ಕೊಡಬೇಕಾದ ಅಗತ್ಯತೆಯನ್ನು ಪ್ರತಿಪಾದಿಸಿದರು. ಆದರೆ ಇವರನ್ನು ಬೆಂಬಲಿಸಿದವರು ಕೇವಲ ಇಬ್ಬರು ಮಾತ್ರ. ಭಾರತೀಯರೇ ಆದ ದೇಸಾಯಿ ಎಂಬುವರು ಸಭೆಯಲ್ಲಿ 'ದೇಶ ಭಾಷೆಗಳೆಲ್ಲಾ ಮೃತ ಭಾಷೆಗಳು ಭಾರತದಲ್ಲಿ

ಬದುಕಿರುವ ಭಾಷೆಯೆಂದರೆ ಇಂಗ್ಲೀಶ್ ಒಂದೇ' ಎಂದರಂತೆ ಇದಕ್ಕೆ ತಾರಾಪುರ ಎಂಬ ಮತ್ತೊಬ್ಬ ಸದಸ್ಯ 'ಇಂಗ್ಲೀಶ್ ನಮಗೇನೂ ಪರಭಾಷೆಯಲ್ಲ. ಮೂಲತಃ ಭಾರತೀಯ ಭಾಷಾ ಗುಂಪಿನಿಂದಲೇ ಅದೂ ಸಹ ಬಂದಿದೆ' ಎಂದು ತನ್ನ ಪ್ರೌಢಿಮೆಯನ್ನು ತೋರಿಸಿದ್ದಾನೆ. ಇದು ನಮ್ಮ ಅಭಿಮಾನ ಶೂನ್ಯತೆಯನ್ನು, ದಾಸ್ಯ ಮನೋಭಾವನೆಯನ್ನು ಪ್ರತಿನಿಧಿಸಲು ಇದಕ್ಕಿಂತ ಉತ್ತಮ ಉದಾಹರಣೆಗಳು ಬೇಕೆ? ಎಂದು ಲೇಖಕರು ತಿಳಿಸಿದ್ದಾರೆ. (**ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೬, ಪುಟ–೧೯**)

ಇಂಥ ಮನೋವಿಕಾರವುಳ್ಳ ಜನರ ಪರಂಪರೆ ಇಂದಿಗೂ ಕೊನೆಗೊಂಡಿಲ್ಲ. ಇದರಿಂದಾಗಿ ದೇಶ ಭಾಷೆಗಳು ಶಿಕ್ಷಣದಲ್ಲಿ ತಮ್ಮ ಗಣ್ಯ ಸ್ಥಾನವನ್ನು ಕಳೆದುಕೊಳ್ಳುತ್ತಿದೆ. ಇತ್ತ ಇಂಗ್ಲೀಶನ್ನು ಕಲಿಯದ, ಅತ್ತ ಮಾತೃಭಾಷೆಯಲ್ಲೂ ಪ್ರಾವಿಣ್ಯತೆ ಪಡೆಯದ ಎಡಬಿಡಂಗಿಗಳು ಸೃಷ್ಟಿಯಾಗುತ್ತಲೇ ಇದ್ದಾರೆ.

ದೇಶೀ ಭಾಷೆಗಳ ಪ್ರಾಮುಖ್ಯತೆಯನ್ನು ಗುರುತಿಸಿಕೊಂಡವರಲ್ಲಿ ವಾರನ್ ಹೇಸ್ಟಿಂಗ್ಸ್, ಥಾಮಸ್ ಮನ್ರೋ, ಲಾರ್ಡ್ ವೆಲ್ಲೆಸ್ಲಿ, ಮರಕ್ಯೂಸ್ ಹೇಸ್ಟಿಂಗ್ಸ್ ಪ್ರಮುಖರು. ಆಂಗ್ಲ ಅಧಿಕಾರಿಗಳು ಈ ದೇಶದ ಭಾಷೆ ಮತ್ತು ಸಂಸ್ಕೃತಿಯ ಅಧ್ಯಯನವನ್ನು ಕೈಗೊಳ್ಳುವಲ್ಲಿ ಹೆಚ್ಚು ಪ್ರೋತ್ಸಾಹ ನೀಡಿದ್ದಾರೆ. ದೇಶಿಯರ ಮಾತೃಭಾಷೆಯ ಬೆಳವಣಿಗೆಗೆ ಇಂಗ್ಲೀಶ್ ಮಾರಕವಾಗುತ್ತದೆಯಲ್ಲದೇ ಇಂಗ್ಲೀಶ್ ಮಾದರಿಗಳನ್ನು ಅನುಸರಿಸುವ ಸೇವಾ ಮನೋವೃತ್ತಿಯನ್ನು ಬೆಳೆಸಿಕೊಳ್ಳುತ್ತಾರೆ ಎಂಬುದು 'ಟೈಟ್ಲರ' ಅವರ ಅಭಿಪ್ರಾಯವಾಗಿದೆ. ಇದು ಇಂದು ನಿಜವಾಗಿಯೂ ಪರಿಣಮಿಸಿವೆ. ಇಂಗ್ಲೀಶ್ ಭಾಷೆಯಿಂದ ಎಷ್ಟು ಅನುಕೂಲಗಳಾಗಿವೆಯೋ ಅದಕ್ಕಿಂತ ಹೆಚ್ಚು ಅನಾಹುತಗಳು ಈ ದೇಶಕ್ಕೆ ಒದಗಿವೆ ಎಂಬುದು ಸತ್ಯಾಂಶವಾಗಿದೆ. ಇದರಿಂದ ದೇಶೀ ಭಾಷೆಗಳ ಸಮಗ್ರ ಬೆಳವಣಿಗೆ ಕುಂಠಿತವಾಗಿದೆ. ಇದನ್ನು ಸ್ವತಃ ಬ್ರಿಟೀಷ್ ಅಧಿಕಾರಿಗಳೇ ಅಭಿಪ್ರಾಯ ವ್ಯಕ್ತಪಡಿಸಿರುವುದು ಮುಖ್ಯವಾಗಿದೆ. ಈ ಮಾತುಗಳು ಮಾತೃಭಾಷಾ ಮಾಧ್ಯಮ ಜಾರಿಗೆ ಅವಶ್ಯಕ ಎನ್ನುವುದಕ್ಕೆ ಹೆಚ್ಚು ಪುಷ್ಠಿಯನ್ನು ಒದಗಿಸುತ್ತವೆ.

ಒಟ್ಟು ಆಡಳಿತದ ಸೌಕರ್ಯಕ್ಕೆ ಇಂಗ್ಲೀಶ್ ಭಾಷೆಯನ್ನು ಸಂಪರ್ಕ ಭಾಷೆಯಾಗಿ ಇಟ್ಟುಕೊಂಡಿದ್ದರೂ ಪ್ರಾದೇಶಿಕ ಭಾಷೆಯೇ ಎಲ್ಲಾ ಕ್ಷೇತ್ರಗಳಲ್ಲಿ ಆವರಿಸಬೇಕೆಂಬುದು ಆಂಗ್ಲ ಅಧಿಕಾರಿಗಳ ನೀತಿಯಾಗಿತ್ತು. ಈ ಕಾರಣದಿಂದಲೇ ದೇಶದ ಎಲ್ಲ ಭಾಷೆಗಳನ್ನು ಅವರು ಅನ್ವೇಷಿಸಿ ಜನರಿಗೆ ಅವುಗಳ ಪರಿಚಯ ಮಾಡಿಸುವ ಸಲುವಾಗಿ ನಿರಂತರವಾಗಿ ದುಡಿದರು. ಆಡಳಿತ ಮತ್ತು ಶಿಕ್ಷಣ ಆ ಪ್ರದೇಶದ ಬಹು ಸಂಖ್ಯಾತರ ಭಾಷೆಯಲ್ಲಿ ನಡೆಯುವಂತಾಗಬೇಕು. ಜನ ಸಾಮಾನ್ಯನ ಭಾಷೆ ಆಡಳಿತ ಭಾಷೆಯಾಗದ ಹೊರತು ಸರ್ಕಾರದ ರೀತಿ ನೀತಿಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಲು ಸಾಧ್ಯವಿಲ್ಲ ಎಂದು ಮಹದೇವ ಬಣಕಾರರು ಆಂಗ್ಲರ ಆಡಳಿತದಲ್ಲಿ ಕನ್ನಡ ಎನ್ನುವ ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾರೆ. (ಪುಟ–೨೦)

ದೇಶಿಯ/ಪ್ರಾದೇಶಿಕ ಭಾಷೆಗಳ ಪ್ರಾಮುಖ್ಯತೆಯನ್ನು ಕುರಿತು ಲಾರ್ಡ್ ಕರ್ಜನ್ ಈ ರೀತಿಯಾಗಿ ಹೇಳಿದ್ದಾರೆ. ಪ್ರಾದೇಶಿಕ ಭಾಷೆಗಳು ಈ ದೇಶದ ಜೀವಂತ ಭಾಷೆಗಳಾಗಿವೆ. ಇಂಗ್ಲೀಶ್ ಕೆಲವೇ ಜನರ ಕಲಿಕೆಯ ಮತ್ತು ಪ್ರಗತಿಯ ಮಾಧ್ಯಮವಾಗಿದೆ. ಆದರೆ ಬಹಳಷ್ಟು ಜನರಿಗೆ ಅದು ಇಂದಿಗೂ ಅನ್ಯ ಭಾಷೆಯಾಗಿಯೇ ಉಳಿದಿದೆ ಎಂದು ವಿವರಿಸಿದ್ದಾರೆ.

ಸರ್ ಥಾಮಸ್ ಮನ್ರೋ ಪ್ರಾದೇಶಿಕ ಭಾಷೆಗಳ ಉದ್ಧಾರದ ಬಗ್ಗೆ ಆಸಕ್ತಿ ತೋರಿದ ಅಧಿಕಾರಿಯಾಗಿದ್ದರು. ಆಡಳಿತವು ಸಮರ್ಪಕವಾಗಿ ನಡೆಯಲು ಜನ ಸಂಪರ್ಕ ಹಾಗೂ ಜನಸಾಮಾನ್ಯರ ಸಕ್ರಿಯ ಪಾತ್ರ ಮುಖ್ಯವಾದುದು ಎಂಬುದನ್ನು ಅಧಿಕಾರಿಗಳು ಮನಗಂಡಿದ್ದರು. ಆಳುವವನ ಮತ್ತು ಆಳಿಸಿಕೊಳ್ಳುವವನ ನಡುವೆ ಸೇತುವೆ ನಿರ್ಮಾಣವಾಗಬೇಕಾಗಿರುವುದು ಜನಸಾಮಾನ್ಯನ ಭಾಷೆಯಿಂದಲೇ. ಅದು ಆಡಳಿತ ಭಾಷೆಯಾಗಬೇಕಾದುದು ಅತ್ಯಗತ್ಯ ಎನ್ನುವುದು ಇವರ ನಿಲುವಾಗಿತ್ತು. ಧಾರವಾಡದಂತಹ ಸಂಪೂರ್ಣ ಕನ್ನಡ ಪ್ರದೇಶದಲ್ಲಿ ಸರ್ಕಾರವು ೧೮೨೬ರಲ್ಲಿ ಮರಾಠಿ ಶಾಲೆಯೊಂದನ್ನು ಸ್ಥಾಪಿಸಿದಾಗ, ಇದು ತಪ್ಪು ಇಲ್ಲಿಯ ಜನರ ಭಾಷೆ ಕನ್ನಡ; ಮಾತೃ ಭಾಷೆಯಲ್ಲೇ ಶಿಕ್ಷಣ ನಡೆಯಬೇಕಾಗಿರುವುದು ನ್ಯಾಯವಾದದ್ದು ಎಂದು ತಿಳಿಸಿದ್ದಾರೆ. ಒಂದು ಕನ್ನಡ ಶಾಲೆಯನ್ನು ಪ್ರಾರಂಭಿಸಿ ಅದರ ಎಲ್ಲ ವೆಚ್ಚಗಳನ್ನು ಸ್ವತಃ ಭರಿಸಿದರು. ಇದರಿಂದ ಮುಂಬೈ ಸರಕಾರ ೧೮೩೫ರಲ್ಲಿ 'ಸದರನ್ ಮರಾಠಾ' ಪ್ರದೇಶದ ಜನರ ಭಾಷೆ ಕನ್ನಡ; ಕನ್ನಡದಲ್ಲೇ ಆಡಳಿತ ಮತ್ತು ಶಿಕ್ಷಣ ಕಾರ್ಯ ನಡೆಯಬೇಕು ಎಂಬ ಮಹತ್ವಪೂರ್ಣ ನಿರ್ಣಯವನ್ನು ಸ್ವೀಕರಿಸಿತು. ಕನ್ನಡ ಪಠ್ಯಪುಸ್ತಕಗಳನ್ನು ತಯಾರಿಸಲು ಪ್ರಥಮ ಪ್ರಯತ್ನಗಳನ್ನು ನಡೆಸಿದರು. ೧೮೩೭ರಲ್ಲಿ ಮದ್ರಾಸ್ ರಾಜ್ಯಪಾಲರ ಕಾರ್ಯದರ್ಶಿಯಾಗಿ, ಕನ್ನಡ ಭಾಷಾಂತರಕಾರರಾಗಿ ಎಲಿಯಟ್ ಕೆಲಸ ನಿರ್ವಹಿಸಿದರು. **(ಹೊಸಗನ್ನಡದ ಅರುಣೋದಯ, ಶ್ರೀ ಹಾವನೂರ, ಕನ್ನಡ ಪುಸ್ತಕ ಪ್ರಾಧಿಕಾರ ೨೦೦೦, ಪುಟ-೬೬)**

ಉತ್ತರ ಕರ್ನಾಟಕದಲ್ಲಿ ಕನ್ನಡವನ್ನು ಪುನರುಜ್ಜೀವನಗೊಳಿಸಿದ ದಕ್ಷ ಅಧಿಕಾರಿಯಾಗಿ ಡಬ್ಲ್ಯು.ಎ. ರಸೆಲ್‌ರು ಅವಿಸ್ಮರಣೀಯರಾಗಿದ್ದಾರೆ. ಉತ್ತರ ಕರ್ನಾಟಕ ದಕ್ಷಿಣ ಮಹಾರಾಷ್ಟ್ರವೆಂದು ಕರೆಯಲ್ಪಡುತ್ತಿದ್ದ ಕಾಲದಲ್ಲಿ ಮರಾಠಿ ಪ್ರಭಾವವನ್ನು ತಗ್ಗಿಸಿ ಆ ಭಾಗದಲ್ಲಿ ಕನ್ನಡ ನೆಲೆಗೊಳ್ಳುವಂತೆ ಮಾಡಿದರು. ಕನ್ನಡ ಟ್ರೇನಿಂಗ್ ಕಾಲೇಜನ್ನು ಸ್ಥಾಪಿಸಿದರು. ಕನ್ನಡದ ಉದ್ಧಾರಕರ ತಂಡವೊಂದನ್ನು ನಿರ್ಮಿಸಿದರು. ಶಾಂತಕವಿಗಳು, ತುರುಮರಿ ಗೌರೀಶ, ವಲ್ಲಭ ಮಹಾಲಿಂಗ ತಟ್ಟಿ, ಗಳಗನಾಥ, ಬಸವಾರ್ಯ ಕಿತ್ತೂರ, ಮ.ಪ್ರ ಪೂಜಾರ, ಕೇಶವಶರ್ಮ ಗಲಗಲಿ, ಕನ್ನಡ ವಾಮನ ಮುಂತಾದವರು ಇವರ ಟ್ರೇನಿಂಗ್ ಕಾಲೇಜಿನಿಂದ ತರಬೇತಿ ಪಡೆದವರಾಗಿದ್ದರು. ಇವರೆಲ್ಲರಿಗೆ ಡೆಪ್ಯೂಟಿ ಚನ್ನಬಸಪ್ಪನವರು ಬೆನ್ನೆಲುಬಾಗಿ ಇರುತ್ತಿದ್ದರಿಂದ ಎಲ್ಲಾ ಕಡೆಗಳಲ್ಲೂ ಕನ್ನಡ ಶಾಲೆಗಳನ್ನು ತೆರೆಯಲು ಸಾಧ್ಯವಾಯಿತು. ಕನ್ನಡ ಬಲ್ಲ ಶಿಕ್ಷಕರು, ಶಿಕ್ಷಣಾಧಿಕಾರಿಗಳು ಹೆಚ್ಚು ಸಂಖ್ಯೆಯಲ್ಲಿ ನೇಮಕಗೊಂಡರು. ಪಠ್ಯಪುಸ್ತಕಗಳು ಕೊರತೆಯಿದ್ದ ಕಾಲದಲ್ಲಿ ತಜ್ಞರನ್ನು ನೇಮಕ ಮಾಡಿ ಅವರ ಮೂಲಕ ಕನ್ನಡದಲ್ಲಿ

ಪಠ್ಯಪುಸ್ತಕಗಳನ್ನು ಬರೆಸಿ ಪ್ರಕಟಿಸಿದರು. ಅಲ್ಲದೆ ಕನ್ನಡ ಶಾಲೆಗಳನ್ನು ಹೆಚ್ಚಿಸಿದರು. ಕನ್ನಡ ವಿದ್ವಾಂಸರನ್ನು ಶಿಕ್ಷಣ ಕೊಡುವ ಸಲುವಾಗಿ ನೇಮಿಸಿಕೊಂಡರು. ಕನ್ನಡ ಶಾಲೆಗಳಿಗೆ ಅಗತ್ಯ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಲು ೨೦೦ ರೂಪಾಯಿ ಪಗಾರದ ಮೇಲೆ ಒಬ್ಬ ಭಾಷಾಂತರಕಾರರನ್ನು ನೇಮಿಸಿಕೊಂಡಿದ್ದರು. ಸ್ವತಃ ಕನ್ನಡ ಕಲಿಯಲು ೨೦-೩೦ ರೂಪಾಯಿ ಸಂಬಳದ ಮೇಲೆ ಒಬ್ಬ ಪಂಡಿತನನ್ನು ನೇಮಕ ಮಾಡಿಕೊಂಡಿದ್ದರು. ಕನ್ನಡ ನುಡಿಯಷ್ಟು ವೀರಾವೇಶದ ಭಾಷೆ ಎಲ್ಲಿಯೂ ಇಲ್ಲವೆಂದು, ಕನ್ನಡ ಭಾಷೆಯ ಮಹತ್ವವನ್ನು ಕುರಿತು ಅಷ್ಟೇ ವೀರಾವೇಶದಿಂದ ನುಡಿದಿದ್ದರು ೧೮೬೬-೬೭ರಲ್ಲಿ ೧೨ ಹೆಣ್ಣು ಮಕ್ಕಳ ಶಾಲೆಗಳನ್ನು ಸ್ಥಾಪಿಸಿ ಒಕ್ಕಲು(ರೈತರ) ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹಿಸಿದರು.

ಶಿಕ್ಷಣದ ಅಭಿವೃದ್ಧಿಗಾಗಿ ಹಡ್ಸನ್‌ರವರು ೬೦ಕ್ಕೂ ಹೆಚ್ಚು ಕನ್ನಡ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳನ್ನು ಸ್ಥಾಪಿಸಿದರು. ಇವರು ನಿವೃತ್ತರಾದ ಮೇಲೆ ಸ್ವದೇಶಕ್ಕೆ ಹೋಗಿ ನೆಲೆಸಿದ ಮೇಲೆ ಅಲ್ಲಿಯ ಇಂಗ್ಲೆಂಡಿನ ತಮ್ಮ ನಿವಾಸಕ್ಕೆ 'ಬೆಂಗಳೂರು ಕಾಟೇಜ್' ಎಂದು ಹೆಸರಿಟ್ಟಿದ್ದರು. ಇದು ಕನ್ನಡದ ಮೇಲಿನ ಅವರ ಅಭಿಮಾನವನ್ನು ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ಇದುವರೆಗೂ ಬ್ರಿಟೀಷ್ ಅಧಿಕಾರಿಗಳು ಇಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಂತೆ ಮಾತೃಭಾಷಾ ಮಾಧ್ಯಮ ಜಾರಿಗೆ ಬರಬೇಕು ಎಂಬುದು ಸರ್ವ ವಿಧಿತ ಸತ್ಯ. ಮಾತೃಭಾಷೆ ಎಲ್ಲಾ ಮೂಲಭೂತ ಗ್ರಹಿಕೆಗಳ ಮೂಲ ಅಡಿಪಾಯವಾಗಿದೆ. ವಿಷಯದ ಪೂರ್ಣ ತಿಳುವಳಿಕೆ, ಜ್ಞಾನ ಎಲ್ಲವನ್ನು ಮಾತೃಭಾಷೆಗಿಂತ ಸ್ಪಷ್ಟವಾಗಿ ಬೇರಾವ ಮಾಧ್ಯಮದಿಂದಲೂ ತಿಳಿಯಲು ಸಾಧ್ಯವಿಲ್ಲ. ಇದನ್ನರಿತುಕೊಂಡ ಬ್ರಿಟೀಷ್ ಅಧಿಕಾರಿಗಳು ಪ್ರಾದೇಶಿಕ ಅಗತ್ಯತೆಗೆ ತಕ್ಕಂತೆ ಇಲ್ಲಿಯ ಭಾಷೆಯಲ್ಲಿ ಶಿಕ್ಷಣವನ್ನು ನೀಡುವ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಿದರು. ಭಾರತೀಯ ಸಾಹಿತ್ಯವನ್ನು ಇಂಗ್ಲೀಶ್‌ಗೆ ಅನುವಾದ ಮಾಡುವ ಮೂಲಕ ಇಂಗ್ಲೀಶ್ ಸಾಹಿತ್ಯವನ್ನು ಬೆಳೆಸುವ ಉದ್ದೇಶವು ಒಂದಾಗಿತ್ತು. ಅದರಂತೆಯೇ, ಮೂಲತಃ ತಮ್ಮ ಭಾಷೆ, ಧರ್ಮ, ಸಂಸ್ಕೃತಿಗಳನ್ನು ಪ್ರಚಾರ ಮಾಡಲು ಪ್ರಾದೇಶಿಕ ಭಾಷೆಗಳನ್ನು ಸಾಧನವನ್ನಾಗಿ ಬೆಳೆಸಿಕೊಂಡರು. ಇದು ಅವರ ಚಾಣಾಕ್ಷತೆಯ ಪ್ರತೀಕವೂ ಹೌದು.

ಹೀಗೆ ವಿದ್ಯಾಧಿಕಾರಿಗಳಾಗಿ ಬಂದ ಬ್ರಿಟೀಷ್ ಅಧಿಕಾರಿಗಳು ಆಯಾ ಪ್ರಾಂತ್ಯದ ದೇಶಿಯ ಪಂಡಿತರ ಹಾಗೂ ವಿದೇಶಿಯರ ಸಹಾಯದಿಂದ ಪಠ್ಯಪುಸ್ತಕಗಳು ರಚನೆಗೊಂಡವು. ವಿವಿಧ ಭಾಷೆಗಳ ಸಂಪರ್ಕದಿಂದಾಗಿ ಆಡಳಿತ ಹಾಗೂ ಶೈಕ್ಷಣಿಕವಾಗಿ ಭಾಷಾ ತೊಂದರೆಗಳು ಸಹಜವಾಗಿ ಸೃಷ್ಟಿಯಾಯಿತು. ಈ ಕಾರಣದಿಂದಾಗಿ ಬ್ರಿಟೀಷರ ಆಳ್ವಿಕೆ ಕಾಲದಲ್ಲಿ ಭಾಷೆ ಅತ್ಯಂತ ಜಟಿಲವಾದ ಪ್ರಕ್ರಿಯೆಯಾಯಿತು. ಇಂದಿಗೂ ಸಹ ಸ್ಪಷ್ಟ ನಿರ್ಧಾರವನ್ನು ಕೈಗೊಳ್ಳಲಾಗದೆ ಶಿಕ್ಷಣದಲ್ಲಿ ಸಮಸ್ಯೆಯಾಗಿಯೇ ಉಳಿದಿದೆ.

ಇದರಿಂದಾಗಿ ಮಾತೃಭಾಷೆ ಹಾಗೂ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಮಾಧ್ಯಮ ಜಾರಿಗೆ ಬರಬೇಕೆಂಬುದು ಒಂದು ಖಚಿತ ನಿಲುವಾದರೆ, ಪ್ರಾಥಮಿಕ ಶಾಲೆಯಲ್ಲಿ ಇಂಗ್ಲೀಶ್

ಮಾಧ್ಯಮ ಬಳಕೆಯಾಗಬೇಕು ಎನ್ನುವುದು ಮತ್ತೊಂದು ನಿಲುವಾಗಿದೆ. ಹೀಗೆ ಬ್ರಿಟೀಷ ಅಧಿಕಾರಿಗಳಲ್ಲಿಯೇ ಹಲವಾರು ಭಿನ್ನಾಭಿಪ್ರಾಯಗಳಿವೆ. ಹೀಗೆ ಇಂಗ್ಲೀಶ್ ಭಾಷೆಯೇ ಶಿಕ್ಷಣ ಹಾಗೂ ಆಡಳಿತದ ಭಾಷೆಯಾಗಿ ಉಳಿಯಬೇಕೆನ್ನುವುದು ಕೆಲವರ ಅಭಿಮತವಾಗಿದೆ.

ಈಸ್ಟ್ ಇಂಡಿಯಾ ಕಂಪನಿ ಸರ್ಕಾರದಲ್ಲಿ ದಿನನಿತ್ಯ ಕಛೇರಿಯ ವ್ಯವಹಾರಗಳನ್ನು ನೋಡಿಕೊಳ್ಳಲು ಅರ್ಹರಾದ ಇಂಗ್ಲೀಶ್ ಬಲ್ಲ ಗುಮಾಸ್ತರ ಅವಶ್ಯಕತೆ ಇತ್ತು. ಇದರಿಂದಾಗಿ ಮೂಲತಃ ಇಂಗ್ಲೀಶ್ ಶಿಕ್ಷಣ ಪ್ರಮುಖ ಸ್ಥಾನ ಪಡೆಯಲಾರಂಭಿಸಿತು. ಲಾರ್ಡ್ ಮೆಕಾಲೆ ಇಂಗ್ಲೀಶ್ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ಕಲ್ಪಿಸಿದರು. ಮೆಕಾಲೆ, ಟ್ರೆವಿಲಿಯನ್‌ರಂಥವರು ಬುದ್ಧಿ ಜೀವಿಗಳು ಆಂಗ್ಲೀಕರಣದಲ್ಲಿ ಮಹಾಧ್ಯೇಯಗಳ ಸಾಧನೆಯ ಯಶಸ್ಸು ಕಂಡರು. ಇದಕ್ಕಾಗಿ ಇಂಗ್ಲೀಶ್ ವಿದ್ಯಾಭ್ಯಾಸ ಜೀವನೋಪಾಯಕ್ಕಾಗಿ ರಹದಾರಿಯಾಗಿ ಪರಿಣಮಿಸಿತೇ ಹೊರತು, ಭಾಷೆಯ ಕಲಿಕೆಯ ಬಗೆಯ ವಿಚಾರಗಳು ಗಣನೆಗೆ ಬರಲೇ ಇಲ್ಲ. ಮೆಕಾಲೆ ಪ್ರಕಾರ ಭಾರತೀಯರ ಜ್ಞಾನ ಅಭಿವೃದ್ಧಿಗೆ ಸಾಹಿತ್ಯ, ಮತ್ತು ವಿಜ್ಞಾನಗಳ ಅಧ್ಯಯನಕ್ಕೆ ಇಂಗ್ಲೀಶ್ ಭಾಷೆ ಅನಿವಾರ್ಯವಾಗಿತ್ತು. ಇಂಗ್ಲೀಶ್ ಶಿಕ್ಷಣದಿಂದ ದೇಶ ಭಾಷೆಗಳನ್ನು ಬಲಪಡಿಸಬಹದೆಂಬುದೂ ಮೆಕಾಲೆಯವರ ಅಭಿಮತವಾಗಿತ್ತು. ಇಂಗ್ಲೀಶ್ ಭಾಷೆ ಹಾಗೂ ಸಂಸ್ಕೃತಿಯ ಅನುಕರಣೆಯಲ್ಲಿ ಭಾರತೀಯರು ತಮ್ಮ ಗುರಿಯನ್ನು ಮರೆತರು. ಇಂಗ್ಲೀಶ್ ಬಾರದವರು ಅಸಂಸ್ಕೃತರು ಎಂಬ ಭಾವನೆ ನಮ್ಮವರಲ್ಲಿಯೇ ಬೆಳೆಯತೊಡಗಿತು. ಅದು ಇಂದಿಗೂ ಸಹ ಗಟ್ಟಿಯಾಗಿ ನೆಲೆಯೂರಿದೆ. ಅದಕ್ಕೆ ಇಂಗ್ಲೀಶಿನ ದಟ್ಟವಾದ ಪ್ರಭಾವ ಅಗಾಧವಾದುದಾಗಿದೆ. ಸ್ವತಃ ದೇಶಿಯರೇ ತಮಗೆ ಇಂಗ್ಲೀಶ್ ಬೇಕೆಂದು ಆಯ್ದುಕೊಂಡದ್ದಕ್ಕೆ ಕೆಲವು ನಿದರ್ಶನಗಳಿವೆ.

ಅಂದಿನ ದೇಶೀಯ ಪ್ರಮುಖರು ಮತ್ತು ರಾಜರುಗಳು ತಮಗೆ ಇಂಗ್ಲೀಶ್ ಶಿಕ್ಷಣ ಬೇಕೆಂದೂ ತಮ್ಮ ಮಕ್ಕಳಿಗೆ ಇಂಗ್ಲೀಶನ್ನು ಕಲಿಸಲು ಮುಂದಾದರು. ಇಂಗ್ಲೀಶ್ ಅಧ್ಯಾಪಕರನ್ನು ತಮ್ಮ ಮನೆಗಳಲ್ಲಿರಿಸಿಕೊಂಡು ಶಿಕ್ಷಣ ಕೊಡಿಸಲು ಹೈದರಾಬಾದಿನ ನಿಜಾಮರು, ಮೈಸೂರು ಅರಸರುಗಳ ಆಂಗ್ಲ ಅಧ್ಯಾಪಕರನ್ನು ಅರಮನೆಯಲ್ಲಿರಿಸಿಕೊಂಡಿದ್ದರು. ತಿರುವಾಂಕೂರಿನ ಸ್ವಾತಿ ತಿರುಗಳ್ ರಾಜಕುಮಾರನಿಗೆ ಕರ್ನಲ್ ಮನ್ರೋ ಆಂಗ್ಲ ಶಿಕ್ಷರಾಗಿದ್ದರು ಎಂಬ ಉದಾಹರಣೆಗಳು ಸಿಗುತ್ತವೆ.

ಸುರಪುರದ ರಾಜಕುಮಾರ ವೆಂಕಟಪ್ಪನಿಗೆ ಕರ್ನಲ್ ಟೈಲರ್ ಗುರುವಾಗಿದ್ದ. ಆಂಗ್ಲ ವ್ಯಾಮೋಹಕ್ಕೊಳಗಾಗಿ ಕೊಡಗಿನ ಚಿಕವೀರ ರಾಜೇಂದ್ರರು ತಮ್ಮ ಮಗಳು ಗೌರಮ್ಮನಿಗೆ ಕ್ರಿಸ್ತ ಮತವನ್ನು ಅವಲಂಬಿಸಲು ಅನುಮತಿ ನೀಡಿದರಲ್ಲದೇ ವಿಕ್ಟೋರಿಯಾ ರಾಣಿಗೆ ಅವಳನ್ನು ದತ್ತು ನೀಡಿದರು. ಅವರೂ ಇಂಗ್ಲೆಂಡಿನಲ್ಲಿಯೇ ನೆಲೆಸಿ ಮಗಳ ಪಾಶ್ಚಾತ್ಯ ರೀತಿ ನೀತಿಗಳನ್ನು ನೋಡಿ ಆನಂದಿಸುತ್ತಾ ತಮ್ಮ ಮಗಳು ವಿಕ್ಟೋರಿಯಾ ಗೌರಮ್ಮಳಾದುದನ್ನು ಕಂಡು ಹೆಮ್ಮೆಪಟ್ಟಿರುವುದಾಗಿ ಉಲ್ಲೇಖಿಸಿದ್ದಾರೆ.

ಇಲ್ಲಿ ದೇಶೀಯ ರಾಜರು ಅಥವಾ ಪ್ರಮುಖರು ಇಂಗ್ಲೀಶ್ ಕಲಿಕೆಯನ್ನು ಅಪೇಕ್ಷಿಸಲು ಭಾಷಾ ವ್ಯಾಮೋಹವೇ ಮೂಲ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಇಂಗ್ಲೀಶ್ ಭಾಷೆಯ ತಿಳುವಳಿಕೆಯನ್ನು ಪಡೆದುಕೊಂಡು ಜ್ಞಾನವನ್ನು ಹೆಚ್ಚಿಸಿಕೊಳ್ಳುವ ಉದ್ದೇಶ ಖಂಡಿತವಿರಲಿಲ್ಲ. ಮುಖ್ಯವಾಗಿ ಇಂಗ್ಲೀಶರ ಸಂಸ್ಕೃತಿಗೆ ಆಕರ್ಷಿತರಾಗಿ ಅದನ್ನು ಅನುಕರಿಸುವಲ್ಲಿ ಬಲಿಯಾ ಗುತ್ತಿದ್ದಾರೆ. ಇದೊಂದು ಪ್ರಕ್ರಿಯೆ ಎನ್ನುವಂತೆ ಪ್ರಸ್ತುತದಲ್ಲಿ ತೀವ್ರವಾಗಿ ಬೆಳೆಯುತ್ತಿದೆ. ಇದೊಂದು ಭಾಷಾ ಹುಚ್ಚು ವ್ಯಾಮೋಹವೇ ವಿನಃ ಅನ್ಯತಾ ಬೇರೆ ಕಾರಣಗಳಿಲ್ಲ. ಪ್ರಾದೇಶಿಕ ಭಾಷಾ ಶಿಕ್ಷಣ ಕುರಿತಾಗಿ ನಡೆಯುತ್ತಿರುವ ಚರ್ಚೆಯೇ ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಹದಿನೆಂಟನೆಯ ಶತಮಾನಕ್ಕೆ ಹಿಂದೆ ಬ್ರಿಟನ್ನಿನ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ವಿಶ್ವ ವಿದ್ಯಾಲಯಗಳಲ್ಲಿ ಘಟಿಕೋತ್ಸವವು ಲ್ಯಾಟಿನ್ ಭಾಷೆಯಲ್ಲಿ ನಡೆಯುತಿತ್ತು. ಆಗಿನ್ನೂ ಇಂಗ್ಲೀಶ್ ಭಾಷೆ ಬೆಳೆದಿರಲಿಲ್ಲ. ತನ್ನ ದೇಶದಲ್ಲಿಯೇ ಅದಕ್ಕೆ ಸ್ಥಾನ ಇರಲಿಲ್ಲ. ಆದರೆ ನಂತರದ ದಿನಮಾನಗಳಲ್ಲಿ ಎಷ್ಟು ಪ್ರೌಢಿಮೆ ಬೆಳೆಸಿಕೊಂಡಿತೆಂದರೆ ಜಗತ್ತಿನಾದ್ಯಂತ ಇಂದು ಇಂಗ್ಲೀಶ್ ಅಂತರಾಷ್ಟ್ರೀಯ ಭಾಷೆಯಾಗಿ ಪರಿಣಮಿಸಿದೆ. ಇದು ಪ್ರಪಂಚದ ಶ್ರೀಮಂತ ಭಾಷೆಗಳಲ್ಲಿ ಒಂದಾಗಿದೆ. ಇದರೊಂದಿಗೆ ಗ್ರೀಕ್, ಲ್ಯಾಟಿನ್, ಸಂಸ್ಕೃತ, ಮುಂತಾದ ಇಂಡೋ ಯುರೋಪಿಯನ್ ಗುಂಪಿಗೆ ಸೇರಿದ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿ ಸಮೃದ್ಧಿಯನ್ನು ಪಡೆದುಕೊಂಡಿದೆ.

ಆರಂಭ ಕಾಲದಲ್ಲಿ ಇಂಗ್ಲೀಶ್ ಶಾಲೆಗಳನ್ನು ಮಿಶನರಿಗಳು ಸ್ಥಾಪಿಸಿದರು. ಬಳ್ಳಾರಿ, ಬೆಳಗಾವಿ, ಬೆಂಗಳೂರುಗಳಲ್ಲಿ ಲಂಡನ್ ಮಿಶನ್ನಿನವರು ಸ್ವ ಮತ ಪ್ರಚಾರದಿಂದ ಇವುಗಳನ್ನು ಸ್ಥಾಪಿಸಿದರು. ಜನತೆಯ ಶೈಕ್ಷಣಿಕ ವಿಕಾಸವನ್ನು ಗುರಿಯಾಗಿಟ್ಟುಕೊಂಡು ೧೮೩೩ರಲ್ಲಿ ಮೈಸೂರಿನಲ್ಲಿ ಒಂದು ಇಂಗ್ಲೀಶ್ ಶಾಲೆಯನ್ನು ಸ್ಥಾಪಿಸಲಾಯಿತು. ಕರ್ನಾಟಕದ ಮೊತ್ತ ಮೊದಲಿನ ದೇಶೀ ಶಿಕ್ಷಣ ಸಂಸ್ಥೆಯಿದು. ಕರ್ನಾಟಕದ ಪ್ರಮುಖ ನಗರಗಳಲ್ಲಿ ಇಂಗ್ಲೀಶ್ ಶಿಕ್ಷಣದ ಶಾಲೆಗಳು ಕ್ರಮೇಣ ತಲೆಯೆತ್ತಿದವು. ಕೊಡಗನ್ನು ವಶಪಡಿಸಿಕೊಂಡ ವರ್ಷವೇ ೧೮೩೪ರಲ್ಲಿ ಕಂಪನಿ ಸರಕಾರವೊಂದು ಇಂಗ್ಲೀಶ್ ಶಾಲೆಯನ್ನು ಆರಂಭಿಸಿತು. ಧಾರವಾಡದಲ್ಲಿ ಸರಕಾರದ ವತಿಯಿಂದ ಇಂಗ್ಲೀಶ್ ಶಿಕ್ಷಣ ೧೮೪೪ರಲ್ಲಿ ಆರಂಭವಾಯಿತು. ಇಂಗ್ಲೀಶ್ ಶಾಲೆಗಳ ಮೂಲಕ ಪಾಶ್ಚಾತ್ಯ ವಿದ್ಯೆಯ ವ್ಯಾಸಂಗಕ್ಕೆ ಅಡಿಪಾಯ ಹಾಕಲಾಯಿತು.

ವೆಸ್ಲಿಯನ್ ಮೆಥಾಡಿಸ್ಟರ್ ಅವರ ಕಾರ್ಯಕ್ಷೇತ್ರ ಮೈಸೂರು ಸಂಸ್ಥಾನಕ್ಕೆ ಸೀಮಿತವಾಗಿದ್ದರೂ ಶೈಕ್ಷಣಿಕ ಚಟುವಟಿಕೆಗಳು ಹೆಚ್ಚು ವ್ಯಾಪಕವಾಗಿದ್ದವು. ಅವರ ಮುಖಂಡನಾಗಿದ್ದ ಥಾಮಸ್ ಹಡ್ಸನ್ ತಾನು ಬಂದ ಮರುವರ್ಷವೇ ಬೆಂಗಳೂರಿನ ಕಂಟೋನ್ ಮೆಂಟ್‌ನಲ್ಲಿ ಇಂಗ್ಲೀಶ್ ಶಾಲೆಯನ್ನು ಆರಂಭಿಸಿದರು, ಕಮಿಶನರ್ ಕಬ್ಬನ್ನನ ಅಧ್ಯಕ್ಷತೆಯಲ್ಲಿ ಪಬ್ಲಿಕ್ ಪರೀಕ್ಷೆಯನ್ನು ನಡೆಸಲಾಯಿತು. ವಿದ್ಯಾರ್ಥಿಗಳ ಪ್ರಗತಿ ಕಂಡು ಕಬ್ಬನ್ ಹಾಗೂ ಗವರ್ನರ್ ಜನರಲ್ ಬೆಂಟಿಂಕ್‌ನಿಂದ ದೇಣಿಗೆಯನ್ನು ಸ್ವೀಕರಿಸಲಾಯಿತು.

ಮೆಕಾಲೆ ಇಂಗ್ಲೀಶ್ ಮಾಧ್ಯಮವನ್ನು ಬಳಸುವ ವಿಚಾರದಲ್ಲಿ ಒತ್ತಾಯ ಪೂರ್ವಕವಾದ ಅಭಿಪ್ರಾಯವನ್ನು ನೀಡಿದ್ದರಿಂದ ಭಾರತೀಯ ಶೈಕ್ಷಣಿಕ ಇತಿಹಾಸದಲ್ಲಿ ೧೮೩೫ನೇ ಇಸ್ವಿ ಒಂದು ಪ್ರಮುಖ ಮೈಲಿಗಲ್ಲಾಯಿತು. ನಮ್ಮ ಮತ್ತು ನಮ್ಮಿಂದ ಆಳಲ್ಪಡುವ ಲಕ್ಷಾಂತರ ಜನರ ನಡುವೆ ಮಧ್ಯವರ್ತಿಗಳಾಗಬಲ್ಲ, ರಕ್ತದಿಂದ ಮತ್ತು ಬಣ್ಣದಿಂದ ಭಾರತೀಯರಾದರೂ ಅಭಿರುಚಿ, ಅಭಿಪ್ರಾಯ, ನೀತಿ ಮತ್ತು ಬೌದ್ಧಿಕತೆಯಲ್ಲಿ ಆಂಗ್ಲರಾಗಬಲ್ಲರಂತಹ ಒಂದು ವರ್ಗವನ್ನು ಸೃಷ್ಟಿಸುವುದೇ ಮೆಕಾಲೆಯ ಉದ್ದೇಶವಾಗಿತ್ತು. ಇದಕ್ಕೆ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕ್‌ನು ಮೆಕಾಲೆಯ ದೃಷ್ಟಿಕೋನವನ್ನು ಒಪ್ಪಿಕೊಂಡನು. ಭಾರತೀಯರಲ್ಲಿ ಐರೋಪ್ಯ ಸಾಹಿತ್ಯ ಮತ್ತು ವಿಜ್ಞಾನವನ್ನು ಪ್ರಚುರಪಡಿಸುವುದೇ ಬ್ರಿಟೀಶ್ ಸರ್ಕಾರದ ನಿಜವಾದ ಉದ್ದೇಶವಾಗಿದೆ. ಇಂಗ್ಲೀಶ್ ಮಾಧ್ಯಮದ ಮೂಲಕ ಆಂಗ್ಲ ಸಾಹಿತ್ಯ ಮತ್ತು ವಿಜ್ಞಾನದ ತಿಳುವಳಿಕೆಯನ್ನು ಮಾಡಿಕೊಳ್ಳಲು ಇಂಗ್ಲೀಶ್ ಮಾಧ್ಯಮವನ್ನು ಉಪಯೋಗಿಸಿಕೊಳ್ಳಬೇಕು ಎಂದು ನಿರ್ದೇಶನ ನೀಡಿದ್ದನು. **(ಕೆ.ಎಲ್. ಶ್ರೀಮಾಲಿ, ವರ್ಧಾಯೋಜನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೬೭, ಪುಟ-೪)**

ಮಿಶನ್ನಿನ ಮ್ಯಾಸೆ ಮತ್ತು ಲೇಡ್ಲರ್ ಎಂಬುವರು ಬೆಂಗಳೂರಿನಲ್ಲಿ 'ಸೇಂಟ್ ವಿಲಿಯಂ' ಮತ್ತು 'ಪೋರ್ಟ್ ಸೇಂಟ್ ಜಾರ್ಜ್' ಕಾಲೇಜುಗಳ ಮಾದರಿಯಲ್ಲಿ ನಿರ್ಮಿಸಿದರು. ಕ್ರಿಶ್ಚಿಯನ್ನರಿಗೆ ಮತ ಪ್ರಸಾರದ ತರಬೇತಿಯನ್ನು ಕೊಡಲು ಸೆಮಿನರಿಯೊಂದನ್ನು (ಬೋಧಕ ಶಾಲೆ) ಆರಂಭಿಸಲಾಯಿತು. ಇದುವೆ ಕರ್ನಾಟಕದಲ್ಲಿ ಮಿಶನರಿ ಜನರ ಮೊದಲ ಸೆಮಿನರಿಯಾಗಿದೆ. ಸೆಮಿನರಿ ಅಧ್ಯಯನವು ಯಾವ ಭಾಷೆಯಲ್ಲಿ ನಡೆಯಬೇಕೆನ್ನುವುದರ ಬಗ್ಗೆ ತಿಕ್ಕಾಟ ನಡೆದವು. ಮ್ಯಾಸೆ, ಲೇಡ್ಲರ್ ಇವರು ಇಂಗ್ಲೀಶ್ ಮಾಧ್ಯಮವಿರಬೇಕು ಎಂದಾಗ, ಡಬ್ಲೂ ಕ್ಯಾಂಬೆಲ್ ಅವರು ಕನ್ನಡದಲ್ಲಿಯೇ ದೇಶೀಯರ ಶಿಕ್ಷಣ ನಡೆಯಬೇಕೆಂದು ಪ್ರತಿಪಾದಿಸಿದರು. ಕ್ಯಾಂಬೆಲ್ ಅವರು ತಮ್ಮ ವಾದಕ್ಕೆ ಮನ್ನಣೆ ಸಿಗದಿದ್ದಾಗ ರಾಜೀನಾಮೆ ಕೊಡುವುದಾಗಿ ತಮ್ಮ ವಾದವನ್ನು ತೀವ್ರ ಸ್ವರೂಪ ತಳೆಯುವಂತೆ ಮಾಡಿದರು. ವರಿಷ್ಠ ಕೇಂದ್ರದ ಮಧ್ಯಸ್ಥಿಕೆಯಿಂದ ಕ್ಯಾಂಬೆಲ್ ಮುಂದಿನ ಸೇವೆಯನ್ನು ಕನ್ನಡ ಕ್ಷೇತ್ರಗಳಲ್ಲಿ ಕೈಗೊಳ್ಳುವಂತಾಯಿತು. ಇದರಿಂದ ಕನ್ನಡದ ಕಡೆಗೆ ಒಲವು, ಬಲವೂ ಹೆಚ್ಚಾಯಿತು. ಪ್ರಾದೇಶಿಕ ಭಾಷೆಯಿಂದಲೇ ಶಿಕ್ಷಣ, ಆಡಳಿತವನ್ನು ಸುಧಾರಣೆ ತರುವಂತೆ ಅನೇಕ ಅಧಿಕಾರಿಗಳು ಸಿದ್ಧರಾದರು.

ಧಾರವಾಡದಲ್ಲಿ ಮತ ಪ್ರಚಾರಕ್ಕೆಂದು ಆಗಮಿಸಿದ ಹರ್ಮನ್ ಮೊಗ್ಲಿಂಗ್ ಅವರು ಕೂಡಲೇ ಒಂದು ಇಂಗ್ಲೀಶ್ ಶಾಲೆಯನ್ನು ಆರಂಭಿಸಿದರು. ಆದರೆ ಸಂಪೂರ್ಣವಾಗಿ ಇಂಗ್ಲೀಶ್ ಭಾಷೆಯಲ್ಲಿ ಶಿಕ್ಷಣವನ್ನು ಕೊಡುವ ವ್ಯವಸ್ಥೆ ಸಾಧ್ಯವಾಗದೇ ಹೋಯಿತು. ಕಾರಣ, ಸ್ಥಳೀಯ ವಿದ್ಯಾರ್ಥಿಗಳು ಮತ್ತು ಇತರ ಭಾಷಿಕರು ಸಹ ಸೇರುತ್ತಿದ್ದುದರಿಂದ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಹಾಗೂ ಪ್ರದೇಶದ ವ್ಯಾವಹಾರಿಕ ಭಾಷೆಯಲ್ಲಿ ಅವರಿಗೆ ತಿಳುವಳಿಕೆ ನೀಡುವುದು ಅಗತ್ಯವಾದದ್ದರಿಂದ ಕ್ರಮೇಣ ಕನ್ನಡ ಬೋಧನೆ

ಸಾಧ್ಯವಾಗತೊಡಗಿತು. ಕೆಲವೇ ಬ್ರಿಟೀಷ್ ಅಧಿಕಾರಿಗಳು ಇಂಗ್ಲೀಶ್ ಶಿಕ್ಷಣಕ್ಕೆ ಒತ್ತಾಯಿಸಿದ್ದರೂ ಕ್ರಮೇಣ ಅವರೂ ಸಹ ಕನ್ನಡ ಭಾಷೆಯನ್ನು ಕಲಿಯುವಲ್ಲಿ ಮುಂದಾದರು. ಜೊತೆಗೆ ಸಂಸ್ಕೃತಿಯನ್ನು ಅಧ್ಯಯನ ಮಾಡಿದರು. ಹಲವಾರು ಕೃತಿಗಳನ್ನು ಸಂಪಾದಿಸಿ ಮುದ್ರಣ ಕಾರ್ಯವನ್ನು ಕೈಗೊಂಡರು. ಕ್ರೈಸ್ತ ತತ್ವ ಪ್ರಚಾರಕ್ಕಾಗಿ ಧರ್ಮ ಬೋಧನೆಯನ್ನು ಕನ್ನಡಕ್ಕೆ ಭಾಷಾಂತರಿಸಿದರು. ಕನ್ನಡ ಸಂಸ್ಕೃತಿ, ಕೃತಿಗಳನ್ನು ಇಂಗ್ಲೀಶ್‌ಗೆ ಅನುವಾದಿಸುವ ಕಾರ್ಯವನ್ನು ಆರಂಭಿಸಿದರು.

ಈ ಹಿನ್ನೆಲೆಯಲ್ಲಿ ಭಾರತೀಯ ಶಿಕ್ಷಣದಲ್ಲಿ ಇಂಗ್ಲೀಶ್ ಭಾಷೆಯನ್ನು ಅಳವಡಿಸಿ ಕೊಳ್ಳಲಾಯಿತಷ್ಟೆ. ಆದರೆ ಸಂಪೂರ್ಣ ಇಂಗ್ಲೀಶ್ ಕಲಿಕೆ ಬ್ರಿಟೀಷ್ ಅಧಿಕಾರಿಗಳಿಂದಲೇ ಸಾಧ್ಯವಾಗಲಿಲ್ಲ. ಕ್ರೈಸ್ತಧರ್ಮ ಪ್ರಚಾರ ಸಮೇತ ಮತಾಂತರಗೊಳಿಸಬೇಕು ಮತ್ತು ಇಂಗ್ಲೀಶ್ ಸಾಹಿತ್ಯ ಸಂಸ್ಕೃತಿಯನ್ನು ಬಿತ್ತಬೇಕೆನ್ನುವುದು ಮೆಕಾಲೆ ಮತ್ತು ಬೆಂಟಿಂಕ್‌ರ ಕಡು ಉದ್ದೇಶವಾಗಿತ್ತು. ಆದರೆ ಮೂಲತಃ ಅಪಾರ ಸಂಖ್ಯೆಯಲ್ಲಿ ಬಂದಂತಹ ಬ್ರಿಟೀಷ್ ಅಧಿಕಾರಿಗಳು, ಮಿಶನರಿಗಳು, ಪಾದ್ರಿಗಳು ಸ್ವತಃ ತಾವಾಗಿಯೇ ಇಂಗ್ಲೀಶ್ ಶಿಕ್ಷಣಕ್ಕೆ ಪ್ರೋತ್ಸಾಹ ಕಲ್ಪಿಸಲಿಲ್ಲ. ಬದಲಾಗಿ, ಕನ್ನಡ ಪ್ರಾದೇಶಿಕ ಭಾಷೆ ಹಾಗೂ ಶಿಕ್ಷಣಕ್ಕಾಗಿ ಮತ್ತಷ್ಟು ಸುಧಾರಣೆ ಗಳನ್ನು ಅಳವಡಿಸಿದರು.

ಈ ನಿಟ್ಟಿನಲ್ಲಿ ಇಂಗ್ಲೀಶ್ ಮಾಧ್ಯಮದಲ್ಲಿ ಶಿಕ್ಷಣವನ್ನು ಜಾರಿಗೆ ತರಬೇಕು ಎನ್ನುವ ದೃಷ್ಟಿಯಿಂದ ಕೆಲಸ ಮಾಡಿದವರಿಗಿಂತ ಹೆಚ್ಚಾಗಿ, ಕನ್ನಡ ಮಾಧ್ಯಮಕ್ಕಾಗಿ ದುಡಿದ ಅಧಿಕಾರಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಆಡಳಿತ ಹಾಗೂ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಯನ್ನು ಜಾರಿಗೆ ತರುವಂತೆ ಅನೇಕ ಸುಧಾರಣೆಗಳನ್ನು ಮಾರ್ಪಡಿಸಿದರು. ಈ ದಿಸೆಯಲ್ಲಿ ಪ್ರಾದೇಶಿಕ ಭಾಷೆಯಾಗಿ ಆಡಳಿತ ಹಾಗೂ ಶಿಕ್ಷಣದಲ್ಲಿ ಹಲವಾರು ಬದಲಾವಣೆಗಳು ಮರುಕಳಿಸು ವಂತಾಯಿತು. ಇದರಿಂದ ಕನ್ನಡ ಭಾಷೆಯು ಮತ್ತಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಳ್ಳಲು ಸಾಧ್ಯವಾಯಿತು.

## ೩.೩. ಕರ್ನಾಟಕದಲ್ಲಿನ ಶಿಕ್ಷಣ ಸ್ವರೂಪ

ಭಾರತದಲ್ಲಿ ಪ್ರಾಚೀನ ಕಾಲದಲ್ಲಿದ್ದ ಶಿಕ್ಷಣ ಸ್ವರೂಪವೇ ಸಾಮಾನ್ಯವಾಗಿ ಕರ್ನಾಟಕದಲ್ಲಿಯೂ ಸಹ ಅದೇ ರೀತಿಯಾಗಿ ಮುಂದುವರಿದುಕೊಂಡು ಬಂದಿದೆ. ಕರ್ನಾಟಕ ದಲ್ಲಿ ಲಭ್ಯವಿರುವ ಸಾಹಿತ್ಯಿಕ ಹಾಗೂ ಚಾರಿತ್ರಿಕ ಅವಶೇಷಗಳೇ ಅಂದಿನ ಸಾಮಾಜಿಕ ಜನಜೀವನಕ್ಕೆ ಪ್ರತ್ಯಕ್ಷ ಕೈಗನ್ನಡಿಯಾಗಿವೆ. ಇನ್ನು, ಭಾರತೀಯ ಪರಂಪರೆಗೆ ಒದಗಿದಂತಹ ಮಾಹಿತಿಗಳಷ್ಟೇ ಕರ್ನಾಟಕ ಪರಂಪರೆಗೂ ಆಕರಗಳು ಕಾಣಸಿಗುತ್ತವೆ. ಜೊತೆಗೆ ಧಾರ್ಮಿಕ ಪರಂಪರೆ, ಸಂಸ್ಕೃತಿ, ವಾಸ್ತುಶಿಲ್ಪಗಳೇ ಕರ್ನಾಟಕದ ಶಿಕ್ಷಣದ ಪರಂಪರೆಗೆ ಬಹುದೊಡ್ಡ ಆಕರಗಳಾಗಿವೆ. ಕರ್ನಾಟಕದಲ್ಲಿ ಒಳ್ಳೆಯ ಭದ್ರವಾದ ತಳಹದಿಯ ಮೇಲೆ ಕಟ್ಟಲ್ಪಟ್ಟ ಶಿಕ್ಷಣ ಪದ್ಧತಿಯು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ

ವಿಫುಲವಾದ ಸಾಹಿತ್ಯವು ದೊರೆಯುತ್ತದೆ. ಜೊತೆಗೆ ಶಾಸನಗಳು ಲಿಖಿತ ರೂಪದಲ್ಲಿ ಪ್ರಧಾನವಾಗಿ ಕಂಡುಬರುತ್ತವೆ. ಇವುಗಳ ಮಾಹಿತಿಯಿಂದಾಗಿಯೇ ಕರ್ನಾಟಕದಲ್ಲಿನ ಪ್ರಾಚೀನ ಕಾಲದ ಶಿಕ್ಷಣ ಸ್ವರೂಪವನ್ನು ಗುರುತಿಸಬಹುದಾಗಿದೆ.

ಪ್ರಾಚೀನ ಕರ್ನಾಟಕದಲ್ಲಿಯ ವಿದ್ಯಾಭ್ಯಾಸ ಪದ್ಧತಿಯು ಬಹುಪಾಲು ಉತ್ತರ ಭಾರತದಲ್ಲಿ ಇರುವಂತೆಯೇ ಇಲ್ಲಿಯೂ ಸಹ ಕಂಡುಬರುತ್ತದೆ. ಕರ್ನಾಟಕದಲ್ಲಿಯ ಶಿಕ್ಷಣವು ಸಹ ಧಾರ್ಮಿಕವಾದುದಾಗಿತ್ತು. ಪ್ರಾಚೀನರಲ್ಲಿ 'ಶಿಕ್ಷಣ' ಪದಕ್ಕೆ 'ವಿದ್ಯಾ' ಎಂಬ ಪದವು ಹೆಚ್ಚು ಬಳಕೆಯಲ್ಲಿದ್ದುದು ಕಂಡು ಬರುತ್ತದೆ. ಪ್ರಾಚೀನರ ಪ್ರಕಾರ ಶಿಕ್ಷಣವೆಂದರೆ ಮಾನವನು ಆತ್ಮಜ್ಞಾನದ ಸಿದ್ಧಿಯನ್ನು ಪಡೆಯಲು ವಿದ್ಯೆ ಪ್ರಮುಖ ಸಾಧನವೆಂದು ಪರಿಭಾವಿಸಲಾಗಿತ್ತು. ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಆತನ ಬಹುಮುಖ ವಿಕಾಸಕ್ಕೆ ಪ್ರಯತ್ನಿಸುವುದು ಪ್ರಾಚೀನ ಶಿಕ್ಷಣ ಪರಂಪರೆಯ ಗುರಿಯಾಗಿತ್ತು.

ವೈದಿಕ ಯುಗದಲ್ಲಿ ಭಾರತದಲ್ಲಿರುವಂತೆ ಕರ್ನಾಟಕದಲ್ಲಿಯೂ ಸಹ ಗುರುವಿನ ಮನೆಯೇ ಪಾಠಶಾಲೆಯಾಗಿತ್ತು. ವಿದ್ಯಾರ್ಥಿ ಗುರುವಿನ ಸೇವೆ ಮಾಡಿ ಆತನಿಂದ ವಿದ್ಯಾ ಲಾಭ ಮಾಡಿಕೊಳ್ಳುತ್ತಿದ್ದನು. ಅಂತಹ ವಿದ್ಯಾರ್ಥಿಯನ್ನು 'ಅಂತೇವಾಸಿ' ಎಂದು ಕರೆಯುತ್ತಿದ್ದರು. ಗುರುಶಿಷ್ಯ ಸಂಬಂಧ ನೇರವಾಗಿತ್ತಲ್ಲದೆ, ಯಾವ ಮಧ್ಯಸ್ಥಿಕೆಯೂ ಇರಲಿಲ್ಲ. ಗುರುವಾದವನು ವಿದ್ಯಾರ್ಥಿಯಿಂದ ಯಾವ ಸಂಭಾವನೆಯನ್ನೂ ನಿರೀಕ್ಷಿಸದೇ ವಿದ್ಯೆಯನ್ನು ದಾನ ಮಾಡುತ್ತಿದ್ದನು. ಆದರೆ ಸಂಪೂರ್ಣ ವಿದ್ಯೆ ಮುಗಿದ ನಂತರ ವಿದ್ಯಾರ್ಥಿ ಗುರುವಿಗೆ ಗುರು ಕಾಣಿಕೆಯನ್ನು ಅರ್ಪಿಸಬೇಕಿತ್ತು ಎನ್ನುವುದು ಸಹ ಕಂಡುಬರುತ್ತದೆ. ಇದಕ್ಕೂ ಮುಂದುವರಿದಂತೆ ಶಿಕ್ಷಣ ದಲ್ಲಿದ್ದಂತಹ ಗುರುಶಿಷ್ಯರ ಸಂಬಂಧ, ಪಠ್ಯಕ್ರಮ, ಬೋಧನೆ ಸ್ವರೂಪ ಕುರಿತಂತೆ ಹೆಚ್ಚಿನ ಮಾಹಿತಿಗಳು ಕಂಡುಬರುವುದಿಲ್ಲ. 'ಪ್ರಾಚೀನ ಕರ್ನಾಟಕದ ಶಿಕ್ಷಣ ಪದ್ಧತಿಯ ವಿಚಾರದಲ್ಲಿ ಕರ್ನಾಟಕದ ಶಾಸನಗಳಲ್ಲಿ ವೈದಿಕ ಯುಗದ ಗುರುಕುಲ ಪದ್ಧತಿಯ ಯಾವ ಕುರುಹುಗಳು ಕಾಣಿಸುವುದಿಲ್ಲವೆಂದು ಡಾ. ಚಿದಾನಂದಮೂರ್ತಿಯವರು ತಿಳಿಸಿದ್ದಾರೆ. **(ಡಾ.ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೨೦೮)**

ಅಶೋಕ ಚಕ್ರವರ್ತಿಯ ಆಳ್ವಿಕೆಯ ಕಾಲದಿಂದ ಅಂದರೆ ಬೌದ್ಧಧರ್ಮದ ಕಾಲದಿಂದ ಕರ್ನಾಟಕ ಶಿಕ್ಷಣ ಪರಂಪರೆಗೆ ಹೆಚ್ಚಿನ ಆಧಾರಾಂಶಗಳು ಲಭ್ಯವಾಗುತ್ತವೆ. ಕ್ರಿಪೂ. ೩೨೪-೩೯೮ರಲ್ಲಿ ಕನ್ನಡ ನಾಡಿನ ಶ್ರವಣಬೆಳಗೊಳದಲ್ಲಿ ಜೈನ ಗುರುವಿನೊಂದಿಗೆ ಬಂದು ನೆಲೆಸಿ ಬೌದ್ಧಧರ್ಮದ ಧರ್ಮ ಬೋಧಕನಾಗಿ ಕೆಲವು ಶೈಕ್ಷಣಿಕ ಕೇಂದ್ರಗಳನ್ನು ಸ್ಥಾಪಿಸಿದರು. ಅಲ್ಲಿಂದ ಪ್ರಾರಂಭವಾದ ಬೌದ್ಧಧರ್ಮ ಪ್ರಬಲ ಶಕ್ತಿಯಾಗಿ ನೆಲೆಗೊಳ್ಳಲು ಆರಂಭವಾಯಿತು. ಈ ಕಾಲಘಟ್ಟದಲ್ಲಿ ಎಲ್ಲಾ ಆರ್ಯರು ಉಪನಯನ ಸಂಸ್ಕಾರದ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ದೇಶ ವಿದೇಶಗಳ ವ್ಯಾಪಾರ ವಾಣಿಜ್ಯ ಅಭಿವೃದ್ಧಿಗಾಗಿ ಅಕ್ಷರ ಕಲಿಕೆಯ ಅಗತ್ಯತೆ ಕಂಡು ಬಂದಿತು. ಆರ್ಯರಲ್ಲಿ ಸುಮಾರು ಶೇಖಡ ೭೫ರಷ್ಟು

ಮಂದಿ ಅಕ್ಷರಸ್ಥರಾಗಿದ್ದರು ಎಂದು ಹೇಳಲಾಗಿದೆ. ಈ ಎಲ್ಲಾ ಉಲ್ಲೇಖಗಳು ಅಶೋಕನು ಬರೆಸಿದ ಶಾಸನಗಳಲ್ಲಿ ಬೇರೆ ಬೇರೆ ಪ್ರಾಂತೀಯ ಭಾಷೆಗಳಲ್ಲಿ ಕಂಡುಬರುತ್ತವೆ. ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಕೊಡಿಸುವುದು ಹಾಗೂ ಪಡೆದುಕೊಳ್ಳುವುದು ಪ್ರಧಾನ ಕರ್ತವ್ಯವಾಗಿ ಇಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು.

ಕ್ರಿ.ಶ. ಪ್ರಾರಂಭ ಕಾಲದಲ್ಲಿ ಮೊದಲು ಸಂಸ್ಕೃತವು ಕನ್ನಡದಷ್ಟು ಮುಖ್ಯವೆಂದು ಕರ್ನಾಟಕದಲ್ಲಿ ಪರಿಗಣಿಸಲಾಗಿತ್ತು. ಅದೇ ರೀತಿಯಲ್ಲಿಯೇ ಶಿಕ್ಷಣವನ್ನು ಹೇಳಿಕೊಡಲಾಗುತ್ತಿತ್ತು. ಕನ್ನಡವಲ್ಲದೇ ಸಂಸ್ಕೃತವನ್ನು ಉಪಭಾಷೆಯನ್ನಾಗಿ ಕನ್ನಡ ಶಾಲೆಗಳಲ್ಲಿ ಕಲಿಸುತ್ತಿದ್ದರು. ಉತ್ತಮವಾದ ಉನ್ನತ ಜ್ಞಾನದ ಹಂಚಿಕೆಗಾಗಿ ಭಾರತದಲ್ಲಿ ಸಂಪೂರ್ಣವಾಗಿ ವಿಚಾರಗಳನ್ನು ತಿಳಿಯಪಡಿಸಲು ಸಂಸ್ಕೃತವನ್ನು ಅವಶ್ಯವಾಗಿ ಬಳಸುತ್ತಿದ್ದರು. ಸಂಸ್ಕೃತ ಭಾಷೆಗೆ ಹಾಗೂ ಸಂಸ್ಕೃತ ಪಂಡಿತರಿಗೆ ಮತ್ತು ಸಂಸ್ಕೃತ ಸಾಹಿತ್ಯಕ್ಕೆ ವಿಶೇಷವಾದ ಗೌರವ ಸ್ಥಾನಗಳು ಲಭ್ಯವಾಗಿದ್ದವು.

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಹೈಗುಂದ ಕ್ರಿ.ಶ. ೨ನೇ ಶತಮಾನದಲ್ಲಿಯೇ ಬೌದ್ಧ ಕೇಂದ್ರವಾಗಿತ್ತು ಎಂದು ಅಲ್ಲಿಯ ಯಕ್ಷಕುಬ್ಜರ ಅವಶೇಷಗಳು ಸಾರುತ್ತವೆ. ಭೀಮಾನದಿ ದಂಡೆಯ ಮೇಲಿರುವ 'ಸನ್ನತಿಯು ಕ್ರಿ.ಶ. ೨ನೇ ಶತಮಾನದಿಂದ ೪ನೇ ಶತಮಾನದವರೆಗೆ ದೊಡ್ಡ ಶೈಕ್ಷಣಿಕ ಕೇಂದ್ರವಾಗಿತ್ತೆಂದು ಶಾಸನಗಳಲ್ಲಿ ಕಂಡುಬರುತ್ತದೆ.

ಅಶೋಕನು ಬೌದ್ಧಧರ್ಮ ಜನರಿಗೆ ಸುಲಭವಾಗಿ ಅರ್ಥವಾಗಲೆಂದು ಜನರ ಆಡು ಭಾಷೆಯಲ್ಲಿಯೇ ಶಾಸನಗಳನ್ನು ಬರೆಸಿದನು. ಈ ಶಾಸನಗಳೆಲ್ಲ ಸ್ಥಳೀಯ ಭಾಷೆಯನ್ನು ಅನುಸರಿಸಿದ್ದರಿಂದ ಕರ್ನಾಟಕದಲ್ಲಿ ಜನತೆಯು ಪ್ರಾಕೃತ ಭಾಷೆಯನ್ನು ಅರ್ಥೈಸಿಕೊಳ್ಳಬಲ್ಲವ ರಾಗಿದ್ದರು. ಅದು ಜನ ಭಾಷೆಗಾಗಿ ಚಾಲ್ತಿಯಲ್ಲಿತ್ತೆಂಬುದು ಇದರಿಂದ ತಿಳಿದು ಬರುತ್ತದೆ. ಅಂದಿನ ಬೌದ್ಧ ವಿಹಾರಗಳೇ ವಿದ್ಯಾಕೇಂದ್ರಗಳಾಗಿದ್ದವು. ಮಕ್ಕಳಿಗೆ ಅಲ್ಲಿಯೇ ಶಿಕ್ಷಣ ನೀಡುತ್ತಿದ್ದರು. ಬೌದ್ಧ ವಿಹಾರಗಳಲ್ಲಿ ಮಕ್ಕಳ ಶಿಕ್ಷಣದ ಪ್ರಾರಂಭ ಮಾನಸಿಕ ಬೆಳವಣಿಗೆಗೆ ಅನುಗುಣವಾಗಿರುತ್ತಿತ್ತು. ಏಳು ವರ್ಷಕ್ಕೆ ಅಕ್ಷರಾಭ್ಯಾಸ ಶುರುವಾಗುತ್ತಿತ್ತು. ಬ್ರಿಟೀಷರ ಕಾಲದವರೆಗೂ ಇದೇ ವಯಸ್ಸಿಗೆ ಶಾಲೆಗೆ ಸೇರಿಸುವ ಪದ್ಧತಿ ಇದ್ದಿರುವುದಾಗಿ ಕಂಡುಬರುತ್ತದೆ. ಬೌದ್ಧಶಿಕ್ಷಣ ಪದ್ಧತಿಯಲ್ಲಿ ವಿದ್ಯಾಭ್ಯಾಸ 'ಸಿದ್ಧನಮಃ' ಎಂಬ ಅಕ್ಷರಗಳಿಂದ ಆರಂಭವಾಗುತ್ತಿತ್ತು. ವೈದಿಕರು ಹಾಗೂ ಜೈನರಲ್ಲಿಯು ಈ ಪದ್ಧತಿಯನ್ನು ಕಾಣಬಹುದು. ೧೦ನೇ ಶತಮಾನದಲ್ಲಿ ಭಾರತೀಯರೆಲ್ಲರ ವಿದ್ಯಾಭ್ಯಾಸ ಸಿದ್ಧ ಮಾತೃಕೆಯಿಂದ ಪ್ರಾರಂಭವಾಗುತ್ತಿತ್ತು. ಕನ್ನಡದಲ್ಲಿ ಬಳ್ಳಿ ಎನಿಸಿಕೊಳ್ಳುವ ಮತ್ತು ಏ, ಐ, ಅಕ್ಷರಗಳಿಲ್ಲದ ಹನ್ನೆರಡು ಅಕ್ಷರದ ಕಾಗುಣಿತ ಮಹಾರಾಷ್ಟ್ರದಲ್ಲಿ 'ಬಾರಾಖಡಿ' ಎನಿಸಿಕೊಳ್ಳುತ್ತಿತ್ತು. ಹುಯಾನ್‌ತ್ಸಾಂಗ್‌ನು ಇದನ್ನು ೧೨ ಅಧ್ಯಾಯದ ಕೋಷ್ಟಕ ಎಂದು ಕರೆದ. ಬೌದ್ಧರು ಹುಟ್ಟು ಹಾಕಿದ ಬಾರಾಖಡಿಯ ಬಳ್ಳಿ ಎರಡು ಸಹಸ್ರ ವರ್ಷದ ಹಿಂದೆಯೇ ಅನುಸರಿಸುತ್ತಿದ್ದರೆನ್ನುವುದು ಇದರಿಂದ ತಿಳಿದು ಬರುತ್ತದೆ.

ಬೌದ್ಧ ವಿಹಾರಗಳಲ್ಲಿ ಅಕ್ಷರಾಭ್ಯಾಸವಲ್ಲದೇ ವ್ಯಾಕರಣ, ಭಾಷಾಶಾಸ್ತ್ರ, ತರ್ಕಶಾಸ್ತ್ರ, ಚಿಕಿತ್ಸಾ ವಿದ್ಯೆ, ಶಿಲ್ಪ, ಕರ್ಮವಿದ್ಯೆ, ಆಧ್ಯಾತ್ಮ ವಿದ್ಯೆಗಳನ್ನು ಹೇಳಿಕೊಡುತ್ತಿದ್ದರು. ವಿದ್ಯಾರ್ಥಿಗಳನ್ನು ಕೇವಲ ಶಿಕ್ಷಿತರನ್ನಾಗಿಸುವುದಲ್ಲದೇ ಸತತ ಕ್ರಿಯಾಶೀಲರನ್ನಾಗಿಸುವುದು ಮುಖ್ಯವಾಗಿತ್ತು. ಜೊತೆಗೆ ಅವರಿಗೆ ವಿದ್ಯಾಭ್ಯಾಸದ ಮೂಲಕ ವ್ಯಕ್ತಿತ್ವ ವಿಕಾಸವನ್ನು ರೂಪಿಸಿಕೊಳ್ಳುವಂತೆ ಅವರಿಗೆ ಎಲ್ಲಾ ರೀತಿಯಲ್ಲೂ ತರಬೇತಿ ನೀಡುತ್ತಿದ್ದರು ಎನ್ನುವುದು ಇಲ್ಲಿ ಮುಖ್ಯವಾಗಿ ಕಂಡುಬರುತ್ತದೆ.

ಅದೇ ರೀತಿಯಾಗಿ ನಂತರದಲ್ಲಿ ಬಂದ ಜೈನ ಧರ್ಮದಲ್ಲಿಯೂ ಸಹ ಧಾರ್ಮಿಕ ಶಿಕ್ಷಣಕ್ಕೆ ಆದ್ಯತೆ ನೀಡಲಾಗಿತ್ತು. ಜೈನಧರ್ಮದ ಪ್ರಚಾರದ ಮೂಲಕ ಜಿನಾಲಯಗಳಲ್ಲಿ ಶಿಕ್ಷಣವನ್ನು ನೀಡುತ್ತಿದ್ದರು. ಆದ್ದರಿಂದ ಕನ್ನಡ ಸಾಹಿತ್ಯ ಪರಂಪರೆ ಉದ್ದಕ್ಕೂ ಜೈನ ಧರ್ಮದ ಶೈಕ್ಷಣಿಕ ಪರಂಪರೆಯ ಪ್ರಭಾವ ಅಗಾಧವಾಗಿರುವುದನ್ನು ಕಾಣಬಹುದು. ಜೈನರೂ ಸಹ ಜನಸಾಮಾನ್ಯರಿಗೂ ಶಿಕ್ಷಣ ತಲುಪಬೇಕು, ಭಾಷೆಯನ್ನು ಅರ್ಥೈಸಿಕೊಳ್ಳಬೇಕೆನ್ನುವ ಆಶಯದಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡಲು ಪ್ರಾರಂಭಿಸಿದರು. ಉತ್ತರದಲ್ಲಿ ಅರ್ಧಮಾಗಧಿ ಪ್ರಾಕೃತ ಇತರ ರೂಪಗಳಲ್ಲಿ ವಿವಿಧ ಪ್ರದೇಶಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಮಾಧ್ಯಮವಾಗಿ ಬಳಸಿದರು. ಕನ್ನಡ ನಾಡಿನಲ್ಲಿ ಸಂಸ್ಕೃತದ ಬದಲಾಗಿ ಕನ್ನಡಕ್ಕೆ ಮಹತ್ವವನ್ನು ನೀಡಿದರು. ಮೋಕ್ಷ ಸಂಪಾದನೆ ಶಿಕ್ಷಣದ ಮುಖ್ಯ ಗುರಿಯಾಗಿತ್ತು.

ಮೋಕ್ಷಕ್ಕೆ ಮಾರ್ಗ ತೋರಿಸುವ ಗ್ರಂಥಗಳು ಎಲ್ಲರಿಗೂ ಅರ್ಥವಾಗಬೇಕು ಎನ್ನುವ ಆಶಯದಿಂದ ದಿವಾಕರಣಂದಿ ಮುನಿಗಳು ತತ್ವಾರ್ಥ ಸೂತ್ರವನ್ನು ಕನ್ನಡಕ್ಕೆ ಇಳಿಸಿದರು. ಉನ್ನತ ವಿದ್ಯಾಭ್ಯಾಸ ಎಲ್ಲಾ ವರ್ಗದವರಿಗೂ ಏಕ ಪ್ರಕಾರವಾದ್ದರಿಂದ ವೇದ, ಉಪನಿಷತ್ತು, ಶಾಸ್ತ್ರಗಳ ಅಧ್ಯಯನವನ್ನು ಸಂಸ್ಕೃತದಲ್ಲಿಯೇ ಬೋಧಿಸುತ್ತಿದ್ದರು. ಭಾಷೆ, ವ್ಯಾಕರಣ, ಗಣಿತ, ಸಂಗೀತ, ಕಲೆಗಳನ್ನು ಬೋಧಿಸುವಂತಹ ಪಾಠಗಳನ್ನು ಪ್ರಾಥಮಿಕ ಹಂತದಲ್ಲಿ ಕಲಿಸಿದರೆ, ಸಮಸ್ತ ವ್ಯಾಕರಣ ಶಾಸ್ತ್ರ, ನಿಘಂಟು, ವಾತ್ಸಾಯನ, ಜ್ಯೋತಿಷ್ಯ, ಶಕುನ, ಛಂದಸ್ಸು, ಮನು, ಅಲಂಕಾರ, ಮಹಾಕಾವ್ಯ, ನಾಟಕ, ಆಧ್ಯಾತ್ಮ, ಅರ್ಥಶಾಸ್ತ್ರ, ತರ್ಕಶಾಸ್ತ್ರಗಳು ಉಚ್ಚ ಶಿಕ್ಷಣದಲ್ಲಿ ಉಚ್ಚ ಶಿಕ್ಷಣದಲ್ಲಿ ಕಲಿಸುತ್ತಿದ್ದರು. ಕಾಮಶಾಸ್ತ್ರದಂತಹ ವಿಷಯಗಳನ್ನು ಮುನಿಗಳು ಗಂಭೀರವಾಗಿ ಅಧ್ಯಯನ ನಡೆಸುತ್ತಿದ್ದರು. ಲೌಕಿಕ ಜೀವನದ ಆಕರ್ಷಣೆಗಳು ತ್ಯಾಜ್ಯವಿದ್ದರೂ ವಿದ್ಯಾಭ್ಯಾಸಕ್ಕಾಗಿ ಯಾವುದಕ್ಕೂ ನಿಷೇಧವಿರಲಿಲ್ಲ. ಜ್ಞಾನದ ದೃಷ್ಟಿಯಿಂದ ವಿಷಯಗಳನ್ನು ಹೇಳಿಕೊಡಲಾಗುತ್ತಿತ್ತು.

ಉಚ್ಚ ಶಿಕ್ಷಣವನ್ನು ಸಂಸ್ಕೃತದಲ್ಲಿಯೂ ಪ್ರಾಥಮಿಕ ಶಿಕ್ಷಣವನ್ನು ಕನ್ನಡದಲ್ಲಿ ಬೋಧಿಸಲಾಗುತ್ತಿತ್ತು. ಅಕ್ಕರಿಗ ಅಥವಾ ಕನ್ನಡ ಪಂಡಿತನು, ಕರ್ನಾಟಕ ಶಿಕ್ಷೆ, ಬಾಲಶಿಕ್ಷೆ, ಕನ್ನಡಾಕ್ಷರ ಶಿಕ್ಷೆ, ಕರ್ನಾಟಕ ಬಾಲಶಿಕ್ಷೆ, ಎಂದು ವಿವಿಧ ಹೆಸರುಗಳಿಂದ ಗುರುತಿಸುವ ಕನ್ನಡ ವಿದ್ಯಾಭ್ಯಾಸದ ಮುಖ್ಯಸ್ಥನಾಗಿದ್ದನು. ಕೆಲವೆಡೆಗಳಲ್ಲಿ ಪುರಾಣ ಭಟ್ಟನೇ ಕನ್ನಡದ ಪಾಠ ಹೇಳಿ ಕೊಡುತ್ತಿದ್ದನು. ಕನ್ನಡ ಅಕ್ಷರಭ್ಯಾಸದ ಜೊತೆಗೆ, ವ್ಯಾಕರಣ, ಗಣಿತಗಳ ಪರಿಚಯವನ್ನು

ಮಾಡಿಸುತ್ತಿದ್ದನು. ಇನ್ನೂ ಕೆಲವು ಕಡೆ 'ಖಂಡಿಕೆ ಅಥವಾ ವೇದಗಳ ಭಾಗಗಳನ್ನು ಕಲಿಸಲಿಕ್ಕಾಗಿಯೇ ಪ್ರಾಥಮಿಕ ಶಾಲೆಗಳಿದ್ದವು. ಬಹುಶಃ ವೇದಗಳ ಸರಳ ಪ್ರಾರ್ಥನೆಗಳು ಮತ್ತು ದೈನಂದಿನ ಪೂಜಾ ಪ್ರಕಾರದ ಋಕ್ಕುಗಳನ್ನು ಮಕ್ಕಳಿಗೆ ಕಂಠಪಾಠ ಮಾಡಿಸುವುದಕ್ಕೆಂದೇ ಈ ಖಂಡಿಕೆಗಳು ಹುಟ್ಟಿಕೊಂಡಿರಬೇಕು. ಪದ, ಪಾಠ ಪರಿಚಯ, ಪದಗಳನ್ನು ಛೇದಿಸಿ ಹೇಳುವುದು 'ಆರಣ' ಬ್ರಾಹ್ಮಣ ಸೂತ್ರಗಳನ್ನು, ರುದ್ರವನ್ನು ಪಠಿಸುವುದು ಖಂಡಿಕೆಗಳಲ್ಲಿ ನಡೆಯುತ್ತಿತ್ತು. ಕನ್ನಡದ ಜೊತೆಗೆ ನಾಗರ, ತಿಗುಳ ಮತ್ತು ಆರ್ಯ ಎಂದರೆ ಸಂಸ್ಕೃತ, ತಮಿಳು ಮತ್ತು ಮರಾಠಿ ಭಾಷೆಗಳನ್ನು ಕೆಲವು ಅಗ್ರಹಾರಗಳಲ್ಲಿ ಕಲಿಸುತ್ತಿದ್ದರು. ಆದರೆ ವ್ಯಾಪಾರಕ್ಕಾಗಿ ದೇಶದ ವಿವಿಧ ಭಾಗಗಳಿಗೆ ಹೋಗಲು ಇಚ್ಛಿಸುವ ಮಕ್ಕಳಿಗೆ ಈ ಭಾಷಾಭ್ಯಾಸ ಹೆಚ್ಚು ಅನುಕೂಲವಾಗಲಿ ಎನ್ನುವ ದೃಷ್ಟಿಯಿಂದ ಕಲಿಸುವ ಉದ್ದೇಶ ಅಂದಿನ ಶಿಕ್ಷಣ ಪದ್ಧತಿಯಲ್ಲಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರಾದೇಶಿಕ ಭಾಷೆಗಳ ಶಿಕ್ಷಣ ಕಲಿಕೆ ನಡೆಯುತ್ತಿತ್ತು ಎನ್ನುವುದು ಸಹ ಇದರಿಂದ ತಿಳಿದು ಬರುತ್ತದೆ. ಅಂದರೆ ಪ್ರಾಚೀನತೆಯಲ್ಲೂ ಮಾತೃಭಾಷಾ ಶಿಕ್ಷಣಕ್ಕೆ ಆದ್ಯತೆ ನೀಡಲಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. **(ಕರ್ನಾಟಕದ ಶಿಕ್ಷಣ ಪರಂಪರೆ, ಜೋತ್ಸ್ನಾ ಕಾಮತ್ ಕೃತಿ, ಮುಂಬೈ ವಿ.ವಿ–೧೯೮೮–ಪುಟ ಸಂಖ್ಯ ೪೭)**

೧೦ನೇ ಶತಮಾನದ ಹೊತ್ತಿಗೆ ಶೈವ ಮಠಗಳು ದಕ್ಷಿಣ ಭಾರತದಲ್ಲೆಲ್ಲ ಹರಡಿಕೊಂಡಿದ್ದವು ಅವುಗಳಲ್ಲಿ ಬಳ್ಳಿಗಾವಿ, ಕುಪ್ಪತ್ತೂರು, ಮತ್ತಗೆ, ಸೂಡಿ, ಹೂಲಿ, ಇಟ್ಟಿಗೆ ಶ್ರೀಶೈಲ ಮಠಗಳು ಪ್ರಮುಖವಾದವು. ಇಲ್ಲಿಯೂ ಸಹ ಗುರು ನಿರ್ದೇಶಿತ ಕಲಿಕೆಯನ್ನು ಶಿಷ್ಯರು ಪಾಲಿಸುತ್ತಿದ್ದರು. ಮಠಗಳಲ್ಲಿ ಸ್ವಾಧ್ಯಾಯಕ್ಕೆ ಪ್ರೋತ್ಸಾಹಿಸಿದ್ದರಿಂದ ನೈಷ್ಠಿಕ ಬ್ರಹ್ಮಚಾರಿಗಳು ಅಲ್ಲಿದ್ದು ವೇದಗಳನ್ನು ಆಳವಾಗಿ ಅಭ್ಯಾಸ ಮಾಡುತ್ತಿದ್ದರು. ವ್ಯಾಕರಣ ಭಾಗದಲ್ಲಿ ಕೌಮಾರ, ಪಾಣಿನಿ, ಶಾಕಟಾಯನ ಮತ್ತು ಶಬ್ದಾನು ಶಾಸನಗಳನ್ನು ಕಲಿಸಲಾಗುತ್ತಿತ್ತು. ಇವುಗಳಲ್ಲದೇ ನ್ಯಾಯ, ವೈಶೇಷಿಕ, ಸಾಂಖ್ಯ, ಬೌದ್ಧ ಮೊದಲಾದ ಷಡ್ದರ್ಶನಗಳನ್ನು ಪುರಾಣ, ಧರ್ಮಶಾಸ್ತ್ರ, ಕಾವ್ಯ, ನಾಟಕಾದಿಗಳನ್ನು ಕನ್ನಡದಲ್ಲಿಯೇ ಬೋಧಿಸುತ್ತಿದ್ದರು. ಸ್ವಾಧ್ಯಾಯಕ್ಕೆ, ಅಧ್ಯಯನಕ್ಕೆ ಮತ್ತು ವ್ಯಾಖ್ಯಾನಗಳನ್ನು ಬರೆಯಲಿಕ್ಕೆ ಹೀಗೆ ಮೂರು ಬಗೆಯ ವಿದ್ಯೆಗೆ ಮಠಗಳಲ್ಲಿ ಅವಕಾಶಗಳನ್ನು ನೀಡಲಾಗಿತ್ತು ಎಂದು ಹೇಳಲಾಗಿದೆ. **(ಜೋತ್ಸ್ನಾ ಕಾಮತ್, ಕರ್ನಾಟಕದ ಶಿಕ್ಷಣ ಪರಂಪರೆ, ಪುಟ ೪೮,೪೯)**

ಪ್ರಾಚೀನ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಜೈನಧರ್ಮದ ಪ್ರಭಾವದಿಂದಾಗಿ ಜೈನಧರ್ಮದ ತತ್ವಗಳನ್ನು ಕುರಿತಾಗಿಯೇ ಸಾಹಿತ್ಯ ರಚನೆಯಾಗಿರುವುದು ಕಂಡು ಬರುತ್ತದೆ. ಆ ಹೊತ್ತಿಗಾಗಲೇ ಕನ್ನಡ ಭಾಷಾ ಲಿಪಿ ಸಾಕಷ್ಟು ಬೆಳವಣಿಗೆಯಾಗಿದ್ದುದರಿಂದ ಕನ್ನಡದಲ್ಲಿಯೇ ಕೃತಿಗಳು ರಚನೆಯಾಗಿವೆ. ಭಾಷೆ ಹಾಗೂ ಶಿಕ್ಷಣ ಮಾಧ್ಯಮವಾಗಿ ಕನ್ನಡ ರೂಪ ಪಡೆಯಿತು. ಸಂಸ್ಕೃತದ ಪ್ರಭಾವವನ್ನು ತಗ್ಗಿಸುವುದಕ್ಕಾಗಿಯೇ ಭಾಷಾ ಚಳುವಳಿಯಾಗಿ ವಚನ ಸಾಹಿತ್ಯ ಚಳುವಳಿ ಪ್ರಾರಂಭವಾಗಿ ಕನ್ನಡ ಚಳುವಳಿಗಳು ಜನಸಾಮಾನ್ಯರಿಂದ

ಪ್ರಾರಂಭವಾಯಿತು. ಆ ಮೂಲಕ ಪ್ರಾಚೀನ ಕರ್ನಾಟಕ ಶಿಕ್ಷಣ ಪರಂಪರೆಯಲ್ಲಿ ಕನ್ನಡ ಭಾಷಿಕವಾಗಿ ಶಿಕ್ಷಣ ಮಾಧ್ಯಮವಾಗಿ ರೂಪುಗೊಂಡಿತು ಎನ್ನುವುದನ್ನು ನಿಖರವಾಗಿ ಗುರುತಿಸಲು ಸಾಧ್ಯವಿದೆ. ಪೂರ್ವದಲ್ಲಿದ್ದಂತಹ ಸಂಸ್ಕೃತ ಭಾಷಾ ಮಾದರಿಯನ್ನು ಬಿಟ್ಟು ಕನ್ನಡದಲ್ಲಿಯೇ ಸಾಹಿತ್ಯಗಳು ರಚನೆಯಾಗಿರುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. ೨ನೇ ನಾಗವರ್ಮನ 'ಕರ್ನಾಟಕ ಭಾಷಾಭೂಷಣ, ಕೇಶಿರಾಜನ ಶಬ್ದಮಣಿ ದರ್ಪಣ ಮುಂತಾದ ಕೃತಿಗಳು ಕನ್ನಡದಲ್ಲಿ ವ್ಯಾಕರಣವನ್ನು ಕುರಿತು ರಚನೆಗೊಂಡವುಗಳಾಗಿವೆ. ಅಂದರೆ ಆ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಾಗಿ ಕನ್ನಡವನ್ನು ಶಿಕ್ಷಣದಲ್ಲಿ ಮಾಧ್ಯಮವಾಗಿ ಬಳಸುತ್ತಿದ್ದರು ಎನ್ನುವುದು ಸಾಬೀತಾಗುತ್ತದೆ. ಸುಮಾರು ೧೦ನೇ ಶತಮಾನದಿಂದ ಇಂದಿನವರೆಗೂ ರಚನೆಯಾದಂತಹ ಕನ್ನಡದ ಸಾಹಿತ್ಯ ಕೃತಿಗಳು ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿವೆ. ಅದರಲ್ಲಿಯೂ ೧೪ನೇ ಶತಮಾನದಲ್ಲಿದ್ದತಂಹ ಆಂಡಯ್ಯ ಕವಿಯು 'ಕಬ್ಬಿಗರ ಕಾವ'ವನ್ನು ಅಚ್ಚಗನ್ನಡದಲ್ಲಿ ರಚನೆ ಮಾಡಿರುವುದು ಮುಖ್ಯವಾಗಿ ಸಂಸ್ಕೃತ ಭಾಷೆಯ ಪ್ರಭಾವವನ್ನು ತಗ್ಗಿಸುವುದು ಪ್ರಧಾನ ಉದ್ದೇಶವಾಗಿತ್ತು. ಇದನ್ನು ಗಮನಿಸಿದಾಗ ಅನ್ಯಭಾಷೆಗಿಂತ ಮಾತೃಭಾಷೆಯ ಮಹತ್ವವನ್ನು ಎತ್ತಿ ತೋರಿಸಿರುವುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆಗೆ ತನ್ನದೇ ಆದ ಸ್ವಂತಿಕೆ ಇದೆ ಎಂಬುದನ್ನು ನಂತರ ಬಂದ ವಚನಗಳ ಮೂಲಕ ವಚನಕಾರರು\ಶರಣರು ಕ್ರಾಂತಿಯ ನೆಪದಲ್ಲಿ ತೋರಿಸಿಕೊಟ್ಟರು. ಹೀಗೆ ಶಿಕ್ಷಣ ಪರಂಪರೆಯಲ್ಲಿ ಶಿಕ್ಷಣದ ಮಾಧ್ಯಮವಾಗಿ ಪ್ರಾದೇಶಿಕ ಭಾಷೆಗಳು ಪ್ರತಿಯೊಂದು ಕಾಲಘಟ್ಟಗಳಲ್ಲಿಯೂ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಹಾಗೆಯೇ ಪ್ರಾದೇಶಿಕ ಭಾಷೆಯನ್ನು ಮಾಧ್ಯಮವನ್ನಾಗಿ ಮಾಡುವ ನಿಟ್ಟಿನಲ್ಲಿ ಭಾಷಿಕ ಚಳುವಳಿಗಳ ಮೂಲಕ ಅನೇಕ ಸಮಸ್ಯೆಗಳನ್ನು ಎದುರಿಸುತ್ತಲೇ ಬಂದಿರುವುದು ಸಹ ಅಷ್ಟೇ ಸತ್ಯವಾಗಿದೆ.

ಮಹಮ್ಮದೀಯರ ಕಾಲದಲ್ಲಿ ಶಿಕ್ಷಣ ಪದ್ಧತಿಯು ಮುಖ್ಯವಾಗಿ ಇಸ್ಲಾಂ ಧರ್ಮದ ಪ್ರಸಾರದ ಹಿನ್ನೆಲೆಯಲ್ಲಿ ರಚನೆಯಾಗಿತ್ತು. ಮಹಮ್ಮದ ಪೈಗಂಬರ್ ಈ ಧರ್ಮದ ಸಂಸ್ಥಾಪಕನಾಗಿದ್ದ. ಇಸ್ಲಾಂ ಧರ್ಮದಲ್ಲಿ ಪ್ರತಿಯೊಬ್ಬರಿಗೂ ಖುರಾನಿನ ಮೂಲಕ ಶಿಕ್ಷಣ ಪ್ರಸಾರವನ್ನು ನೀಡುತ್ತಿದ್ದರು. ಖುರಾನಿನ ಪಠಣ, ಪ್ರಾರ್ಥನೆ ಮುಂತಾದವುಗಳ ಕಲಿಕೆ ಕಡ್ಡಾಯವಾಗಿತ್ತು. ಖಲೀಫರ ಆದೇಶದಂತೆ ಆಡಳಿತ ವರ್ಗಕ್ಕೆಲ್ಲ ಖುರಾನ ಕಂಠಪಾಠವಿರ ಬೇಕೆಂಬ ಕಾನೂನನ್ನು ಜಾರಿಗೆ ತಂದರು. ಈ ಖುರಾನಿನ ಮೂಲಕ ಅರಬ್ಬೀ ಭಾಷೆ ಶಿಕ್ಷಣ ಮಾಧ್ಯಮವಾಗಿ ವಿಸ್ತರಿಸಿಕೊಂಡಿತು.

ಅರಬ್ಬೀ ಮತ್ತು ಪಾರ್ಸಿ ಭಾಷೆಯಲ್ಲಿ ಓದುವುದನ್ನು ಬರೆಯುವುದನ್ನು ಕಲಿಸುತ್ತಿದ್ದರು. ಮೊದಲು ಅಕ್ಷರವನ್ನು ತೋರಿಸಿ ಉಚ್ಚಾರಣೆಯ ಮೂಲಕ ಅಕ್ಷರಾಭ್ಯಾಸವನ್ನು ಹೇಳಿ ಕೊಡುತ್ತಿದ್ದರು. ನಂತರದಲ್ಲಿನ ಖುರಾನಿನ ೩೦ ಅಧ್ಯಾಯಗಳನ್ನು, ಪ್ರಾರ್ಥನಾ ಗೀತೆಗಳನ್ನು ಜೊತೆಗೆ ಅಂತ್ಯಕ್ರಿಯೆಗಳಲ್ಲಿ ಹೇಳಬೇಕಾಗಿದ್ದ 'ಫಾತಿಹಾ' ಗೀತೆಗಳನ್ನು ಸ್ಪಷ್ಟ ಉಚ್ಚಾರಣೆಯ ಮೂಲಕ ಕಲಿಸಿಕೊಡುತ್ತಿದ್ದರು. ಮುಸ್ಲಿಂ ಧಾರ್ಮಿಕ ಶಿಕ್ಷಣದಲ್ಲಿ ಧರ್ಮ ಬೋಧನೆಯನ್ನು ಮಸೀದಿಗಳಲ್ಲಿ ಹೇಳಿಕೊಡುವ ಪದ್ಧತಿ ಪ್ರಮುಖವಾಗಿತ್ತು. ಆ ಮೂಲಕ ಮಸೀದಿಗಳನ್ನೇ

'ಮಕ್ತಾಬಗಳನ್ನಾಗಿ ಮಾಡಿ ಪ್ರಾಥಮಿಕ ಶಿಕ್ಷಣದಲ್ಲಿ ಅಳವಡಿಸಿದ್ದರು. ಈ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಪ್ರಾರ್ಥನೆ, ಖುರಾನ ಪಠಣ, ಅರಬ್ಬೀ ಭಾಷೆಯ ಪರಿಚಯ ಹಾಗೂ ಅಂಕಗಣಿತಗಳನ್ನು ಅರಬ್ಬೀ ಭಾಷೆಯಲ್ಲಿಯೇ ಹೇಳಿಕೊಡುತ್ತಿದ್ದರು. ಕ್ರಮೇಣ ಪಾರ್ಸಿ ಭಾಷೆಯನ್ನು ಕಲಿಯಲು ಆರಂಭಿಸಿದರು. ಆಳರಸರ ಸೇವೆಗಾಗಿ ಸೇರುವ ಸ್ಥಾನೀಯರು ಅರಬ್ಬೀ ಹಾಗೂ ಪಾರ್ಸಿ ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಿತ್ತು.

ಪ್ರಾಥಮಿಕ ಶಿಕ್ಷಣದ ನಂತರ ಮುಂದೆ ಉನ್ನತ ಶಿಕ್ಷಣದ ಅವಶ್ಯಕತೆ ಕಂಡುಬಂದದ್ದರಿಂದ ಬಹುಮನಿ ಸುಲ್ತಾನರು 'ಮದ್ರಸಾ'ಗಳನ್ನು ಆರಂಭಿಸಿದರು. ಈ ಉನ್ನತ ಶಿಕ್ಷಣದಲ್ಲಿ ಮಹಮ್ಮದ ಪೈಗಂಬರ್ ಅವರ ಜೀವನ ಚರಿತ್ರೆ, ಸೂಫಿ ತತ್ವ ತಿಳಿಸುವಂತಹ ಪಠ್ಯಕ್ರಮಗಳು ರಚನೆಯಾಗಿದ್ದವು. ಜೊತೆಗೆ ಅರೇಬಿಕ್ ವ್ಯಾಕರಣ ಮತ್ತು ಸಾಹಿತ್ಯ, ಪರ್ಶಿಯನ್ ಸಾಹಿತ್ಯ, ತರ್ಕಶಾಸ್ತ್ರ, ತತ್ವಶಾಸ್ತ್ರ, ಕಾನೂನು ಇತಿಹಾಸ, ಭೂಗೋಳ, ವ್ಯವಸಾಯ, ವಿಜ್ಞಾನ, ವೈದ್ಯಶಾಸ್ತ್ರ ಇತ್ಯಾದಿ ವಿಷಯಗಳನ್ನು ಉನ್ನತ ಶಿಕ್ಷಣದಲ್ಲಿ ಪಠ್ಯಕ್ರಮಗಳನ್ನಾಗಿ ಬೋಧಿಸುತ್ತಿದ್ದರು.

"ಫಿರೋಜನು ಆಡಳಿತದಲ್ಲಿ ಹಲವಾರು ವಿದ್ವಾಂಸರುಗಳೊಡನೆ ಅವರವರ ಭಾಷೆಯಲ್ಲಿ ಚರ್ಚೆ ನಡೆಸುತ್ತಿದ್ದನು. ಅನೇಕ ವಿದೇಶಿಯರೊಡನೆ ಅವರ ಭಾಷೆಯಲ್ಲಿಯೇ ಸಂಭಾಷಣೆ ನಡೆಸುವ ಹಂಬಲವೂ ಅವನದಾಗಿತ್ತು. ಅಂದರೆ ಅರಬ್ಬೀ, ತುರ್ಕಿ, ಫ್ರೆಂಚ್, ಬಂಗಾಲಿ, ಗುಜರಾತಿ, ತೆಲುಗು, ಮರಾಠಿ, ಮುಂತಾದ ಭಾಷೆಗಳ ಫಿರೋಜನು ಬಲ್ಲವನಾಗಿದ್ದನೆಂಬುದನ್ನು ಜ್ಯೋತ್ಸ್ನಾ ಕಾಮತ ಅವರು ತಮ್ಮ ಕರ್ನಾಟಕದ ಶಿಕ್ಷಣ ಪರಂಪರೆ ಕೃತಿಯಲ್ಲಿ ಈ ರೀತಿಯಾಗಿ ತಿಳಿಸಿದ್ದಾರೆ.

ಖುರಾನಿನ ಮೇಲೆ ಟೀಕುಗಳನ್ನು ಪರ್ಶಿಯನ್ ಭಾಷೆಯಲ್ಲಿ ರಚಿಸಲಾಗಿತ್ತು. ಬಂದೇ ನವಾಜ ಗುಲ್ಬರ್ಗಾದಲ್ಲಿ ನೆಲೆಸಿದ್ದಾಗ 'ದಖನಿ' ಭಾಷೆ ಆಗತಾನೆ ರೂಪುಗೊಳ್ಳುತ್ತಿದ್ದರಿಂದ ಅದಕ್ಕೆ ಹೆಚ್ಚಿನ ಬೆಲೆ ಒದಗಿ ಬಂದಿತು. ಗುಜರಾತಿ, ಮರಾಠಿ, ಪಾರ್ಸಿ ಭಾಷೆಯ ಮಿಶ್ರಣದ ಈ ದಖ್ಖನಿ ಹಿಂದಿ, ಉತ್ತರ ಭಾರತದ ಹಿಂದಿ ಅಥವಾ ಹಿಂದಿಗಿಂತ ಕೊಂಚ ಬೇರೆಯಾಗಿದ್ದು ಜನಸಾಮಾನ್ಯರ ಭಾಷೆಯಾಗಿತ್ತು. ಪಾರ್ಸಿ ಆಡಳಿತ ಭಾಷೆಯಾಗಿ ಮುಂದುವರೆದಿತ್ತು. ಜನಸಾಮಾನ್ಯರ ಭಾಷೆಯನ್ನೇ ಬಂದೇ ನವಾಜ್ ಬೋಧನಾ ಭಾಷೆಯಾಗಿ ಬಳಸಿ, ಅದಕ್ಕೆ ಪ್ರೇರಣೆ ಒದಗಿಸಿದನು. ಗದ್ಯ ಪದ್ಯ ಕೃತಿಗಳನ್ನು ದಖ್ಖನಿನಲ್ಲಿ ಬರೆದ ಆತನ "ಮೆರಾಜುಲ್ ಆಷಿಕಿನ್" ಮುಖ್ಯ ಜನಪ್ರಿಯ ಕೃತಿಯಾಗಿ ಕಂಡು ಬರುತ್ತದೆ.

ವಿದ್ಯಾರ್ಥಿಗಳು ಪರ್ಸಿಯನ್ ಭಾಷೆಯಲ್ಲಿ ಪಾಠಗಳನ್ನು ಉರುಹಾಕಿದರೂ ಅದು ವ್ಯಕ್ತಿ ವಿಕಾಸಕ್ಕೆ ತಕ್ಕ ಮಾಧ್ಯಮವಲ್ಲವೆಂದು ಮನಗಂಡು ಆದಿಲ್‌ಶಾಯಿ ಅರಸರು, ಸ್ಥಳೀಯ ಭಾಷೆಯಾಗಿ ದಖ್ಖನಿ ಹಿಂದಿಗೆ ಪ್ರೋತ್ಸಾಹವಿತ್ತರು. ಆ ಸಮಯದಲ್ಲಿ ಉತ್ತರದಿಂದ ಬಂದು ನೆಲೆಯೂರಿದ ಸೈನಿಕರು ಅರಬ್ಬೀ, ಪಾರ್ಸಿ, ತುರ್ಕಿ ಮಿಶ್ರಿತ ಹಿಂದಿಯನ್ನು ಬಳಕೆಯ ಭಾಷೆಯನ್ನಾಗಿ ರೂಢಿಯಲ್ಲಿ ತಂದರು. ವ್ಯಾಪಾರಿ ವರ್ಗದ ಪ್ರೋತ್ಸಾಹವೂ ಇದಕ್ಕೆ ದೊರೆತು ಉರ್ದು ಭಾಷೆಯಾಗಿ ರೂಪು ತಾಳಿತು. ಪಾರ್ಸಿ ಪ್ರಭಾವ ಹೆಚ್ಚಿದ್ದರೂ

ಉರ್ದು, ಭಾರತೀಯ ವ್ಯಾಕರಣದ ಚೌಕಟ್ಟನ್ನು ಹೊಂದಿದೆ. ಲಿಪಿ ಮಾತ್ರ ಪಾರ್ಸಿ. ಅಂದಿನಿಂದ ಸಾಹಿತ್ಯಿಕ ಭಾಷೆಯಾಗಿ ದಖ್ಖನಿ ಹೊಸ ಆಯಾಮವನ್ನು ಪಡೆದುಕೊಂಡಿತು. ಮೊಘಲ್ ಸಾಮ್ರಾಜ್ಯದಲ್ಲಿ ಕೇವಲ ಆಡುಭಾಷೆಯಾಗಿದ್ದ ಉರ್ದು ಆದಿಲ್‌ಶಾಹಿಗಳ ಕಾಲದಲ್ಲಿ ಪರಿಪೂರ್ಣ ಸಾಹಿತ್ಯ ಭಾಷೆಯಾಗಿ ರೂಪುಗೊಂಡಿತು. ಮೊಘಲರು ನಿಧಾನವಾಗಿ ಪರ್ಶಿಯನ್ ಭಾಷೆಯನ್ನು ತ್ಯಜಿಸಿ ಶಿಕ್ಷಣ, ಸಂಸ್ಕೃತಿಯ ಪ್ರಸಾರಕ್ಕಾಗಿ ಉರ್ದುವನ್ನು ಸ್ವೀಕರಿಸಿದರು. ಅಂದರೆ ಪ್ರಾಂತೀಯ ಅಥವಾ ಪ್ರಾದೇಶಿಕ ಭಾಷೆಯೇ ಶಿಕ್ಷಣ, ಸಾಹಿತ್ಯ, ಆಡಳಿತ, ಸಂಸ್ಕೃತಿಯ ಚಲನಶೀಲತೆಗೆ ಪ್ರಮುಖ ವಾಹಿನಿಯಾಗಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಕರಾವಳಿಯಿಂದ ಕರ್ನಾಟಕಕ್ಕೆ ಆಗಮಿಸಿದ ಈಸ್ಟ್ ಇಂಡಿಯಾ ಕಂಪನಿ, ವ್ಯಾಪಾರದ ಮೂಲಕ ಸ್ಥಳೀಯ ಬೊಕ್ಕಸವನ್ನು ತುಂಬಿಸಿಕೊಳ್ಳುವುದರಲ್ಲಿಯೇ ಆಸಕ್ತಿಯನ್ನು ಬೆಳೆಸಿಕೊಂಡಿತ್ತು. ಅವರೊಂದಿಗೆ ಬಂದ ಮಿಶನರಿಗಳು ಸಹ ಕನ್ನಡಿಗರನ್ನು ಹೆಚ್ಚೆಚ್ಚು ಸಂಖ್ಯೆಯಲ್ಲಿ ಮತಾಂತರ ಮಾಡುವ ಹಂಬಲದಲ್ಲಿದ್ದರು. ಇಲ್ಲಿಯ ಉಚಿತ ಶಿಕ್ಷಣ ಪದ್ಧತಿಯನ್ನು ಕಂಡು ಆಶ್ಚರ್ಯ ಚಕಿತರಾದರು. ಅದಕ್ಕಾಗಿ ಶಿಕ್ಷಣವನ್ನು ಕುರಿತು ಸರ್ವೇಗಳನ್ನು ಪ್ರಾರಂಭಿಸಿದರು. ಗವರ್ನರ್ ಜನರಲ್ ಆದೇಶದ ಮೇರೆಗೆ ೧೯ನೇ ಶತಕದ ಪ್ರಾರಂಭದಲ್ಲಿ ಜಿಲ್ಲಾಧಿಕಾರಿಗಳು ಕೈಗೊಂಡ ಮುಂಬೈ ಮದ್ರಾಸಾ ಪ್ರಾಂತಗಳ ಸವರ್ವೇಗಳು ಶತಕಗಳಿಂದ ನಡೆದುಬಂದ ಶಿಕ್ಷಣ ಕ್ರಮದ ಮೇಲೆ ಬೆಳಕು ಚೆಲ್ಲುತ್ತವೆ. **(ಜೋತ್ಸ್ನಾ ಕಾಮತ ಕರ್ನಾಟಕದ ಶಿಕ್ಷಣ ಪರಂಪರೆ, ಕ.ಇ.ಪ, ಪು-೧೦೧)**

ಈಸ್ಟ್ ಇಂಡಿಯಾ ಕಂಪನಿ ಬ್ರಿಟೀಷ ಸರ್ಕಾರ ಇಲ್ಲಿಯ ರಾಜ್ಯಾಡಳಿತವನ್ನು ವಹಿಸಿಕೊಂಡಾಗ ಪ್ರಾದೇಶಿಕ ಶಿಕ್ಷಣ ಪದ್ಧತಿ ಸಂಪೂರ್ಣವಾಗಿ ನೆಲಸಮಗೊಂಡಿತ್ತು. ಬ್ರಿಟೀಷ್ ಸರ್ಕಾರವು, ರಾಜ್ಯಾಡಳಿತಕ್ಕೆ ಸಹಾಯಕರನ್ನು ಪಡೆಯುವುದಕ್ಕಾಗಿ ಇಂಗ್ಲೆಂಡ ಮಾದರಿಯ ಶಿಕ್ಷಣವನ್ನು ಇಲ್ಲಿಯೂ ಆರಂಭಿಸಿದರು. ಆದರೆ ಇದು ಖರ್ಚಿನದ್ದಾದರಿಂದ ಕೇವಲ ಉಳ್ಳವರ ಸ್ವತ್ತಾಯಿತು. ಸರ್ವತೋಮುಖ ಶಿಕ್ಷಣದ ಬದಲಾಗಿ ಕೇವಲ ಪರೀಕ್ಷಾ ಕ್ರಮಕ್ಕೆ ಹೆಚ್ಚು ಪಾಶಸ್ತ್ಯ ಒದಗಿಸಲಾಗಿತ್ತು. ಧನ ಸಹಾಯಕ್ಕಾಗಿ ಶಿಕ್ಷಣ ಸಂಸ್ಥೆಗಳು ಸರ್ಕಾರವನ್ನು ಅವಲಂಬಿಸಿದ್ದರಿಂದ, ಅವು ಆಡಳಿತ ಸ್ವಾತಂತ್ರ್ಯವನ್ನು ಕಳೆದುಕೊಂಡವು. ಇದರಿಂದ ದೇಶದಲ್ಲಿ ನಿರಕ್ಷರತೆ ಬೆಳೆಯಲು ಆರಂಭವಾಯಿತು.

ಇಂಥ ಪರಿಸ್ಥಿತಿಯನ್ನು ಕುರಿತು ಗಾಂಧೀಜಿಯವರು ಕ್ರಿ.ಶ. ೧೯೩೧ರಲ್ಲಿ ಇಂಗ್ಲೆಂಡಿನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿನಲ್ಲಿ ಈ ರೀತಿಯಾಗಿ ನುಡಿದಿದ್ದರು. ಭಾರತದಲ್ಲಿ ಐವತ್ತು ಅಥವಾ ನೂರು ವರ್ಷಗಳ ಹಿಂದೆ ಇದ್ದುದಕ್ಕಿಂತ ಈಗ ಹೆಚ್ಚಿನ ಸಂಖ್ಯೆಯಲ್ಲಿ ನಿರಕ್ಷರಿಗಳಿದ್ದಾರೆ. ದೇಶವು ಸ್ವತಂತ್ರವಾದ ನಂತರ ಹಳೆಯ ದೇಶೀ ಶಾಲಾ ಶಿಕ್ಷಣವನ್ನು ಪುನಃ ಆಚರಣೆಯಲ್ಲಿ ತಂದು ಹಳ್ಳಿಗೊಂದು ಶಾಲೆಯನ್ನು ತೆರೆದು ಹುಡುಗ ಹುಡುಗಿಯರಿಗೆ ಕೂಡಿಯೇ ಶಿಕ್ಷಣದ ಏರ್ಪಾಡು ಮಾಡುವೆವು ಎಂದು ಉಲ್ಲೇಖಿಸಿದ್ದರು. ಆದರೆ ಸ್ವಾತಂತ್ರ್ಯ

ಪ್ರಾಪ್ತವಾಗಿ ಆರು ದಶಕಗಳು ಕಳೆದಿವೆ. ಬಾಪೂಜಿಯವರು ಸೂಚಿಸಿದ ದೇಶಿ ಪದ್ಧತಿಯ ವೃತ್ತಿಮೂಲ ಶಿಕ್ಷಣವನ್ನು ಭಾರತದಲ್ಲಿ ಪುನಶ್ಚೇತನಗೊಳಿಸಲಾಗಲಿಲ್ಲ. ಆದರೆ ಪಾಶ್ಚಾತ್ಯರು ಬಿಟ್ಟು ಹೋದಂತಹ ಇಂಗ್ಲೀಶ್ ಮಾಧ್ಯಮದ ಶಿಕ್ಷಣವನ್ನು ರೂಪಿಸಿಕೊಳ್ಳುವುದಕ್ಕಾಗಿ ಹಾತೊರೆಯುತ್ತಿದ್ದಾರೆ. ರಾಜಕೀಯವಾಗಿ ಸ್ವತಂತ್ರರಾದರೂ ಶಿಕ್ಷಣಕ್ಷೇತ್ರದಲ್ಲಿ ದಾಸ್ಯತ್ವ ಮುಂದುವರೆದಿದ್ದು ಶೋಚನೀಯ.

ಕರ್ನಾಟಕದಲ್ಲಿ ವಸಾಹತುಶಾಹಿ ಬ್ರಿಟೀಷರ ಆಶ್ರಿತ ಸಂಸ್ಥಾನವಾಗಿದ್ದ ಮೈಸೂರು ರಾಜ್ಯದಲ್ಲಿ ೧೮೩೩ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ತೆರೆದ ಇಂಗ್ಲೀಷ್ ಶಾಲೆಯಿಂದ ಇಂಗ್ಲೀಷ್ ವಿದ್ಯಾಭ್ಯಾಸವು ಮೊದಲುಗೊಂಡಿತು. ಶಾಲೆಗಳನ್ನು ತೆರೆಯಲು ಸರ್ಕಾರವು ನೆರವನ್ನು ಒದಗಿಸಿತು. ಈ ಪ್ರಕ್ರಿಯೆ ೧೮೫೧ರಲ್ಲಿ ಬೆಂಗಳೂರಿನಲ್ಲಿ ಆರಂಭವಾಯಿತು. ೧೮೫೮ರಲ್ಲಿ ವುಡ್ಸ್‌ಡಿಸ್‌ಪ್ಯಾಚ್ ವರದಿಯಿಂದಾಗಿ ಬೆಂಗಳೂರು, ಮೈಸೂರು, ತುಮಕೂರು, ಶಿವಮೊಗ್ಗ, ಹಾಸನಗಳಲ್ಲಿ ಶಾಲೆಗಳು (ಮಿಷನರಿ) ಆರಂಭವಾದವು. ಆಗ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಬಿ.ಎಲ್. ರೈಸ್ ಅವರ ಯೋಜನೆಯಂತೆ ೧೮೬೮ರಲ್ಲಿ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ದೇಶಭಾಷೆಯ ಒಂದೊಂದು ಉನ್ನತ ಶಾಲೆಗಳಿದ್ದವು. ೧೮೮೧ರಲ್ಲಿ ಕಮಿಶನರ್‌ಗಳ ಸಹಾಯದಲ್ಲಿ ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜುಗಳನ್ನಲ್ಲದೆ ಸ್ತ್ರೀಶಿಕ್ಷಣಕ್ಕೂ ಅವಕಾಶ ಕಲ್ಪಿಸಿ ಮಹಿಳಾ ಕಾಲೇಜುಗಳನ್ನು ತೆರೆಯಲಾಯಿತು.

ಕ್ರಿ.ಶ. ೧೮೨೩ರಲ್ಲಿ ದಕ್ಷಿಣ ಮರಾಠ ಪ್ರಾಂತ್ಯದಲ್ಲಿ ಮರಾಠಿಯಲ್ಲಿ ೧೪೬ ಪ್ರಾಥಮಿಕ ಶಾಲೆಗಳು, ೧೧೨ ಕನ್ನಡ ಶಾಲೆಗಳನ್ನು ಆರಂಭಿಸಲಾಯಿತು. ಮರಾಠಿಯೇ ಏಕೆ? ಎನ್ನುವ ಪ್ರಶ್ನೆಗೆ ಸರಕಾರ ಆಡಳಿತದಲ್ಲಿ ಮರಾಠಿಯ ಪ್ರಾಬಲ್ಯವೇ ಹೆಚ್ಚಾಗಿದ್ದುದರಿಂದ ಸರ್ಕಾರದೊಂದಿಗಿನ ಸಂಪರ್ಕಕ್ಕೆ ಅದೇ ಸುಲಭ ಭಾಷೆ ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಿರಬೇಕು. ಆದರೆ ವಾಲ್ಟರ್ ಎಲಿಯಟ್ ಬಹುತೇಕ ಜನಸಮೂಹ ಸಂಪರ್ಕ ಭಾಷೆಯು ಕನ್ನಡವೇ ಆಗಿದ್ದುದರಿಂದ ಆಡಳಿತ ಮಾಧ್ಯಮಕ್ಕೆ ಕನ್ನಡ ಹೆಚ್ಚು ಅನುಕೂಲವಾಗುತ್ತದೆ ಎಂದು ಭಾವಿಸಿದ್ದರು. ಈ ಬಗೆಯ ವೈಚಾರಿಕ ಚಿಂತನೆಯೇ ಮುಂದೆ ಬ್ರಿಟೀಷ್ ಅಧಿಕಾರಿಗಳು ಕನ್ನಡ ನಾಡಿನಲ್ಲಿ ಕನ್ನಡ ಭಾಷಾ ಮಾಧ್ಯಮ ಶಾಲೆಗಳನ್ನು ಆರಂಭಿಸಲು ಸಾಧ್ಯವಾಗಿರಬಹುದು. ಏಕೆಂದರೆ ಕನ್ನಡ ನಾಡಿನಲ್ಲಿ ಬ್ರಿಟಿಷರು ತಮ್ಮ ವ್ಯಾಪಾರ ವಾಣಿಜ್ಯದ ಅಭಿವೃದ್ಧಿಗಾಗಿ ನಾಡಿನ ಜನರ ಸಂಪೂರ್ಣ ಬೆಂಬಲವನ್ನು ನಿರೀಕ್ಷಿಸಿದ್ದರು. ಜನತೆಯ ಮೂಲ ಭಾಷೆಯಿಂದಲೇ ವ್ಯಾಪಾರ ಆಡಳಿತವನ್ನು ಬೆಳೆಸಲು ಮುಖ್ಯ ಪ್ರೇರಕವಾಗುತ್ತದೆ ಎಂದು ನಂಬಿದ್ದರು. ಈ ದೃಷ್ಟಿಯಿಂದಲೇ ಸ್ವತಃ ಬ್ರಿಟೀಷ್ ಅಧಿಕಾರಿಗಳೇ ಕ್ರಮೇಣ ಕನ್ನಡ ಭಾಷೆಯಲ್ಲಿ ಶಿಕ್ಷಣದ ಅಭಿವೃದ್ಧಿಗೆ ಸೇವೆ ಸಲ್ಲಿಸಿದ್ದು ಪ್ರಶಂಸನೀಯ.

ವಾಲ್ಟರ್ ಎಲಿಯಟ್ ಮುಂಬಯಿ ಸ್ಥಳೀಯ ವಿದ್ಯಾಸಂಸ್ಥೆಯ ಅನುಮತಿ ಪಡೆದು ಧಾರವಾಡದಲ್ಲಿ ೧೮೩೦ರಲ್ಲಿ ಕನ್ನಡ ಶಾಲೆಯನ್ನು ಆರಂಭಿಸಿದರು. ಅದಕ್ಕಾಗಿ ಕನ್ನಡ

ಶಿಕ್ಷಕರನ್ನು ನೇಮಿಸಿಕೊಂಡು ಶಾಲೆಯನ್ನು ನಡೆಸಿದರು. ದುಸ್ಥಿತಿಯಲ್ಲಿದ್ದ ಹಲವಾರು ಮರಾಠಿ ಶಾಲೆಗಳನ್ನು ಕನ್ನಡ ಶಾಲೆಗಳಾನ್ನಾಗಿ ಪರಿವರ್ತಿಸಿದರು. ಉತ್ತರ ಕರ್ನಾಟಕವನ್ನು ಅದರಲ್ಲೂ ಧಾರವಾಡ ಹುಬ್ಬಳ್ಳಿಯನ್ನು ಮರಾಠಿ ಪ್ರಭಾವದಿಂದ ಮುಕ್ತಗೊಳಿಸಿದ ಕೀರ್ತಿ ಎಲಿಯಟ್ ಅವರಿಗೆ ಸಲ್ಲುತ್ತದೆ. ಧಾರವಾಡದಲ್ಲಿ ೧೮೩೩ರಲ್ಲಿ ಕನ್ನಡ ಶಾಲೆಗೆ ಮಂಜೂರಾತಿ ನೀಡಿದಂತೆ ಹುಬ್ಬಳ್ಳಿಯಲ್ಲೂ ಕನ್ನಡ ಶಾಲೆಯ ಆರಂಭಕ್ಕೆ ಶಿಫಾರಸ್ಸು ಒದಗಿಸಲಾಯಿತು. ವಾಲ್ಟರ್ ಎಲಿಯಟ್‌ರ ಈ ಕಾರ್ಯವನ್ನು ಡೆಪ್ಯೂಟಿ ಚನ್ನಬಸಪ್ಪನವರು ಮುಂದುವರೆಸಿದರು. ನಂತರ ತರಬೇತಿ ಶಾಲೆಗಳನ್ನು ತೆರೆದರು. ೧೮೬೬ರಲ್ಲಿ ಡೆಪ್ಯೂಟಿ ಚನ್ನಬಸಪ್ಪ ಅವರು ಎಜುಕೇಷನ್ ಇನ್‌ಸ್ಪೆಕ್ಟರ್ ಆಗಿ ನೇಮಕಗೊಂಡಾಗ ಗುಜರಾತಿ, ಮರಾಠಿ ಪಠ್ಯಪುಸ್ತಕಗಳಿಗೆ ಸರಿಸಮಾನವಾಗಿ ಕನ್ನಡದಲ್ಲೂ ಪಠ್ಯಪುಸ್ತಕಗಳನ್ನು ಬರೆಸಿ ಪ್ರಕಟಿಸಿದರು. ಹಾಗೆಯೇ ಲೆಕ್ಕಪತ್ರಗಳನ್ನು, ಅಂಕಿಗಳನ್ನು ಸಹ ಕನ್ನಡದಲ್ಲಿಯೇ ಬರೆಯಲು ಉತ್ತೇಜನ ನೀಡಿದರು. ಈ ಅಂಶವನ್ನು ಗಮನಿಸಿದಾಗ ಮಾತೃಭಾಷೆಯ ಮಹತ್ವ, ಸ್ಥಾನ ತಿಳಿಸಿ ಕೊಡಲು ಮುಂದಾದುದು ಕಂಡು ಬರುತ್ತದೆ.

ಪೇಶ್ವೆ ರಾಜರ ಆಳ್ವಿಕೆ ಸಂದರ್ಭದಲ್ಲಿ ಮರಾಠಿಯೆ ಸಾರ್ವತ್ರಿಕ ಬರಹದ ಭಾಷೆ ಯಾಯಿತು. ಕನ್ನಡ ಬರಿ ಮಾತನಾಡುವ ಭಾಷೆಯಾಗಿ ಮಾತ್ರ ಉಳಿಯಿತು. ಇದರಿಂದ ಜನರಿಗೆ ಕನ್ನಡ ಅಕ್ಷರಭ್ಯಾಸವಾಗುವುದು ಇಲ್ಲದಂತಾಯಿತು. ವ್ಯಾಪಾರಸ್ಥ ಜನ ಮರಾಠಿ ಕಲಿತರು. ಬ್ರಾಹ್ಮಣರು ಮನಸೋತು ಕನ್ನಡವನ್ನು ತಿರಸ್ಕಾರದಿಂದ ಕಂಡರು. ಬಣಜಿಗರಂತೆ ಕನ್ನಡೇನು ಕಲಿತೆ ಎನ್ನುವ ಪರಿಸ್ಥಿತಿಯನ್ನು ಕನ್ನಡದ ಬಗೆಗೆ ಪ್ರೀತಿ ಇರಿಸಿಕೊಂಡಿದ್ದ ಜನ ಎದುರಿಸುತ್ತಿದ್ದರು. ಮಠಗಳಲ್ಲಿಯ ಜಂಗಮರು ಉಪಜೀವನಕ್ಕೆ ಸಾಧನವೆಂದು ಕನ್ನಡ ಕಲಿಯುವ ಪರಿಸ್ಥಿತಿ ನಿರ್ಮಾಣವಾಗಿತ್ತು. ೧೮೮೭ರಲ್ಲಿ ಕರ್ನಾಟಕ ಭಾಗದ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮ ಕನ್ನಡವೇ ಆಗಿರಬೇಕೆಂದು ಸರ್ಕಾರ ಆಜ್ಞೆ ಹೊರಡಿಸಿತು. ಆದರೆ ಮರಾಠಿ ಪ್ರಭಾವದಿಂದ ಆಡಳಿತ ಭಾಷೆಯಾಗಿಯೇ ಮುಂದುವರೆಯಿತು.

ಶಿಕ್ಷಣದ ಬಗ್ಗೆ ಆಸಕ್ತಿ ತಳೆದಿದ್ದ ಸರ್ ಥಾಮಸ್ ಮುನ್ರೋ ಮದ್ರಾಸ್ ಅಧಿಪತ್ಯದಡಿಯಲ್ಲಿ ೧೮೩೩ರಲ್ಲಿ ಕನ್ನಡ ಪ್ರಾಥಮಿಕ ಶಾಲೆಗಳನ್ನು ತೆರೆದರು. ೧೮೯೦-೯೧ರಲ್ಲಿ ಬಳ್ಳಾರಿಯಲ್ಲಿ ೭೯ ದಕ್ಷಿಣದಲ್ಲಿ ೧೨೩ ಪ್ರಾಥಮಿಕ ಶಾಲೆಗಳಾಗಿದ್ದವು. ೧೮೫೪ರಲ್ಲಿ ಕೂಡ್ಲಿಗಿಯಲ್ಲಿ ೨೧ ಕನ್ನಡ ಶಾಲೆಗಳಿದ್ದವು. ಈ ಹಿನ್ನೆಲೆಯಲ್ಲಿ ೧೯ನೇ ಶತಮಾನದ ಉತ್ತರಾರ್ಧದ ಹೊತ್ತಿಗೆ ಕರ್ನಾಟಕದ ವಿವಿಧ ಪ್ರಾಂತ್ಯಗಳಲ್ಲಿ ಆಧುನಿಕ ಶಿಕ್ಷಣ ಪಡೆದ ಉತ್ತಮ ಸುಶಿಕ್ಷಿತ ವರ್ಗದ ಸಮುದಾಯವು ಪಾಶ್ಚಾತ್ಯ ವಿಚಾರಗಳಿಗೆ ತಮ್ಮನ್ನು ಅಡಿಯಾಗಿಸಿಕೊಳ್ಳತೊಡಗಿದರು. ಯುರೋಪಿನ ಆಡಳಿತ ವ್ಯವಸ್ಥೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆಲೋಚನೆಯಲ್ಲಿ ಇಂಗ್ಲೀಶರಂತಾಗಿಸಬೇಕೆಂಬ ಉದ್ದೇಶದಿಂದ ನೀಡಿದ ಶಿಕ್ಷಣವು ಈ ಮೂಲಕ ಪ್ರಯೋಜನ ವಾಗುತ್ತ ಬಂತು. ಈ ದ್ವಿಭಾಷಿಕತ್ವದ ತಿಳುವಳಿಕೆ ಪಡೆದುಕೊಂಡ ಸುಶಿಕ್ಷಿತ ವರ್ಗವು ಸ್ಥಳೀಯ ವಿಚಾರಗಳ ಬಗ್ಗೆ ಅನಾದಾರವನ್ನು ವ್ಯಕ್ತಪಡಿಸುವಂತೆ ಯುರೋಪಿಯನ್ನರ ಸಂಸ್ಕೃತ ವಿಚಾರ ಆಲೋಚನೆಗಳ ಬಗ್ಗೆ ಮೆಚ್ಚುಗೆಯನ್ನು ತೋರುವಂತೆ ಯುರೋಪಿಯನ್ನರು ಮಾಡಿದರು.

ಆಧುನಿಕ ಶಿಕ್ಷಣದ ಪರಿಣಾಮದಿಂದಾಗಿ ಕಾರ್ಖಾನೆ, ಕಛೇರಿ, ಶಿಕ್ಷಣ, ಸಾಮಾಜಿಕ ಕ್ಷೇತ್ರಗಳಲ್ಲಿನ ವಹಿವಾಟುಗಳು ಎಲ್ಲ ಜನರನ್ನು ಒಂದೇ ರೀತಿಯಾಗಿ ಪರಿಗಣಿಸಿದ್ದು ಇವರಲ್ಲಿ ಸಮುದಾಯದ ಐಕ್ಯತೆಯನ್ನು ಒಡಮೂಡಿಸಿತು. ವಿವಿಧ ದೇಶಗಳ ಸಾಮಾಜಿಕ ಅಭಿವೃದ್ಧಿಯನ್ನು ಕಂಡು ನಾಡಿನ ಜನತೆ ಎಚ್ಚರಗೊಳ್ಳತೊಡಗಿತು. ವಸಾಹತುಶಾಹಿಯ ಆಡಳಿತಾತ್ಮಕ, ವಾಣಿಜ್ಯಾತ್ಮಕ, ಕೈಗಾರಿಕಾ ಹಾಗೂ ಶೈಕ್ಷಣಿಕ ಚಟುವಟಿಕೆಗಳ ವಿದೇಶಿ ಆಳ್ವಿಕೆ ವಿರುದ್ಧವಾಗಿ ರಾಷ್ಟ್ರೀಯತೆಯ ಸ್ವಾಭಿಮಾನದ ಕಲ್ಪನೆಯ ಬೀಜ ಮೊಳಕೆ ಒಡೆಯಲು ಪ್ರಾರಂಭವಾಯಿತು.

ವಸಾಹತುಶಾಹಿ, ಭೌಗೋಳಿಕವಾಗಿ ಪ್ರದೇಶಗಳನ್ನು ವಿಘಟಿಸಿದ್ದರಿಂದ ಸಾಮಾಜಿಕ ವರ್ಗಗಳಲ್ಲಿ ಅವಕಾಶ ವಂಚಿತರಾಗುವಂತೆ ಮಾಡಿತ್ತು. ಮೈಸೂರು ಪ್ರಾಂತದ ಬ್ರಾಹ್ಮಣರು ಹಾಗೂ ಮುಂಬೈ ಕರ್ನಾಟಕ ಬ್ರಾಹ್ಮಣರ ನಡುವೆ ಅವಕಾಶ ವಂಚಿತರ ಪರಿಸ್ಥಿತಿಗೆ ಗುರಿಯಾಗಿಸಿತ್ತು. ಜೊತೆಗೆ ಬ್ರಾಹ್ಮಣ ಮತ್ತು ಲಿಂಗಾಯತರ ನಡುವೆ ತೀವ್ರ ಪೈಪೋಟಿಯನ್ನು ಉಂಟು ಮಾಡಿತ್ತು. ಇಂತಹ ಪರಿಸ್ಥಿತಿಯಲ್ಲಿ ಕನ್ನಡದ ಅಸ್ತಿತ್ವವನ್ನು ಅದರಲ್ಲೂ ಶೈಕ್ಷಣಿಕ ಹಾಗೂ ಸಾಂಸ್ಕೃತಿಕವಾಗಿ ಗುರುತಿಸಿಕೊಳ್ಳುವ ಅಗತ್ಯತೆ ಇತ್ತು. ಈ ಅಗತ್ಯತೆ ಮೊದಲು ಮುಂಬೈ ಕರ್ನಾಟಕ ಹಾಗೂ ಮದ್ರಾಸ್ ಕರ್ನಾಟಕದಲ್ಲಿ ಉದಯವಾಗಿತ್ತು. ಅದು ವಸಾಹತುಶಾಹಿ ಬಂಡವಾಳದ ಒಳಗೆ ರಚನೆಗೊಂಡಿದೆ. ಮುಂಬೈ ಹಾಗೂ ಮದ್ರಾಸ್ ಭಾಗಗಳಲ್ಲಿ ಉಂಟಾದ ಸಾಮಾಜಿಕ ಮತ್ತು ಆರ್ಥಿಕ ಪಲ್ಲಟಗಳೇ ತಮ್ಮ ತನದ ಅರಿವನ್ನು ಉಳಿಸಿಕೊಳ್ಳಲು ಅನಿವಾರ್ಯವಾಗಿದೆ. ಈ ಭಾಗದ ಕನ್ನಡಿಗರು ವಿವಿಧ ಭಾಷಿಕರ ನಡುವೆ ಸಿಲುಕಿದ್ದರಿಂದ ಅನನ್ಯತೆಯ ಪ್ರಶ್ನೆ ಅಗತ್ಯವಾಗಿತ್ತು. ಆದರೆ ಮೈಸೂರು ಪ್ರಾಂತ್ಯದ ಮಹಾರಾಜರು ಆಡಳಿತದಲ್ಲಿ ಅಭಿವೃದ್ಧಿಯ ಹಾದಿಯಲ್ಲಿದ್ದರು. ಹೀಗಾಗಿ ಈ ಭಾಗವು ಆರ್ಥಿಕ ಅಭಿವೃದ್ಧಿಗೆ ಗಮನ ಹರಿಸಲಿಲ್ಲ. ೧೯ನೇ ಶತಮಾನದ ಅಂತ್ಯದ ವೇಳೆಗೆ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿಯೂ ಬಲಗೊಳ್ಳುವಂತಾಯಿತು. ಅದಕ್ಕೆ ಶೈಕ್ಷಣಿಕ ಹೊಸ ವಿಚಾರಗಳು ಪ್ರೇರಣೆಗೊಂಡವು. ಇದರಿಂದಾಗಿ ಕನ್ನಡ ಭಾಷೆಗೆ ಆಧುನಿಕ ಯುಗದ ವಸಾಹತುಶಾಹಿಯ ಶಿಕ್ಷಣಪದ್ಧತಿ ಮತ್ತು ಮುದ್ರಣ ಯಂತ್ರದ ಸೌಲಭ್ಯದಿಂದಾಗಿ ಅಸ್ತಿತ್ವ ಮೂಡಿ ಬಂದಿತು. ಆದರೆ ಪ್ರಾದೇಶಿಕವಾಗಿ ಕನ್ನಡ ನೆಲದಲ್ಲಿ ಮಾತ್ರ ಕನ್ನಡ ಅಸ್ತಿತ್ವವನ್ನು ಉಳಿಸಿಕೊಳ್ಳುವಂತಾಯಿತು. ಉಳಿದಂತೆ ಶಿಕ್ಷಣದಲ್ಲಿ ಕನ್ನಡ ಭಾಷೆ ಏಕರೂಪ ಮಾಧ್ಯಮವಾಗಿ ಕಂಡು ಬರಲಿಲ್ಲ. ಆಧುನಿಕತೆಯ ಇಂಗ್ಲೀಶ್‌ನ ಭಾಷೆ ಸಂಸ್ಕೃತಿಯ ವ್ಯಾಮೋಹದಿಂದಾಗಿ ಇಂಗ್ಲೀಶ್ ಭಾಷೆಯ ಕಲಿಕೆ ಶಾಲೆಗಳಲ್ಲಿ ಅಗತ್ಯವಾಗಿ ಮರುಕಳಿಸಿತು. ಕ್ರಮೇಣ ಅವಶ್ಯಕತೆಯ ತೀವ್ರತೆ ಅನಿವಾರ್ಯವಾಗಿ ಇಂಗ್ಲೀಷನ್ನು ಮಾಧ್ಯಮವಾಗಿ ಕಲಿಸುವ ಪ್ರಯತ್ನಗಳು ಹೆಚ್ಚಾಗಿ ನಡೆಯುತ್ತಿವೆ. ೧೯ನೇ ಶತಮಾನದ ಕೊನೆಯ ಘಟ್ಟದಲ್ಲಿ ಇದರ ಬೇಡಿಕೆ ತೀವ್ರವಾಗಿ ಪರಿಣಮಿಸಿದೆ. ಕನ್ನಡ ಮಾಧ್ಯಮ ಕಡ್ಡಾಯವಾಗಿ ಜಾರಿಯಾಗುತ್ತಿಲ್ಲ. ಕನ್ನಡ ಮಾಧ್ಯಮವನ್ನು ಆಯ್ಕೆ ಮಾಡಿ ಕೊಳ್ಳುತ್ತಿರುವವರ ಸಂಖ್ಯೆಯೂ ವಿರಳವಾಗಿದೆ. ಕೇವಲ ಸರ್ಕಾರಿ ಶಾಲೆಗಳಲ್ಲಿ ಮಾತ್ರ ಕನ್ನಡ ಮಾಧ್ಯಮ ಅನಿವಾರ್ಯ ಎಂಬಂತೆ ಜಾರಿಯಲ್ಲಿದೆ.

• • •

## ಅಧ್ಯಾಯ : ನಾಲ್ಕು

# ಸ್ವಾತಂತ್ರ ಪೂರ್ವ ಹಾಗೂ ಸ್ವಾತಂತ್ರ ನಂತರದ ಕಾಲದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮ ಕುರಿತಾಗಿ ಬಂದ ವರದಿಗಳು

---

ಅಧ್ಯಾಯ : ನಾಲ್ಕು

# ಸ್ವಾತಂತ್ರ ಪೂರ್ವ ಹಾಗೂ ಸ್ವಾತಂತ್ರ ನಂತರದ ಕಾಲದಲ್ಲಿ ಭಾಷಾಶಿಕ್ಷಣ ಮತ್ತು ಮಾಧ್ಯಮ ಕುರಿತಾಗಿ ಬಂದ ವರದಿಗಳು

## ೪.೧. ವಸಾಹತುಶಾಹಿ ಕಾಲದಲ್ಲಿ ಬ್ರಿಟೀಷರ ಸರ್ಕಾರ ಶಿಕ್ಷಣಕ್ಕಾಗಿ ಹೊರಡಿಸಿದ ವರದಿಗಳು

ಬ್ರಿಟಿಷರು ಭಾರತಕ್ಕೆ ಬಂದು ವ್ಯಾಪಾರ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಳ್ಳುವಂತೆ ಭಾರತ ಸರಕಾರ ಅನುಮತಿ ನೀಡಿತು. ಹೀಗೆ ದೊರೆತ ಅವಕಾಶದಿಂದ ವ್ಯಾಪಾರ ವಾಣಿಜ್ಯದೊಂದಿಗೆ ಭಾರತದಲ್ಲಿ ತಮ್ಮ ಚಕ್ರಾಧಿಪತ್ಯವನ್ನು ಸ್ಥಾಪಿಸಿಕೊಂಡರು. ತಮಗೆ ಪ್ರತಿಸ್ಪರ್ಧಿಗಳಾಗಿದ್ದ ಐರೋಪ್ಯರನ್ನು ಪ್ರತಿಭಟಿಸುತ್ತಿದ್ದ ಭಾರತೀಯ ಅರಸರನ್ನು, ಸಾಮ್ರಾಜ್ಯವನ್ನು ಇಂಗ್ಲೀಶ್‌ರು ಗೆದ್ದು ತಮ್ಮ ವಶದಲ್ಲಿರಿಸಿಕೊಂಡರು. ಇನ್ನು ಅವರ ಪ್ರಭುತ್ವ ಸ್ಥಿರವಾಗಿ ನಿಲ್ಲಬೇಕಾದರೆ ಇಲ್ಲಿನ ಜನತೆಯ ಬೆಂಬಲವನ್ನು ಪಡೆಯಬೇಕಿತ್ತು. ಅದಕ್ಕಾಗಿ ಜನತೆಯಲ್ಲಿ ಕ್ರೈಸ್ತಮತ ಪ್ರಚಾರ ಮಾಡುವುದು ಅಗತ್ಯವೆಂದು ಇಂಗ್ಲೀಶ್‌ರು ಭಾವಿಸಿದ್ದರು. ಇದರಿಂದ ಪ್ರಪಂಚದ ಯಾವ ದೇಶದಿಂದಲಾದರೂ ಕ್ರೈಸ್ತಪಾದ್ರಿಗಳಿಗೆ ಬರಲು ಅವಕಾಶ ಮಾಡಿಕೊಟ್ಟರು. ತಮ್ಮ ಕಂಪನಿಯ ಆಡಳಿತಕ್ಕಾಗಿ ಅದರ ಅಭಿವೃದ್ಧಿಗಾಗಿ ಹಲವಾರು ಕೆಲಸಗಾರರನ್ನು ನೇಮಿಸಿಕೊಳ್ಳುವಂತೆ ಹೇಳಿದರು. ಈ ಕೆಲಸಕ್ಕಾಗಿ ಅವರಿಗೆ ಇಂಗ್ಲೀಶ್ ಶಿಕ್ಷಣದ ತಿಳುವಳಿಕೆ, ಜ್ಞಾನ ಅಗತ್ಯವೆಂದು ಪರಿಗಣಿಸಿ ಇಂಗ್ಲಿಶ್ ಶಿಕ್ಷಣವನ್ನು ನೀಡಲು ಮುಂದಾದರು. ಇಂಗ್ಲೀಶ್ ಶಿಕ್ಷಣಕ್ಕಾಗಿ ಸಾಕಷ್ಟು ಹಣವನ್ನು ವ್ಯಯ ಮಾಡಲಾಯಿತು. ಅದರ ಜೊತೆಗೆ ಇಂಗ್ಲೀಶ್ ಶಿಕ್ಷಣದಲ್ಲಿ ಕೆಲವು ರೂಪುರೇಷಗಳನ್ನು ತಿದ್ದುಪಡಿ ಮಾಡುವ ಮೂಲಕ ಯೋಜನೆ/ ವರದಿಗಳನ್ನು ಹೊರ ತಂದರು.

೧೯ನೇ ಶತಮಾನ ಭಾರತದ ಶಿಕ್ಷಣ ಪದ್ಧತಿಯ ರೂಪು ರೇಷೆಗಳನ್ನು ಬದಲಾಯಿಸಿದ ಕಾಲ ಎನ್ನಬಹುದು. ಈ ಶತಮಾನದ ಆದಿಯಲ್ಲಿ ಭಾರತದಲ್ಲಿ ಶಿಕ್ಷಣವನ್ನು ಸಂಸ್ಕೃತ,

ಅರಬ್ಬಿ ಅಥವಾ ಪಾರಸೀ ಭಾಷೆಗಳಲ್ಲಿ ಕಲಿಸಬೇಕೆ ಅಥವಾ ಪಾಶ್ಚಾತ್ಯ ಸಾಹಿತ್ಯ ಮತ್ತು ವಿಜ್ಞಾನಗಳನ್ನು ಇಂಗ್ಲೀಶ್ ಭಾಷೆಯಲ್ಲಿ ಕಲಿಸಬೇಕೆ ಎಂಬ ಬಗ್ಗೆ ವಾದ ವಿವಾದಗಳು ಎದ್ದುಕೊಂಡಿದ್ದವು. ಆ ಸಂದರ್ಭದಲ್ಲಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯಾಗಿದ್ದ ಪ್ರಿನ್ಸೆಪ್, ಮಿಂಟೋ ಮತ್ತು ವಿಲ್ಸನ್ ಆ ಪಂಥದ ಮುಖಂಡರಾಗಿದ್ದರು. ಸಾಹಿತ್ಯವೆಂದರೆ ಹಿಂದೂ, ಮುಸ್ಲಿಂ ಸಾಹಿತ್ಯವೆಂದು ಅವರು ಸಾಹಿತ್ಯ ವಿಜ್ಞಾನಾದಿಗಳನ್ನು ಸಂಸ್ಕೃತ ಇಲ್ಲವೇ ಪಾರಸಿ ಭಾಷೆಗಳಲ್ಲಿ ಬೋಧಿಸಿದ ಹೊರತು ಇಲ್ಲಿನವರು ದ್ವೇಷಿಸುವರು ಎಂದು ಪ್ರಚಾರ ಮಾಡಿದರು. ಅದಕ್ಕಾಗಿ ಅವರು ಪ್ರಾಚ್ಯ ವಿದ್ಯಾಲಯಗಳನ್ನು ಸ್ಥಾಪಿಸಿದರು. ಅಲ್ಲಿ ವ್ಯಾಸಂಗಕ್ಕೆ ಬರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ನೀಡುತ್ತಿದ್ದರು. ಸಂಸ್ಕೃತ, ಅರಬ್ಬಿ ಮತ್ತು ಪಾರಸೀ ಭಾಷೆಗಳಲ್ಲಿ ಗ್ರಂಥಗಳನ್ನು ಮತ್ತು ಪಾಶ್ಚಾತ್ಯ ಜ್ಞಾನವನ್ನು ಪ್ರಕಟಿಸಿದರು. ಇದನ್ನು ತಮ್ಮ ದೃಷ್ಟಿಯಲ್ಲಿ ಅರ್ಥ ಮಾಡಿಕೊಂಡು ಪಾಶ್ಚಾತ್ಯ ಸಾಹಿತ್ಯ ಮತ್ತು ವಿಜ್ಞಾನಾದಿಗಳನ್ನು ಇಂಗ್ಲೀಶ್‌ನ ಮೂಲಕ ಪ್ರಚಾರಮಾಡಬೇಕೆಂದು ವಾದಿಸಿದರು. ಭಾರತೀಯರಲ್ಲಿ ಇಂಗ್ಲೀಶ್ ವಿದ್ಯೆಯನ್ನು ಕಲಿಸಬೇಕೆಂದು ವಾದಿಸಿ ಆ ಕಾರ್ಯಕ್ಕೆ ಸಂಸ್ಕೃತಾದಿ ಭಾಷೆಗಳು ಸೂಕ್ತವಲ್ಲವೆಂದು ಪ್ರಚಾರ ಮಾಡಿದರು. ಆಗಲೇ ಆರಂಭವಾಗಿದ್ದ ಕಲ್ಕತ್ತ, ಮದ್ರಾಸ್ ಮತ್ತು ಕಾಶಿಯ ಸಂಸ್ಕೃತ ಕಾಲೇಜನ್ನು ಮುಚ್ಚಬೇಕೆಂದು ಸೂಚಿಸಿದರು. ಭಾರತೀಯರು ಪಾಶ್ಚಾತ್ಯ ಜ್ಞಾನಾಕಾಂಕ್ಷಿಗಳೆಂದು ಅದನ್ನು ಕಲಿಯುವ ಇಂಗ್ಲೀಶ್ ಭಾಷೆಯಲ್ಲಿ ಅವರಿಗೆ ಆಸಕ್ತಿ ಇದೆಯೆಂದು ವಾದಿಸಿದರು. ಒದಗಿಸಿರುವ ಹಣವನ್ನು ಈ ಕಾರ್ಯಕ್ಕೆ ಮಾತ್ರ ವಿನಿಯೋಗಿಸಬೇಕೆಂದು ಒತ್ತಾಯ ಹಾಕಿದರು. ಆ ಸಂದರ್ಭದಲ್ಲಿ ರಾಜರಾಮ್ ಮೋಹನರಾಯರು ಈ ಪಂಥದ ಭಾರತೀಯ ಮುಖಂಡರಾಗಿದ್ದರು. ಡೇವಿಡ್ ಹೇರ್ಸ್, ಅಲೆಗ್ಸಾಂಡರ್ ಡಫ್, ಮುಂತಾದವರು ಅವರಿಗೆ ಬೆಂಬಲಿಗರಾಗಿದ್ದರು. ಆ ಹೊತ್ತಿಗಾಗಲೇ ಈ ವಿವಾದ ದೇಶಾದ್ಯಂತ ಆವರಿಸಿತ್ತು. ಹೀಗಾಗಿ ಶಿಕ್ಷಣದಲ್ಲಿ ಭಾಷೆ ಕುರಿತು ಸಾಕಷ್ಟು ಚರ್ಚೆಗಳು ಆರಂಭವಾಗತೊಡಗಿದಂತೆ ಕೆಲವು ಯೋಜನೆ/ವರದಿಗಳನ್ನು ಜಾರಿಗೆ ತರಲು ಪ್ರಾರಂಭಿಸಿದರು ಎಂದು **ಎಸ್.ಎಸ್. ವೀರಪ್ಪನವರು ಭಾರತೀಯ ಶಿಕ್ಷಣದ ಇತಿಹಾಸ ಕೃತಿಯಲ್ಲಿ ತಿಳಿಸಿದ್ದಾರೆ. (ಪುಟ–೨೬೩)** ಅವುಗಳಲ್ಲಿ ಕೆಲವು ವರದಿಗಳು ಈ ರೀತಿಯಾಗಿವೆ. ಮೊದಲನೆಯದಾಗಿ

**೧. ಮೆಕಾಲೆ ವರದಿ : ೧೮೩೫**

ಲಾರ್ಡ್ ಮೆಕಾಲೆ ೧೮೩೪ರಲ್ಲಿ ಗೌರ್ನರ್ ಜನರಲ್ ಕೌನ್ಸಿಲ್‌ನ ಸದಸ್ಯನಾಗಿ ಭಾರತಕ್ಕೆ ಬಂದನು. ಲಾರ್ಡ್ ಬೆಂಟಿಂಕನು ಇವನನ್ನು ಸಾರ್ವಜನಿಕ ಶಿಕ್ಷಣ ಸಮಿತಿಯ ಅಧ್ಯಕ್ಷನನ್ನಾಗಿ ೧೮೩೪ ಜೂನ್ ೧೦ರಂದು ನೇಮಿಸಿದನು. ೧೮೧೩ರ ಚಾರ್ಲ್ಸ್ ಆ್ಯಕ್ಟನ ಪ್ರಕಾರ ದೊರೆಯಲು ಸಿದ್ಧವಾಗಿದ್ದ ಒಂದು ಲಕ್ಷರೂಪಾಯಿಗಳನ್ನು ಭಾರತೀಯ ಶಿಕ್ಷಣ ಪದ್ಧತಿಯ ಮೇಲೆ ವೆಚ್ಚ ಮಾಡುವುದರ ಬಗ್ಗೆ ಉಂಟಾಗಿದ್ದ ವಿವಾದದ ಕುರಿತು ವರದಿ ಸಲ್ಲಿಸಲು ಮೆಕಾಲೆ ನೇಮಕವಾಗಿದ್ದನು. ಈ ಸಮಿತಿಯಲ್ಲಿ ಸಲ್ಲಿಸಿದ ವರದಿಯೇ ಮೆಕಾಲೆ ವರದಿಯಾಗಿ ಜಾರಿಗೆ ಬಂದಿತು. ಭಾರತದ ಶಿಕ್ಷಣ ಇತಿಹಾಸದಲ್ಲಿ ಇವರ ವರದಿ

ಮೈಲುಗಲ್ಲಾಗಿದೆ. ೧೮೩೫ರ ಫೆಬ್ರವರಿ ವರದಿಯಲ್ಲಿ ಬೋಧನಾ ಮಾಧ್ಯಮ ಕುರಿತು ಶಿಫಾರಸ್ಸುಗಳನ್ನು ಮಾಡಿ ಇಡೀ ಭಾರತವನ್ನು ಪಾಶ್ಚಿಮಾತ್ಯೀಕರಣಗೊಳಿಸಿದರು.

**ಮೆಕಾಲೆ ವರದಿಯ ಮುಖ್ಯ ವಿಚಾರಗಳು ಹೀಗಿವೆ.**

* ಭಾರತೀಯ ಶಿಕ್ಷಣದ ಬೋಧನಾ ಮಾಧ್ಯಮವಾಗಿ ಇಂಗ್ಲೀಶ್ ಇರಬೇಕು.
* ಭಾರತದಲ್ಲಿನ ಜನರ ಜ್ಞಾನ ವಿಕಾಸಕ್ಕೆ ಭದ್ರ ಬುನಾದಿ ಹಾಕಲು ಇಂಗ್ಲೀಶ್ ಭಾಷೆ ಅವಶ್ಯಕ.
* ಆಧುನಿಕ ಸಾಹಿತ್ಯದ ಸೊಗಡಾದ ಇಂಗ್ಲೀಶ್ ಭಾಷೆಯನ್ನು ಭಾರತದ ಪುನರುಜ್ಜೀವನಕ್ಕೆ ಬಳಸಬೇಕು.
* ಭಾರತೀಯತೆ ಎಂಬುದು ಜನರ ರಕ್ತ ಮತ್ತು ಬಣ್ಣದಲ್ಲಿ ಇರಬೇಕಷ್ಟೆ. ರುಚಿ ಮತ್ತು ಅಭಿಪ್ರಾಯಗಳು, ನೈತಿಕತೆ ಹಾಗೂ ಬೌದ್ಧಿಕತೆಯು ಇಂಗ್ಲೀಶ್ ಆಗಿರಬೇಕು.
* ಭಾರತದಲ್ಲಿನ ಸಾಹಿತ್ಯವೆಂದರೆ ಇಂಗ್ಲೀಶ್ ಸಾಹಿತ್ಯ ಮಾತ್ರ ಆಗಬೇಕು. ಈ ಮೇಲಿನ ಅಂಶಗಳಿಂದ ಲಾರ್ಡ್ ಮೆಕಾಲೆಯವರ ಮುಖ್ಯ ಉದ್ದೇಶ ಭಾರತದಲ್ಲಿ ಇಂಗ್ಲಿಶ್ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡುವುದೇ ಆಗಿತ್ತು. **(ಶಿಕ್ಷಣದ ಮೂಲತತ್ವಗಳು, ಎನ್.ಆರ್. ಗಂಗಾಧರಪ್ಪ, ರೇಖಾ ಪ್ರಕಾಶನ ದಾವಣಗೆರೆ, ೨೦೦೪ ಪುಟ ಸಂಖ್ಯೆ–೨೦೯**

**ಮೆಕಾಲೆ ದೇಶೀಯ ಭಾಷೆಯಲ್ಲಿ ಶಿಕ್ಷಣ ಬೇಡ ಎನ್ನುವುದಕ್ಕೆ ನೀಡಿದ ಕಾರಣಗಳು**

* ಸಂಸ್ಕೃತ ಅರಬ್ಬೀ ಮತ್ತು ಪಾರಸೀ ಸಂಸ್ಥೆಗಳಿಗೆ ಖರ್ಚು ಮಾಡಿದ್ದು ಅಕ್ರಮವಾದ ಅಪಾಯವೆಂದು ಸೂಚಿಸಿ ಕಲ್ಕತ್ತಾ ಮದ್ರಸಾಗಳು ಅಲ್ಲಿನ ಹಿಂದೂ ಕಾಲೇಜಿನಷ್ಟು ಉಪಯುಕ್ತವಲ್ಲವೆಂದು ವಾದಿಸಿರುವರು.
* ಸಂಸ್ಕೃತ ಅರಬ್ಬೀ, ಪಾರಸಿ ಸಂಸ್ಥೆಗಳಲ್ಲಿ ಪ್ರಕಟವಾದ ಪುಸ್ತಕಗಳು ಮಾರಾಟವಾಗದೇ ಇರುವುದು, ಇಂಗ್ಲೀಶ್ ಪುಸ್ತಕಗಳ ಮಾರಾಟ ಚೆನ್ನಾಗಿ ಆಗಿರುವುದನ್ನು ಗಮನಿಸಿದರು.
* ಪೌರಾತ್ಯ ಶಿಕ್ಷಣಗಳಿಗೆ ವೇತನ ನೀಡಿದರೂ ವಿದ್ಯಾರ್ಥಿಗಳು ಬಾರದಿರುವುದನ್ನೂ ಆದರೆ ಅದೇ ಇಂಗ್ಲೀಶ್ ಪಾಠಶಾಲೆಗಳಿಗೆ ಫೀಜ್ ಅಥವಾ ಶುಲ್ಕ ಕೊಟ್ಟು ಬರಲು ವಿದ್ಯಾರ್ಥಿಗಳು ಹಾತೊರೆಯುತ್ತಿರುವುದನ್ನು ಆಧಾರ ಮಾಡಿಕೊಂಡು ಅಂಥ ಪೌರಾತ್ಯ ಶಿಕ್ಷಣ ಸಂಸ್ಥೆಗಳನ್ನೆಲ್ಲ ಮುಚ್ಚಿಬಿಡಬೇಕೆಂದು ಸಲಹೆ ಮಾಡಿದರು.
* ಶಿಕ್ಷಣ ಮಾಧ್ಯಮದ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ದೇಶೀಯ ಭಾಷೆಗಳು ಅಪ್ರಬುದ್ಧ ಸ್ಥಿತಿಯಲ್ಲಿವೆ, ಅವುಗಳ ಮೂಲಕ ಜನರ ಬೌದ್ಧಿಕ ವಿಕಾಸ ಸಾಧ್ಯವಿಲ್ಲವೆಂದು ಬ್ರಿಟೀಷರು ಅರಿತಿದ್ದರು ಎಂಬುದಾಗಿ **ಎನ್.ಎಸ್. ವೀರಪ್ಪನವರು ಭಾರತೀಯ ಶಿಕ್ಷಣ ಇತಿಹಾಸ ಕೃತಿಯಲ್ಲಿ ತಿಳಿಸಿದ್ದಾರೆ. (ಪುಟ–೨೬೫).**

ಈ ಮೇಲಿನ ಎಲ್ಲ ಹೇಳಿಕೆಗಳಿಗೆ ಕೆಲವು ಮಂದಿ ಸದಸ್ಯರು ಇಂಗ್ಲೀಶ್ ಸರಿಯಾದ ಭಾಷೆಯೆಂದು ಒಪ್ಪಿದ್ದರು. ಉಳಿದ ಇನ್ನಿತರ ಸದಸ್ಯರು ಆ ಕಾರ್ಯಕ್ಕೆ ಸಂಸ್ಕೃತ ಮತ್ತು ಅರಬ್ಬಿ ಭಾಷೆಗಳನ್ನು ಬಳಸುವಂತೆ ವಾದಿಸಿದ್ದರು. ಈ ವಾದವನ್ನು ಅವಲೋಕಿಸಿದಾಗ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಅದೇನೆಂದರೆ ಸ್ವತಃ ಭಾರತೀಯರೆ ಇಂಗ್ಲೀಶ್ ಶಿಕ್ಷಣವನ್ನು ಬಯಸಿದ್ದರು ಎನ್ನುವಲ್ಲಿ ಕೆಲವು ಕಾರಣಗಳು ಕಂಡು ಬರುತ್ತವೆ. ಅವುಗಳಲ್ಲಿ ಮೊದಲನೆಯದಾಗಿ ಪಾಶ್ಚಾತ್ಯರ ಆಗಮನದಿಂದಾಗಿ ಪ್ರಾರಂಭದಲ್ಲಿ ಅವರ ಸರಳ ಜೀವನ ಶೈಲಿ, ಸಂಸ್ಕೃತಿ, ಭಾಷೆ (ಸರಳವಾದ ಉಚ್ಚಾರಣೆ)ಗೆ ಆಕರ್ಷಿತರಾಗಿ ಅವುಗಳನ್ನು ಅನುಕರಿಸಲು ಪ್ರಯತ್ನಿಸಿದರು. ಇನ್ನು ಎರಡನೆಯದಾಗಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದ್ದ ನಂಬಿಕೆಯ ಪ್ರಕಾರ ಸಂಸ್ಕೃತ ದೈವ ಭಾಷೆಯಾಗಿತ್ತು. ಅದು ಕೇವಲ ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿತ್ತು. ಸಂಸ್ಕೃತ ಭಾಷಾ ವಿಷಯ (ಪಠ್ಯ)ದಲ್ಲಿದ್ದ ಸುದೀರ್ಘವಾದ ಕಾವ್ಯ ಹಾಗೂ ಕಠಿಣವಾದ ಶ್ಲೋಕಗಳನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳಲು, ನೆನಪಿಟ್ಟುಕೊಳ್ಳಲು, ಕಠಿಣವಾಗಿತ್ತು. ಅರಬ್ಬಿ ಮತ್ತು ಪಾರ್ಸಿ ಭಾಷೆಗಳು ಮುಸ್ಲಿಂ ವರ್ಗದವರಿಗೆ ಸ್ಪಷ್ಟವಾಗಿ ಅರ್ಥೈಸಿಕೊಳ್ಳಲು ಮತ್ತು ಕಲಿಯಲು ಹೆಚ್ಚು ಅನುಕೂಲವಾಗಿತ್ತು. ಆದರೆ ಇತರ ಭಾಷಾ ವರ್ಗದವರಿಗೆ ಹಾಗೂ ಸಾಮಾನ್ಯ ಜನರಿಗೆ ಈ ಭಾಷೆಯನ್ನು ಅರ್ಥೈಸಿಕೊಳ್ಳುವುದು ಕಠಿಣವಾಗಿದ್ದರಿಂದ ಇಂಗ್ಲೀಶ್ ಭಾಷೆಗೆ ಮೋಹಿತರಾಗಿದ್ದುದು ಸಹಜ ಎಂಬಂತೆ ಇದರಿಂದ ಕಂಡು ಬರುತ್ತದೆ. ಹಾಗೂ ಬ್ರಿಟೀಷರು ಜಾತಿ ವರ್ಗವನ್ನು ಪರಿಗಣಿಸದೇ ಸಾಮಾನ್ಯ ಜನರಿಗೂ ಇಂಗ್ಲೀಶ್ ಕಲಿಯುವಂತೆ ಮೊದಲು ಪ್ರಯತ್ನಿಸಿದ್ದು ಈ ಎಲ್ಲಾ ಕಾರಣಗಳಿಗೆ ಪ್ರಬಲವಾದ ಆಧಾರವಾಗಿದೆ. ಆದರೆ ಇಲ್ಲಿಯೂ ಸಹ ಇಂಗ್ಲೀಶನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳುವುದು ಹಾಗೂ ಸಾಮಾಜಿಕ ನೆಲೆಯಲ್ಲಿ ಬಳಸುತ್ತಿದ್ದವರಲ್ಲಿ ಹೆಚ್ಚು ಮೇಲ್ವರ್ಗ ಹಾಗೂ ಮಧ್ಯಮ ವರ್ಗದವರಾಗಿದ್ದರು.

ಹೀಗಾಗಿ ಮೆಕಾಲೆಯ ವರದಿಗಳನ್ನು ಅವಲೋಕಿಸಿದ 'ಪ್ರಿನ್ಸೆಪ್' ಸಂಸ್ಕೃತಿ ಹಾಗೂ ಅರೆಬಿಕ್ ಭಾಷಾ ಮಾಧ್ಯಮವನ್ನು ಬಳಸಿಕೊಳ್ಳುವುದು ಅಗತ್ಯವೆಂದು ಅಭಿಪ್ರಾಯಪಟ್ಟರು. ಅಂತಿಮವಾಗಿ ಈ ವರದಿ ಬೆಂಟಿಂಕರಿಗೆ ಹೋಯಿತು. ಇವರು ಇಂಗ್ಲೀಶನ್ನು ಬೋಧನಾ ಮಾಧ್ಯಮವನ್ನಾಗಿ ಮಾಡುವುದು ಯೋಗ್ಯವೆಂದು ನಂಬಿದ್ದರಿಂದ ಮೆಕಾಲೆಯ ವಾದವನ್ನು ಸಮರ್ಥಿಸಿಕೊಂಡರು. ೧೮೩೫ರ ಮಾರ್ಚ್ ೭ರಂದು ಮೆಕಾಲೆಯ ಶೈಕ್ಷಣಿಕ ಸಲಹೆಗಳನ್ನು ಅಂದಿನ ಸರ್ಕಾರ ಒಪ್ಪಿಕೊಂಡಿತು.

* ಯುರೋಪಿನ ಸಾಹಿತ್ಯ ಮತ್ತು ವಿಜ್ಞಾನವನ್ನು ಭಾರತದಲ್ಲಿ ಪ್ರಚಾರ ಮಾಡುವುದು ಮೀಸಲಿಟ್ಟ ಹಣವನ್ನು ಇಂಗ್ಲೀಶ್ ಶಿಕ್ಷಣಕ್ಕಾಗಿ ವ್ಯಯ ಮಾಡುವುದು.
* ಪೌರ್ವಾತ್ಯ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಕರಿಗೆ ಎಂದಿನಂತೆ ಸಂಬಳ ಹಾಗೂ ವಿದ್ಯಾರ್ಥಿ ವೇತನವನ್ನು ಮುಂದುವರೆಸುವುದು.

* ಇಂಗ್ಲೀಶ್, ವಿಜ್ಞಾನ, ಸಾಹಿತ್ಯ ಪ್ರಸಾರ ಮಾಡಲು ಹಣ ವ್ಯಯ ಮಾಡುವುದು. ಈ ಶೈಕ್ಷಣಿಕ ಘೋಷಣೆಯನ್ನು ಲಾರ್ಡ್ ವಿಲಿಯಂ ಬೆಂಟಿಂಕನು ಮೊದಲ ಬಾರಿಗೆ ಘೋಷಿಸಿದನು. ನಂತರ ಇದುವೇ ದೇಶದ ಮೊದಲ ಆಂಗ್ಲರ ಶೈಕ್ಷಣಿಕ ನೀತಿಯಾಗಿ ಮಾರ್ಪಟ್ಟಿತು.

ಈ ವರದಿಯನ್ನು ಪಾಶ್ಚಾತ್ಯರ ಪರವಾಗಿದ್ದ ಹಲವು ಭಾರತೀಯ ಶಿಕ್ಷಣವೇತ್ತರು ಇದೊಂದು ಭಾರತದ ಶಿಕ್ಷಣದ ಸುಧಾರಣೆಗೆ ಮಹತ್ತರವಾದ ಕೊಡುಗೆ ಎಂದು ಹೊಗಳಿದರು. ಇನ್ನು ಕೆಲವರು ಸಾಂಸ್ಕೃತಿಕ ದಾಸ್ಯಕ್ಕೆ ಕೊಂಡೊಯ್ಯುವ ಶಿಕ್ಷಣ ಪದ್ಧತಿ ಎಂದು ಟೀಕಿಸಿದರು.

ಮೆಕಾಲೆ ವರದಿ ಭಾರತದಲ್ಲಿ ಶಿಕ್ಷಣ ಪದ್ಧತಿಯೊಂದಕ್ಕೆ ಶಾಶ್ವತವಾದ ನಿರ್ದಿಷ್ಟವೂ ಆದಂತಹ ಬುನಾದಿಯನ್ನು ಹಾಕಲು ಸರಕಾರಕ್ಕೆ ಸಹಾಯವಾದರು ಅದನ್ನು ಅನೇಕ ಭಾರತೀಯರು ಒಪ್ಪಿದ್ದರೂ ಸಹ ಕೆಲವು ಟೀಕೆಗಳನ್ನು ವ್ಯಕ್ತಪಡಿಸಿದ್ದರು.

**ಮೆಕಾಲೆ ವರದಿ ಕುರಿತ ವಿಮರ್ಶೆ**

* ಲಾರ್ಡ ಮೆಕಾಲೆಯನ್ನು ಕೆಲವರು ಆಧುನಿಕ ಭಾರತದ ಶಿಕ್ಷಣ ಪದ್ಧತಿಯ ಆದಿ ಪ್ರವರ್ತಕರೆಂದು ಹೊಗಳಿದರೆ ಇನ್ನೂ ಕೆಲವರು ಅವರನ್ನು ಭಾರತವನ್ನು ಶಾಶ್ವತವಾದ ಸಾಂಸ್ಕೃತಿಕ ದಾಸ್ಯಕ್ಕೆ ತಳ್ಳಿದ ಧೂರ್ತನೆಂದು ತೆಗಳಿದರು.

* ಇಂಗ್ಲೀಶ್ ಮಾಧ್ಯಮದಲ್ಲಿ ಇಂಗ್ಲೀಶ್ ವಿಜ್ಞಾನ ಮತ್ತು ಸಾಹಿತ್ಯವನ್ನು ಶಿಕ್ಷಣ ಕ್ಷೇತ್ರದಲ್ಲಿ ಪ್ರಚಾರ ಮಾಡುವುದೆ ತನ್ನ ಶೈಕ್ಷಣಿಕ ನೀತಿಯೆಂದು ಸಾರಿದರ ಫಲವಾಗಿ ಅವರು ದೇಶೀಯ ಭಾಷೆಗಳ ಅವನತಿಗೆ ಕಾರಣರಾದರು.

* ಅವರು ಪೌರ್ವಾತ್ಯ ಧರ್ಮ ಮತ್ತು ಸಂಸ್ಕೃತಿಗಳ ಬಗ್ಗೆ ವರದಿಯಲ್ಲಿ ಮಾಡಿರುವ ಟೀಕೆ ಅಕ್ಷಮ್ಯವಾದುದು. ಯಾವ ಕಾಲದಲ್ಲಿ ಅವನ ಪೂರ್ವಜರು ಇನ್ನೂ ಮಾನವೀಯತೆಯ ಅನಾಗರಿಕತೆಯ ಅಂಧಕಾರದಲ್ಲಿ ಇದ್ದರು ಆಗ ಭಾರತದ ಸಂಸ್ಕೃತಿ ಹಾಗೂ ನಾಗರೀಕತೆ ಧರ್ಮ, ವಿಜ್ಞಾನ ಉನ್ನತ ಸ್ಥಿತಿಯಲ್ಲಿದ್ದವೆಂಬ ಅಂಶ ಅವರ ಚಾಣಾಕ್ಷತೆಗೆ ತಿಳಿಯದಾಗಿದೆಯೇ ಎಂದು ಪ್ರಶ್ನಿಸಬೇಕಾಗಿದೆ. ಬಹುಶಃ ಇದಕ್ಕೆಲ್ಲ ಕಾರಣ ಅವರ ಭಾಷಾಂಧತೆ ಎಂದು ಇತರರು ಹೇಳಿದ್ದಾರೆ.

* ಇದರಿಂದಾಗಿ ಅವರ ಅದೋಮುಖ ಸೋಸುವಿಕೆಯ ಸಿದ್ಧಾಂತವು ಫಲಿಸಲಿಲ್ಲ. ರಕ್ತ ಮತ್ತು ಬಣ್ಣದಲ್ಲಿ ಭಾರತೀಯರಾಗಿ ಆದರೆ ರುಚಿ, ಅಭಿಪ್ರಾಯ, ನೈತಿಕತೆ ಹಾಗೂ ಬೌದ್ಧಿಕತೆಗಳಲ್ಲಿ ಇಂಗ್ಲೀಶರು ಆಗಿರುವ ಜನತೆಯನ್ನು ತಯಾರಿಸುವ ಅವರ ಉದ್ದೇಶ ಸುಳ್ಳಾಯಿತು ಎಂದು ಮೆಕಾಲೆಯವರ ವರದಿ ಕುರಿತು ಭಾರತೀಯರು ಟೀಕೆಗಳನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೆ ಇಂಗ್ಲೀಶ್ ಮಾಧ್ಯಮವನ್ನು ವಿರೋದಿಸುತ್ತಿರುವುದು ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. (ಎನ್.ಎಸ್. ವೀರಪ್ಪ ಭಾರತೀಯ ಶಿಕ್ಷಣ ಇತಿಹಾಸ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಪುಟ ಸಂಖ್ಯೆ–೨೬೭–೨೬೮)

**ಮೆಕಾಲೆಯ ವರದಿಯಿಂದಾದ ಪರಿಣಾಮಗಳು**

* ಮೆಕಾಲೆಯವರ ವರದಿಯು ಸುಮಾರು ನೂರು ವರ್ಷಗಳವರೆಗೆ ಭಾರತೀಯ ಶಿಕ್ಷಣ ನೀತಿಯ ಮೇಲೆ ತನ್ನ ಪರಿಣಾಮಗಳನ್ನು ಬೀರಿತು.
* ಇಂಗ್ಲೀಶ್ ಮಾಧ್ಯಮದ ಮುಖಾಂತರ ಪಾಶ್ಚಾತ್ಯ ಸಂಸ್ಕೃತಿ ಹಾಗೂ ಜ್ಞಾನವನ್ನು ವಿಸ್ತಾರ ಮಾಡುವ ಮೆಕಾಲೆಯವರ ಗುರಿ ಭಾರತಕ್ಕೆ ಬಹಳ ಸಹಾಯ ನೀಡಿತು.
* ಮೆಕಾಲೆಯವರು ಇಂಗ್ಲೀಶ್ ಭಾಷೆ, ಸಾಹಿತ್ಯ, ವಿಜ್ಞಾನ ಇನ್ನಿತರೆ ವಿಷಯಗಳನ್ನು ಭಾರತದಲ್ಲಿ ಪರಿಚಯಿಸಿದರು.
* ಅವರು ನೀಡಿದ ಸಲಹೆಯ ಮೇಲೆ ಭಾರತದಾದ್ಯಂತ ಇಂಗ್ಲೀಶ್ ಭಾಷೆಯ ಶಿಕ್ಷಣ ಮಾಧ್ಯಮವಾಗಿಯೂ, ಸಂಪರ್ಕ ಭಾಷೆಯಾಗಿ ಬಹು ಬೇಗ ಆಚರಣೆಗೆ ಬಂದು ಹಿಂದೆಂದೂ ಇರದ ಒಂದು ಒಗ್ಗಟ್ಟನ್ನು ಅಖಂಡತ್ವವನ್ನು ಮೂಡಿಸಿತು.
* ಅದರ ಸಹಾಯದಿಂದ ಮುಂದುವರಿದ ಪಾಶ್ಚಾತ್ಯ ದೇಶಗಳು ಸಾಧಿಸಿರುವ ವಿಜ್ಞಾನ, ತತ್ವಶಾಸ್ತ್ರ, ವೈದ್ಯೆ ವಿದ್ಯೆ, ತಾಂತ್ರಿಕ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಮುಂತಾದವುಗಳ ಪರಿಚಯವಾಗಿ ಜನತೆಯಲ್ಲಿ ಹೊಸ ವಿಚಾರ ಬುದ್ಧಿ ಹಾಗೂ ಆಲೋಚನಾ ಸರಣಿಯು ಅಂಕುರಿಸಿದವು.
* ಇದರ ಫಲವಾಗಿ ರಾಜಕೀಯ, ಆರ್ಥಿಕ, ಸಾಮಾಜಿಕ, ವೈಜ್ಞಾನಿಕ ಮುಂತಾದ ಕ್ಷೇತ್ರಗಳಲ್ಲಿ ಪುನರುಜ್ಜೀವನ ಕಾರ್ಯ ಆರಂಭವಾಗಿ ಸುಧಾರಣೆಗಳು ನಡೆದವು.
* ಇಂಗ್ಲೀಶ್ ಭಾಷೆ ದೇಶಾದ್ಯಾಂತ ಒಗ್ಗಟ್ಟನ್ನು ಮೂಡಿಸಿತಲ್ಲದೆ ಇಂಗ್ಲೀಶರ ಆಕ್ರಮಣವನ್ನು ವಿರೋಧಿಸುವ ಆವೇಶವನ್ನು, ಸಾಹಸವನ್ನು ದೊರಕಿಸಿಕೊಟ್ಟಿತು.
* ಮುಂದೆ ಪರಕೀಯ ಆಕ್ರಮಣದಿಂದ ಮುಕ್ತಿ ಪಡೆಯಲು ಹೋರಾಟವನ್ನು ನಡೆಸಿ ಜಯಗಳಿಸುವ ದಿಟ್ಟತನವನ್ನು ರೂಢಿಸಿಕೊಟ್ಟಿತು.
* ದೇಶೀಯ ಭಾಷೆಗಳು ಇಂಗ್ಲೀಶ್ ಸಾಹಿತ್ಯದಿಂದ ಸ್ಫೂರ್ತಿಗೊಂಡು ನೂತನ ರೀತಿಯ ಸಾಹಿತ್ಯ ರಚನೆಯೊಂದಿಗೆ ಪರಿಪುಷ್ಟಿಗೊಂಡು ಬೆಳೆಯಲು ಅನುಕೂಲವಾಯಿತು ಎಂದು ಎಸ್.ಬಿ.ಯಾದವಾಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ ಕೃತಿಯಲ್ಲಿ ವಿವರಿಸಿದ್ದಾರೆ.

ಈ ಮೇಲಿನ ಎಲ್ಲಾ ಅಂಶಗಳಿಂದ ಕೂಡಿದ ಮೆಕಾಲೆಯವರ ವರದಿಯು ವ್ಯಾಪಾರ ಹಾಗೂ ಆಡಳಿತದ ದೃಷ್ಟಿಯಿಂದ ಭಾರತದ ಶೈಕ್ಷಣಿಕ ಯೋಜನೆಗಾಗಿ ಈಸ್ಟ್ ಇಂಡಿಯಾ ಕಂಪನಿ ಜಾರಿಗೆ ತಂದಿದ್ದರ ಪರಿಣಾಮ ಮೇಲುವರ್ಗದ ಜನರಿಗೆ ಈ ಶಿಕ್ಷಣ ಉಪಯುಕ್ತ ವೆನಿಸಿದರೂ ಜನಸಾಮಾನ್ಯರಿಗೆ ಇದು ಕಹಿಯಾಯಿತು. ಆದರೂ ಕ್ರಿ.ಶ. ೧೮೮೦ರವರೆಗೆ ಇದನ್ನು ಮುಂದುವರೆಸಲಾಯಿತೆಂದು ತಿಳಿಸಲಾಗಿದೆ. ಶಿಕ್ಷಣದಲ್ಲಿ ಕೆಲವು ಬದಲಾವಣೆ,

ಸುಧಾರಣೆಗಳನ್ನು ಅನುಷ್ಠಾನಕ್ಕೆ ತರಲಾಯಿತು. ಆದರೆ ಪ್ರತ್ಯೇಕವಾಗಿ ಶಿಕ್ಷಣ ವಲಯದಲ್ಲಿ ಶಿಕ್ಷಣದ ಭಾಷೆ, ಮಾಧ್ಯಮ ಹಾಗೂ ಶಿಕ್ಷಣ ಸ್ವರೂಪದ ವಿಧಾನದಲ್ಲಿ ಹೆಚ್ಚಿನ ರೂಪದಲ್ಲಿ ಸುಧಾರಣೆಗಳು ಕಂಡು ಬರಲು ಸಾಧ್ಯವಾಗಲಿಲ್ಲ ಎಂದು ಹೇಳಬಹುದು.

**೨. ವುಡ್ಸ್ ವರದಿ : ೧೮೫೪**

ಕ್ರಿ.ಶ. ೧೮೩೩ರ ಸಂದರ್ಭದಲ್ಲಿ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಗೆ ಶಿಕ್ಷಣ ಕ್ಷೇತ್ರದ ವ್ಯಾಪಕ ಸಮೀಕ್ಷೆ ಅಗತ್ಯವೆನಿಸಿತು. ಅದಕ್ಕಾಗಿ ಪಾರ್ಲಿಮೆಂಟರಿ ಸಮಿತಿಯನ್ನು ನೇಮಿಸಿ ಅದರ ಆಧಾರದ ಮೇಲೆ ಬೋರ್ಡ್ ಆಫ್ ಕಂಟ್ರೋಲ್‌ದ ಅಧ್ಯಕ್ಷನನ್ನಾಗಿ ಚಾರ್ಲ್ಸ್‌ವುಡ್‌ನನ್ನು ನೇಮಿಸಲಾಯಿತು. ಈ ಸಮಿತಿಗೆ ವುಡ್ ಸಲ್ಲಿಸಿದ ವರದಿಯೇ ೧೮೫೪ರ ವುಡ್ಸ್ ವರದಿ ಎಂದು ಪ್ರಸಿದ್ಧವಾಯಿತು. ಅದರಂತೆ ಈ ವುಡ್ಸ್ ವರದಿಯು ಅನೇಕ ಮಹತ್ವದ ಶಿಫಾರಸ್ಸುಗಳನ್ನು ಒಳಗೊಂಡಿದೆ. ಈ ವರದಿಯು ಭಾರತದ ಶಿಕ್ಷಣದ ಅಭಿವೃದ್ಧಿಗೆ ಪ್ರೇರಕವಾಗಿ ಮೂಡಿ ಬಂದಿತೆಂದು ಇದರ ಮಹತ್ವವನ್ನು ಕುರಿತು ಈ ರೀತಿಯಲ್ಲಿ ವಿವರಿಸಿದ್ದಾರೆ. 'ವುಡ್ಸ್ ವರದಿಯು ಭಾರತೀಯ ಶಿಕ್ಷಣದ ಭದ್ರ ಬುನಾದಿಯಾಗಿದೆ/ ಮೈಲುಗಲ್ಲಾಗಿದೆ' ಎಂದು ಹೇಳಲಾಗಿದೆ. ಈ ವುಡ್ ವರದಿಯನ್ನು ಕುರಿತು ಸರ್ ಡಬ್ಲೂ ಜೇಮ್ಸ್‌ರವರು "ವುಡ್ಸ್‌ರ ವರದಿಯು ಒಂದು ಮ್ಯಾಗ್ನ್ಯಾಕಾರ್ಟಾ ಅಥವಾ ಮಹಾಸನ್ನದು" ಎಂದು ಹೇಳಿದ್ದಾರೆ. ಅಂದರೆ ಶಿಕ್ಷಣದಲ್ಲಿ ತಂದತಂಹ ಬದಲಾವಣೆಗಳು ಈ ಮಾತಿಗೆ ಸಾಕ್ಷಿಯಾಗಿವೆ. ವುಡ್ಸ್ ವರದಿಯು ಭಾರತೀಯ ಬೌದ್ಧಿಕ ಶಕ್ತಿ ಹಾಗೂ ನೈತಿಕ ಶಕ್ತಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಶಿಕ್ಷಣ ಕ್ಷೇತ್ರದಲ್ಲಿ ಮಾಧ್ಯಮ, ಪಠ್ಯ ವಿಷಯಗಳು, ಶಿಕ್ಷಕರ ತರಬೇತಿ, ಸ್ತ್ರೀ ಶಿಕ್ಷಣ ಮುಂತಾದವುಗಳೆಲ್ಲ ಸುಧಾರಣೆಗೆ ಎಡೆ ಮಾಡಿ ಕೊಟ್ಟಿರುತ್ತದೆ.

ಶಿಕ್ಷಣ ಕ್ಷೇತ್ರದಲ್ಲಿ ಅರೇಬಿಕ್, ಸಂಸ್ಕೃತ, ಪರ್ಶಿಯನ್ ಭಾಷೆಗಳನ್ನು ಅಧ್ಯಯನ ವಿಷಯಗಳನ್ನಾಗಿ ಅಭ್ಯಾಸ ಮಾಡಲು ಬೋಧನೆಯಲ್ಲಿಯೂ ಈ ಭಾಷೆಗಳನ್ನು ಬರೆಯಲು ಬಳಸುವಂತೆ ಶಿಫಾರಸ್ಸು ಮಾಡಿತೆನ್ನಲಾಗಿದೆ. ಭಾರತೀಯ ಭಾಷೆ ಅಭಿವೃದ್ಧಿಯಾಗಿರಲಿಲ್ಲವೆಂದು ಇಂಗ್ಲೀಶ್ ಭಾಷೆಯನ್ನು ಮಾಧ್ಯಮವನ್ನಾಗಿ ಮಾಡಲು ನಿರ್ಧರಿಸಿತು. ಆದರೆ ಈ ಭಾಷೆಯನ್ನು ಶಿಕ್ಷಣ ಮಾಧ್ಯಮವೆಂದು ಉಪಯೋಗಿಸುವುದು ಗಂಡಾಂತರಕಾರಿಯಾಗಿರುವುದೆಂದು ಸ್ಥಳೀಯ ಹಾಗೂ ದೇಶೀಯ ಭಾಷೆಗಳನ್ನು ಶಿಕ್ಷಣದ ಮಾಧ್ಯಮವಾಗಿ ಉಪಯೋಗಿಸುವುದು ಒಳ್ಳೆಯದೆಂದು ಈ ವರದಿಯು ತಿಳಿಸಿತು. ಯುರೋಪಿಯನ್ನರ ಜ್ಞಾನವನ್ನು ಭಾರತೀಯರಲ್ಲಿ ಒಡಮೂಡಿಸಲು ಇಂಗ್ಲೀಶ್ ಜೊತೆಗೆ ದೇಶೀಯ ಭಾಷೆಗಳನ್ನು ಶಿಕ್ಷಣ ಮಾಧ್ಯಮಗಳೆಂದು ಭಾವಿಸಲಾಯಿತೆಂದು ತಿಳಿಸಲಾಗಿದೆ. ಏಕೆಂದರೆ ದೇಶೀಯ ಭಾಷೆಗಳಲ್ಲಿ ಯೋಗ್ಯವಾದ ಮತ್ತು ಅರ್ಥಪೂರ್ಣವಾದ ಗ್ರಂಥಗಳಿಲ್ಲದ್ದರಿಂದ ಉತ್ತಮ ಬೋಧನೆಯನ್ನು ತರಲು ಇಂಗ್ಲೀಶ್ ಮತ್ತು ದೇಶಿ ಭಾಷೆಗಳನ್ನು ಮಾಧ್ಯಮವನ್ನಾಗಿ ಬಳಸಲಾಯಿತೆನ್ನಲಾಗಿದೆ.

**ಈ ವರದಿಯ ಕೆಲವು ಶಿಫಾರಸ್ಸುಗಳು ಈ ರೀತಿಯಲ್ಲಿವೆ.**

* ಭಾರತೀಯರ ಶಿಕ್ಷಣ ನಮ್ಮ ಪವಿತ್ರ ಕರ್ತವ್ಯವಾಗಿದೆ.
* ಪಾಶ್ಚಾತ್ಯ ಶಿಕ್ಷಣ ಪ್ರಸಾರವೇ ನಮ್ಮ ಗುರಿ. ಏಕೆಂದರೆ ಭಾರತೀಯರ ನೈತಿಕ ಹಾಗೂ ಬೌದ್ಧಿಕ ವಿಕಾಸ ಸಾಧಿಸುವುದೇ ನಮ್ಮ ಉದ್ದೇಶವೆಂದು ತಿಳಿಸಲಾಗಿದೆ.

* ದೇಶೀ ಭಾಷೆಗಳಲ್ಲಿ ಯೋಗ್ಯವಾದ ಅನುವಾದಿತ ಗ್ರಂಥಗಳಿಲ್ಲ. ಹಾಗೂ ಐರೋಪ್ಯ ಜ್ಞಾನವು ದೇಶೀ ಭಾಷೆಗಳ ಮೂಲಕ ಪರಿಪೂರ್ಣವಾಗಿ ದೊರೆಯಲಾರದು. ಆದ್ದರಿಂದ ಯೋಗ್ಯವಾದ ಶಿಕ್ಷಣವನ್ನು ಪ್ರಸಾರ ಮಾಡಲು ಇಂಗ್ಲೀಶ್ ಹಾಗೂ ದೇಶೀ ಭಾಷೆಗಳನ್ನು ಜೊತೆ ಜೊತೆಯಾಗಿ ಬಳಸಬೇಕೆಂದು ಸ್ಪಷ್ಟವಾಗಿ ಹೇಳಿತು.
* ದೇಶೀ ಭಾಷೆಗಳಲ್ಲಿ ಯೋಗ್ಯವಾದ ಪಠ್ಯಪುಸ್ತಕಗಳನ್ನು ಒದಗಿಸಬೇಕು.
* ಭಾರತೀಯ ಭಾಷೆಗಳ ಮಹತ್ವವನ್ನು ಅರಿತು ಜನಸಾಮಾನ್ಯರ ಶಿಕ್ಷಣವನ್ನು ಒಪ್ಪಿಕೊಂಡಿತು.
* ಹೆಚ್ಚು ಹೆಚ್ಚು ಜನರಿಗೆ ಶಿಕ್ಷಣ ನೀಡುವುದು ಬ್ರಿಟೀಷ್ ಸರ್ಕಾರದ ಹೊಣೆ. ಹೀಗೆ ಹಲವಾರು ಶಿಫಾರಸ್ಸುಗಳನ್ನು ಈ ವರದಿಯು ನೀಡಿದೆ. ಇದರೊಂದಿಗೆ ಈ ವರದಿಯ ಕೆಲವೊಂದು ಕೊರತೆಗಳನ್ನು ಸಹ ಇಲ್ಲಿ ಗಮನಿಸಬಹುದು.

**ವುಡ್ಸ್ ವರದಿಯ ತೊಡಕುಗಳು**

* ಶಿಕ್ಷಣದ ಗುರಿ ಸಂಕುಚಿತವಾಗಿತ್ತು. ಕೇವಲ ಓದು, ಬರಹ ಕಲಿತು ಪಾಸು ಮಾಡಿ ಕಂಪನಿಯಲ್ಲಿ ನೌಕರಿ ಪಡೆಯುವುದು ಶಿಕ್ಷಣದ ಗುರಿಯಾಯಿತು.
* ಪ್ರಾಚೀನ ಪರಂಪರೆಯನ್ನು ತಿರಸ್ಕರಿಸಿತು.
* ಪಾಶ್ಚಾತ್ಯ ಪದ್ಧತಿಯನ್ನು ಹೇರಿದರು. ಪಾಶ್ಚಾತ್ಯ ಪದ್ದತಿಯೊಂದಿಗೆ ಪೌರಾತ್ಯ ಪದ್ಧತಿಗಳ ಸಮನ್ವಯ ಸಾಧಿಸಲು ಪ್ರಯತ್ನಿಸಲಿಲ್ಲ.
* ಭಾರತೀಯ ಭಾಷೆಗಳಿಗೆ ಪ್ರೋತ್ಸಾಹ ಕೇವಲ ವರದಿಯ ಇಚ್ಛಾನುಸಾರ ಉಳಿಯಿತು. ಅವು ಬಡವಾಗುತ್ತಲೇ ನಡೆದವು.
* ಜನಸಾಮಾನ್ಯರ ಶಿಕ್ಷಣ ಹಾಗೂ ದೇಶೀ ಶಾಲೆಗಳು ನಿರ್ಲಕ್ಷಿಸಲ್ಪಟ್ಟವು. ಸಾರ್ವತ್ರಿಕ ಶಿಕ್ಷಣದ ಬಗ್ಗೆ ಯಾವ ಮಾತನ್ನು ಹೇಳಲಿಲ್ಲ. **(ಆರ್.ಡಿ.ಕರ್ಜಗಿ ಭಾರತೀಯ ಶಿಕ್ಷಣ ಚರಿತ್ರೆ, ಶ್ರೀ ಪ್ರಕಾಶನ ಧಾರವಾಡ, ೧೯೯೩, ಪುಟ-೪೬-೫೦)**

ಈ ಬಗೆಯ ಹಲವಾರು ಕೊರತೆಗಳನ್ನು ಹೊಂದಿರುವ ಈ ವರದಿಯನ್ನು ಹೆಚ್. ಆರ್. ಜೇಮ್ಸ್‌ರವರು ಶಿಕ್ಷಣದ ಮಹಾಸನ್ನದು ಎಂದು ಕರೆದಿರುವುದು ಹಾಸ್ಯಾಸ್ಪದವಾಗಿದೆ ಎಂದು ಆರ್.ಡಿ. ಕರ್ಜಗಿಯವರು ಭಾರತದ ಶಿಕ್ಷಣ ಚರಿತ್ರೆ ಎನ್ನುವ ಕೃತಿಯಲ್ಲಿ (ಪುಟ-೫೦) ವಿವರಿಸಿದ್ದಾರೆ. ಈ ವರದಿಯು ಪ್ರಸ್ತಾಪನೆ ಮಾಡಿರುವ ಕೆಲವು ಪ್ರಮುಖ ಉದ್ದೇಶಗಳನ್ನು ಜಾರಿಗೆ ತರುವಲ್ಲಿ ಯಶಸ್ವಿಯಾಗಲಿಲ್ಲ. ವರದಿಯು ಜಾರಿಗೆ ಬಂದ ಹೊಸದರಲ್ಲಿ ಆರಂಭದ ಹುಮ್ಮಸ್ಸಿನಲ್ಲಿ ಕೆಲವು ಶಿಫಾರಸ್ಸುಗಳನ್ನು ಹೊರಡಿಸಿತ್ತು. ಆದರೆ ನಂತರದಲ್ಲಿ ಈ ನಿಯಮಗಳು ನಾಮ ಮಾತ್ರ ಹೇಳಿಕೆಗಳಾಗಿ ಉಳಿದುಕೊಂಡು ಬಂದಿರಲು ಸಾಧ್ಯವಿದೆ. ಜೊತೆಗೆ ಈ

ವರದಿಯನ್ನು ಜಾರಿಗೆ ತರುವುದಕ್ಕೆ ಸರಿಯಾದ ಸಮಯದಲ್ಲಿ ಅಧಿಕಾರಿಗಳ ಪ್ರೋತ್ಸಾಹವಿಲ್ಲದೆ ವರದಿ ನಿರ್ಲಕ್ಷ್ಯಗೊಳಗಾಗಲು ಸಾಧ್ಯವಿದೆ ಎಂದು ಹೇಳಬಹುದು. ಏಕೆಂದರೆ ಈ ವರದಿಯಿಂದ ಯಾವುದೇ ಒಂದು ಧನಾತ್ಮಕ ಮತ್ತು ಪರಿಣಾಮಾತ್ಮಕ ಅಂಶಗಳು ಜಾರಿಗೆ ಬಂದಂತೆ ಕಂಡು ಬರುವುದಿಲ್ಲ.

**೩. ಹಂಟರ್ ವರದಿ : ೧೮೮೨(ಭಾರತೀಯ ಶಿಕ್ಷಣ ಆಯೋಗ)**

ಭಾರತದಲ್ಲಿ ಕ್ರೈಸ್ಥ ಮಿಶನರಿಗಳು ೧೮೫೪ರ ವುಡ್ಸರ ವರದಿ ಪ್ರಕಾರ ಲಭಿಸುವ ಸಹಾಯಧನದ ಮೂಲಕ ತಮ್ಮ ಮತ ಪ್ರಚಾರ ಕಾರ್ಯವನ್ನು, ಶಿಕ್ಷಣದ ಮೂಲಕ ನಡೆಸಬಹುದೆಂದು ಆಶಿಸಿದ್ದರು. ಆದರೆ ಶಿಕ್ಷಣಕ್ಕೆ ಗಮನವೀಯುವುದು ಸರ್ಕಾರದ ನೀತಿಯಾಗಿತ್ತು. ಸರ್ಕಾರ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದ್ದರಿಂದ ಮಿಶನರಿಗಳು ಸರ್ಕಾರದ ನೀತಿಯನ್ನು ಟೀಕಿಸಲಾರಂಭಿಸಿದ್ದವು. ಅದರ ಫಲವಾಗಿ ಇಂಗ್ಲೆಂಡಿನಲ್ಲಿ ಲಾರ್ಡ್ ಹ್ಯಾಲಿಫ್ಯಾಕ್ಸ್, ಲಾರ್ಡ್ ಲಾರೆನ್ಸ್ ಮುಂತಾದ ಪ್ರಭಾವಿ ವ್ಯಕ್ತಿಗಳನ್ನೊಳಗೊಂಡ ಶಿಕ್ಷಣದ ಸಾಮಾನ್ಯ ಸಲಹಾ ಸಮಿತಿ ಎಂಬ ಸಂಘ ಭಾರತದಲ್ಲಿ ಹುಟ್ಟಿಕೊಂಡಿತು. ಆ ವೇಳೆಗೆ ಭಾರತಕ್ಕೆ ಲಾರ್ಡ್ ರಿಪ್ಪನ್ ವೈಸರಾಯನಾಗಿ ನೇಮಕಗೊಂಡಿದ್ದರು. ರಿಪ್ಪನ್ ಅಧಿಕಾರವಹಿಸಿ ಕೊಂಡೊಡನೆ ೧೮೮೨ರ ಫೆಬ್ರವರಿ ೩ರಂದು ತನ್ನ ಸಹಾಯ ಮಂಡಳಿಯ ಸದಸ್ಯರಲ್ಲೊಬ್ಬರಾಗಿದ್ದ ವಿಲಿಯಂ ಹಂಟರನ ಅಧ್ಯಕ್ಷತೆಯಲ್ಲಿ ಭಾರತದ ಮೊಟ್ಟಮೊದಲನೆಯ ಶಿಕ್ಷಣ ಆಯೋಗವನ್ನು ನೇಮಿಸಿದರು. ಈ ವರದಿಯನ್ನೇ ಹಂಟರ್ ಆಯೋಗ ಎಂದು ಕರೆಯಲಾಗಿದೆ. **(ಎನ್.ಎಸ್.ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪ್ರಸಾರಾಂಗ, ಮೈಸೂರು ವಿ.ವಿ, ೧೯೮೫, ಪುಟ-೩೦೩)**

ಹಂಟರ್ ಆಯೋಗ ವರದಿಯು ಪ್ರಧಾನವಾಗಿ ಪ್ರಾಥಮಿಕ ಶಿಕ್ಷಣವನ್ನು ಕೇಂದ್ರೀಕರಿಸಿ ಶಿಕ್ಷಣದ ಪ್ರಸಾರಕ್ಕೆ ಹೆಚ್ಚಿನ ಆದ್ಯತೆ ನೀಡಿತು. ಅದೇ ರೀತಿಯಾಗಿ ಪ್ರಾಥಮಿಕ ಶಿಕ್ಷಣವು ವ್ಯಕ್ತಿಯ ಶಿಕ್ಷಣಕ್ಕೆ ಮಾತ್ರವಲ್ಲದೇ ಉಪಯುಕ್ತ ಸುಗಮ ಜೀವನಕ್ಕೆ ಪೋಷಕವಾಗುವಂತಿರ ಬೇಕೆಂದು ತಿಳಿಸಿತು. ಹಾಗೆಯೇ ಶಿಕ್ಷಣ ಸ್ವದೇಶ ಭಾಷೆಯಲ್ಲಿ ನಡೆದು ಹಿಂದೆಂದಿಗಿಂತಲೂ ಅಭಿವೃದ್ಧಿಗೊಂಡು ಪ್ರಾಥಮಿಕ ಶಿಕ್ಷಣ ಸೌಲಭ್ಯಗಳು ಉತ್ತಮವಾಗಬೇಕು, ಪ್ರಾಥಮಿಕ ಶಾಲೆಗಳ ಅಧ್ಯಾಪಕರಿಗೆ ತರಬೇತಿ ನೀಡಿ ದೇಶೀಯ ಶಿಕ್ಷಣಕ್ಕೆ ಧನಸಹಾಯ ನೀಡಬೇಕೆಂದು ಸೂಚಿಸಿತು. ದೇಶೀಯ ಶಿಕ್ಷಣ ಪದ್ಧತಿಯನ್ನು ಉತ್ತಮ ಮೌಲ್ಯಗಳಿಂದ ಜನಪ್ರಿಯಗೊಳಿಸಬೇಕು, ಉಪಯುಕ್ತ ವಿಷಯ ಬೋಧನೆಗೆ ಅಧ್ಯಾಪಕರ ತರಬೇತಿ ಸಿಬ್ಬಂದಿ ವರ್ಗಗಳ ಕಡೆಗೆ ಗಮನ ನೀಡಬೇಕು. ವಿದ್ಯಾರ್ಥಿಗಳು ತಮ್ಮ ಕಾಲ ಮೇಲೆ ನಿಲ್ಲುವಂತೆ, ಅವರ ಪ್ರಾಯೋಗಿಕ ಜೀವನಕ್ಕೆ ಪೋಷಕವಾಗುವ ವಿಷಯಗಳನ್ನು ಅಭ್ಯಾಸ ಕ್ರಮದಲ್ಲಿ ಸೇರಿಸಬೇಕು, ಪ್ರಾಥಮಿಕ ಶಿಕ್ಷಣ ಭಾರತೀಯ ಭಾಷೆ ಅಥವಾ ಮಾತೃಭಾಷೆಯಲ್ಲಿರಬೇಕೆಂದು ಈ ವರದಿಯು ಸ್ಪಷ್ಟಪಡಿಸುತ್ತದೆ ಎಂದು ಎನ್.ಎಸ್. ವೀರಪ್ಪನವರು ವಿವರಿಸಿದ್ದಾರೆ.

**೪. ಸ್ಯಾಡ್ಲರ್ ಆಯೋಗ ೧೯೧೭ (ಕಲ್ಕತ್ತಾ ವಿಶ್ವವಿದ್ಯಾಲಯದ ಶಿಕ್ಷಣ ಆಯೋಗ)**

ಮಹಾಯುದ್ಧದ ನಂತರ ೧೯೧೭ರ ಸೆಪ್ಟಂಬರ್ ೧೪ರಲ್ಲಿ ಲೀಡ್ಸ್ ವಿಶ್ವವಿದ್ಯಾಲಯದ ಮೊದಲ ವೈಸ್‌ಛಾನ್ಸಲರ್ ಆಗಿದ್ದ ಡಾ. ಮೈಕಲ್ ಸ್ಯಾಡ್ಲರ್‌ರವರ ಅಧ್ಯಕ್ಷತೆಯಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯವು ಇತರ ಸದಸ್ಯರನ್ನೊಳಗೊಂಡ ಆಯೋಗವನ್ನು ನೇಮಿಸಲಾಯಿತು.

ವಿಶ್ವವಿದ್ಯಾಲಯದ ಶಿಕ್ಷಣವನ್ನು ಉತ್ತಮಪಡಿಸಬೇಕಾದರೆ ಪ್ರೌಢಶಿಕ್ಷಣದ ಹಂತದಲ್ಲಿ ಶಿಕ್ಷಣವನ್ನು ಉತ್ತಮಪಡಿಸುವುದು ಅಗತ್ಯವೆಂದು ಆಯೋಗ ಸೂಚಿಸಿತು. ಪ್ರಾಥಮಿಕ ಶಿಕ್ಷಣದ ವಿಸ್ತರಣೆಯನ್ನು ಸಾಧಿಸುವುದು ಸರ್ಕಾರದ ಪ್ರಧಾನ ಕರ್ತವ್ಯಗಳಲ್ಲೊಂದೆಂದು ಲಾರ್ಡ್ ಕರ್ಜನ್ ತನ್ನ ನೀತಿಯಲ್ಲಿ ನಿರೂಪಿಸಿದ್ದನ್ನು ಈ ಆಯೋಗ ಅನುಸರಿಸಲು ಪ್ರಾರಂಭಿಸಿತು. ಕರ್ಜನ್ ತನ್ನ ನೀತಿಯಲ್ಲಿ ಮಾಧ್ಯಮಿಕ ಶಾಲೆಗಳಲ್ಲಿ ಆಧುನಿಕ ಭಾರತೀಯ ಭಾಷೆಗಳನ್ನು ಶಿಕ್ಷಣ ಮಾಧ್ಯಮವಾಗಿ ಬಳಸಬೇಕೆಂದು ಸೂಚಿಸಿದ್ದರಿಂದ ಅದು ಬಳಕೆಗೆ ಬಂತು. ಈಗಾಗಲೇ ಇಂಗ್ಲೀಶ್‌ಗೆ ಸಾಕಷ್ಟು ಪ್ರಾಮುಖ್ಯತೆ ಲಭಿಸಿದ್ದರಿಂದ ಭಾರತೀಯ ಭಾಷೆಗಳನ್ನು ಮಾಧ್ಯಮವಾಗಿ ಬಳಸುವಲ್ಲಿ ಚಳುವಳಿ ಬಲಗೊಳ್ಳಲಿಲ್ಲ. ಇಂಗ್ಲೀಶ್ ಮಾಧ್ಯಮವನ್ನು ನಿಲ್ಲಿಸುವ ಬಗ್ಗೆ ಸರ್ಕಾರ ಖಚಿತ ತೀರ್ಮಾನ ಕೈಗೊಂಡಿರಲಿಲ್ಲ.**(ಎಸ್.ಎಸ್.ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪ್ರಸಾರಾಂಗ, ಮೈಸೂರು ವಿ.ವಿ, ೧೯೮೪, ಪುಟ–೩೫೭)**

**೫. ವುಡ್ ಮತ್ತು ಆ್ಯಬಟ್ ವರದಿ – ೧೯೩೭**

ಇಂಗ್ಲೆಂಡಿನ ಬೋರ್ಡ್ ಆಫ್ ಎಜುಕೇಷನ್ನಿನ ತಾಂತ್ರಿಕ ಶಾಲೆಗಳ ಪ್ರಧಾನ ತನಿಕಾಧಿಖಾರಿಯಾಗಿದ್ದ ವಿ.ಆ್ಯಬಟ್‌ರನ್ನು ಅದೇ ಸಂಸ್ಥೆಯ ಸಮಾಚಾರ ಇಲಾಖೆಯ ನಿರ್ದೇಶಕರಾಗಿದ್ದ ವುಡ್ಡರನ್ನು ಸರ್ಕಾರ ಭಾರತಕ್ಕೆ ಆಹ್ವಾನಿಸಿತು. ಅವರು ದೇಶಾದ್ಯಂತ ೧೯೩೬–೩೭ರಲ್ಲಿ ಸಂಚಾರ ಮಾಡಿ ಪರಿಸ್ಥಿತಿಗಳನ್ನು ಪರಿಶೀಲಿಸಿ ೧೯೩೭ರಲ್ಲಿ ಪ್ರತ್ಯೇಕವಾಗಿ ಎರಡು ಭಾಗಗಳನ್ನು ತಮ್ಮ ತಮ್ಮ ವರದಿಯಲ್ಲಿ ಸಲ್ಲಿಸಿದ್ದರು. ವುಡ್ಡರು ಸಾಮಾನ್ಯ ಶಿಕ್ಷಣದ ಬಗ್ಗೆ ಪರಿಶೀಲನೆ ನಡೆಸಿ ಅದರ ಪುನರ್‌ವ್ಯವಸ್ಥೆಗೆ ಸಲಹೆ ನೀಡಿದರು. ಆ್ಯಬಟ್ ಇಲ್ಲಿನ ಪರಿಸ್ಥಿತಿಯನ್ನು, ಸಂಪನ್ಮೂಲಗಳನ್ನು ಪರಿಶೀಲಿಸಿ ವೃತ್ತಿ ಮತ್ತು ತಾಂತ್ರಿಕ ಶಿಕ್ಷಣದ ಪುನರ್ ವ್ಯವಸ್ಥೆಗೆ ಹಲವು ಉಪಯುಕ್ತ ಸಲಹೆಗಳನ್ನು ನೀಡಿದರೆಂದು **ಎಸ್.ಎಸ್. ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ** ಕೃತಿಯಲ್ಲಿ ತಿಳಿಸಿದ್ದಾರೆ. **(ಪುಟ–೪೦೩)**

ಮಾಧ್ಯಮಿಕ ಶಾಲೆಯ ಪಠ್ಯಕ್ರಮ ಅಲ್ಲಿನ ಪರಿಸ್ಥಿತಿಗೂ ಅವಶ್ಯಕತೆಗೆ ತಕ್ಕಂತೆ ಇರಬೇಕು, ಮಾತೃ ಭಾಷೆಯು ಶಿಕ್ಷಣದ ಮಾಧ್ಯಮವಾಗಿರಬೇಕು, ಸಾಧ್ಯವಾದ ಮಟ್ಟಿಗೆ ಇಂಗ್ಲೀಶನ್ನು ಬೋಧಿಸಕೂಡದು, ಪ್ರೌಢಶಾಲೆಯಲ್ಲಿ ಇಂಗ್ಲೀಶನ್ನು ಕಡ್ಡಾಯ ವ್ಯಾಸಂಗ ವಿಷಯವನ್ನಾಗಿ ಮಾಡಬೇಕು ಎಂದು ವುಡ್‌ರು ಈ ವರದಿಯಲ್ಲಿ ತಿಳಿಸಿದ್ದಾರೆ.

**೬. ಸಾರ್ಜಂಟ್ ವರದಿ : ೧೯೪೪**

೧೯೩೭ರಲ್ಲಿ ಮಹಾತ್ಮಾಗಾಂಧೀಜಿಯವರು ಮೂಲ ಶಿಕ್ಷಣದ ಮೂಲಕ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಕ್ರಾಂತಿಯನ್ನು ಎಬ್ಬಿಸಿದರು. ಇದೇ ವೇಳೆಗೆ ೧೯೩೯ರಲ್ಲಿ ಜಾಗತಿಕ

ಎರಡನೇ ಮಹಾಯುದ್ಧ ಪ್ರಾರಂಭವಾದ್ದರಿಂದ ಇಂಗ್ಲೀಶ್ ಸರಕಾರದ ಪರವಾಗಿ ಸಹಾಯ ಮಾಡುವುದರ ವಿರೋಧವಾಗಿ ಪ್ರಾಂತೀಯ ಕಾಂಗ್ರೆಸ್ ಸರಕಾರಗಳು ರಾಜಿನಾಮೆ ಕೊಟ್ಟವು. ಈ ಮೂಲಕ ಶೈಕ್ಷಣಿಕ ಪ್ರಚಾರದ ವಿಸ್ತರಣೆಗೆ ಮುಟ್ಟುಗೋಲು ಹಾಕಿದಂತಾಯಿತು. ನಂತರ ೧೯೪೨ರಲ್ಲಿ ಭಾರತ ಬಿಟ್ಟು ತೊಲಗಿರಿ ಚಳುವಳಿ ಪ್ರಾರಂಭವಾಯಿತು. ಆಗ ಪ್ರಾಂತೀಯ ಸರಕಾರಗಳು ಯುದ್ಧದ ಕಡೆಗೆ ಗಮನ ಹರಿಸಿದ್ದವು. ಯುದ್ಧ ಕೊನೆಗೊಳ್ಳುತ್ತ ಬಂದಂತೆ ಶೈಕ್ಷಣಿಕ ವಿಚಾರಗಳು ತಲೆ ಎತ್ತಿದವು. ಹೀಗಾಗಿ ಭಾರತದಲ್ಲಿ ೧೯೪೪ರಲ್ಲಿ ಶೈಕ್ಷಣಿಕ ಯೋಜನಾ ಕಾರ್ಯ ಮತ್ತೇ ಪ್ರಾರಂಭವಾಯಿತು. ಯುದ್ಧದ ನಂತರ ಭಾರತದ ಮೇಲೆ ಇಂಗ್ಲೆಂಡಿನ ರಾಜಕೀಯ ಹಿಡಿತ ಸಡಿಲವಾಗಲಿಲ್ಲ. ಕ್ರಿ.ಶ. ೧೯೪೪ರ ಮಧ್ಯಕಾಲದಲ್ಲಿ 'ಸಾರ್ಜೆಂಟ್ ಯೋಜನೆ' ಎಂಬ ಹೊಸಶಿಕ್ಷಣ ನೀತಿಯನ್ನು ಕೇಂದ್ರಶಿಕ್ಷಣ ಸಲಹಾಸಮಿತಿಯು ಸರಕಾರಕ್ಕೆ ಒಪ್ಪಿಸಿತು. ಈ ಯೋಜನೆಯ ರುವಾರಿ ಭಾರತ ಸರಕಾರದ ಶಿಕ್ಷಣ ಸಲಹೆಗಾರರಾದ ಸರ್ ಜಾನ್ ಸಾರ್ಜೆಂಟ್ ಆಗಿದ್ದರಿಂದ ಇದನ್ನು ಸಾರ್ಜೆಂಟ್ ವರದಿ ಕರೆಯಲಾಗಿದೆ ಎಂದು **ಎಸ್.ಬಿ. ಯಾದವಾಡ** ಅವರು **ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ** ಕೃತಿಯಲ್ಲಿ ವಿವರಿಸಿದ್ದಾರೆ.

ನಲವತ್ತು ವರ್ಷಗಳಿಗೆ ಕಡಿಮೆ ಅವಧಿಯಲ್ಲಿ ಇಂಗ್ಲೆಂಡಿನಲ್ಲಾದ ಶೈಕ್ಷಣಿಕ ಸಾಧನೆಗಳ ಮಟ್ಟವನ್ನು ಭಾರತದಲ್ಲಿಯೂ ಸಾಧಿಸುವಂತೆ ಮಾಡುವುದೇ ಈ ವರದಿಯ ಗುರಿಯಾಗಿತ್ತು. ಅದರಂತೆ ಹಲವು ಸಲಹೆಗಳನ್ನು ಸಹ ನೀಡಿತು. ಅದರಲ್ಲಿ ಒಂದಾದ ಬೋಧನಾ ಮಾಧ್ಯಮ ವಿದ್ಯಾರ್ಥಿಗಳ ಮಾತೃಭಾಷೆಯಾಗಿರಬೇಕು ಹಾಗೂ ಇಂಗ್ಲೀಶ್ ಭಾಷೆಯನ್ನು ಕಡ್ಡಾಯವಾಗಿ ದ್ವಿತೀಯ ಭಾಷೆಯಾಗಿ ಬೋಧಿಸಬೇಕೆಂದು ಈ ವರದಿಯಲ್ಲಿ ಉಲ್ಲೇಖಿಸಲಾಗಿದೆ.

ಹತ್ತೊಂಭತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲೀಶ್ ಶಿಕ್ಷಣದ ವ್ಯಾಪಕತೆ ಅಧಿಕ ಪ್ರಮಾಣದಲ್ಲಿತ್ತು, ಎನ್ನುವುದಕ್ಕೆ ಈ ಹಲವಾರು ವರದಿಗಳು ಸಾಕ್ಷಿಯಾಗಿವೆ. ಇಂಗ್ಲೀಶ್ ಶಿಕ್ಷಣವನ್ನು ಪ್ರಸಾರ ಮಾಡುವ ಉದ್ದೇಶದ ಹಿನ್ನೆಲೆಯಲ್ಲಿ ಈ ವರದಿಗಳು ರಚನೆಗೊಂಡಿವೆ. ಆದರೆ ಅದನ್ನು ಹೊರತುಪಡಿಸಿಯೂ ಆಯಾ ಕಾಲದ ಸಾಮಾಜಿಕ ಅಗತ್ಯತೆಗೆ ತಕ್ಕಂತೆ ಇಂಗ್ಲೀಶ್ ಶಿಕ್ಷಣದ ಜೊತೆಗೆ ದೇಶೀಯ ಭಾಷಾ ಶಿಕ್ಷಣಕ್ಕೂ ಅಗತ್ಯ ಕಲ್ಪಿಸುವಲ್ಲಿ ಕೆಲವು ಮಿಶನರಿಗಳು, ವರದಿಗಳ ಹಿನ್ನೆಲೆಯಲ್ಲಿ ಶ್ರಮಿಸಿರುವುದು ವರದಿಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ವಿಲಿಯಂ ಬೆಂಟಿಂಕ್‌ರು ಭಾರತದಲ್ಲಿ ಇಂಗ್ಲೀಶ್ ಶಿಕ್ಷಣದ ಪದ್ಧತಿಯ ಪ್ರಚಾರಕ್ಕೆ ಅಡಿಪಾಯ ಹಾಕಿದ ನಂತರ ಭಾರತದಾದ್ಯಂತ ಇಂಗ್ಲೀಶ್ ಶಾಲೆಗಳು ಪ್ರಾರಂಭವಾಗಿರುವ ಅಂಶ ಬೆಳಕಿಗೆ ಬರುತ್ತದೆ. ಆ ಸಮಯದಲ್ಲಿ ಬ್ರಿಟೀಷರಲ್ಲದೆ ಇತರೆ ದೇಶದ ಶ್ರೀಮಂತ ಸಂಸ್ಥೆಗಳ ಪಾದ್ರಿಗಳು ಬಂದು ಇಂಗ್ಲೀಶ್ ಶಿಕ್ಷಣದ ಪ್ರಚಾರವನ್ನು ಕೈಗೊಂಡರು. ಬೆಂಟಿಂಕರು ವರ್ಗವಾದಾಗ ಅವರ ಸ್ಥಾನಕ್ಕೆ ಲಾರ್ಡ್ ಆಕ್‌ಲ್ಯಾಂಡ್, ಆಡ್ಯಂ ಹಾಗ್‌ಸನ್, ಮಿಲ್ಕನ್‌ಸನ್, ಮುಂತಾದವರು ಇಂಗ್ಲೀಶ್‌ಗೆ ಬದಲಾಗಿ ದೇಶೀಯ ಭಾಷಾ ಮಾಧ್ಯಮವನ್ನು ಬಳಸುವ

ಅಗತ್ಯವನ್ನು ಎತ್ತಿ ಹಿಡಿದರು. ಇಂಗ್ಲೀಶ್ ಮೂಲಕ ಕಲಿಯುವುದರಿಂದ ಜ್ಞಾನ ಜನ ಸಾಮಾನ್ಯರಿಗೆ ಮುಟ್ಟಲಾರದೆಂದು ಅವರು ದೇಶಾದ್ಯಂತ ಸರ್ವಸಾಮಾನ್ಯ ಬೋಧನಾ ಮಾಧ್ಯಮವಾಗಿ ಬಳಸುವುದನ್ನು ಒಪ್ಪಲಿಲ್ಲ.

ವಿಲಿಯಂ ಬೆಂಟಿಂಕ್‌ರ ಆಜ್ಞೆಯ ಮೇರೆಗೆ ಬಂಗಾಳ, ಬಿಹಾರ ಕೆಲವು ಜಿಲ್ಲೆಗಳಲ್ಲಿ ದೇಶೀಯ ಶಿಕ್ಷಣದ ಪರಿಸ್ಥಿತಿಯನ್ನು ಪರಿಶೀಲಿಸಿ ಆ್ಯಡಂ ಅದರ ಪುನರುಜ್ಜೀವನ ಕಾರ್ಯವನ್ನು ಕೈಗೊಂಡರು. ಪಠ್ಯಪುಸ್ತಕಗಳನ್ನು ದೇಶೀಯ ಭಾಷೆಗಳಲ್ಲಿ ಪ್ರಕಟಿಸಲು ಮುಂದಾದರು. ಆದರೆ ಮೆಕಾಲೆ ಈ ವರದಿಗೆ ವಿರುದ್ಧವಾದ ವರದಿಯನ್ನಾಗಲೇ ಸರ್ಕಾರಕ್ಕೆ ಸಲ್ಲಿಸಿದ್ದರಿಂದ ಆ್ಯಡಂರ ಅಭಿಪ್ರಾಯವನ್ನು ಆಕ್ಲೆಂಡ್ ತಳ್ಳಿ ಹಾಕಿದರು. ಅವರ ಆಡಳಿತ ಯಂತ್ರಕ್ಕೆ ನೆರವಾಗಬಲ್ಲ ಇಂಗ್ಲೀಶ್ ಬಲ್ಲ ಭಾರತೀಯರನ್ನು ಸೃಷ್ಟಿಸಲು ಈ ಇಂಗ್ಲೀಶ್ ಶಿಕ್ಷಣ ಮತ್ತು ಮೆಕಾಲೆ ವರದಿಗಳು ನೆರವಾದರೂ ಜನಸಾಮಾನ್ಯರ ಕಲ್ಯಾಣವನ್ನು ಸಾಧಿಸದೇ ಹೋದವು. ಮೇಲ್ವರ್ಗ ಮತ್ತು ಮಧ್ಯಮ ವರ್ಗದವರು ಉತ್ತಮ ಶಿಕ್ಷಣವನ್ನು ಪಡೆದುಕೊಂಡು ಕೆಳವರ್ಗದವರ ಶಿಕ್ಷಣಕ್ಕೆ ನೆರವಾಗಬಲ್ಲರು ಎಂಬ ಸರ್ಕಾರದ ಧೋರಣೆಗೆ, ಆಶಯಗಳಿಗೆ ತಣ್ಣೀರೆರೆಚಿದಂತಾಯಿತು. ಇಂಗ್ಲೀಶ್‌ನ ಅಭಿರುಚಿಯಿಂದಾಗಿ ಇಂಗ್ಲೀಶ್‌ರ ಆಡಳಿತದ ಬೆಂಬಲಿಗ ರಾಗಿ ತಮ್ಮ ಜೀವನ ನಡೆಸುತ್ತಿದ್ದರೇ ವಿನಃ ಜನಸಾಮಾನ್ಯರನ್ನು ಸುಶಿಕ್ಷಿತರನ್ನಾಗಿಸುವ ಕಡೆಗೆ ಅವರು ಗಮನ ಹರಿಸಲಿಲ್ಲ. ಬದಲಾಗಿ ಧನಾರ್ಜನೆ ಮಾಡಿ ಧನಿಕರಾಗಿ ಸ್ವಸುಖದಲ್ಲಿ ನಿರತರಾಗಿದ್ದರು. ಇದರಿಂದಾಗಿ ಶಿಕ್ಷಣ(ಇಂಗ್ಲೀಶ್) ಕೇವಲ ಮೇಲ್‌ವರ್ಗದವರಿಗಾಗಿಯೇ ರಚಿಸಲ್ಪಟ್ಟಿತ್ತು ಎಂದು ಹೇಳಬಹುದು. ಕೆಳವರ್ಗದವರು ಸಾಮಾನ್ಯರಾಗಿಯೇ ಉಳಿಯು ವಂತಾಯಿತು. ಹೀಗಾಗಿ ಜನಸಾಮಾನ್ಯರಿಗೆ ಶಿಕ್ಷಣ ಸಂಸ್ಕಾರಗಳು ದೊರೆಯುವಂತಾಗಲಿಲ್ಲ. ಮೆಕಾಲೆ ವರದಿಯ ಆಶಯದಂತೆ ಭಾರತೀಯರಲ್ಲಿ ಇಂಗ್ಲೀಶ್ ಅಭಿರುಚಿಯನ್ನು ಮೂಡಿಸುವಲ್ಲಿ ಸಾಧ್ಯವಾಯಿತಾದರೂ ಸಾರ್ವತ್ರಿಕ ಶಿಕ್ಷಣ ಕೈಗೂಡಲಿಲ್ಲ. ಬೆಂಟಿಂಕ್‌ರು ಭಾರತಕ್ಕೆ ಅನ್ವಯಿಸುವಂತೆ ನೂತನ ಶಿಕ್ಷಣ ನೀತಿಯನ್ನು ಘೋಷಿಸಿದ ನಂತರ ದೇಶಾದ್ಯಾಂತ ಇಂಗ್ಲೀಶ್ ಪಾಠಶಾಲೆಗಳು ತೆರೆದುಕೊಂಡವು. ಈ ನೀತಿಯ ಪ್ರಭಾವದಿಂದಲೇ ಬೆಳೆದು ಹೆಮ್ಮರವಾದ ಈ ಸಂಸ್ಥೆಗಳು ಭಾಷಾ ನೀತಿಯ ವಾಗ್ವಾದಗಳು ಪ್ರಾರಂಭವಾದವು.

ಈ ನೀತಿಯ ಅನ್ವಯವಾಗಿ ಪ್ರಾರಂಭದಲ್ಲಿ ಉತ್ತರ ಭಾರತದಲ್ಲಿ ಅಧಿಕ ಸಂಖ್ಯೆಯಲ್ಲಿ ಇಂಗ್ಲೀಶ್ ಶಾಲೆಗಳು ಆರಂಭವಾದವು. ಇದಕ್ಕೆ ಜನರ ಬೇಡಿಕೆಯೂ ಪ್ರಬಲವಾದ ಅಪೇಕ್ಷೆಯಾಗಿದ್ದು ಪ್ರಮುಖ ಕಾರಣ. ಇಂಗ್ಲೀಶ್‌ರ ಸಂಸ್ಕೃತಿಯ ಅನುಕರಣೆ ಜೊತೆಗೆ ಇಂಗ್ಲೀಶ್ ಭಾಷಾ ವ್ಯಾಮೋಹ ಇಂಗ್ಲೀಶ್ ಶಿಕ್ಷಣಕ್ಕೆ ದಾರಿ ಮಾಡಿಕೊಟ್ಟಿತು. ದೇಶೀಯ ಭಾಷಾ ಪಠ್ಯಪುಸ್ತಕಗಳ ಅಧ್ಯಯನ ಮಾಡದೇ ಇರುವುದು ಹಾಗೂ ಮಾರಾಟವಾಗದೇ ಇದ್ದುದು ಇಂಗ್ಲೀಶ್ ಶಿಕ್ಷಣಕ್ಕೆ ಕಾರಣವಾಯಿತು. ಆದ್ದರಿಂದ ಇಂಗ್ಲೀಶ್ ಜ್ಞಾನವನ್ನು, ಸಾಹಿತ್ಯವನ್ನು ಜನರಲ್ಲಿ ಮೂಡಿಸುವುದು ಶಿಕ್ಷಣದ ಪ್ರಧಾನ ಉದ್ದೇಶವಾಗಿತ್ತು.

ಮೆಕಾಲೆ ವರದಿಯ ನಂತರ ಬಂದ ವುಡ್ ವರದಿ, ಸ್ಯಾಡ್ಲರ್ ವರದಿ, ಹಂಟರ್ ವರದಿ ಹಾಗೂ ಸಾರ್ಜೆಂಟ್ ಮುಂತಾದ ವರದಿಗಳು ರಚನೆಯಾದ ಕಾಲದಲ್ಲಿ ಇಂಗ್ಲೀಶ್ ಮಿಷನರಿಗಳು ಭಾರತೀಯರಲ್ಲಿ ಇಂಗ್ಲೀಶ್ ಶಿಕ್ಷಣ ಬೇರೂರಿರುವುದನ್ನು ಪರಿಶೀಲಿಸಿ ಅವರ ಅಗತ್ಯತೆಯನ್ನು ಪರಿಗಣಿಸಿ ಯುರೋಪಿಯನ್ನರ ಶಿಕ್ಷಣ ಸಂಸ್ಕೃತಿಯನ್ನು ಅವರ ಮಾತೃ ಭಾಷೆಯಲ್ಲಿಯೇ ನೀಡುವ ವ್ಯವಸ್ಥೆಯನ್ನು ಕಲ್ಪಿಸಿದರು. ಆದರೆ ಆ ವರದಿಗಳು ಕೊನೆಯವರೆಗೂ ಜಾರಿಯಾಗಲಿಲ್ಲ. ಇದಕ್ಕೆ ಅಧಿಕಾರಿಗಳ ಸ್ವಹಿತಾಶಕ್ತಿ, ಆಡಳಿತಾಧಿಕಾರಿಗಳ ನಿರ್ಣಯಕ್ಕೆ ಪ್ರಾಂತೀಯ ಅರಸರುಗಳ ಸಂಪೂರ್ಣ ಬೆಂಬಲ, ಜನರ ಇಂಗ್ಲೀಶ್ ವ್ಯಾಮೋಹ ಮುಂತಾದ ವುಗಳೇ ಈ ಇಂಗ್ಲೀಶ್ ಭಾಷಾ ಶಿಕ್ಷಣಕ್ಕೆ ಉತ್ತೇಜನ ನೀಡುವಲ್ಲಿ ಪ್ರಮುಖ ಕಾರಣಗಳಾಗಿವೆ. ಅಷ್ಟೇ ಅಲ್ಲದೇ ಆರ್ಥಿಕವಾಗಿ ಹಿಂದುಳಿದ ಭಾರತೀಯರು ಬಡತನ ಸಮಸ್ಯೆಯನ್ನು ಎದುರಿಸುತ್ತಿದ್ದ ಸಂದರ್ಭದಲ್ಲಿ, ಇಂಗ್ಲೀಶ್ ಕಲಿಕೆಯಿಂದ ಕೆಲಸ ಪಡೆದುಕೊಳ್ಳಬಹುದು ಮತ್ತು ಹಣ ಸಂಪಾದಿಸಲೂಬಹುದು ಎಂಬ ಆಶೆಯಿಂದ ಬ್ರಿಟೀಷರ ಆಮೀಷಗಳಿಗೆ ಸಹಜವಾಗಿಯೇ ಬಲಿಯಾಗತೊಡಗಿದರು. ಇದರಿಂದ ಜನಸಾಮಾನ್ಯರನ್ನೂ ಒಳಗೊಂಡಂತೆ ಉನ್ನತ ವರ್ಗದವರೆಲ್ಲರೂ ಇಂಗ್ಲೀಶ್ ಶಿಕ್ಷಣಕ್ಕಾಗಿ ಬೆನ್ನು ಹತ್ತಿದರು. ಆದರೆ ಕೆಳವರ್ಗದವರು ಇಂಗ್ಲೀಶ್ ಶಿಕ್ಷಣದ ಪ್ರಯೋಜನವನ್ನು ಪಡೆದುಕೊಳ್ಳುವಂತಹ ಪ್ರಯತ್ನ ಈ ಅವಧಿಯಲ್ಲಿಯೂ ಸಮರ್ಪಕವಾಗಲಿಲ್ಲ. ಅವಕಾಶವಿದ್ದವರು ಮಾತ್ರ ಅದರ ಪ್ರಯೋಜನವನ್ನು ಪಡೆಯುವಂತಾಯಿತು.

ಇನ್ನು ವ್ಯಾಪಾರದ ಲಾಭಿಯಿಂದ ಕಂಪನಿಗಳನ್ನು ಆರಂಭಿಸಿದ ಬ್ರಿಟಿಷ ಸರ್ಕಾರ ಕಂಪನಿಯ ಅಭಿವೃದ್ಧಿಗಾಗಿ ಜನರಲ್ಲಿ ಕೆಲಸದ, ಹಣ ಸಂಪಾದನೆಯ ಆಮೀಷಗಳನ್ನು ಒಡ್ಡಿ ಒತ್ತಾಯಪೂರ್ವಕವಾಗಿ ಇಂಗ್ಲೀಶ್ ಶಿಕ್ಷಣವನ್ನು ನೀಡಲು ಪ್ರಾರಂಭಿಸಿದರು. ಇದೊಂದು ರೀತಿಯಲ್ಲಿ ವಿನಾಶಕಾರಿ ಸಂಚು ಎಂದು ಹೇಳಬಹುದು. ಕಂಪನಿಯ ಕೆಲಸ ಕಾರ್ಯಗಳ ಚಲಾವಣೆಗೆ ಇಂಗ್ಲೀಶ್‌ನ ಜ್ಞಾನದ ಅಗತ್ಯತೆಯನ್ನು ಭಾರತೀಯರಲ್ಲಿ ಬಿತ್ತುವ ಕೆಲಸವನ್ನು ಸರಳೋಪಾಯವಾಗಿ ಮಾಡಿದರು.

ಈ ಮೇಲಿನ ವರದಿಗಳಲ್ಲಿ ಮೆಕಾಲೆ ವರದಿ ಇಂಗ್ಲೀಶ್ ಶಿಕ್ಷಣ ಪರವಾಗಿರುವುದು ಸ್ಪಷ್ಟವಾಗುತ್ತದೆ. ಆದರೆ ನಂತರದಲ್ಲಿ ಬಂದ ಅಧಿಕಾರಿಗಳು ಕಾಲಾಂತರದಲ್ಲಿ ಇಲ್ಲಿ ಸಾಮಾಜಿಕ ಅಗತ್ಯತೆ ಹಾಗೂ ಜನರ ಸಾಂಸ್ಕೃತಿಕ ಜೀವನವನ್ನು ಅಧ್ಯಯನ ಮಾಡತೊಡಗಿದಂತೆ ಇಲ್ಲಿಯ ಸಂಸ್ಕೃತಿ, ಸಾಹಿತ್ಯದ ಕಡೆಗೆ ಒಲವು ತೋರಿಸಿ ಜನಸಾಮಾನ್ಯರಿಗೆ ಅವರ ಮಾತೃಭಾಷೆಯಲ್ಲಿ ಇಂಗ್ಲೀಶ್‌ನ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಅರ್ಥ ಮಾಡಿಸಲು ಪ್ರಯತ್ನಿಸಿದರು. ಬ್ರಿಟೀಷ ಅಧಿಕಾರಿಗಳಲ್ಲಿ ಸಾಕಷ್ಟು ಜನ ಭಾರತೀಯ ಭಾಷೆ, ಸಾಹಿತ್ಯ, ಸಂಸ್ಕೃತಿಯ ಒಲವು ತೋರಿದ್ದರಿಂದ ವುಡ್ಸ್ ವರದಿ ಸಾರ್ಜೆಂಟ್ ಮುಂತಾದ ವರದಿಗಳಲ್ಲಿ ಮಾತೃಭಾಷೆ ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಶಿಕ್ಷಣ ಕ್ರಮದಲ್ಲಿ ಜಾರಿಗೆ ತರಲು

ಪ್ರಯತ್ನಿಸಿದರು. ಆದರೆ ಇವು ಒಂದಾದ ನಂತರ ಒಂದು ವರದಿಯಂತೆ ಕೆಲವು ವರ್ಷಗಳ ಅಂತರದಲ್ಲಿ ಹಲವಾರು ಸಾಮಾಜಿಕ ಸ್ಥಿತ್ಯಂತರಗಳಿಗೆ ರೂಪಗೊಂಡು ಸಾಕಷ್ಟು ವ್ಯತ್ಯಾಸಗಳಿಗೆ ಕಾರಣಗಳಾದವು. ಈ ವರದಿಗಳ ರಚನೆಗೆ ಕಾರಣವಾದ ವ್ಯಕ್ತಿಗಳ ಒಲವು ಇತರರ ವಿರೋಧಗಳಿಗೆ ಅಧಿಕಾರಿಗಳ ಭಿನ್ನಾಭಿಪ್ರಾಯಗಳಿಗೆ ದಾರಿ ಮಾಡಿ ಕೊಟ್ಟಿತು. ಅಧಿಕಾರಿಗಳ ವರ್ಗಾವಣೆಯಾಗಿಯೂ ಸಹ ವರದಿಗಳು ಜಾರಿಯಾಗದಿರುವುದಕ್ಕೆ ಕಾರಣ ಎನ್ನಬಹುದು. ಅಷ್ಟೇ ಅಲ್ಲದೇ ಇಂಗ್ಲೀಶ್‌ನ ಪ್ರಭಾವ ಹಾಗೂ ವ್ಯಾಮೋಹಗಳಿಗೆ ಒಳಗಾಗಿ ಸ್ಥಳೀಯ ಸಾಮಂತ ಅಧಿಕಾರಿಗಳ, ಜನರ ಒಲವು, ಬ್ರಿಟೀಷ್ ಅಧಿಕಾರಿಗಳಿಗೆ ಸಹಾಯ ಒದಗಿಸಿ ಕೊಡಲು ನೆರವಾಗಿವೆ, ಹಾಗಾಗಿ ಈ ವರದಿಗಳು ಕೆಲವು ಕಾಲದಮಟ್ಟಿಗೆ ಜಾರಿಗೊಂಡು ನಂತರದಲ್ಲಿ ಸ್ಥಗಿತಗೊಂಡಿವೆ ಎಂದು ಹೇಳಬಹುದು.

### ೪.೨. ಭಾರತೀಯ ಸಂದರ್ಭದಲ್ಲಿ ಶಿಕ್ಷಣ ಕುರಿತಾದ ವರದಿಗಳು

ಬ್ರಿಟೀಷ್ ಅಧಿಕಾರಿಗಳಿಂದ ಜಾರಿಗೆ ಬಂದ ವರದಿಗಳು ಸಂಪೂರ್ಣವಾಗಿ ಚಾಲ್ತಿಯಲ್ಲಿ ಬರದೇ ಕುಂಠಿತಗೊಂಡವು. ೧೮೫೪-೧೮೮೨ರ ಕಾಲಾವಧಿಯಲ್ಲಿ ಭಾರತದಲ್ಲಿ ಪ್ರಾಥಮಿಕ ಶಿಕ್ಷಣ ಬಹು ಮಂದಗತಿಯನ್ನು ತಾಳಿತ್ತು. ಆಯೋಗದ ವಿಚಾರಣಾಂಶಗಳಲ್ಲಿ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು ಮುಖ್ಯವಾಗಿದ್ದವು. ೧೮೫೪ರ ವುಡ್ಸ್ ವರದಿಯ ಸಲಹೆಗಳನ್ನು ಹೇಗೆ ಅನುಷ್ಠಾನಕ್ಕೆ ತರಬೇಕು. ಅಲ್ಲದೆ ಅದರಲ್ಲಿರುವ ನೀತಿಯನ್ನು ಪರಿಗಣಿಸಿ ಕ್ರಮ ಕೈಗೊಳ್ಳುವುದಕ್ಕೆ ಸಲಹೆ ಮಾಡುವುದು ಆಯೋಗದ ಪ್ರಮುಖ ಕರ್ತವ್ಯವಾಗಿತ್ತು. ಆದ್ದರಿಂದ ಆಯೋಗದ ವರದಿಯಲ್ಲಿ ಪ್ರಾಥಮಿಕ ಶಿಕ್ಷಣವೇ ಪ್ರಧಾನವಾಗಿ ಪರಿಶೀಲನೆಯಾಗಿದೆ. ಅದಕ್ಕಾಗಿ ಆಯೋಗ ಸರ್ಕಾರ ಅನುಸರಿಸಬೇಕಾದ ನೀತಿಯ ಬಗ್ಗೆ ಕೆಲವು ಸಲಹೆಗಳನ್ನು ಸೂಚಿಸಿತು.

ಜೀವನಕ್ಕೆ ಅಗತ್ಯವೆನಿಸಿದ ವಿಷಯಗಳನ್ನು ಬೋಧಿಸಲು ದೇಶೀಯ ಭಾಷಾ ಮಾಧ್ಯಮ ವನ್ನು ಪ್ರಾಥಮಿಕ ಶಿಕ್ಷಣದಲ್ಲಿ ಅನುಸರಿಸಬೇಕು. ಆ ಹಂತದ ಶಿಕ್ಷಣ ವಿಶ್ವವಿದ್ಯಾಲಯದ ಶಿಕ್ಷಣಕ್ಕೆ ಹಾದಿಯಾಗುತ್ತದೆಂದು ಹೇಳಲಾಗಿದೆ. ಅದಕ್ಕಾಗಿ ಸರ್ಕಾರ ಪ್ರಾಥಮಿಕ ಶಿಕ್ಷಣದ ಸೌಲಭ್ಯ ವಿಸ್ತರಣೆ ಮತ್ತು ಉತ್ತಮಕ್ಕಾಗಿ, ಹೆಚ್ಚಿನ ಪ್ರಯತ್ನವನ್ನು ಕೈಗೊಳ್ಳುವುದಕ್ಕಾಗಿ ಆಸಕ್ತಿವಹಿಸಬೇಕಾಗಿದೆ ಎಂದು ವರದಿಯು ತಿಳಿಸಿದೆ.

ಹಂಟರ್ ಶಿಕ್ಷಣ ಆಯೋಗದ (೧೮೮೨-೧೯೦೪) ವರದಿಯ ಕೆಲವು ಸಲಹೆಗಳನ್ನು ಸರ್ಕಾರ ತಕ್ಷಣ ಒಪ್ಪಿತು. ಆಗ ವೈಸರಾಯಿಯಾಗಿದ್ದ ಲಾರ್ಡ್ ರಿಪ್ಪನ್ ಸ್ಥಳೀಯ ಸರ್ಕಾರದ ಯೋಜನೆಯನ್ನು ಕೂಡಲೇ ಆಚರಣೆಗೆ ತಂದರು. ಅಂದಿನಿಂದ ಭಾರತದಲ್ಲಿ ಪ್ರಾಥಮಿಕ ಶಿಕ್ಷಣದ ಇತಿಹಾಸ ಸ್ಥಳೀಯ ಸರ್ಕಾರದ ಬೆಳವಣಿಗೆಯೊಡನೆ ಹೆಣೆದುಕೊಂಡೇ ಸಾಗಿ ಬಂದಿದೆ.

ಹತ್ತೊಂಭತ್ತನೆಯ ಶತಮಾನದ ಕೊನೆಯ ವೇಳೆಗೆ ಶಿಕ್ಷಣಕ್ಷೇತ್ರದಲ್ಲಿ ನೂತನ ಪ್ರಭಾವ ಬೀರಲು ಆರಂಭವಾಯಿತು. ಭಾರತೀಯರಲ್ಲಿ ತಮ್ಮ ಸಾಹಿತ್ಯ, ಸಂಸ್ಕೃತಿ ಮತ್ತು ನಾಗರೀಕತೆಗಳ

ಬಗ್ಗೆ ನೂತನ ಅಭಿಮಾನ ಮೂಡಿ ಬರತೊಡಗಿತು. ಈ ಅಭಿಮಾನ ಶಿಕ್ಷಣದ ಮೇಲೆ ಪರಿಣಾಮ ಬೀರಿತು. ೧೮೯೯ರಲ್ಲಿ ಭಾರತಕ್ಕೆ ವೈಸರಾಯಿಯಾಗಿ ಬಂದ ಲಾರ್ಡ್ ಕರ್ಜನ್ ಇಲ್ಲಿನ ಶಿಕ್ಷಣ ಕ್ಷೇತ್ರದಲ್ಲಿ ಹಲವು ಸುಧಾರಣೆಗಳನ್ನು ಆಚರಣೆಗೆ ತರಲು ಪ್ರಯತ್ನಿಸಿದರು.

**೧. ೧೯೦೪ರ ಸರ್ಕಾರದ ತೀರ್ಮಾನ (ನಿರ್ಣಯ)**

೧೯೦೪ರ ಮಾರ್ಚ್ ೧೧ರಂದು ಲಾರ್ಡ್ ಕರ್ಜನ್ ತನ್ನ ಶಿಕ್ಷಣ ನೀತಿಯನ್ನು ಕುರಿತು ಪ್ರಕಟಣೆಯನ್ನು ಹೊರಡಿಸಿದನು. ಶಿಕ್ಷಣ ಪ್ರಮಾಣ ತಕ್ಕಷ್ಟು ಹೆಚ್ಚಿಲ್ಲವೆಂಬುದನ್ನು ಒಪ್ಪುತ್ತ ಶಿಕ್ಷಣದ ಗುಣಮಟ್ಟವನ್ನು ಕುರಿತು ಹೀಗೆ ಹೇಳಿದ್ದಾರೆ. 'ಕೇವಲ ಸರ್ಕಾರದ ಕೆಲಸಕ್ಕೆಂದೇ ಉನ್ನತ ಶಿಕ್ಷಣವನ್ನು ಕೈಗೊಳ್ಳಲಾಗುತ್ತಿದೆ. ಆ ಕೆಲಸ ದೊರಕದವರ ಪಾಲಿಗೆ ಆ ಶಿಕ್ಷಣ ಇನ್ನಿತರ ಉದ್ಯೋಗಕ್ಕೆ ಅನುಪಯುಕ್ತವೆನಿಸುತ್ತದೆ. ಪರೀಕ್ಷೆಗೆ ತೀರಾ ಹೆಚ್ಚು ಪ್ರಾಧಾನ್ಯತೆ ಕೊಡಲಾಗಿದೆ. ಪಠ್ಯವ್ಯವಸ್ಥೆ ಶುದ್ಧಾಂಗ ಗ್ರಂಥ ವ್ಯಾಸಾಂಗವೆನಿಸಿದೆ.'

'ಶಾಲಾ ಕಾಲೇಜುಗಳ ವಿದ್ಯಾರ್ಥಿಗಳ ಬುದ್ಧಿಗೆ ತರಬೇತಿ ನೀಡುವ ಬದಲು, ಜ್ಞಾಪಕ ಶಕ್ತಿಗೆ ತರಬೇತಿ ನೀಡುತ್ತಿರುವುದರಿಂದ ಕಂಠಪಾಠ ತರ್ಕಬದ್ಧ ಕಲಿಕೆಯ ಸ್ಥಾನವನ್ನು ಆಕ್ರಮಿಸಿದೆ, ಇಂಗ್ಲೀಶ್ ಶಿಕ್ಷಣವನ್ನು ಅನುಸರಿಸುವುದರಿಂದ ದೇಶೀಯ ಭಾಷಾಧ್ಯಯನ ಮತ್ತು ಬೆಳವಣಿಗೆಗಳನ್ನು ನಿರ್ಲಕ್ಷಿಸಿದೆ' ಎಂದು ವಿಶ್ಲೇಷಿಸಿದ್ದಾರೆ. **(ಎನ್.ಎಸ್. ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪ್ರಸಾರಾಂಗ ಮೈಸೂರು ವಿ.ವಿ. ೧೯೮೪, ಪುಟ-೩೪೩)**

ಮಕ್ಕಳು ಪ್ರಾಥಮಿಕ ಶಿಕ್ಷಣದಲ್ಲಿ ತಕ್ಕಷ್ಟು ಪ್ರಗತಿ ಸಾಧಿಸಿ ತಮ್ಮ ಮಾತೃಭಾಷೆಯಲ್ಲಿ ಪೂರ್ಣವಾಗಿ ಶಿಕ್ಷಣ ಪಡೆಯದ ಹೊರತು ಇಂಗ್ಲೀಶ್ ಭಾಷೆಯನ್ನು ಕಲಿಯಲು ಬಿಡಬಾರದು ಎಂದು ಸೂಚಿಸಿತ್ತು. ಆ ಮೂಲಕ ಮಕ್ಕಳು ಹದಿಮೂರು ವರ್ಷ ವಯಸ್ಸಾದಾಗ ಇಂಗ್ಲೀಶ್ ಭಾಷೆಯನ್ನು ಬೋಧಿಸಿಬೇಕೆಂಬ ನಿರ್ಣಯವನ್ನು ಸ್ಪಷ್ಟವಾಗಿ ಅನುಮೋದಿಸಿತು. ವಿದ್ಯಾವಂತರು ತಮ್ಮ ಮಾತೃಭಾಷೆಯನ್ನು ಬೆಳೆಸುವುದರಲ್ಲಿ ಉದಾಸೀನರಾದರೆ ಅವೆಲ್ಲ ಒಳ್ಳೆಯ ಸಾಹಿತ್ಯವನ್ನು ರೂಪಿಸಿಕೊಳ್ಳಲಾರದೇ ಕೇವಲ ಸಂಭಾಷಣೆಯ ಭಾಷೆಗಳಾಗಿ ಉಳಿಯುವಂತಾಗುತ್ತದೆ ಎಂದು ವರದಿಯು ಸಲಹೆ ನೀಡಿದೆ. **(ಎನ್.ಎಸ್. ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪ್ರಸಾರಾಂಗ ಮೈಸೂರು ವಿ.ವಿ. ೧೯೮೪, ಪುಟ-೩೪೪)**

ಉತ್ತರ ಭಾರತದ ಬಂಗಾಳ, ಕೊಲ್ಕತ್ತಾ, ಮುಂಬಯಿ ಕೆಲವು ಪ್ರಾಂತ್ಯಗಳಲ್ಲಿ ಇಂಗ್ಲೀಶ್ ಶಿಕ್ಷಣದ ಪ್ರಭಾವ ವಿಪರೀತವಾಗಿದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಇಂಗ್ಲೀಶ್ ಶಾಲೆಗಳು ತೆರೆದುಕೊಂಡವು, ಕರ್ನಾಟಕವೂ ಅದಕ್ಕೆ ಹೊರತಾಗಿರಲಿಲ್ಲ. ಆದರೆ ಮುಂಬಯಿ ಕಲ್ಕತ್ತಾ ಪ್ರಾಂತ್ಯಗಳಲ್ಲಿ ಮಾತೃಭಾಷಾ ಮಾಧ್ಯಮದ ಚಳುವಳಿ ಆವರಿಸಿತು. ಪಂಡಿತರು ಮಾತೃಭಾಷಾ ಮಾಧ್ಯಮವನ್ನು ಇಂಗ್ಲೀಶ್ ಮಾಧ್ಯಮಕ್ಕೆ ಬದಲಾಗಿ ಬಳಸಬೇಕೆಂದು ಚಳುವಳಿ ಆರಂಭಿಸಿ ಸರ್ಕಾರವನ್ನು ಆ ಮೂಲಕವಾಗಿ ಒತ್ತಾಯಪಡಿಸಿದ್ದರು. ಆದರೆ ಆಂಗ್ಲ ಭಾಷಾ ಮಾಧ್ಯಮ ಆಗಲೇ ಜನಪ್ರಿಯವಾಗಿ ಭದ್ರವಾಗಿ ಬೇರೂರಿತ್ತು. ಜೊತೆಗೆ ಆರ್ಥಿಕ ಆಕರ್ಷಣೆಯೂ ಅದರಲ್ಲಿ ಅಡಗಿತ್ತು. ಆ ಚಳುವಳಿಗೆ ಸ್ಥಳೀಯ ಆಳರಸರು ಪುರಸ್ಕಾರ ನೀಡಲಿಲ್ಲವೆಂದು

ಕೃತಿಯಲ್ಲಿ ಎನ್.ಎಸ್. ವೀರಪ್ಪನವರು ವಿಶ್ಲೇಷಿಸಿದ್ದಾರೆ. ಆದ್ದರಿಂದ ಭಾಷಾ ಮಾಧ್ಯಮದ ಚಳುವಳಿ ಯಥಾ ರೀತಿಯಲ್ಲಿಯೇ ಮುಂದುವರೆದುಕೊಂಡು ಬಂದಿರಬಹುದು. ಒಂದು ನಿಯಮ ಜಾರಿಗೆ ಬರಬೇಕಾದರೆ ಅಲ್ಲಿಯೂ ಸ್ಥಳೀಯ ಸರ್ಕಾರದ ಆಡಳಿತ ಮತ್ತು ಆರ್ಥಿಕ ಹಿನ್ನೆಲೆಯೂ ಪ್ರಮುಖವಾಗಿ ಕಾರಣವಾಗಿರುತ್ತದೆ. ಆ ಮೂಲಕ ಆಡಳಿತದ ಹಿತಾಶಕ್ತಿ ಮುಂಚೂಣಿಯಲ್ಲಿದ್ದು, ವ್ಯವಸ್ಥೆಯನ್ನು ನಿಯಂತ್ರಿಸುತ್ತಲಿದ್ದು ಅದು ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾಗಿರುತ್ತದೆ ಎಂಬ ಮುಂತಾದ ವಿಚಾರಗಳು ಈ ವರದಿಯಿಂದ ಸ್ಪಷ್ಟವಾಗಿ ನಿರ್ಧಾರಿತವಾಗುತ್ತದೆ.

೧೮೫೭ರಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಉದ್ಭವಿಸಿ ಶಿಕ್ಷಣ ಸುಧಾರಣೆಗಳು ಮುಂದುವರಿಯದೇ ಹಾಗೆ ಉಳಿದುಕೊಂಡವು. ಅದರ ಫಲವಾಗಿ ಬ್ರಿಟೀಷ ಸರ್ಕಾರ ಇಲ್ಲಿನ ಆಡಳಿತ ಸೂತ್ರವನ್ನು ಕಂಪನಿಯಿಂದ ತಾನೇ ವಹಿಸಿಕೊಂಡಿತು. ಆಧುನಿಕ ಭಾರತೀಯ ಶಿಕ್ಷಣದ ಇತಿಹಾಸದ ಎರಡನೇಯ ಘಟ್ಟದ ಅವಧಿಯಲ್ಲಿ ಕಂಪನಿ ಸರ್ಕಾರ ಗೆದ್ದ ಇಲ್ಲಿಯ ಭೂಮಿಯನ್ನು ಪಡೆದು ಅದರ ಮೇಲೆ ತನ್ನ ಒಡೆತನವನ್ನು ಸ್ಥಾಪಿಸಿ ಬಿಗಿಗೊಳಿಸುವುದರಲ್ಲಿ ಮಗ್ನವಾಗಿದ್ದುದರಿಂದ ಶಿಕ್ಷಣದ ಕಡೆಗೆ ತಕ್ಕಷ್ಟು ಗಮನ ಕೊಡಲಾಗಲಿಲ್ಲ. ೧೮೫೭ರಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ನಂತರ ರಾಜ್ಯದ ಆಡಳಿತ ಸೂತ್ರವನ್ನು ತಾನೇ ವಹಿಸಿಕೊಂಡ ಬ್ರಿಟೀಷ ಸರ್ಕಾರ ಆಗಮನದಿಂದ ಧಾರ್ಮಿಕ ತಟಸ್ಥವಹಿಸಿ, ಶಿಕ್ಷಣ ಕಾರ್ಯ ನಿರ್ವಹಣೆಯನ್ನು ತಾನೇ ಉಳಿಸಿಕೊಂಡಿತು. ಭಾರತದಲ್ಲಿ ಶಿಕ್ಷಣ ಸಮಸ್ಯೆಗಳನ್ನು ಪರಿಶೀಲಿಸಿ ಸುಧಾರಣೆಗಳನ್ನು ಸಲಹೆ ಮಾಡಲು ೧೮೮೨ರಲ್ಲಿ ಒಂದು ಶಿಕ್ಷಣ ಆಯೋಗವನ್ನು ನೇಮಿಸಿತು. ಅದಕ್ಕೆ ಸಂಬಂಧಿಸಿದಂತೆ ಅನೇಕ ಶಾಸನಗಳನ್ನು ಮಾಡಿತು.

ನಂತರದಲ್ಲಿ ಬ್ರಿಟೀಷರ ಆಡಳಿತದ ವಿರೋಧವಾಗಿ ಹುಟ್ಟಿಕೊಂಡ ಸ್ವದೇಶಿ ಚಳುವಳಿಗಳ ಪರಿಣಾಮವಾಗಿ, ಶಿಕ್ಷಣಕ್ಕಾಗಿ ಕೈಗೊಂಡ ಚಳುವಳಿಯ ಹಿನ್ನೆಲೆಯಲ್ಲಿ ಶಿಕ್ಷಣದ ಅಭಿವೃದ್ಧಿ/ ಸುಧಾರಣೆಗಾಗಿ ಯೋಜನೆಗಳನ್ನು ರೂಪಿಸಲು ಕಾರ್ಯಗತವಾಗತೊಡಗಿದವು. ೧೯೦೫-೨೧ರಲ್ಲಿ ಶಿಕ್ಷಣದ ಪುನರ್‌ವ್ಯವಸ್ಥೆಯ ಪ್ರಗತಿ ಆರಂಭವಾಯಿತು. ಶಿಕ್ಷಣ ಸುಧಾರಣೆಗಳ ಬಗ್ಗೆ ಆಲೋಚನೆಗಳು ನಡೆಯುತ್ತಿದ್ದವು. ಮೊದಲು, ಬಂಗಾಳದಲ್ಲಿ ಆರಂಭವಾಗಿ ದೇಶದ ಇತರ ಭಾಗಗಳಲ್ಲಿಯೂ ಆರಂಭವಾಯಿತು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶಿ ವಸ್ತುಗಳನ್ನು ಬಳಸುವಂತೆ ಪ್ರೋತ್ಸಾಹಿಸಲಾಯಿತು. ಸ್ವದೇಶಿ ವಸ್ತುಗಳ ತಯಾರಿಕೆಗೆ ಕೈಗಾರಿಕೆಗಳ ಸ್ಥಾಪನೆಯ ಅಗತ್ಯವುಂಟಾಯಿತು, ಹಾಗಾಗಿ ಕೈಗಾರಿಕೆಗಾಗಿ ಔದ್ಯೋಗಿಕ ಶಿಕ್ಷಣವನ್ನು ಆರಂಭಿಸಿದರು. ಅದಕ್ಕಾಗಿ ರಾಷ್ಟ್ರೀಯ ಶಿಕ್ಷಣ ಸಮಿತಿಯನ್ನು ರಚಿಸಿದರು. ಅದರಲ್ಲಿ ಗುರುದಾಸ್ ಬ್ಯಾನರ್ಜಿ, ರಾಷ್‌ಬಿಹಾರ್ ಘೋಷ್, ರವೀಂದ್ರನಾಥ ಠಾಗೋರ್ ಮುಂತಾದವರು ಭಾಗವಹಿಸಿದ್ದರು. ರಾಷ್ಟ್ರೀಯ ಶಿಕ್ಷಣ ಸಮಿತಿ ಕಲ್ಕತ್ತದಲ್ಲಿ ಒಂದು ರಾಷ್ಟ್ರೀಯ ವಿದ್ಯಾಲಯವನ್ನು (National College) ಸ್ಥಾಪಿಸಿತು. ಕಾಲೇಜು ಶಿಕ್ಷಣ ಸಂಸ್ಥೆ ಹಾಗೂ ಪ್ರೌಢಶಾಲೆಗಳಲ್ಲಿ ಉಪಯುಕ್ತ ವಿಷಯಗಳನ್ನು ಮಾತೃಭಾಷಾ ಮಾಧ್ಯಮದಲ್ಲಿ ಬೋಧಿಸುತ್ತಿದ್ದರು. ೧೯೧೦ರಲ್ಲಿ

ಗೋಖಲೆಯವರು ಕೇಂದ್ರ ಶಾಸನ ದೇಶಾದ್ಯಂತ ಪ್ರಾಥಮಿಕ ಶಿಕ್ಷಣ ಉಚಿತವೂ ಕಡ್ಡಾಯವೂ ಆಗಬೇಕೆಂದು ಒಂದು ಆಯೋಗವೊಂದನ್ನು ರಚಿಸಬೇಕೆಂದು ನಿರ್ಣಯವನ್ನು ಮಂಡಿಸಿದರು.

ಲಾರ್ಡ್ ಕರ್ಜನ್ ನೀತಿಯಿಂದ ರಾಷ್ಟ್ರ ಪ್ರೇಮದೊಂದಿಗೆ ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರೀಯ ಭಾವನೆ ಬೆಳೆದು ಬಂದಿತು. ಬಂಗಾಳದ ವಿಭಜನೆಯ ಕಾಲದಲ್ಲಿ ದೇಶಾದ್ಯಂತ ಆರಂಭವಾದ ಸ್ವದೇಶಿ ಚಳುವಳಿ ಶಿಕ್ಷಣ ಕ್ಷೇತ್ರಕ್ಕೂ ಆವರಿಸಿತು. ಸ್ವದೇಶಿ ಶಿಕ್ಷಣ ಬೆಳೆದು ಬರಬೇಕೆಂಬ ಕೂಗು ಪ್ರಾರಂಭವಾಯಿತು. ಆದ್ದರಿಂದ ಸರ್ಕಾರ ಕೆಲವು ಶೈಕ್ಷಣಿಕ ನೀತಿಯನ್ನು ಪ್ರಾರಂಭಿಸಲು ರಾಷ್ಟ್ರೀಯ ಶಿಕ್ಷಣ ಚಳುವಳಿಗಳನ್ನು ನಡೆಸಿತು.

### ೨. ರಾಷ್ಟ್ರೀಯ ಶಿಕ್ಷಣ ಆಯೋಗ

೧೮೮೨ರ ಶಿಕ್ಷಣ ಆಯೋಗದಲ್ಲಿ ಕೆಲವು ಮಹತ್ವದ ಬದಲಾವಣೆಗಳನ್ನು ಪ್ರಾಥಮಿಕ ಶಿಕ್ಷಣದಲ್ಲಿ ತರಲು ಪ್ರಾರಂಭಿಸಿತು. ಅದಕ್ಕೆ ಅನಿಬೆಸೆಂಟ್‌ರ ಆಲೋಚನೆಗಳು ಸಹಾಯಕವಾದವು ಎಂದು ಎನ್.ಎಸ್. ವೀರಪ್ಪನವರು ಕೃತಿಯಲ್ಲಿ ಅನಿಬೆಸೆಂಟ್‌ರ ವಿಚಾರಗಳನ್ನು ಉಲ್ಲೇಖಿಸಿದ್ದಾರೆ. **(ಪುಟ-೩೮೧)**ಅಂದಿನ ರಾಷ್ಟ್ರೀಯ ಚಳುವಳಿಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಅನಿಬೆಸೆಂಟರು ಹೇಳಿದ ಕೆಲವು ವಿಚಾರಗಳು ಈ ಮುಂದೆ ತಿಳಿಸಿದಂತಿವೆ. ರಾಷ್ಟ್ರೀಯ ಶಿಕ್ಷಣ ಭಾರತೀಯರಿಂದ ನಿಯಂತ್ರಿಸಬೇಕು ಮತ್ತು ನಿರ್ವಹಿಸುವಂತಾಗಬೇಕು ಎಂದು ಸೂಚಿಸಿದ್ದಾರೆ. ಆ ಶಿಕ್ಷಣ ಭಾರತೀಯರ ಬುದ್ಧಿಶಕ್ತಿ, ಸ್ಥಿತಿ ಮುಂತಾದ ಆದರ್ಶಗಳನ್ನು ಒಳಗೊಂಡಿರಬೇಕು. ಧಾರ್ಮಿಕ ಭಾವನೆ ಅದರಲ್ಲಿರಬೇಕು. ಮಕ್ಕಳಲ್ಲಿ ತಮ್ಮ ದೇಶ, ಸಂಸ್ಕೃತಿಗಳ ಬಗ್ಗೆ ಅಭಿಮಾನ ಮೂಡುವಂತಾಗಬೇಕು. ಭಾರತ ಇಂಗ್ಲೆಂಡಿನಂತಾಗಬೇಕಿಲ್ಲ, ಬಲಿಷ್ಠ ಭಾರತವಾಗಬೇಕೆಂದು ಮುಂತಾದ ಅಂಶಗಳನ್ನು ನಮ್ಮ ಮಕ್ಕಳಲ್ಲಿ ರಾಷ್ಟ್ರೀಯ ಶಿಕ್ಷಣ ಪದ್ಧತಿ ಬೆಳೆಸುವಂತಿರಬೇಕೆಂದು ಪ್ರತಿಪಾದಿಸಿರು.

ಅದರಂತೆ ಇಂಗ್ಲೀಶ್ ಭಾಷೆಗೆ ಶಿಕ್ಷಣ ವ್ಯವಸ್ಥೆಯಲ್ಲಿ ಕೊಟ್ಟಿದ್ದ ಪ್ರಾಮುಖ್ಯವೂ ಅದನ್ನು ಶಿಕ್ಷಣ ಮಾಧ್ಯಮವಾಗಿ ಬಳಸುವುದೂ ನಿಲ್ಲಬೇಕೆಂಬುದು ರಾಷ್ಟ್ರೀಯ ಶಿಕ್ಷಣದ ನಿಲುವಾಗಿದೆ.

ಆದರೆ ಇಂಗ್ಲೀಶ್ ಭಾಷೆಗೆ ಶಿಕ್ಷಣ ವ್ಯವಸ್ಥೆಯಲ್ಲಿ ನೀಡಿದ್ದ ಪ್ರಾಮುಖ್ಯತೆಯು ಅದನ್ನು ಶಿಕ್ಷಣ ಮಾಧ್ಯಮವಾಗಿ ಬಳಸುವುದು ನಿಲ್ಲಿಸಬೇಕೆಂಬುದು ರಾಷ್ಟ್ರೀಯ ಶಿಕ್ಷಣದ ಮತ್ತೊಂದು ನಿಲುವು. ಅಂಥ ಶಿಕ್ಷಣ ವ್ಯವಸ್ಥೆಯಲ್ಲಿ ಮಾತೃಭಾಷೆಗೆ ಪ್ರಧಾನಸ್ಥಾನ ಬರಬೇಕೆಂದು ವಾದಿಸಿತು. ಇಂಗ್ಲೀಶ್‌ನ ವಿರುದ್ಧ ತಮ್ಮ ವಾದವನ್ನು ಮಂಡಿಸಿದವರಲ್ಲಿ ಮಹಾತ್ಮ ಗಾಂಧೀಜಿಯವರು ಮುಖ್ಯರು. ಅವರು ಭಾರತದಲ್ಲಿ ಹಿಂದೂಸ್ಥಾನಿ ರಾಷ್ಟ್ರಭಾಷೆಯಾಗಬೇಕೆಂದು, ಯಾವ ಹಂತದಲ್ಲೂ ಇಂಗ್ಲೀಶ್ ಶಿಕ್ಷಣ ಮಾಧ್ಯಮವಾಗಿರಕೂಡದೆಂದು ಪ್ರತಿಪಾದಿಸಿದರು. ಅವರ ಅಭಿಪ್ರಾಯ ಆಗ ಸರ್ವಾನುಮತವಾಗದಿದ್ದರೂ ಕೆಳ ಜನತೆಯ ಮನ್ನಣೆ ಬಹುಬೇಗ ದೊರಕಿತೆಂದು ತಿಳಿಸಲಾಗಿದೆ.

ಗಾಂಧೀಜಿಯವರು (೧೯೨೧) ಅವರದೇ ಆದ ಶಿಕ್ಷಣ ಪದ್ಧತಿಯ ಮೂಲಭೂತ ತತ್ವಗಳನ್ನು ಪ್ರಕಟಿಸಿದರು. ಮುಂದೆ ಆ ತತ್ವಗಳ ಆಧಾರದ ಮೇಲೆ ವರ್ಧಾಶಿಕ್ಷಣ ಪದ್ಧತಿ ರೂಪುಗೊಂಡಿತು. ನಂತರದಲ್ಲಿ ಭಾರತ ಸರ್ಕಾರದ ೧೯೧೯ರ ಶಾಸನ ಆಚರಣೆಗೆ ಬಂದ ಸಂದರ್ಭದಲ್ಲಿ ದ್ವಿಮುಖ ಅಥವಾ ದ್ವಿತಂತ್ರ ಆಡಳಿತ ಜಾರಿಗೆ ಬಂತು. ಇದು ೧೯೨೧ರಲ್ಲಿ ಬ್ರಿಟೀಷ್ ಪಾರ್ಲಿಮೆಂಟಿನಿಂದ ಅನುಮೋದನೆ ಪಡೆದು ಭಾರತದಲ್ಲಿ ಆಚರಣೆಗೆ ಬಂದಿತು. ಕೇಂದ್ರ ಹಾಗೂ ಪ್ರಾಂತ್ಯ ಸರ್ಕಾರದ ಒಕ್ಕೂಟದಲ್ಲಿ ನಡೆಯಬೇಕಿದ್ದ ಶೈಕ್ಷಣಿಕ ಆಶೋತ್ತರಗಳ ಇತ್ಯರ್ಥಗಳಿಗೆ ಹಣಕಾಸಿನ ನೆರವು ಪೂರೈಕೆಯಾಗಲಿಲ್ಲ. ಚುನಾಯಿತ ಮಂತ್ರಿಗಳು ಹಾಗೂ ಅಧಿಕಾರಿಗಳ ಸಹಾನುಭೂತಿ ದೊರಕದೆ ಶೈಕ್ಷಣಿಕ ಯೋಜನೆಗಳು ಕಾರ್ಯಗತವಾಗದೇ ಹಾಗೇ ಉಳಿದುಕೊಂಡವು.

**೩. ೧೯೩೫ರ ಭಾರತ ಸರ್ಕಾರದ ಶಾಸನ (೧೯೩೭–೪೭)**

೧೯೨೧ ರಿಂದ ಆಚರಣೆಯಲ್ಲಿದ್ದ ದ್ವಿತಂತ್ರ ಆಡಳಿತ ಪದ್ಧತಿ ೧೯೩೫ರ ಸರ್ಕಾರದ ಶಾಸನದಿಂದ ಕೊನೆಗೊಂಡಿತು. ಈ ನೂತನ ಶಾಸನದಲ್ಲಿ ಉದ್ದೇಶಿಸಲಾದ ರಾಜಕೀಯ ಸುಧಾರಣೆಯನ್ನು ಪ್ರಾಂತೀಯ ಸ್ವಾತಂತ್ರ್ಯ ಎಂದು ಕರೆಯಲಾಯಿತು. ಈ ರೀತಿಯ ನೂತನ ಆಡಳಿತ ಪದ್ಧತಿಯಿಂದಾಗಿ ಶಿಕ್ಷಣದಲ್ಲಿ ಸ್ವಲ್ಪಮಟ್ಟಿಗೆ ಸುಧಾರಣೆ ಕಂಡು ಬರಲು ಸಾಧ್ಯವಾಯಿತು. ಪ್ರಾಥಮಿಕ ಶಿಕ್ಷಣ ಅಷ್ಟಾಗಿ ವಿಸ್ತರಿಸದಿದ್ದುದರಿಂದಲೂ ಯುದ್ಧ ಕಾರಣದಿಂದ ಪ್ರೌಢಶಿಕ್ಷಣದಲ್ಲಿ ಮಾತೃಭಾಷೆಯನ್ನು ಬಳಸುವ ಕಾರ್ಯ ಆರಂಭವಾಗಿತ್ತು. ಮಾತೃ ಭಾಷೆಯಲ್ಲಿ ಒಳ್ಳೆಯ ಪುಸ್ತಕಗಳು ಎಲ್ಲ ವಿಷಯಗಳಲ್ಲೂ ಪ್ರಕಟವಾಗಿದ್ದವು. ಅಧ್ಯಾಪಕರು ಮಾತೃ ಭಾಷೆಯಲ್ಲಿ ವಿಜ್ಞಾನಾದಿ ಪಾರಿಭಾಷಿಕ ವಿಷಯಗಳನ್ನು ಬೋಧಿಸುವುದರಲ್ಲಿ ಆಸಕ್ತಿ, ಅನುಭವವನ್ನು ಹೆಚ್ಚಿಸಿಕೊಂಡಿದ್ದರಲ್ಲದೇ ಮಾತೃಭಾಷಾ ಮಾಧ್ಯಮವನ್ನು ವಿಶ್ವವಿದ್ಯಾಲಯಕ್ಕೂ ವಿಸ್ತರಿಸುವ ಪ್ರಯತ್ನ ನಡೆಸಿದ್ದರು.**(ಎನ್.ಎಸ್. ವೀರಪ್ಪ, ಭಾರತೀಯ ಶಿಕ್ಷಣ ಇತಿಹಾಸ, ಪ್ರಸಾರಾಂಗ ಮೈಸೂರು ವಿ.ವಿ. ೧೯೮೪, ಪುಟ–೪೩೦–೪೩೭)**

ಮುಂದೆ ವಿದೇಶಿಯರ ಆಡಳಿತದಿಂದ ವಿಮುಕ್ತಿ ಪಡೆದ ಭಾರತ ಹೊಸ ರೂಪವನ್ನು ಪಡೆಯಿತು. ರಾಷ್ಟ್ರದ ಆಶೋತ್ತರಗಳನ್ನು ಈಡೇರಿಸುವಂತೆ ಅದನ್ನು ಪುನರ್ರಚಿಸುವ ಯತ್ನಕ್ಕೆ ಆದ್ಯತೆ ದೊರೆಯಿತು. ಆ ವೇಳೆಗೆ ಶಿಕ್ಷಣ ಪದ್ಧತಿಯಲ್ಲಿ ಕೆಲವು ಬದಲಾವಣೆಗಳನ್ನು ತರಲು ರಾಷ್ಟ್ರದ ನಾಯಕರು ಬಯಸಿದ್ದರು. ಅದರಂತೆ ಶಿಕ್ಷಣ ಸಲಹಾ ಮಂಡಳಿಯ ಸದಸ್ಯರ ಸಮಿತಿಯ ಮುಂದೆ ಡಾ. ರಾಧಾಕೃಷ್ಣನ್ ಅವರ ಆಧ್ಯಕ್ಷತೆಯಲ್ಲಿ ೧೯೪೮ರಲ್ಲಿ ಡಾ. ರಾಧಾಕೃಷ್ಣನ್/ಆಯೋಗ ವರದಿಯನ್ನು ಸಲ್ಲಿಸಲಾಗಿತ್ತು. ವಿಶ್ವವಿದ್ಯಾಲಯದ ಶಿಕ್ಷಣ ಪ್ರಗತಿಗಾಗಿಯೇ ರೂಪಿಸಲಾಗಿತ್ತು. ಇದರ ನಂತರ ೧೯೫೨ರಲ್ಲಿ ಜಾರಿಗೆ ಬಂದ ಮೊದಲಿಯಾರ್ ಶಿಕ್ಷಣ ಆಯೋಗವನ್ನು ಪ್ರೌಢಶಿಕ್ಷಣದ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ರಚನೆ ಮಾಡಲಾಯಿತು. ಪ್ರಾಥಮಿಕ ಹಂತದ ಶಿಕ್ಷಣವನ್ನು ಕುರಿತಾಗಿ ಈ

ವರದಿಗಳು ಯಾವ ಅಂಶಗಳನ್ನು ವ್ಯಕ್ತಪಡಿಸಿರುವುದಿಲ್ಲ. ಇದರ ನಂತರ ೧೯೬೪ರಲ್ಲಿ ಕೊಠಾರಿ ಶಿಕ್ಷಣ ಆಯೋಗವನ್ನು ಹೊರಡಿಸಲಾಯಿತು.

**೪. ಕೊಠಾರಿ ಶಿಕ್ಷಣ ಆಯೋಗ ೧೯೬೪**

ಈ ಆಯೋಗವನ್ನು ಶಿಕ್ಷಣ ಮತ್ತು ರಾಷ್ಟ್ರೀಯ ಅಭಿವೃದ್ಧಿಯ ವರದಿ ಎಂದು ಕರೆಯಲಾಗಿದೆ. ಇದನ್ನು ಅಂದಿನ ಶಿಕ್ಷಣ ಮಂತ್ರಿಯಾಗಿದ್ದ ಎಂ.ಸಿ. ಚಾಗ್ಲಾರವರಿಗೆ ೧೯೬೬ರಂದು ಜೂನ್ ೨೯ ನೀಡಲಾಯಿತು. ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಾಕಷ್ಟು ಅಂಶಗಳನ್ನು ಕುರಿತು ಈ ವರದಿಯಲ್ಲಿ ವಿಶ್ಲೇಷಿಸಲಾಗಿದೆ. ಅದರಲ್ಲಿ ಭಾಷಾ ನೀತಿ ಹಾಗೂ ಶಿಕ್ಷಣ ಮಾಧ್ಯಮ ಕುರಿತು ಈ ರೀತಿಯಾಗಿ ಸಲಹೆ ನೀಡಿರುತ್ತದೆ. ಭಾರತೀಯ ಭಾಷಾ ಬೆಳವಣಿಗೆಯು ಮುಂದುವರೆದ ಅಥವಾ ಮೇಲ್‌ವರ್ಗದ ಜನಾಂಗ ಹಾಗೂ ಸಾಮಾನ್ಯ ಜನತೆಗೆ ಉಪಯೋಗವಾಗುವ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆ ಭಾರತೀಯ ಭಾಷಾ ಬೆಳವಣಿಗೆಗೆ ಉಪಯುಕ್ತವಾಗಿದೆ. ಪ್ರಮುಖವಾಗಿ ಪ್ರಾದೇಶಿಕ ಭಾಷೆಗಳಲ್ಲಿ ಪಠ್ಯಪುಸ್ತಕಗಳು ಮುದ್ರಣಗೊಳ್ಳಬೇಕು ಎಂದು ವರದಿಯು ವಿಶ್ಲೇಷಿಸುತ್ತದೆ. ಆಯ್ಕೆ ಮಾಡಿದ ಭಾಷೆಯಿಂದ ವಿದ್ಯಾರ್ಥಿಗಳು ಆಲೋಚಿಸಲು ಅಭಿವ್ಯಕ್ತಪಡಿಸಲು ಸಾಧ್ಯವಾಗುವಂತಿರಬೇಕು. ಸುಮಾರು ವರ್ಷಗಳ ಹಿಂದೆ ಕಲ್ಕತ್ತ ವಿಶ್ವವಿದ್ಯಾಲಯದ ಘಟಿಕೋತ್ಸವ ಭಾಷಣ ಮಾಡುತ್ತ ಡಾ. ರವೀಂದ್ರನಾಥ ಠಾಗೋರವರು ವಿಶ್ವದ ಯಾವ ದೇಶದಲ್ಲೇ ಆಗಲಿ ಭಾರತದಷ್ಟು ವಿವಿಧ ವೈವಿಧ್ಯಮಯ ಭಾಷೆಗಳನ್ನು ಪಡೆದಿಲ್ಲ ಎಂದು ವಿವರಿಸಿದ್ದಾರೆ. **(ಕೊಠಾರಿ ಆಯೋಗದ ವರದಿ, ಡಿ.ಕೆ. ನಾಗರಾಜ, ರಾಮಕೃಷ್ಣ ಪ್ರಕಾಶನ, ೧೯೯೮, ಪುಟ-೧೮,೧೯)**

ವಿದೇಶಿ ಭಾಷೆಗಳನ್ನು ಶಿಕ್ಷಣ ಮಾಧ್ಯಮವಾಗಿ ಮಾಡಿದರೆ ವಿದ್ಯಾರ್ಥಿಗಳು ಕಂಠಪಾಠ ಮಾಡುವರು. ಆದರೆ ವಿಷಯಗಳಲ್ಲಿ ಪಾಂಡಿತ್ಯ ಬೆಳೆಸಿಕೊಳ್ಳಲಾಗುವುದಿಲ್ಲ. ಶಾಲಾ ಹಂತದಲ್ಲಿ ಹಾಗೂ ಉನ್ನತ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗಳನ್ನು ಬೆಳೆಸಬೇಕು. ರಾಷ್ಟ್ರೀಯ ಭಾವೈಕ್ಯತೆಗೆ ಪ್ರಾದೇಶಿಕ ಭಾಷೆಗಳ ಉಪಯೋಗ ಶಾಲಾ ಹಂತದಲ್ಲಿ ವಿಶ್ವವಿದ್ಯಾಲಯದವರೆಗೆ ಅವಶ್ಯಕ. ಈ ಅಂಶವನ್ನು ರಾಷ್ಟ್ರೀಯ ಮಂಡಳಿಯು ಪರಿಶೀಲಿಸಿ ಶಿಕ್ಷಣ ಮಾಧ್ಯಮದ ಪರಿವರ್ತನೆಯು ಸಾಂಸ್ಕೃತಿಕ ಮತ್ತು ರಾಜಕೀಯ ಸಂವೇದನೆಗಳಿಗೆ ಮಾತ್ರ ಇಲ್ಲ ಆದರೆ ಶೈಕ್ಷಣಿಕ ಅನುಕೂಲತೆಗಳಿಗೆ ತಕ್ಕಂತೆ ವಿಷಯವನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗುವುದೆಂದು ಪ್ರಾದೇಶಿಕ ಭಾಷೆಗಳಿಗೆ ಮಾನ್ಯತೆ ನೀಡಲಾಗಿದೆ ಎಂದು ತಿಳಿಸಲಾಗಿದೆ. ಈ ಶಿಕ್ಷಣ ಆಯೋಗವು ಒಂದರಿಂದ ನಾಲ್ಕನೇ ತರಗತಿಯವರೆಗೆ ಪಠ್ಯಕ್ರಮದ ವಿಷಯವನ್ನು ಈ ರೀತಿಯಾಗಿ ನಿರ್ಧರಿಸಿದೆ.

* ಒಂದು ಭಾಷೆ-ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆ
* ಗಣಿತ

* ಪರಿಸರ ಅಧ್ಯಯನ-೩ಮತ್ತು ೪ನೇ ತರಗತಿಯಲ್ಲಿ ವಿಜ್ಞಾನ ಮತ್ತು ಸಾಮಾಜಿಕ ಅಧ್ಯಯನ
* ಸೃಜನಾತ್ಮಕ ಚಟುವಟಿಕೆಗಳು
* ಕಾರ್ಯಾನುಭವ ಮತ್ತು ಸಮಾಜಸೇವೆ
* ಆರೋಗ್ಯ ಶಿಕ್ಷಣ

**ಉಚ್ಚ ಪ್ರಾಥಮಿಕ ಸ್ತರದ ಪಠ್ಯಕ್ರಮ-ಐದರಿಂದ ಏಳನೇ ತರಗತಿ**

೧. ಭಾಷೆ- ೧. ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆ

೨. ಹಿಂದಿ ಅಥವಾ ಇಂಗ್ಲೀಶ್

೩. ಬಯಸಿದರೆ ಇಂಗ್ಲೀಶ್ ಅಥವಾ ಪ್ರಾದೇಶಿಕ ಭಾಷೆಯನ್ನು ವೈಕಲ್ಪಿತ ಆಧಾರದ ಮೇಲೆ ಕೊಡಬೇಕು.

೨. ಗಣಿತ

೩. ವಿಜ್ಞಾನ

೪. ಕಲೆ

೫. ಕಾರ್ಯಾನುಭವ ಮತ್ತು ಸಮಾಜಸೇವೆ

೬. ಸಾಮಾಜಿಕ ಅಧ್ಯಯನ ಅಂದರೆ ಇತಿಹಾಸ, ಭೂಗೋಳ ಹಾಗೂ ಪೌರನೀತಿ

೭. ದೈಹಿಕ ಶಿಕ್ಷಣ

೮. ನೈತಿಕ ಶಿಕ್ಷಣ ಅಥವಾ ಆಧ್ಯಾತ್ಮಿಕ ಮೌಲ್ಯಗಳ ಶಿಕ್ಷಣ **(ಕೇಶವಮೂರ್ತಿ, ಶೈಕ್ಷಣಿಕ ಆಡಳಿತ ನಿರ್ವಹಣೆ ಹಾಗು ಶಾಲಾ ಸಂಘಟನೆ, ಪುಟ-೨೦೦,೨೦೧)**

ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ತ್ರಿಭಾಷಾ ಸೂತ್ರದ ವರದಿ ಜಾರಿಗೆ ಬರುವುದಕ್ಕಿಂತ ಮುಂಚಿತವಾಗಿ ಕೇವಲ ಒಂದೇ ಭಾಷೆಯನ್ನು ಕಲಿಯುವ ವ್ಯವಸ್ಥೆ ಇದ್ದಿತು. ದ್ವಿತೀಯ ಹಾಗೂ ತೃತೀಯ ಭಾಷೆಗಳನ್ನು ಕಲಿಸುತ್ತಿರಲಿಲ್ಲ. ಪ್ರಥಮ ಭಾಷೆಯಲ್ಲಿ ಮಾತೃಭಾಷೆ ಅಥವಾ ಪ್ರಾದೇಶಿಕಭಾಷೆ ಕಡ್ಡಾಯವಾಗಿದ್ದನ್ನು ಇಲ್ಲಿ ಗಮನಿಸಬಹುದು. ಆದರೆ ಈ ಪಠ್ಯಕ್ರಮ ಮಾದರಿ ಎಲ್ಲಾ ಶಾಲೆಗಳಿಗೂ ಅನ್ವಯವಾಗುತ್ತಿತ್ತು ಎನ್ನುವಲ್ಲಿ ಸ್ಪಷ್ಟತೆ ತಿಳಿದು ಬಂದಿಲ್ಲ. ಕೇವಲ ಸರ್ಕಾರಿ ಶಾಲೆಗಳಲ್ಲಿ ಈ ವ್ಯವಸ್ಥೆ ಇದ್ದಿರಬಹುದು ಎಂದೆನಿಸುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾದ ಅಂಶವೆಂದರೆ ಮೊದಲ ಭಾಷೆಯಾಗಿ, ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗೆ ಪ್ರಾಶಸ್ತ್ಯ ಕಲ್ಪಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಆದರೆ ಈ ವರದಿಯು ಸಹ ಕಡ್ಡಾಯವಾಗಿ ಜಾರಿಗೊಳ್ಳದೆ ಅರ್ಧದಲ್ಲಿಯೇ ಕುಸಿದು

ಬಿದ್ದು ಮುಂದೆ ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ಆಯೋಗ ಜಾರಿಗೊಳ್ಳಲು ಸಹಾಯಕ ವಾಯಿತು.

**೫. ರಾಷ್ಟ್ರೀಯ ಶಿಕ್ಷಣ ನೀತಿ – ೧೯೮೬**

ಸ್ವಾತಂತ್ರ ನಂತರ ಇಡೀ ದೇಶಕ್ಕೆ ಅನ್ವಯವಾಗುವ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಮೊದಲ ಬಾರಿಗೆ ೧೯೬೮ರಲ್ಲಿ ರೂಪಿಸಲಾಯಿತು. ಆದರೆ ರಾಜಕೀಯ ಅಸ್ಥಿರತೆಯಿಂದಾಗಿ ೧೯೬೪–೬೬ರ ಕೊಠಾರಿ ಶಿಕ್ಷಣ ಆಯೋಗವಾಗಲಿ, ೧೯೬೮ರ ರಾಷ್ಟ್ರೀಯ ಶಿಕ್ಷಣ ನೀತಿಯಾಗಲಿ ಜಾರಿಯಾಗಲಿಲ್ಲ. ೧೯೮೫ರಲ್ಲಿ ರಾಜೀವಗಾಂಧಿ ಪ್ರಧಾನಿಯಾದಾಗ ಶಿಕ್ಷಣ ಕುರಿತ ಸವಾಲುಗಳು ಎಂಬ ದಸ್ತಾವೇಜನ್ನು ಸಿದ್ಧಪಡಿಸಿ ದೇಶಾದ್ಯಂತ ಶಿಕ್ಷಣ ತಜ್ಞರ, ಚಿಂತಕರ, ಆಯೋಜಕರ ಸಲಹೆಗಳನ್ನು ಪಡೆದು ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಅಥವಾ ನೂತನ ಶಿಕ್ಷಣ ನೀತಿಯನ್ನು ಕೇಂದ್ರ ಸರಕಾರ ರೂಪಿಸಿತು. ಅದಕ್ಕೆ ಸಂಸತ್ತಿನ ಅನುಮೋದನೆಯು ಲಭಿಸಿತು. ಈ ರಾಷ್ಟ್ರೀಯ ನೀತಿ ಮತ್ತು ಅದರ ಅನುಷ್ಠಾನ ಕ್ರಮವನ್ನು ಪರಿಶೀಲಿಸಿ ಕೆಲವು ಶಿಫಾರಸ್ಸುಗಳನ್ನು ಮಾಡಿದವು. ಈ ಶಿಫಾರಸ್ಸುಗಳನ್ನು ಅಳವಡಿಸಿಕೊಂಡಿರುವ ಪರಿಷ್ಕೃತ ರಾಷ್ಟ್ರೀಯ ಶಿಕ್ಷಣನೀತಿ ಈಗ ದೇಶಾದ್ಯಂತ ಜಾರಿಯಲ್ಲಿದೆ. ಎಲ್ಲಾ ರಾಜ್ಯಗಳೂ ಈ ಶಿಕ್ಷಣ ನೀತಿಯನ್ನು ಅನುಸರಿಸಬೇಕು ಎನ್ನುವಂತೆ ಕಡ್ಡಾಯ ನೀತಿಯನ್ನು ಜಾರಿಗೊಳಿಸಲಾಯಿತು. **(ಮಹಾಬಲೇಶ್ವರರಾವ್, ರಾಷ್ಟ್ರೀಯ ಶಿಕ್ಷಣ ನೀತಿ, ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ. ೧೯೯೮, ಪುಟ–೩)**ಈ ನೀತಿಯು ಶಿಕ್ಷಣ ರಂಗದಲ್ಲಿ ಸಾಕಷ್ಟು ಬದಲಾವಣೆಗಳನ್ನು ಅನುಷ್ಠಾನಗೊಳಿಸುವಲ್ಲಿ ರಚಿತವಾಗಿದೆ. ಅದರಲ್ಲಿ ಇದರ ಪ್ರಮುಖ ಉದ್ದೇಶಗಳು ಈ ಕೆಳಗೆ ವಿವರಿಸಿದಂತಿವೆ.

ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಮಕ್ಕಳು ಯಾವ ವಿಷಯಗಳನ್ನು ಕಲಿಯಬೇಕು ಎನ್ನುವ ಕುರಿತು ಚಿಂತನೆ ನಡೆಸಿರುತ್ತದೆ. ಕಿರಿಯ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಒಂದು ಭಾಷೆ (ಮಾತೃಭಾಷೆ)ಯ ಕುರಿತು ಅಧ್ಯಯನ ಮಾಡಿದರೆ ಹಿರಿಯ ಪ್ರಾಥಮಿಕ ಶಾಲಾ ಹಂತದಲ್ಲಿ ತ್ರಿಭಾಷಾ ಸೂತ್ರದ ಪ್ರಕಾರ ಮೂರು ಭಾಷೆಗಳ ಅಧ್ಯಯನಕ್ಕೆ ಅವಕಾಶ ನೀಡಬೇಕೆಂದು ಹೇಳಲಾಗಿದೆ. ಪ್ರಾಥಮಿಕ ಶಾಲೆಗಳಲ್ಲಿ ಮಾತೃಭಾಷಾ ಬೋಧನೆಯನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಜಾರಿಗೆ ತರಲಾಯಿತು. ಈ ಶಿಕ್ಷಣ ನೀತಿಯನ್ನು ಆಧರಿಸಿ ಕರ್ನಾಟಕ ಸರಕಾರ ಅಂಗೀಕರಿಸಿರುವ ಹೊಸ ಪಠ್ಯಕ್ರಮದ ಪ್ರಕಾರ ೧ನೇ ತರಗತಿಯಿಂದ ೧೦ನೇ ತರಗತಿಯವರೆಗೆ ವಿದ್ಯಾರ್ಥಿಗಳು ಮಾತೃಭಾಷೆಯನ್ನು ಅಥವಾ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವರು. ತಮಿಳು, ತೆಲುಗು, ಉರ್ದು ಮುಂತಾದ ಭಾಷಾ ಅಲ್ಪಸಂಖ್ಯಾತ ವರ್ಗದ ವಿದ್ಯಾರ್ಥಿಗಳು ಪ್ರಥಮ ಭಾಷೆಯಾಗಿ ತಾಯ್ನುಡಿಯನ್ನು ಕಲಿಯಲು ಅವಕಾಶವಿದೆ. ಆದರೆ ಈ ವಿದ್ಯಾರ್ಥಿಗಳು ೫ನೇ ತರಗತಿಯಿಂದ ಕನ್ನಡವನ್ನು ದ್ವಿತೀಯ ಭಾಷೆಯ ನೆಲೆಯಲ್ಲಿ ಕಡ್ಡಾಯವಾಗಿ

ಕಲಿಯಬೇಕಾಗುತ್ತದೆ. ಮುಂದೆ ಇದೇ ವಿದ್ಯಾರ್ಥಿಗಳು ಪ್ರೌಢಶಾಲಾ ಹಂತಕ್ಕೆ ಬಂದಾಗ ಅಲ್ಲಿ ಕನ್ನಡವನ್ನು ದ್ವಿತೀಯ ಭಾಷೆ/ತೃತೀಯ ಭಾಷೆ ನೆಲೆಯಲ್ಲಿ ಕಡ್ಡಾಯವಾಗಿ ಕಲಿಯಬೇಕು. ಭಾಷಾ ಅಲ್ಪಸಂಖ್ಯಾತ ವರ್ಗದ ಮಕ್ಕಳಿಗೆ ಮೂರು ಅಥವಾ ನಾಲ್ಕನೆಯ ತರಗತಿಗಳಲ್ಲಿ ಶಾಲಾ ಅವಧಿಯ ಬಳಿಕ ಕನ್ನಡ ಕಲಿಸುವ ವ್ಯವಸ್ಥೆ ಇದೆ. ಈ ಬಗೆಯ ಕೆಲವು ಸಲಹೆಗಳನ್ನಿಟ್ಟುಕೊಂಡು ರಾಷ್ಟ್ರೀಯ ನೀತಿಯು ರಚನೆಯಾಗಿದೆ.

ಈ ನೀತಿಯು ಕ್ರಮಾನುಗತದಲ್ಲಿ ಜಾರಿಯಾಗದೇ ಹಾಗೆಯೇ ಉಳಿದುಕೊಂಡಿರುವುದು ಕೆಲವು ಸಂದರ್ಭದಲ್ಲಿ ಸ್ಪಷ್ಟವಾಗಿದೆ. ಏಕೆಂದರೆ ಭಾಷಾ ಅಲ್ಪಸಂಖ್ಯಾತ ಮಕ್ಕಳು ಆ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಪಡೆಯುವಂತಾಗಿದೆಯೇ ಹೊರತು ತ್ರಿಭಾಷಾ ಸೂತ್ರದನ್ವಯ ಅವರ ಮಾತೃಭಾಷೆಯಲ್ಲಿಲ್ಲ. ಹಾಗಾಗಿ ಈ ನೀತಿಯೂ ಸಹ ಸಮರ್ಪಕವಾಗಿ ಕಡ್ಡಾಯವಾಗಿ ಜಾರಿಗೆ ಬಂದಿಲ್ಲವೆಂದೇ ಹೇಳಬಹುದು. ಕೇಂದ್ರ ಸರ್ಕಾರದ ನೀತಿ ಪ್ರಾದೇಶಿಕವಾಗಿ ಹಲವಾರು ಸಮಸ್ಯೆ/ಭಿನ್ನತೆಗಳಿಗೆ ದಾರಿ ಮಾಡಿಕೊಟ್ಟಿದೆ. ಹಾಗಾಗಿ ನಂತರದಲ್ಲಿ ಪ್ರಾದೇಶಿಕವಾಗಿ ಭಾಷಾವಾರು ಪ್ರಾಂತ್ಯ ರಚನೆ ಆದ ಸಂದರ್ಭದಲ್ಲಿ ಪ್ರಾಥಮಿಕ ಶಿಕ್ಷಣ ಕುರಿತು ಮತ್ತೆ ರಾಜ್ಯ ಸರ್ಕಾರವೂ ಸಹ ಕೆಲವು ವರದಿಗಳನ್ನು ರಚನೆ ಮಾಡಲಾಯಿತು. ಅವುಗಳಲ್ಲಿ ಗೋಕಾಕ್ ವರದಿ, ಎಚ್ಚೆನ್ ವರದಿ, ಚಂಪಾ ವರದಿ, ಬರಗೂರು ವರದಿ ಮುಂತಾದವುಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿ ಜಾರಿಗೆ ತಂದಿತು. ಅಷ್ಟೇ ಅಲ್ಲದೆ ಕರ್ನಾಟಕ ರಾಜ್ಯ ಸರ್ಕಾರದ ಹಲವಾರು ಸರ್ಕಾರಿ ಸಂಘ,ಸಂಸ್ಥೆಗಳ ಪಾತ್ರವೂ ಇದಕ್ಕೆ ಫಲಕಾರಿಯಾಗಬಹುದೇ ಎಂಬುದನ್ನು ಇಲ್ಲಿ ನೋಡಬೇಕಾಗಿದೆ.

೧೯೩೦ರವರೆಗೆ ನೇಮಕಗೊಂಡ ಅನೇಕ ಆಯೋಗಗಳು ಪ್ರಾದೇಶಿಕ ಭಾಷೆಗಳೇ ಶಿಕ್ಷಣ ಮಾಧ್ಯಮವಾಗಬೇಕೆಂದು ಅಭಿಪ್ರಾಯ ಸೂಚಿಸುತ್ತಾ ಬಂದವು. ಆದರೆ ಇವು ಕಡ್ಡಾಯವಾಗಿ ಜಾರಿಗೆ ಬಂದಿರುವ ಕುರಿತು ಹೆಚ್ಚಿನ ವಿವರಗಳು ಮೂಡಿ ಬಂದಿಲ್ಲ. ಆದುದರಿಂದ ಅವುಗಳ ರಚನೆಯ ಹಿಂದಿನ ಉದ್ದೇಶಗಳನ್ನು ನಾವಿಲ್ಲಿ ಅರ್ಥೈಸಿಕೊಳ್ಳಬೇಕಾಗಿದೆ.

### ೪.೩ ರಾಜ್ಯ ಸರಕಾರ ಜಾರಿಗೆ ತಂದ ವರದಿಗಳು

#### ೧. ಜೆ.ಬಿ. ಮಲ್ಲಾರಾಧ್ಯ ವರದಿ – ೧೯೫೨

೧೯೫೨ ರಿಂದ ೧೯೫೫ರವರೆಗೆ ಶ್ರೀ ಜೆ.ಬಿ. ಮಲ್ಲಾರಾಧ್ಯ ಅವರು ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದರು. ಆಗಿನ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರ ಘನ ಅಧ್ಯಕ್ಷತೆಯಲ್ಲಿ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಜೆ.ಬಿ. ಮಲ್ಲಾರಾಧ್ಯ ಅವರನ್ನು ಕಾರ್ಯದರ್ಶಿಗಳಾಗಿ ನೇಮಿಸಿ ಸಮಿತಿಯನ್ನು ೧೯೫೨ರಲ್ಲಿ ರಚಿಸಲಾಯಿತು. ಶಿಕ್ಷಣ ಸಚಿವರಾದ ಎ.ಜಿ. ರಾಮಚಂದ್ರರಾಯರು ಉಪಾಧ್ಯಕ್ಷರಾಗಿದ್ದರು. ಈ ಸಮಿತಿ ಫೆಬ್ರವರಿ ೨೬, ೧೯೫೨ರಲ್ಲಿ ಒಂದು ವರದಿಯನ್ನು ಸಿದ್ಧಪಡಿಸಿತು. ಈ ಸಮಿತಿಯ ಶಿಫಾರಸ್ಸುಗಳು ಕೆಳಗಿನಂತಿವೆ.

೧. ಪ್ರಾಥಮಿಕ ಶಿಕ್ಷಣವು ಮಾತೃಭಾಷೆಯಲ್ಲಿಯೇ ನಡೆಯಬೇಕು. ಕನ್ನಡಿಗರಲ್ಲದ ವಿದ್ಯಾರ್ಥಿಗಳಿಗೆ ಮೂರನೇ ತರಗತಿಯಿಂದಲೇ ಕನ್ನಡ ಭಾಷೆಯ ಕಲಿಕೆಯನ್ನು ಆರಂಭಿಸಿ,

ಇಂಗ್ಲೀಶ್ ಭಾಷೆಯನ್ನು ಐದನೇ ತರಗತಿಯಿಂದ ಪ್ರಾರಂಭಿಸಬೇಕೆಂದು ಸ್ಪಷ್ಟಪಡಿಸಿತು. **(ಸ.ರ. ಸುದರ್ಶನ, ಶಿಕ್ಷಣ ಮಾಧ್ಯಮ ಕನ್ನಡ ಪರ ಆಂದೋಲನ ಮತ್ತು ವರದಿಗಳು ಕ.ಸಾ.ಪ, ಬೆಂಗಳೂರು,೨೦೦೬, ಪುಟ-೫೧)**

**೨. ಗೋಕಾಕ್ ವರದಿ - ೧೯೮೦**

ಈ ವರದಿಯ ರಚನೆಗೆ ಕಾರಣ ಆ ಸಂದರ್ಭದಲ್ಲಿ ಅಂದರೆ ೧೯೮೦ರ ಪೂರ್ವದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವ ವ್ಯವಸ್ಥೆ ಇದ್ದಿತು. ಆದರೆ ಪ್ರೌಢಶಾಲೆಗಳಲ್ಲಿ ಸಂಸ್ಕೃತ ಪ್ರಥಮ ಭಾಷೆಯಾಗಿತ್ತು. ಹೆಚ್ಚು ಅಂಕಗಳನ್ನು ಅಧ್ಯಾಪಕರು ನೀಡುತ್ತಿದ್ದುದರಿಂದ ಸಹಜವಾಗಿ ಮಕ್ಕಳು ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಸಂಸ್ಕೃತ ಸಾಮಾಜಿಕ ವ್ಯವಹಾರ ಭಾಷೆಯಾಗದೇ ಇರುವುದರಿಂದ ಇದೊಂದು ಅವೈಜ್ಞಾನಿಕವಾದ ಪದ್ಧತಿ ಎಂದು ತಿಳಿದು ಸಾಹಿತಿಗಳು, ಬುದ್ಧಿಜೀವಿಗಳು, ವಿಚಾರವಂತರು ಸರ್ಕಾರಕ್ಕೆ ಮನವಿ ಸಲ್ಲಿಸಿ ಸಂಸ್ಕೃತವನ್ನು ಪ್ರಥಮ ಭಾಷೆಯನ್ನಾಗಿ ಮಾಡದಂತೆ ಒತ್ತಾಯಿಸಿದರು. ಅದರಂತೆ ೫ನೇ ಜುಲೈ ೧೯೮೦ರಂದು ಒಂದು ಸಮಿತಿಯನ್ನು ಡಾ.ವಿ. ಕೃ.ಗೋಕಾಕ ಅವರ ಅಧ್ಯಕ್ಷತೆಯಲ್ಲಿ ಜಿ. ನಾರಾಯಣ, ಎಸ್.ಕೆ. ರಾಮಚಂದ್ರರಾವ್, ತ.ಸು. ಶಾಮರಾವ್, ಕೆ.ಕೃಷ್ಣಮೂರ್ತಿ, ಎಚ್.ಪಿ. ಮಲ್ಲೇದೇವರು, ಇವರುಗಳ ಸದಸ್ಯತ್ವದ ನೇತೃತ್ವದಲ್ಲಿ ಪ್ರೌಢಶಾಲೆಗಳಲ್ಲಿ ಕನ್ನಡ ಏಕೈಕ ಪ್ರಥಮ ಭಾಷೆಯಾಗಿ ೧೫೦ ಅಂಕಗಳಿಗೆ, ದ್ವಿತೀಯ ಭಾಷೆ ೧೦೦ ಅಂಕಗಳಿಗೆ, ತೃತೀಯ ಭಾಷೆ ೫೦ ಅಂಕಗಳಿಗೆ ನಿಗದಿಪಡಿಸುವಂತೆ ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಿತು. ಆದರೆ ಸರ್ಕಾರ ಅದಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸದಿದ್ದಾಗ ಕನ್ನಡದ ವ್ಯಕ್ತಿಗಳು ದೊಡ್ಡ ಧ್ವನಿಯಲ್ಲಿ ಸರ್ಕಾರದ ಮೇಲೆ ಒತ್ತಾಯ ತರಲು ೧೯೮೨ರಲ್ಲಿ ಚಳುವಳಿಯನ್ನು ಪ್ರಾರಂಭಿಸಿದರು. ಅದು ತೀವ್ರ ಸ್ವರೂಪವನ್ನು ತಾಳಿತು. ಪರಿಣಾಮವಾಗಿ ಕನ್ನಡಕ್ಕೆ ಪ್ರಾಶಸ್ತ್ಯ ಒದಗಿಸಿ ಕೊಡುವ ಹಿನ್ನೆಲೆಯಲ್ಲಿ ಗೋಕಾಕ್ ಭಾಷಾ ಸೂತ್ರವನ್ನು ಜಾರಿಗೆ ತಂದರು. ಆ ಸೂತ್ರದ ಪ್ರಕಾರ ೧೯೮೯ಜೂನ್ ೧೯ರ ಸರ್ಕಾರಿ ಆಜ್ಞೆಯನ್ನು ಅನುಸರಿಸುವಂತಾಯಿತು. ಈ ಭಾಷಾ ಸೂತ್ರದ ನಿಯಮಗಳು ಈ ರೀತಿಯಾಗಿವೆ.

* ಒಂದರಿಂದ ನಾಲ್ಕನೇ ತರಗತಿಯವರೆಗೆ (ಕನ್ನಡ) ಮಾತೃಭಾಷೆ ಮಾತ್ರ ಕಡ್ಡಾಯ. ಕನ್ನಡೇತರರಿಗೆ ಮೂರು ಹಾಗೂ ನಾಲ್ಕನೇ ತರಗತಿಯಲ್ಲಿ ಕನ್ನಡ ಕಲಿಸುವ/ ಕಲಿಯುವ ಅವಕಾಶ ಒದಗಿಸಬೇಕು.
* ಐದರಿಂದ ಏಳನೇ ತರಗತಿಯವರೆಗೆ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡ ಕಡ್ಡಾಯ. ಮೂರು ಭಾಷೆಗಳಲ್ಲಿ ಕನ್ನಡ ಒಂದು ಭಾಷೆಯಾಗಿರಬೇಕು.
* ಎಂಟರಿಂದ ಹತ್ತನೇ ತರಗತಿಯವರೆಗೆ ಮೂರು ಭಾಷೆಗಳ ಅಭ್ಯಾಸ ಹಾಗೂ ತೇರ್ಗಡೆ ಕಡ್ಡಾಯ. ಮೂರು ಭಾಷೆಗಳಲ್ಲಿ ಕನ್ನಡ ಒಂದು ಭಾಷೆಯಾಗಿರಬೇಕು.

ಇದರಂತೆ ಕನ್ನಡ ಭಾಷೆಗೆ ಸ್ಥಾನಮಾನ ಹಾಗೂ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಮಾಡುವ ಗೋಕಾಕ್ ಚಳುವಳಿಯ ತೀರ್ಪು ಜಾರಿಗೆ ಬರದೇ ತೀರ್ಪು ತೀರ್ಪಾಗಿಯೇ ಉಳಿಯುವಂತಾಗಿದೆ. ಅದು ಆರಂಭದಲ್ಲಿ ಅದರ ಪ್ರಭಾವದ (ಚಳುವಳಿಯ) ಬಿಸಿಯಿಂದಾಗಿ ಸ್ವಲ್ಪಮಟ್ಟಿಗೆ ಜಾರಿಗೊಂಡಂತಾದರೂ ನಂತರದಲ್ಲಿ ಮತ್ತೆ ಯಥಾಸ್ಥಿತಿಯಾಯಿತು. ಇದಕ್ಕೆ ಆಡಳಿತದ ಒಳಸಂಚು, ಭಿನ್ನಾಭಿಪ್ರಾಯಗಳು, ಅಧಿಕಾರಿ ವರ್ಗದವರ ಮನಸ್ಥಿತಿ ಮತ್ತು ವಿವಿಧ ರೂಪದ ಕನ್ನಡ ಭಾಷೆ ಕುರಿತ ಪರ ಹಾಗೂ ವಿರೋಧ ನೆಲೆಯ ಅಭಿಪ್ರಾಯಗಳ ಕುರಿತು ಚರ್ಚೆ, ಕಲಹಗಳಿಂದಾಗಿ ವರದಿಯು ಸ್ಥಗಿತಗೊಳ್ಳಲು ಕಾರಣವಾಯಿತೆನ್ನಬಹುದು.

**ಇದರಿಂದಾಗಿ ಗೋಕಾಕ್ ವರದಿಯಿಂದ ಕೆಲವು ಕೊರತೆಗಳು ನಿರ್ಮಾಣಗೊಂಡವು.**

* ಕನ್ನಡ ಭಾಷೆ ಏಕೈಕ ಪ್ರಥಮ ಭಾಷೆಯಾಗಿ ಉಳಿಯಲಿಲ್ಲ.
* ಇದರಿಂದ ಕನ್ನಡಕ್ಕೆ ಅಗ್ರಸ್ಥಾನ ದೊರೆಯಲಿಲ್ಲ.
* ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯ ಹಾಗೂ ಪ್ರಥಮ ಭಾಷೆಯನ್ನಾಗಿ ಮಾಡದಿರುವುದು ವರದಿಯ ಹಿನ್ನಡೆಗೆ ಕಾರಣವಾಗಿರಲೂಬಹುದು ಎಂಬುದು ವರದಿಯನ್ನು ವಿಶ್ಲೇಷಿಸಿದಾಗ ಸ್ಪಷ್ಟವಾಗುತ್ತದೆ.

**೩. ಎಚ್. ನರಸಿಂಹಯ್ಯ ವರದಿ – ೧೯೯೧**

ಗೋಕಾಕ್ ವರದಿಯು ಅಂಗೀಕಾರದ ನಂತರ ಸರಕಾರ ಅಧಿಕೃತವಾಗಿ ಇಂಗ್ಲೀಶ್ ಮಾಧ್ಯಮ ಶಾಲೆಗಳಿಗೆ ಅನುಮತಿಯನ್ನು ನಿಲ್ಲಿಸಿದರೂ ಅನಧಿಕೃತವಾಗಿ ಇಂಗ್ಲೀಶ್ ಮಾಧ್ಯಮ ಶಾಲೆಗಳು ತಲೆ ಎತ್ತಿದ್ದವು. ಇವುಗಳ ಮೇಲೆ ಸರಿಯಾದ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದ್ದರು. ಈ ಹಿನ್ನೆಲೆಯಲ್ಲಿ ಅವುಗಳ ಪರವಾಗಿ ಆಗಿನ ಮುಖ್ಯಮಂತ್ರಿ ಎಸ್. ಬಂಗಾರಪ್ಪನವರು ಸರಕಾರದ ವತಿಯಿಂದ ಒಂದು ಸಮಿತಿಯನ್ನು ನೇಮಿಸಿದರು. ಆ ಸಮಿತಿಯಲ್ಲಿ ಎಚ್. ನರಸಿಂಹಯ್ಯ ಅವರು ಸದಸ್ಯರಾಗಿದ್ದುದರಿಂದ ಸಮಿತಿಗೆ ಅವರ ಹೆಸರನ್ನು ಇಡಲಾಯಿತು. ಈ ಸಮಿತಿಯ ಮುಖ್ಯ ಶಿಫಾರಸ್ಸುಗಳು ಹೀಗಿವೆ.

* ನಾಲ್ಕನೇ ತರಗತಿಯವರೆಗೆ ಮಾತೃಭಾಷೆ ಅಥವಾ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು.
* ಇದನ್ನು ಸರಕಾರ ಅಂಗೀಕರಿಸಿತಾದರೂ ಅನುದಾನ ಸಂಹಿತೆ ೧೨ಎ ಪ್ರಕಾರ ಆಂಗ್ಲ ಮಾಧ್ಯಮ ಶಾಲೆಗಳಿಗೆ ಅನುಮತಿ ನೀಡಬಹುದು ಎಂದು ತಿಳಿಸಿತು. **(ಸ.ರ.ಸುದರ್ಶನ, ಶಿಕ್ಷಣ ಮಾಧ್ಯಮ ಕನ್ನಡ ಪರ ಆಂದೋಲನ ಮತ್ತು ವರದಿಗಳು ಕ.ಸಾ.ಪ, ಬೆಂಗಳೂರು,೨೦೦೬, ಪುಟ-೮೦)**

**ಈ ವರದಿಯ ಕೊರತೆಗಳು**

* ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮ/ಮಾತೃಭಾಷೆಯನ್ನು ಏಳನೇ ತರಗತಿಯವರೆಗೆ ವಿಸ್ತರಿಸದೇ ಇದ್ದುದು ಭಾಷಾ ನೀತಿಗೆ ಸಡಿಲತೆಯನ್ನು ಒದಗಿಸಿದಂತಾಗಿದೆ.
* ಕನ್ನಡ ಪರವಾದವರ ಪ್ರತಿರೋಧ ವ್ಯಕ್ತವಾದಾಗ ಸರಕಾರ ಪ್ರತಿಸ್ಪಂಧಿಸದಿರುವುದು.
* ಆ ಸಮಯದಲ್ಲಿ ಮುಖ್ಯಮಂತ್ರಿ ಸ್ಥಾನದಿಂದ ಬಂಗಾರಪ್ಪನವರು ಇಳಿದು ವೀರಪ್ಪ ಮೊಯ್ಲಿ ಅವರು ಅಧಿಕಾರಕ್ಕೆ ಬಂದಿದ್ದರಿಂದ ಆ ವರದಿಯನ್ನು ಅಲ್ಲಿಗೆ ಕೈಬಿಟ್ಟಿರಬಹುದೆಂದು ಅನಿಸುತ್ತದೆ.

**೪. ಚಂಪಾ ವರದಿ – ೧೯೯೮**

ಕರ್ನಾಟಕದ ಶೈಕ್ಷಣಿಕ ರಂಗದಲ್ಲಿ ಕನ್ನಡಕ್ಕೆ ಆದ್ಯತೆ ಮತ್ತು ಪ್ರೋತ್ಸಾಹ ಕಲ್ಪಿಸಲು ಕ್ರಮಗಳನ್ನು ಕೈಗೊಳ್ಳುವಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಸಭೆಯನ್ನು ಪ್ರಾರಂಭಿಸಲಾಯಿತು. ಮಾನ್ಯ ಸಚಿವರಾದ ಹೆಚ್.ಜಿ.ಗೋವಿಂದೇಗೌಡರ ನೇತೃತ್ವದಲ್ಲಿ ಸರಕಾರಕ್ಕೆ ಸಲಹೆಗಳನ್ನು ನೀಡಲು ಶಿಕ್ಷಣ ಸಲಹಾ ಸಮಿತಿಯನ್ನು ೧೯೯೮ರಲ್ಲಿ ರಚಿಸಲಾಯಿತು. ಅದರಲ್ಲಿ ಪ್ರೊ. ಚಂದ್ರಶೇಖರ ಪಾಟೀಲರು ಅಧ್ಯಕ್ಷರಾಗಿದ್ದುದರಿಂದ ಸಮಿತಿಗೆ ಅವರ ಹೆಸರನ್ನೇ ಇಡಲಾಯಿತು. ಈ ಸಮಿತಿಯ ಶಿಫಾರಸ್ಸುಗಳು ಈ ರೀತಿಯಾಗಿವೆ.

ಕರ್ನಾಟಕ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗೆ ಶಿಕ್ಷಣ ಮಾಧ್ಯಮ ಹಾಗೂ ಭಾಷಾ ಬೋಧನೆಯ ಬಗ್ಗೆ ನಿರ್ಧಿಷ್ಟವಾದ ನೀತಿ ಏನಾಗಿರಬೇಕೆಂಬುದನ್ನು ವ್ಯಾಪಕವಾಗಿ ಚರ್ಚಿಸಿ ಕೆಲವು ಶಿಫಾರಸ್ಸುಗಳನ್ನು ಸಲಹೆ ಮಾಡಿತು.

* ಪ್ರಾಥಮಿಕ ಹಂತದಿಂದ ಉನ್ನತ ಮಟ್ಟದವರೆಗೂ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯು ಶಿಕ್ಷಣ ಮಾಧ್ಯಮವಾಗಬೇಕು.
* ಇಂಗ್ಲೀಶ್ ಅಥವಾ ಅನ್ಯ ಮಾತೃಭಾಷಾ ಮಾಧ್ಯಮ ಸಂಸ್ಥೆಗಳು (ರಾಜ್ಯ/ಕೇಂದ್ರ ಪಠ್ಯಕ್ರಮ) ಸ್ವ ಇಚ್ಛೆಯಿಂದ ಕನ್ನಡ ಮಾಧ್ಯಮಕ್ಕೆ ಯಾವಾಗಲಾದರೂ ಬದಲಾವಣೆ ಬಯಸಿದರೆ ರಾಜ್ಯ ಸರ್ಕಾರ ಮುಕ್ತ ಅನುಮತಿ ನೀಡಬೇಕು.
* ರಾಜ್ಯದ ಗಡಿಭಾಗಗಳಲ್ಲಿ ಕನ್ನಡ ಮಾಧ್ಯಮ ಶಾಲೆಗಳನ್ನು ತೆರೆಯುವ ಖಾಸಗಿ ಸಂಸ್ಥೆಗಳಿಗೆ ಈಗಿನ ನಿಯಮಗಳನ್ನು ಸಡಿಲಿಸಿ ವಿಶೇಷ ಪ್ರೋತ್ಸಾಹ ನೀಡುವ ಕ್ರಮಗಳನ್ನು ಕೈಗೊಳ್ಳಬೇಕು.
* ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮವಾಗಿರಬೇಕೆಂಬ ಸರ್ಕಾರದ ನೀತಿಯನ್ನು ಪೂರ್ವ ಪ್ರಾಥಮಿಕ ಹಂತಕ್ಕೂ ಅನ್ವಯಿಸಬೇಕೆಂಬುದಾಗಿ ಹಲವು ಸಲಹೆಗಳನ್ನು ಸಮಿತಿ ನೀಡಿತು. (ಸ.ರ.ಸುದರ್ಶನ, ಶಿಕ್ಷಣ ಮಾಧ್ಯಮ ಕನ್ನಡ

ಪರ ಆಂದೋಲನ ಮತ್ತು ವರದಿಗಳು ಕ.ಸಾ.ಪ, ಬೆಂಗಳೂರು, ೨೦೦೬, ಪುಟ-೧೦೬, ೧೧೧, ೧೧೨)

**ಈ ವರದಿಯ ಕೊರತೆಗಳು**

* ಪ್ರಾಥಮಿಕ ಹಂತದಿಂದ ಉನ್ನತ ಹಂತದವರೆಗೆ ಮಾತೃಭಾಷಾ ಮಾಧ್ಯಮವಾಗಬೇಕೆಂದಿರುವುದು ಪ್ರಾದೇಶಿಕ ಹಿನ್ನೆಲೆಯಿಂದ ಹಾಗೂ ಅನ್ಯ ಭಾಷೆಯನ್ನು ಮಾತೃಭಾಷೆಯಾಗಿರುವಲ್ಲಿ ಮತ್ತು ಇಂಗ್ಲೀಶ್‌ನ ದಟ್ಟ ಪ್ರಭಾವದಿಂದಾಗಿ ಈ ನೀತಿಯು ಜಾರಿಗೊಳ್ಳುವುದು ಅಷ್ಟು ಸುಲಭ ಸಾಧ್ಯವಲ್ಲ ಎಂದೆನಿಸುತ್ತದೆ.
* ಕೇಂದ್ರ ಹಾಗೂ ರಾಜ್ಯ ಸರ್ಕಾರವು ಆಯೋಗಗಳನ್ನು ರೂಪಿಸಿದಾಗಲೂ ಅವು ಜಾರಿಗೊಳ್ಳದಿರುವಾಗ ಇನ್ನು ರಾಜ್ಯ ಹಾಗೂ ಕೇಂದ್ರ ಪಠ್ಯಕ್ರಮಗಳನ್ನು ಬದಲಾವಣೆ ಮಾಡುವಂತೆ ಖಾಸಗಿ ಸಂಸ್ಥೆಗಳಿಗೆ ರಾಜ್ಯ ಸರ್ಕಾರ ಅನುಮತಿ ನೀಡುವುದು ಉಚಿತವಲ್ಲ. ಇದುವರೆಗು ಇದರ ಜವಾಬ್ದಾರಿ ಸರ್ಕಾರವೇ ನಿರ್ವಹಿಸುತ್ತ ಬಂದಿದೆ.
* ಅಷ್ಟೇ ಅಲ್ಲದೆ ಒಂದರಿಂದ ಮೂರನೇ ತರಗತಿಯವರೆಗೆ ಕನ್ನಡವನ್ನು ಐಚ್ಛಿಕವಾಗಿ ಕನ್ನಡೇತರ ವಿದ್ಯಾರ್ಥಿಗಳು ಕಲಿಯಬಹುದು ಆದರೆ ಪರೀಕ್ಷೆ ಇರುವುದಿಲ್ಲ ಎಂದಿರುವುದು ವಿಪರ್ಯಾಸದ ಸಂಗತಿಯಾಗಿದೆ. ಹೀಗೆ ಕಲಿಕೆಯ ಸಂದರ್ಭದಲ್ಲಿ ಪರ್ಯಾಯ ಮಾರ್ಗಗಳನ್ನು ಆಯ್ಕೆಗಾಗಿ ಬಿಡುವುದು ಸರಿಯಲ್ಲವೆನಿಸುತ್ತದೆ ಜೊತೆಗೆ ಶಿಕ್ಷಣ ನೀತಿಯಲ್ಲಿ ಬದಲಾವಣೆಗೆ ದಾರಿ ಮಾಡಿ ಕೊಟ್ಟಂತಾಗುತ್ತದೆ.

**೫. ಬರಗೂರು ವರದಿ – ೨೦೦೧**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಡಾ. ಬರಗೂರು ರಾಮಚಂದ್ರಪ್ಪನವರು ಈ ಮುಂಚೆ ಶಿಕ್ಷಣ ಮಾಧ್ಯಮ ಕುರಿತಾಗಿ ಬಂದ ಎಚ್. ನರಸಿಂಹಯ್ಯ ವರದಿ, ಗೋಕಾಕ್ ವರದಿ, ಚಂಪಾ ವರದಿಗಳನ್ನು ಪರಿಶೀಲಿಸಿ ನಂತರದಲ್ಲಿ ೨೦೦೧ರಲ್ಲಿ ನೀತಿ ನಿರೂಪಣಾ ವರದಿಯನ್ನು ಸಲ್ಲಿಸಿದರು. ಅದರ ಶಿಫಾರಸ್ಸುಗಳು ಈ ರೀತಿಯಾಗಿವೆ.

* ಪ್ರಾಥಮಿಕ ಪೂರ್ವ ಶಿಕ್ಷಣದಿಂದಲೇ ಕನ್ನಡ ಮಾಧ್ಯಮ ಕಡ್ಡಾಯವಾಗಬೇಕು. ಜೊತೆಗೆ ಪ್ರಾಥಮಿಕ ಪೂರ್ವ ಶಿಕ್ಷಣದಲ್ಲಿ ಏಕರೂಪತೆ ತರಬೇಕು.
* ಒಂದರಿಂದ ಏಳನೇ ತರಗತಿಯವರೆಗೆ ಮಾತೃಭಾಷಾ ಶಿಕ್ಷಣ ಮಾಧ್ಯಮವಾಗಬೇಕು. ಆಂಗ್ಲಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳು ಕನ್ನಡ ಮಾಧ್ಯಮ ಶಾಲೆಗಳಾಗಿ ಪರಿವರ್ತನೆಯಾಗಬೇಕು.
* ಕನ್ನಡೇತರ ವಿದ್ಯಾರ್ಥಿಗಳಿಗೆ ಮೂರನೇ ತರಗತಿಯಿಂದ ಎರಡನೇ ಭಾಷೆಯಾಗಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು. ಇದಕ್ಕೆ ಉಚ್ಚನ್ಯಾಯಾಲಯ ೨೫-೧-೧೯೮೯ರಂದು ತೀರ್ಪು ಸಹ ಕೊಟ್ಟಿರುವುದನ್ನು ಕಾಣಬಹುದು.

* ಪ್ರಾಥಮಿಕ ಶಾಲೆಯಲ್ಲಿ ಮೂರನೇ ತರಗತಿಯಿಂದ ಇಂಗ್ಲೀಶನ್ನು ಮುಂದುವರೆಸಿ ಕಲಿಕೆಯನ್ನು ಮತ್ತು ಪರೀಕ್ಷೆಯನ್ನು ಕಡ್ಡಾಯಗೊಳಿಸಬೇಕು ಎಂಬುದನ್ನು ಒತ್ತಾಯ ಪೂರಕವಾಗಿ ಹೇಳಿದ್ದಾರೆ.

* ಪ್ರಾಥಮಿಕ ಹಂತದ ಮೂರನೇ ತರಗತಿಯಿಂದ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಲು ಪ್ರಾರಂಭಿಸಬೇಕು. ಕನ್ನಡ ಕಲಿಕೆಯ ವಿಧಾನವನ್ನೇ ಇಂಗ್ಲೀಶ್ ಕಲಿಕೆಗೂ ಅಳವಡಿಸಿದೆ. ಮಾತುಗಾರಿಕೆ ಸಂವಾದ, ಸಂವಹನಾ ಶೀಲತೆಗಳನ್ನು ಬೆಳೆಸುವ ದಿಕ್ಕಿನಲ್ಲಿ ಪರಿಣಿತಿ ಕೊಡುವಂತೆ ಇಂಗ್ಲೀಶ್ ಕಲಿಕಾ ವಿಧಾನವನ್ನು ಬದಲಾಯಿಸಬೇಕು.

* ಕನ್ನಡ ಭಾಷಾ ಮಾಧ್ಯಮ ಮತ್ತು ಕನ್ನಡ ಐಚ್ಛಿಕ ವಿಷಯ ಬೋಧನೆಗೆ ಅವಕಾಶ ಕಲ್ಪಿಸುವ ಶಿಕ್ಷಣ ಸಂಸ್ಥೆಗಳಿಗೆ ವಿಶೇಷವೆಂದು ಪರಿಗಣಿಸಿ ಮುಕ್ತ ಅನುಮತಿ ನೀಡಬೇಕು. ಪದವಿ ಪೂರ್ವ ಮತ್ತು ಪದವಿ ಶಿಕ್ಷಣದಲ್ಲಿ ಕನ್ನಡವನ್ನು ಉಳಿದ ವಿಷಯಗಳೊಂದಿಗೆ ಐಚ್ಛಿಕವಾಗಿ ವ್ಯಾಸಾಂಗ ಮಾಡಲು ಇಚ್ಛಿಸುವ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಷರತ್ತುಗಳನ್ನು ಅಗತ್ಯ ಪ್ರಮಾಣದಲ್ಲಿ ಸಡಿಲಿಸಿ ವಿಶೇಷ ಅವಕಾಶ ಕಲ್ಪಿಸಬೇಕು. ಸಂಪೂರ್ಣ ಕನ್ನಡ ಮಾಧ್ಯಮದ ಶಾಲೆ, ಕಾಲೇಜುಗಳಿಗಾಗಿ ವಿಶೇಷಾನುದಾನ ನೀತಿಯನ್ನು ರೂಪಿಸಬೇಕು.

* ಐದನೇ ತರಗತಿಯಿಂದ ಪ್ರಾರಂಭಿಸಿ ಕನಿಷ್ಠ ಪದವಿ ಪೂರ್ವ ತರಗತಿಯವರೆಗೆ ಕನ್ನಡ ಪಠ್ಯಪುಸ್ತಕಗಳು ಕನ್ನಡ ಸಂಸ್ಕೃತಿ ಪಠ್ಯಗಳಾಗಿ ರೂಪಾಂತರ ಹೊಂದಬೇಕು. ಸಮಕಾಲೀನ ಸಂಸ್ಕೃತಿಯ ಸಂಗತಿಗಳನ್ನು ಒಳಗೊಂಡಂತೆ ವಿಕಾಸ ಕ್ರಮದಲ್ಲಿ ಕರ್ನಾಟಕದ ಸಾಂಸ್ಕೃತಿಕಪರಂಪರೆಯ ಆಸಕ್ತಿದಾಯಕ ಪರಿಚಯವಾಗಬೇಕು. 'ಕನ್ನಡ ಭಾರತಿ' ಮುಂತಾದ ಹೆಸರುಗಳ ಬದಲು ಕನ್ನಡ ಸಂಸ್ಕೃತಿ ಪಠ್ಯ ಎಂದು ಹೆಸರಿಸಬೇಕು.

* ಸರ್ಕಾರದ ಮತ್ತು ಸರ್ಕಾರದಿಂದ ಮನ್ನಣೆ ಪಡೆದ ಸಂಸ್ಥೆಗಳ ಕಂಪ್ಯೂಟರ್ ಶಿಕ್ಷಣದಲ್ಲಿ ಕನ್ನಡವು ಬೋಧನೆ ಮತ್ತು ಬಳಕೆಯ ಭಾಷೆಯಾಗಬೇಕು. ಇಂಗ್ಲೀಶ್ ಒಂದೇ ಬೋಧನೆ ಹಾಗೂ ಬಳಕೆಯ ಭಾಷೆಯಾಗಬಾರದು.

* ಬಿ.ಇಡಿ, ಐ.ಟಿ.ಐ, ಎಲ್.ಎಲ್.ಬಿ, ಟಿ.ಸಿ.ಎಚ್ ಮುಂತಾದ ವೃತ್ತಿಪರ ವಿವಿಧ ಕೋರ್ಸ್‌ಗಳಲ್ಲಿ ಕನ್ನಡ ಕಡ್ಡಾಯ ಭಾಷೆಯಾಗಿರಬೇಕು ಎಂಬುದನ್ನು ಒತ್ತಿ ಹೇಳಿದ್ದಾರೆ.

* ಶಿಕ್ಷಣ ಕ್ರಮದ ಪ್ರಥಮ ಭಾಷೆಗಳ ಪಟ್ಟಿಯ ಪ್ರಕಾರ ವಿದ್ಯಾರ್ಥಿಯ ಪ್ರಥಮ ಭಾಷೆಯಾಗಿ ಮಾತೃಭಾಷೆಯನ್ನು ಅಥವಾ ಪ್ರಾದೇಶಿಕ ಭಾಷೆಯನ್ನು ಮಾತ್ರ ಕಲಿಯಬೇಕು. ಕರ್ನಾಟಕದವರ ಮಾತೃಭಾಷೆಗಳಲ್ಲದ ಸಂಸ್ಕೃತ, ಇಂಗ್ಲೀಶ್‌ನ್ನು ಪ್ರಥಮ ಭಾಷೆ ಮತ್ತು ಮಾಧ್ಯಮವಾಗಿ ಆಯ್ಕೆ ಮಾಡಿಕೊಳ್ಳಲು ಅವಕಾಶ ಕೊಡಬಾರದೆಂದು ತಿಳಿಸಿದ್ದಾರೆ. (ಬರಗೂರು ರಾಮಚಂದ್ರಪ್ಪ, ಶಿಕ್ಷಣ ಮತ್ತು ಮಾಧ್ಯಮ ನೀತಿ ನಿರೂಪಣಾ ವರದಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೧)

**ಈ ವರದಿಯ ಗೊಂದಲಗಳು**

* ಪ್ರಾಥಮಿಕ ಶಿಕ್ಷಣ ಪ್ರಾರಂಭವಾಗುವುದೇ ಮುಖ್ಯವಾಗಿ ಒಂದನೇ ತರಗತಿಯಿಂದ, ಕರ್ನಾಟಕದಲ್ಲಿ ಪ್ರಾಥಮಿಕ ಪೂರ್ವ ಶಿಕ್ಷಣ ಆರಂಭವಾಗಿರುವುದು ಬ್ರಿಟೀಷರಿಂದ ಅದು ಈಗ ಖಾಸಗಿ ಸಂಸ್ಥೆಗಳಿಂದ ನಡೆಯುತ್ತಿದೆ. ರಾಜ್ಯ ಸರ್ಕಾರದ ಶಿಕ್ಷಣ ಕ್ರಮದಲ್ಲಿ ಪ್ರಾಥಮಿಕ ಪೂರ್ವ ಶಿಕ್ಷಣ ಪದ್ಧತಿ ಜಾರಿಯಲ್ಲಿಲ್ಲ. ಇನ್ನು ಇದರಲ್ಲಿ ಏಕರೂಪತೆ ತರಬೇಕೆನ್ನುವ ವಿಚಾರದಲ್ಲಿ ಗೊಂದಲವಿದೆ.

೧೯೫೦ರಿಂದ ಮೂಡಿ ಬಂದ ಮೇಲಿನ ಕೆಲವು ವರದಿಗಳಲ್ಲಿ ಅವುಗಳ ರಚನೆಯ ಆಶಯ ಒಂದೇ ಆಗಿದ್ದು ಕೆಲವಾರು ಅಂಶಗಳಲ್ಲಿ ವ್ಯತ್ಯಯಗಳಿವೆ. ಮುಖ್ಯವಾಗಿ ಆ ಸಂದರ್ಭದಲ್ಲಿ ಅನ್ಯಭಾಷೆಯ ಮತ್ತು ಸಂಸ್ಕೃತಿಯ ಪ್ರಭಾವ ದಟ್ಟವಾಗಿತ್ತು. ಕನ್ನಡ ಭಾಷೆಗೆ ಸಾಂಸ್ಕೃತಿಕ, ಶೈಕ್ಷಣಿಕ, ಸ್ಥಾನಮಾನ ಲಭ್ಯವಾಗದೇ ಕುಂಠಿತಗೊಂಡಿತ್ತು. ಪ್ರಾದೇಶಿಕವಾಗಿ ಇಂಗ್ಲೀಶ್‌ನ ಮತ್ತು ಸಂಸ್ಕೃತದ ಯಜಮಾನ್ಯದಿಂದ ಕನ್ನಡವನ್ನು ಅಲ್ಲಗಳೆದು ಶಿಕ್ಷಣದಲ್ಲಿ ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಕಲಿಸುವ ವ್ಯವಸ್ಥೆಯನ್ನು ನಿರ್ಮಾಣ ಮಾಡಲಾಗಿತ್ತು. ಕನ್ನಡ ನೆಲದಲ್ಲಿಯೇ ಕನ್ನಡವನ್ನು ಕಡೆಗಣಿಸಲಾಗಿತ್ತು. ಕನ್ನಡಕ್ಕೆ ಸ್ಥಾನಮಾನ ಕಲ್ಪಿಸಿ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಮಾಡುವ ನಿಟ್ಟಿನಲ್ಲಿ ಚಳುವಳಿಗಳು ಪ್ರಾರಂಭವಾದವು. ಇದರಿಂದಾಗಿಯೇ ಕಾಲಾಂತರದಲ್ಲಿ ನೇಮಕಗೊಂಡ ಕೆಲವು ಆಯೋಗಗಳು ಸರಕಾರದ ನೆರವಿನೊಂದಿಗೆ ಅನುಮತಿ ಪಡೆದು ಸಮಿತಿಯನ್ನು ರಚಿಸಿ ವರದಿಗಳನ್ನು ಜಾರಿಗೆ ತರಲಾಗಿದೆ. ಆದರೆ ಈ ವರದಿಗಳ ನಿಯಮಗಳು ಸರ್ವಾನುಕಾಲಕ್ಕೆ ಜಾರಿಗೊಳ್ಳದೆ ವಿಫಲಗೊಂಡಿದೆ. ಅದಕ್ಕೆ ಸರಕಾರದ ಅಸಹಕಾರ, ನಿರ್ಲಕ್ಷ್ಯ ಧೋರಣೆಯಿಂದಾಗಿ ವಿಳಂಬ ವಾಗಿವೆ ಎಂದು ಹೇಳಬಹುದು. ಸರಕಾರ ಸಮಿತಿಗಳ, ಶಿಕ್ಷಣ ತಜ್ಞರ ಸಲಹೆಯೊಂದಿಗೆ ಕಠಿಣ ನಿರ್ಧಾರ ಕ್ರಮಗಳನ್ನು ಜಾರಿಗೊಳಿಸಿದಾಗ ಮಾತ್ರ ನೀತಿಗಳು ಯಶಸ್ವಿಯಾಗಲು ಸಾಧ್ಯವಿದೆ. ರಾಜ್ಯ ಸರ್ಕಾರದಲ್ಲಿ ಆ ಪ್ರಾದೇಶಿಕ ವಲಯದ ಭಾಷೆಯ ಒಳಿತಿಗಾಗಿ, ಅಭಿವೃದ್ಧಿಗಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಸಂಪೂರ್ಣ ಅಧಿಕಾರ ಇದ್ದಾಗ್ಯೂ ಸಹ ಶಿಕ್ಷಣ ಮಾಧ್ಯಮದ ಭಾಷೆ ಕುರಿತು ವರದಿಗಳು ಜಾರಿಗೊಳ್ಳದೇ ಮತ್ತಷ್ಟು ಸಮಸ್ಯೆಗಳು ಎದುರಾಗುತ್ತಿವೆ. ಅಷ್ಟೇ ಅಲ್ಲದೇ ಸರ್ಕಾರದ ನಿಯಮಗಳು ಕಡ್ಡಾಯವಾಗಿ ಸರ್ವಕಾಲಕ್ಕೂ ಜಾರಿಯಾಗುವಂತೆ ಗಮನಹರಿಸದೇ ಇರುವುದು ನಿಜಕ್ಕೂ ಖೇದದ ಸಂಗತಿಯಾಗಿದೆ. ಏಕೆಂದರೆ ರಾಜ್ಯ ಸರಕಾರದಲ್ಲಿ ಸರ್ಕಾರಿ ಹಾಗೂ ಸರ್ಕಾರೇತರ ಶಿಕ್ಷಣ ವ್ಯವಸ್ಥೆಯಲ್ಲಿ ಏಕರೂಪದ ಶಿಕ್ಷಣ ಕ್ರಮ ಜಾರಿಗೆ ತರಬೇಕೆನ್ನುವ ಸರ್ಕಾರದ ಆದೇಶ ಬಳಕೆಗೊಳ್ಳದಿರುವುದು ರಾಜ್ಯದ ಶಿಕ್ಷಣ ವ್ಯವಸ್ಥೆ ಹಿಂದುಳಿಯುವಿಕೆಗೆ ಕಾರಣವಾಗಿದೆ. ಸರ್ವೋಚ್ಚ ನ್ಯಾಯಾಲಯದ ತೀರ್ಪು ಹಾಗೂ ಸರ್ಕಾರದ ಆದೇಶಾನುಸಾರವಾಗಿ ಈ ಕೆಳಕಂಡ ಅಂಶಗಳನ್ನು ಶಿಫಾರಸ್ಸು ಮಾಡಲಾಗಿದೆ.

* ಒಂದನೇ ತರಗತಿಯಿಂದ ನಾಲ್ಕನೇ ತರಗತಿಯವರೆಗೆ ಮಾತೃ ಭಾಷೆಯಲ್ಲಿ ಶಿಕ್ಷಣ.
* ಕನ್ನಡೇತರರಿಗೆ ಮೂರನೇ ತರಗತಿಯಿಂದ ಕನ್ನಡವನ್ನು ಐಚ್ಛಿಕಗೊಳಿಸುವುದು.
* ಐದನೇ ತರಗತಿಯಿಂದ ಮೂರನೇ ಭಾಷೆಯನ್ನು ಜಾರಿಗೆ ತರಲಾಗುವುದು.

ಒಂದು ಮತ್ತು ಎರಡನೇ ಭಾಷೆಯನ್ನು ಬಿಟ್ಟು ಬೇರೆ ಭಾಷೆಯನ್ನು ಆಯ್ಕೆ ಮಾಡಿಕೊಳ್ಳಬಹುದು ಎನ್ನುವ ನಿಯಮ ಸರ್ಕಾರೇತರ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಜಾರಿಯಲ್ಲಿಲ್ಲ. ರಾಜ್ಯದ ಖಾಸಗಿ ಶಿಕ್ಷಣ ಸಂಸ್ಥೆಯವರೇ ರಾಜ್ಯದ ಉಚ್ಚನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿ ೧೯೮೯ರಿಂದ ಹಿಂದೆ ಪ್ರಾರಂಭವಾದ ಶಾಲೆಗಳಲ್ಲಿ ಆಂಗ್ಲ ಮಾಧ್ಯಮವನ್ನೇ ಉಳಿಸಿಕೊಳ್ಳುವಂತೆ ತಡೆಯಾಜ್ಞೆ ಸೂಚಿಸಿದೆ.

ಮಾತೃಭಾಷಾ ಮಾಧ್ಯಮದ ಪರವಾದ ಸುಪ್ರೀಂ ಕೋರ್ಟ್ ತೀರ್ಪಿನ ಹಿನ್ನೆಲೆಯಲ್ಲಿ ಈ ತಡೆಯಾಜ್ಞೆಯನ್ನು ತೆರವುಗೊಳಿಸಿ ಕನ್ನಡ/ಮಾತೃಭಾಷಾ ಮಾಧ್ಯಮವನ್ನೇ ಜಾರಿಗೊಳಿಸಬೇಕು ಎಂದು ಭಾಷಾ ನೀತಿಯನ್ನು ಎತ್ತಿ ಹಿಡಿಯುವಲ್ಲಿ ಶಿಕ್ಷಣ ತಜ್ಞರು, ಸಾಹಿತಿಗಳು, ಚಿಂತಕರು ಮತ್ತು ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಪ್ರಮುಖವಾಗಿವೆ. ಈ ಭಾಷಾ ನೀತಿ ಜಾರಿಗೆ ತರುವಲ್ಲಿ ಸರ್ಕಾರಿ ಸಂಸ್ಥೆಗಳ ಪಾಲನ್ನು ಗಮನಿಸಬೇಕಾದುದು ಅಗತ್ಯವಾಗಿದೆ.

**೧. ಕನ್ನಡ ಕಾವಲು ಸಮಿತಿ**

೧೯೬೩ರಲ್ಲಿ ಕರ್ನಾಟಕ ಭಾಷಾ ಅಧಿನಿಯಮ ಜಾರಿಗೆ ಬಂದ ಸಮಯದಲ್ಲಿ ಕರ್ನಾಟಕದ ಆಡಳಿತ ಭಾಷಾ ಮತ್ತು ಗಡಿ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಶ್ರೀ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ೧೯೮೩ರಲ್ಲಿ ಡಾ. ಪಾಟೀಲ ಪುಟ್ಟಪ್ಪನವರ ಅಧ್ಯಕ್ಷತೆಯಲ್ಲಿ ಕನ್ನಡ ಕಾವಲು ಸಮಿತಿ ಮತ್ತು ಗಡಿ ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಡಾ. ಪಾಟೀಲ ಪುಟ್ಟಪ್ಪ ಕನ್ನಡ ಕಾವಲು ಸಮಿತಿ ಕುರಿತು ಸರ್ಕಾರಕ್ಕೆ ಬರೆದ ಪತ್ರಗಳನ್ನು ಆರು ಸಂಪುಟಗಳಲ್ಲಿ ಹೊರತರಲಾಗಿದೆ. ಪುಟ್ಟಪ್ಪನವರು ಕನ್ನಡ ಕಾವಲು ಸಮಿತಿಯ ಉದ್ದೇಶವನ್ನು ಕುರಿತಂತೆ ಆಡಳಿತ, ಶಿಕ್ಷಣ, ಗಡಿಪ್ರದೇಶ ಸಂಕೀರ್ಣ ವಿಷಯಗಳ ಕುರಿತಾಗಿ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಕನ್ನಡ ಭಾಷೆ ಮತ್ತು ಮಾಧ್ಯಮ ಕುರಿತಂತೆ ಅವರ ವಿಚಾರಗಳು ಈ ಕೆಳಗಿನಂತಿವೆ.

* ಪ್ರಾಥಮಿಕ ಶಾಲೆ, ತಾಂತ್ರಿಕ ಕುರಿತಂತೆ ಮತ್ತು ಆಯುರ್ವೇದದಂಥ ಶಿಕ್ಷಣದಲ್ಲೂ ಕನ್ನಡ ಭಾಷೆ ಕಡ್ಡಾಯ ಆಗುವಂತೆ ಒತ್ತಾಯಿಸಿದರು.
* ಕರ್ನಾಟಕದ ಎಲ್ಲಾ ವಿಶ್ವವಿದ್ಯಾಲಯಗಳು ಕನ್ನಡದಲ್ಲೇ ವ್ಯವಹರಿಸಬೇಕು. ಅಲ್ಲದೆ ಕರ್ನಾಟಕದಲ್ಲಿ ನೇಮಕಾತಿ ಮಾಡುವಾಗ ಕನ್ನಡ ಭಾಷಾ ಜ್ಞಾನವುಳ್ಳ ಅಭ್ಯಾರ್ಥಿಗಳಿಗೆ ಆಧ್ಯತೆ ನೀಡಬೇಕು.

* ಇಂಗ್ಲೀಶ್ ಮಾಧ್ಯಮ ಶಾಲೆಗಳನ್ನು ಹೆಚ್ಚಿಸದೇ ಇರುವ ಕನ್ನಡ ಶಾಲೆಗಳನ್ನು ಸರಿಪಡಿಸುವುದು.

* ಒಂದು ಭಾಷೆಯೆಂದು ಇಂಗ್ಲೀಶನ್ನು ನಾವು ನಮ್ಮ ವಿದ್ಯಾರ್ಥಿಗಳಿಗೆ ಚೆನ್ನಾಗಿ ಕಲಿಸಬೇಕು. ಆದರೆ ಅದನ್ನು ಶಿಕ್ಷಣ ಮಾಧ್ಯಮವೆಂದು ಇರಿಸಿಕೊಳ್ಳುವುದು ಸರಿಯಲ್ಲ. ಜಗತ್ತಿನಾದ್ಯಂತವೂ ಇರುವ ಎಲ್ಲ ಶಿಕ್ಷಣ ಮಾಧ್ಯಮವೆಂದು ಇರಿಸಿಕೊಳ್ಳುವುದು ಸರಿಯಲ್ಲ. ಜಗತ್ತಿನಾದ್ಯಂತವಿರುವ ಎಲ್ಲ ಶಿಕ್ಷಣ ತಜ್ಞರು ಮಕ್ಕಳಿಗೆ ಮಾತೃಭಾಷೆಯ ಮೂಲಕ ಕೊಡುವ ಶಿಕ್ಷಣವೇ ಉತ್ತಮವಾದುದೆಂದು ಅಭಿಪ್ರಾಯಪಟ್ಟಿದ್ದಾರೆ.

* ನಮ್ಮ ವಿದ್ಯಾರ್ಥಿಗಳು ಪಾಶ್ಚಾತ್ಯ ತಂತ್ರಜ್ಞಾನದಿಂದ ವಂಚಿತರಾಗಬೇಕೆಂದು ಯಾರು ಹೇಳುವುದಿಲ್ಲ. ಆ ತಂತ್ರಜ್ಞಾನ ಕುರಿತು ಅವರಿಗೆ ಕನ್ನಡದಲ್ಲಿ ಹೇಳಿದರೆ ಹೆಚ್ಚು ಮನವರಿಕೆಯಾಗುತ್ತದೆ. ತಿಳಿಯದ ಭಾಷೆಯಲ್ಲಿ ಹೇಳುವುದಕ್ಕಿಂತಲೂ ಅವರಿಗೆ ಅವರ ಮಾತೃಭಾಷೆಯಲ್ಲಿ ತಿಳಿಯುವ ಭಾಷೆಯಲ್ಲಿ ಹೇಳಿದರೆ ಹೆಚ್ಚು ವೇದ್ಯವಾಗುತ್ತದೆ ಎಂದು ಹೇಳಿದ್ದಾರೆ. ಅವರಿಗೆ ಈ ಜ್ಞಾನವನ್ನು ಒದಗಿಸಿ ಕೊಡುವಾಗ ಇಂಗ್ಲೀಶನಲ್ಲಿರುವ ತಾಂತ್ರಿಕ ಪದಗಳನ್ನೇ ಬಳಸುವುದು ಎಂದು ಕೆಲವು ಅಂಶಗಳನ್ನು ಕನ್ನಡ ಕಾವಲು ಕೃತಿಯಿಂದ ದಾಖಲಿಸಲಾಗಿದೆ ಎಂದು ಡಾ. ಮಹಾದೇವಯ್ಯನವರು ತಿಳಿಸಿದ್ದಾರೆ. **(ಡಾ. ಪಿ. ಮಹಾದೇವಯ್ಯ, ಕರ್ನಾಟಕದಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ, ದೂರಶಿಕ್ಷಣ ಕೇಂದ್ರ, ಕನ್ನಡ ವಿ.ವಿ, ಹಂಪಿ ಪುಟ-೨೬, ೨೦೦೨)** ಒದಗಿಸಿ ಕೊಡುವಾಗ ಇಂಗ್ಲೀಶನಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ

ಪುಟ್ಟಪ್ಪನವರ ಈ ವಿಚಾರಗಳ ಮೂಲಕ ಪರೋಕ್ಷವಾಗಿ ಸರಕಾರ ಭಾಷಾ ನೀತಿ ರಚನೆಗೆ ಕಾವಲು ಸಮಿತಿಯ ತೀರ್ಮಾನಗಳು ಸಹಾಯಕವಾಗಿವೆ. ಆದರೆ ಕೆಲವು ಅಂಶಗಳಲ್ಲಿ ತೊಡಕಾಗಿದೆ ಎಂದು ಹೇಳಬಹುದು. ಇತ್ತೀಚಿನ ಸಂದರ್ಭದಲ್ಲಿ ಇಂಗ್ಲೀಷ್‌ನ ಪ್ರಭಾವದಿಂದ ಕನ್ನಡ ಶಾಲೆಗಳಿಗಿಂತ ಅಧಿಕ ಸಂಖ್ಯೆಯಲ್ಲಿ ಇಂಗ್ಲೀಶ್ ಶಾಲೆಗಳೇ ಬೆಳೆದಿವೆ. ಅಂತ ಸಂದರ್ಭದಲ್ಲಿ ಕನ್ನಡ ಶಾಲೆಗಳನ್ನು ಸರಿಪಡಿಸುವ ವಿಷಯದಲ್ಲಿ ಇಂದಿಗೂ ತೃಪ್ತಿಕರವಾಗಿಲ್ಲ. **ಪುಟ್ಟಪ್ಪನವರ** ಈ ವಿಚಾರಗಳು ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ಸರಕಾರಿ ಶಾಲೆಗಳಲ್ಲಿ ಚಾಲ್ತಿಯಲ್ಲಿವೆ.

### ೨. ಕನ್ನಡ ಅಭಿವೃದ್ಧಿ ಪ್ರಾಧಿಕಾರ

೧೯೯೨ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕರ್ನಾಟಕದಲ್ಲಿ ಜಾರಿಗೆ ಬಂದಿತು. ಪ್ರಾರಂಭದಲ್ಲಿ ಡಾ. ಚಂದ್ರಶೇಖರ ಪಾಟೀಲ ಅವರು ಪ್ರಥಮ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು. ನಂತರ ಡಾ. ಬರಗೂರು ರಾಮಚಂದ್ರಪ್ಪ ಅವರು ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಇವರಿಬ್ಬರು ಆ ಸಂದರ್ಭದಲ್ಲಿ ವರದಿಗಳನ್ನು ಜಾರಿಗೆ ತಂದರು. ಆ ವರದಿಗಳೇ ಸರ್ಕಾರದ

ನೀತಿಯಲ್ಲಿ ಪ್ರೋತ್ಸಾಹಕವಾಗಿ ಪ್ರಸ್ತುತದಲ್ಲಿ ಸ್ವಲ್ಪ ಮಟ್ಟಿಗೆ ಜಾರಿಯಲ್ಲಿವೆ. ಈ ಎರಡು ವರದಿಗಳು ಅಭಿವೃದ್ಧಿ ಪ್ರಾಧಿಕಾರ ಎಂದರೆ ವರದಿಗಳು ಎನ್ನುವ ರೀತಿಯಲ್ಲಿ ಜಾರಿಯಲ್ಲಿವೆ. ಚಂಪಾ ವರದಿ ೧೯೯೪, ಬರಗೂರು ವರದಿ ೨೦೦೧, ಪ್ರಾಧಿಕಾರದ ಉತ್ತಮ ಕೊಡುಗೆಗಳಾಗಿವೆ ಎಂದು (ನೀತಿ ನಿರೂಪಣಾ ವರದಿ)ಹೇಳಬಹುದು. ಪ್ರಾಥಮಿಕ ಶಿಕ್ಷಣದ ಭಾಷೆಯನ್ನು ಕುರಿತ ಕೆಲವು ಮುಖ್ಯವಾದ ಅಂಶಗಳನ್ನು ಈ ವರದಿಗಳು ವ್ಯಕ್ತಪಡಿಸಿದ್ದು ಪ್ರಸ್ತುತದಲ್ಲಿ ಜಾರಿಯಲ್ಲಿರುವುದು ಕಂಡು ಬರುತ್ತದೆ. ಪ್ರಾಥಮಿಕ ಹಂತದ ಶಿಕ್ಷಣದಿಂದ ಉನ್ನತದವರೆಗೆ ಕೆಲವಾರು ಅಂಶಗಳಲ್ಲಿ ಬದಲಾವಣೆಗಳನ್ನು ಸಹ ಈ ವರದಿಗಳಲ್ಲಿ ಗುರುತಿಸಿದ್ದಾರೆ. ಅವುಗಳ ಬಗ್ಗೆ ಸರಕಾರ ಗಮನ ಹರಿಸಬೇಕಾಗಿದೆ ಈ ಎರಡು ವರದಿಗಳ ಸಾರಾಂಶವನ್ನು ಮೇಲೆ ಚರ್ಚಿಸಲಾಗಿರುವುದರಿಂದ ಇಲ್ಲಿ ಪುನಃ ವಿವರಿಸುವ ಕೆಲಸ ಅನಗತ್ಯವಾಗಿದೆ. **(ಡಾ. ಪಿ. ಮಹಾದೇವಯ್ಯ, ಕರ್ನಾಟಕದಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ, ದೂರಶಿಕ್ಷಣ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೭, ೨೦೦೨)**

**೩. ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ನಾಡುನುಡಿ ಅಭಿವೃದ್ಧಿಗಾಗಿ ಸೇವೆ ಸಲ್ಲಿಸುತ್ತಾ ಬಂದಿದೆ. ಕನ್ನಡ ನಾಡುನುಡಿ ಅಭಿವೃದ್ಧಿಯೂ ಇದರ ಉದ್ದೇಶವಾಗಿದೆ. ಕರ್ನಾಟಕದ ಗಡಿ ಸಮಸ್ಯೆ ಕುರಿತು ಮುಖ್ಯವಾಗಿ ಕಾರ್ಯಗಳನ್ನು ಹಮ್ಮಿಕೊಂಡಿತು. ಕನ್ನಡ ಭಾಷೆ ಪೂರಕ ಪುಸ್ತಕಗಳ ಬಗ್ಗೆ ಆಡಳಿತಭಾಷೆ ಕುರಿತು ಅಭಿಪ್ರಾಯಗಳನ್ನು, ಯೋಜನೆಗಳನ್ನು ರೂಪಿಸಿದೆ. ಆದರೆ ಪ್ರಾಥಮಿಕ ಶಿಕ್ಷಣದ ಭಾಷಾ ನೀತಿ ಕುರಿತು ಕಾರ್ಯ ಯೋಜನೆಗಳನ್ನು ಕೈಗೊಳ್ಳದಿರುವುದು ಈ ಸಂಸ್ಥೆಯ ನಿರ್ಲಕ್ಷ್ಯತನವನ್ನು ಎತ್ತಿಹಿಡಿದಿದೆ. ಶಿಕ್ಷಣದ ಭಾಷಾ ನೀತಿಯನ್ನು ಕುರಿತಾಗಿ ಈ ಸಂಸ್ಥೆಯ ಕಾರ್ಯಗಳು ಅದರ ವಿವರಗಳು ಎಲ್ಲಿ ಕಂಡು ಬಂದಿಲ್ಲ. ಕನ್ನಡ ನಾಡಿನ ಆಡಳಿತ, ಶಿಕ್ಷಣ, ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿಗೆ ಇದರ ಸಹಕಾರದ ಜವಾಬ್ದಾರಿ ಹೆಚ್ಚು ಅಗತ್ಯವಾಗಿದೆ. **(ಡಾ. ಪಿ.ಮಹಾದೇವಯ್ಯ, ಕರ್ನಾಟಕದಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ, ದೂರಶಿಕ್ಷಣ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೧, ೨೦೦೨)**

**೪. ಕನ್ನಡ ಸಾಹಿತ್ಯ ಪರಿಷತ್ತು**

ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯೆಂದು ಗೌರವಿಸಲ್ಪಡುವ ಕನ್ನಡ ಸಾಹಿತ್ಯ ಪರಿಷತ್ತು ೧೯೧೫ರಲ್ಲಿ ಸ್ಥಾಪಿತಗೊಂಡಿತು. ಈ ಪರಿಷತ್ತಿನ ಸ್ಥಾಪಕರಲ್ಲಿ ಪ್ರಮುಖರಾಗಿ ಎಚ್.ವಿ. ನಂಜುಂಡಯ್ಯನವರು ಅಧ್ಯಕ್ಷರಾಗಿದ್ದರು. ಅನಂತರ ಪ್ರತಿವರ್ಷವೂ ಕನ್ನಡ ನಾಡು ನುಡಿಗೆ ಅವಿಸ್ಮರಣೀಯ ಸೇವೆ ಮಾಡಿರುವ ಪ್ರಮುಖರನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಚುನಾಯಿಸುವ ಜವಾಬ್ದಾರಿಯ ಹೊಣೆ ಹೊತ್ತುಕೊಂಡು ಬಂದಿದೆ. ಈ ನಿಟ್ಟಿನಲ್ಲಿ ಅಧ್ಯಕ್ಷರ ಮಾತುಗಳು, ಅಭಿಪ್ರಾಯಗಳೇ ಸಾಹಿತ್ಯ ಪರಿಷತ್ತಿನ ಒಂದು ಸಾಧನೆ ಎಂದು ಪರಿಗಣಿಸಬಹುದು.

ಪ್ರಾರಂಭದಿಂದ ಇದುವರೆಗು ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರುಗಳು ಹೇಳಿದ ಪ್ರಾಥಮಿಕ ಶಿಕ್ಷಣದ ಭಾಷಾ ನೀತಿ, ಮಾಧ್ಯಮ ಕುರಿತಾದ ನಿರ್ಣಯಗಳೇ ಸರ್ಕಾರದ ಆಯೋಗ ರಚನೆಗಳಿಗೆ ಸಹಕಾರಿಯಾಗಿವೆ.

ಶ್ರೀ ಜಿ. ನಾರಾಯಣರವರು ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಕನ್ನಡ ಸಮಸ್ಯೆಯನ್ನು ದೆಹಲಿಯವರೆಗೂ ಮುಟ್ಟಿಸಿದರು. ಹಂಪನಾ ಅವರು ಅಧ್ಯಕ್ಷರಾಗಿದ್ದಾಗ 'ಗೋಕಾಕ್' ಚಳುವಳಿ ನಡೆಯಿತು. ಕನ್ನಡ ಚಳುವಳಿಗೆ ವಾಟಾಳ್ ನಾಗರಾಜ ಕನ್ನಡ ಸಂಘ, ಡಾ. ರಾಜಕುಮಾರ ಕನ್ನಡ ಅಭಿಯಾನಿಗಳಂತಹ ಇತ್ಯಾದಿ ಸಂಘಟನೆಗಳು, ಸಂಘಗಳು ರಾಜ್ಯ ಸರ್ಕಾರ ನೌಕರರಿಗೆ ಕನ್ನಡ ಭಾಷೆಯನ್ನು ಕಡ್ಡಾಯಗೊಳಿಸುವಂತೆ ಚಳುವಳಿ ನಡೆಸುತ್ತಾ ಬಂದಿವೆ.

**೫. ಭಾಷಾಂತರ ಇಲಾಖೆ**

ಸಾಹಿತ್ಯ ಮತ್ತು ಸಂಸ್ಕೃತಿ ಎಂಬ ಸಂಸ್ಥೆಯ ಒಂದು ಭಾಗವಾಗಿ ಭಾಷಾಂತರ ಇಲಾಖೆ ಆರಂಭದಲ್ಲಿ ಕೆಲಸ ಮಾಡಿದೆ. ಏಕೀಕರಣಕ್ಕೂ ಮೊದಲು ಶ್ರೀ ಬೆನಗಲ್ ರಾಮರಾಯರು ಈ ಸಂಸ್ಥೆಯ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಿದ್ದರು. ೧೯೫೬ರಲ್ಲಿ ಸಿ.ಕೆ.ವೆಂಕಟಾಚಾರ್ಯರು ಸರ್ಕಾರಿ ಭಾಷಾಂತರಕಾರರಾಗಿ ನೇಮಕಗೊಂಡು ಕೆಲಸ ನಿರ್ವಹಿಸಿದ್ದರು. ೧೯೫೭ರಲ್ಲಿ ಸಿ.ಆರ್ ಅನಂತರಾವ್ ಅವರು ಚೀಫ್ ಟ್ರಾನ್ಸಲೇಟರ್ ಆಫ್ ಗವರ್ನಮೆಂಟ್ ಆಫ್ ಮೈಸೂರು ಹೆಸರಿನಲ್ಲಿ ಕೆಲಸ ಮಾಡಿದ್ದಾರೆ. ೧೯೭೨ರಲ್ಲಿ ಕೇಶಭಟ್ಟರು ಈ ಸಂಸ್ಥೆಯ ಹೆಸರನ್ನು **'ಡೈರೆಕ್ಟರ್ ಆಫ್ ಲ್ಯಾಂಗ್ವೇಜ್ ಆ್ಯಂಡ್ ಡೆವಲಪಮೆಂಟ್ ಆಫ್ ಕನ್ನಡ'** ಎಂದು ಬದಲಾವಣೆ ತಂದರು.

ಭಾಷಾಂತರ ಇಲಾಖೆಯ ಮುಖ್ಯ ಉದ್ದೇಶವೆಂದರೆ ಕರ್ನಾಟಕ ಸರ್ಕಾರದಲ್ಲಿ ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿಗೆ ತರುವಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುವುದು. ಬೇರೆ ಬೇರೆ ಭಾಷೆಗಳ ಪತ್ರಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಆಡಳಿತವನ್ನು ಸುಲಭ ಮಾಡುವುದು. ಅದೇ ರೀತಿಯಾಗಿ ಕನ್ನಡದ ಪತ್ರಗಳನ್ನು ಬೇರೆ ಭಾಷೆಗಳಿಗೆ ಭಾಷಾಂತರಿಸುವ ಕಾರ್ಯವನ್ನು ಕೈಗೊಂಡಿದೆ. ಒಟ್ಟಾರೆ ಕರ್ನಾಟಕದ ಆಡಳಿತ ಭಾಷೆಯಾಗಿ ಕನ್ನಡವನ್ನು ಜಾರಿಗೆ ತರುವಲ್ಲಿ ಈ ಸಂಸ್ಥೆ ಸಕ್ರಿಯವಾಗಿ ಕೆಲಸ ನಿರ್ವಹಿಸುತ್ತಿದೆ.

ಹೀಗೆ ಕನ್ನಡಪರ ಚಳುವಳಿಗೆ ಹಲವು ಸಂಸ್ಥೆಗಳು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕನ್ನಡ ಭಾಷಾ ಭಿವೃದ್ಧಿಗಾಗಿ ಸೇವೆ ಸಲ್ಲಿಸಿವೆ. ಈ ನಿಟ್ಟಿನಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಣದ ಭಾಷಾನೀತಿ, ಮಾಧ್ಯಮ ಕುರಿತಾದ ವಿವಿಧ ಸರ್ಕಾರಿ ಸಂಘ ಸಂಸ್ಥೆಗಳ ಕಾರ್ಯಯೋಜನೆಗಳು, ಅವುಗಳ ರಚನೆಗಿದ್ದ ಒತ್ತಡಗಳು ಮತ್ತು ಅವು ಜಾರಿಯಾಗುವಲ್ಲಿಯ ಅಡೆತಡೆಗಳಿಗೆ ಮತ್ತು ಗೊಂದಲಗಳಿಗೆ ಕಾರಣಗಳೇನು ಎಂಬುದನ್ನು ಕುರಿತು ಇಲ್ಲಿ ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. **(ಡಾ. ಪಿ. ಮಹಾದೇವಯ್ಯ, ಕರ್ನಾಟಕದಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ, ದೂರಶಿಕ್ಷಣ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ-೩೨, ೨೦೦೨)**

• • •

## ಅಧ್ಯಾಯ : ಐದು

# ಕರ್ನಾಟಕ ಏಕೀಕರಣದ ನಂತರದಿಂದ ಇಂದಿನವರೆಗೆ ಬೆಳೆದು ಬಂದ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳ ಸ್ವರೂಪ

ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿ ಕನ್ನಡನಾಡು ಹರಿದು ಹಂಚಿ ಹೋಗಿತ್ತು. ಈ ಹಂಚಿಕೆಯೇ ಕೊಡಗು, ಹೈದರಾಬಾದ್, ಮೈಸೂರು ಸಂಸ್ಥಾನ, ಮದ್ರಾಸ್, ಮುಂಬೈ ಪ್ರಾಂತ್ಯಗಳು. ಈ ಪ್ರಾಂತ್ಯಗಳನುಸಾರ ಪ್ರಾಥಮಿಕ ಪಠ್ಯಗಳು ಬೇರೆ ಬೇರೆ ರೀತಿಯಲ್ಲಿ ರಚನೆಯಾಗಿರುವುದು ಕಂಡುಬರುತ್ತದೆ. ಈ ವ್ಯವಸ್ಥೆಯು ಭಾರತ ಸ್ವಾತಂತ್ರ್ಯ ಪಡೆಯುವವರಿಗೂ ಈ ಪ್ರಕ್ರಿಯೆ ಮುಂದುವರಿದು ಪಠ್ಯರಚನೆಗಳು ಆಗಿರುವುದನ್ನು ಕಾಣುತ್ತೇವೆ. ಆದರೆ ಸ್ವಾತಂತ್ರದ ನಂತರದಲ್ಲಿ ಭಾಷೆಯ ದೃಷ್ಟಿಯಿಂದ ತಮ್ಮದೇ ಆದ ವ್ಯಾಪ್ತಿಯನ್ನು ಗುರುತಿಸಿಕೊಂಡು ಒಗ್ಗೂಡಲು ಮುಂದಾದರು. ಈ ಆಶಯದ ಅಡಿಯಲ್ಲಿ ೧೯೫೬ರಲ್ಲಿ ಕರ್ನಾಟಕ ಏಕೀಕರಣವಾಯಿತು. ಅಂದಿನಿಂದ ಮೈಸೂರು ರಾಜ್ಯ ಎಂದು ಹೊಸ ಹೆಸರು ನಾಮಕರಣವಾಯಿತು. ೧೯೫೦ರಲ್ಲಿ ಜಾರಿಗೆ ಬಂದಿದ್ದ ಭಾರತ ಸಂವಿಧಾನ ಪ್ರಜಾಪ್ರಭುತ್ವ ಮಾದರಿಯ ಆಡಳಿತಕ್ಕೆ ನಾಂದಿ ಹಾಡಿತ್ತು. ಇದರಿಂದ ಜನಪ್ರತಿನಿಧಿಗಳು ಅಧಿಕಾರ ಪಡೆದಿದ್ದರು. ಸಂವಿಧಾನದ ಕಾನೂನಿನ ಅನ್ವಯ ಆಯಾ ರಾಜ್ಯಗಳು ತಮ್ಮ ವ್ಯಾಪ್ತಿಗೆ ಬರುವ ಪ್ರದೇಶಗಳ ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ಕೊಡಲು ಶಿಫಾರಸ್ಸು ಮಾಡಿತ್ತು. ಇದರ ಅನ್ವಯ ಇಂಗ್ಲೀಶ್ ಶಿಕ್ಷಣವನ್ನು ಬಿಟ್ಟು, ಕನ್ನಡ ಭಾಷೆಯಲ್ಲಿ ಪ್ರಮಾಣೀಕರಣ ಕನ್ನಡ ರೀತಿಯಲ್ಲಿ ರಾಜ್ಯದುದ್ದಕ್ಕೂ ಏಕ ಮಾದರಿಯ ಪಠ್ಯಗಳು ರಚನೆಯಾದವು. ಕಾರಣವೇನೆಂದರೆ ಬ್ರಿಟೀಷರು ಭಾರತಕ್ಕೆ ಆಗಮನದ ಸಂದರ್ಭ ಮತ್ತು ನಂತರದ ಕಾಲಾವಧಿಯಲ್ಲಿ ಭಾಷಾ ನೀತಿ ಮತ್ತು ಭಾಷಾ ಮಾಧ್ಯಮದ ಬಗ್ಗೆ ವಾಗ್ವಾದಗಳು ನಿಧಾನಗತಿಯಲ್ಲಿ ಪ್ರಾರಂಭವಾಗಿದ್ದವು.

ಅಲ್ಲದೆ ಕನ್ನಡ ಭಾಷಾ ಪಠ್ಯಗಳು ಕನ್ನಡ ಪದಗಳ, ವಾಕ್ಯಗಳ ಹಿನ್ನೆಲೆಯಲ್ಲಿ ರಚನೆಯಾಗದೆ ಸಂಸ್ಕೃತದಿಂದ ಮತ್ತು ಇಂಗ್ಲೀಶ್ ಪಠ್ಯಗಳ ಭಾಷಾಂತರದಿಂದ ಪಠ್ಯಕ್ರಮ ರಚನೆಯಾಗಿರುವುದನ್ನು ಕಾಣುತ್ತೇವೆ. ಈ ಪ್ರಕ್ರಿಯೆ ನಡೆದರೂ ಸಹ ಕನ್ನಡ ಭಾಷಾ ಪರ ಹೋರಾಟಗಾರರಿಂದ ಹಾಗೂ ಬ್ರಿಟೀಷ್ ಅಧಿಕಾರಿಗಳ ಶಿಕ್ಷಣದ ಸುಧಾರಣೆಯ ಜವಾಬ್ದಾರಿಗಳಿಂದ ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಮಾತೃಭಾಷೆಗನುಗುಣವಾಗಿ ಕನ್ನಡ ಭಾಷಾ ಪಠ್ಯಗಳು ರಚನೆಯಾಗಿದ್ದನ್ನು ಕಾಣುತ್ತೇವೆ.

ಈ ಹಿನ್ನೆಲೆಯಲ್ಲಿ ರಚನೆಯಾದ ಕನ್ನಡ ಭಾಷಾ ಪಠ್ಯಗಳು ಕರ್ನಾಟಕ ಏಕೀಕರಣದ ನಂತರ ತೀವ್ರ ತೆರನಾದ ಜವಾಬ್ದಾರಿಯುತವಾದ ಹೋರಾಟದ ಫಲವಾಗಿ ಕನ್ನಡ ಭಾಷಾ ಪಠ್ಯಗಳ ಪಠ್ಯಕ್ರಮ ಅಮೂಲಾಗ್ರ ಬದಲಾವಣೆಯನ್ನು ಕಂಡಿರುವ ಅಂಶ ಈ ಪಠ್ಯಗಳಿಂದ ಸ್ಪಷ್ಟವಾಗುತ್ತದೆ. ಆದರೆ ಕನ್ನಡ, ಇಂಗ್ಲೀಶ್ ಮಾಧ್ಯಮದ ಬಗ್ಗೆ ಈ ಪಠ್ಯಗಳಲ್ಲಿ ಅಥವಾ ಮುನ್ನುಡಿಯಲ್ಲಿ ಹೇಳಲಾಗಿದೆಯೇ? ಎಂಬುದನ್ನು ನೋಡಲು ಈ ಅಧ್ಯಾಯವನ್ನು ವಿಂಗಡಣೆ ಮಾಡಿಕೊಂಡಿದೆ. ಅಲ್ಲದೆ ಇಲ್ಲಿ ಬಳಕೆಯಾದ ಧ್ವನಿಗಳು, ಪದಗಳು, ವಾಕ್ಯಗಳು ಮಾತೃಭಾಷೆಗನುಗುಣವಾಗಿ ಅಥವಾ ಮಾಧ್ಯಮದ ಅನುಸಾರ ರಚನೆಗೊಂಡಿದೆಯೇ? ಈ ಕಾಲದ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಪಠ್ಯಪುಸ್ತಕ ರಚನಾ ಸಮಿತಿಯವರು ಮುನ್ನುಡಿಯಲ್ಲಿ ಪಠ್ಯಕ್ರಮ ರಚನೆಯ ಉದ್ದೇಶದ ಬಗ್ಗೆ ಹೇಳಿರುವುದನ್ನು ಕಾಣುತ್ತೇವೆ. ಉದಾಹರಣೆಗೆ : ೧೯೫೮ರಲ್ಲಿ ಮೈಸೂರು ರಾಜ್ಯದ ವಿದ್ಯಾಭ್ಯಾಸ ಇಲಾಖೆಯು **'ಕನ್ನಡ ಮೂರನೇ ಪುಸ್ತಕದಲ್ಲಿ'** ಈ ರೀತಿ ಹೇಳಲಾಗಿದೆ. ಮಕ್ಕಳ ಸಾಮಾರ್ಥ್ಯಾನುಸಾರ, ಯೋಗ್ಯತೆಗೆ ಅನುಗುಣವಾಗಿ ತರಗತಿಯನುಸಾರ, ನಾಡಿನ ವಿಷಯವನ್ನು ವೈವಿಧ್ಯತೆಯನ್ನು ಕೊಡಲಾಗಿದೆ. ಜೊತೆಗೆ ಪಠ್ಯಕ್ರಮವು ಸರಳತೆಯಿಂದ ಕ್ಲಿಷ್ಟತೆಯ ಕಡೆಗೆ ರಚನೆ ಮಾಡಿದೆ. ಪರಿಣಾಮಾತ್ಮಕ ಮತ್ತು ಮಕ್ಕಳ ಅಸಕ್ತಿಯ ಸಲುವಾಗಿ ಚಿತ್ರಗಳ ಬಳಕೆಯನ್ನು ಮಾಡಲಾಗಿದೆ ಎಂದು ಹೇಳಿದೆ. ಇದರಿಂದ ಈ ಕಾಲದ ಪಠ್ಯಕ್ರಮವು ಮಗುವಿನ ಸರ್ವತೋಮುಖ ಅಭಿವೃದ್ಧಿಯ ಕಡೆಗೆ ಸಾಗುತ್ತಿತ್ತು ಎಂಬ ಅಂಶಗಳು ಸ್ಪಷ್ಟವಾಗುತ್ತದೆ. ಆದರೆ ಮಾಧ್ಯಮದ ಬಗ್ಗೆ ಎಲ್ಲಿಯೂ ಉಲ್ಲೇಖಿಸದೇ ಇರುವುದು ಗಮನಾರ್ಹವಾದ ಸಂಗತಿಯಾಗಿದೆ.

ಈ ಸಂದರ್ಭದಲ್ಲಿ ರಚನೆಯಾದ ಕಿರಿಯ ಪ್ರಾಥಮಿಕ ಪಠ್ಯಗಳು ಕೆಲವು ಮಿತಿಗಳನ್ನು ಗಮನದಲ್ಲಿಟ್ಟುಕೊಂಡು ರಚನೆಯಾಗಿರುವುದನ್ನು ಕಾಣುತ್ತೇವೆ. ಹೇಗೆಂದರೆ ಪಠ್ಯದ ಪುಟಗಳು ೧೦೦ರೊಳಗಿನ ಮಿತಿಯಲ್ಲಿದ್ದುದನ್ನು ಕಾಣಬಹುದು. ಜೊತೆಗೆ ಏಳನೇ ತರಗತಿಯ ಪುಸ್ತಕಗಳು ೧೭೦ರ ಮಿತಿಯಲ್ಲಿ ಪುಟಗಳಿರುವುದನ್ನು ಕಾಣುತ್ತೇವೆ. ಪ್ರಾಥಮಿಕ ಹಂತದ ಪ್ರಾರಂಭದ ಪಠ್ಯಗಳು ಧ್ವನಿ, ಪದ, ವಾಕ್ಯ, ಚಿತ್ರಗಳ ಮೂಲಕ ರಚನೆಯಾಗಿವೆ. ಉದಾಹರಣೆಗೆ : ಕನ್ನಡ ಒಂದನೇ ತರಗತಿಯ ಪುಸ್ತಕದಲ್ಲಿ (೧೯೫೯–ಶಿ.ಚೆ.ನಂದೀಮಠ) ಪಾಠಗಳನ್ನು ರಚಿಸುವಾಗ ಧ್ವನಿ, ಪದ ವಾಕ್ಯ, ಕಥನ ಪದ್ಧತಿಗಳನ್ನು ಅನುಸರಿಸಲಾಗಿದೆ. ಅಕ್ಷರಮಾಲೆಯನ್ನು

ಕಲಿಸುವಾಗ ಪದಗಳನ್ನು ಪರಿಚಯಿಸುವ ಮೂಲಕ ಕೊಟ್ಟಿರುವುದನ್ನು ಕಾಣುತ್ತೇವೆ. ಉದಾಹರಣೆಗೆ: ಅರಸ, ಆಟ, ಊಟ, ಓಟ, ಮರ, ಜನ, ಚರಕ ಇತ್ಯಾದಿ. ಪಾಠಗಳ ನಂತರ ಕೆಲವು ಪದಗಳನ್ನು ಕೊಡಲಾಗಿದೆ. ಇದರ ಉದ್ದೇಶ ಪದಗಳ ಸಂಗ್ರಹ ಮಕ್ಕಳಲ್ಲಿ ಬರಲಿ ಎಂಬುದಾಗಿದ್ದಂತೆ ತೋರುತ್ತದೆ. ಇಲ್ಲಿ ಬಣ್ಣದ ಚಿತ್ರಗಳು ಮೂಡಿ ಬಂದಿವೆ. ಪಾಠ ಪದ್ಯಗಳೆಂದು ಪ್ರತ್ಯೇಕ ಮಾಡದೇ ಪದ್ಯ, ಪಾಠಗಳೆರಡನ್ನು ಮಿಶ್ರ ರೀತಿಯಲ್ಲಿ ರಚನೆ ಮಾಡಲಾಗಿದೆ.

ಒಂದರಿಂದ ನಾಲ್ಕನೇ ತರಗತಿಯವರೆಗೆ ನಾಲ್ಕರಿಂದ ಒಂಭತ್ತು ಪದ್ಯಗಳು ರಚನೆಯಾಗಿರುವುದನ್ನು ಕಾಣುತ್ತೇವೆ. ಇನ್ನು ಐದರಿಂದ ಏಳನೇ ತರಗತಿಯವರೆಗೆ ಹತ್ತರಿಂದ ಹದಿಮೂರು ಪದ್ಯಗಳು ರಚನೆಯಾಗಿರುವುದನ್ನು ಕಾಣಬಹುದು. ಕನ್ನಡನಾಡು ಸಂಸ್ಕೃತಿ, ಸುತ್ತ ಮುತ್ತಲಿನ ಪರಿಸರದ ಬಗ್ಗೆ ಮೂರನೇ ತರಗತಿಯ ನಂತರದ ಪಾಠ ಪದ್ಯಗಳಲ್ಲಿ ಕೊಟ್ಟಿರುವುದನ್ನು ಕಾಣಬಹುದು. ಜೊತೆಗೆ ಗಾಂಧೀಜಿ, ನೆಹರು, ವಲ್ಲಭಾಯಿ ಪಟೇಲ್ ಕುರಿತು ಪಾಠಗಳು ಇರುವುದನ್ನು ಕಾಣುತ್ತೇವೆ. ನಾಡಿನ ಸಂಸ್ಕೃತಿ, ಹಬ್ಬ ಹರಿದಿನಗಳ ಪರಿಚಯಕ್ಕಾಗಿ ನವರಾತ್ರಿ, ಮಹಾನವಮಿಯ ಪದಗಳು, ಮೊಹರಂ ಪದಗಳು, 'ಕನ್ನಡ ಎನೆ ಕುಣಿದಾಡುವದೆನ್ನದೆ' ಮತ್ತೆ 'ಟುವ್ವಿ!ಟುವ್ವಿ!' ಮುಪ್ಪಿನ ಷಡಕ್ಷರಿಯ 'ತಿರುಕನ ಕನಸು' ಇತ್ಯಾದಿ ಪದ್ಯಗಳನ್ನು ಕೊಟ್ಟಿರುವುದನ್ನು ಗುರುತಿಸಬಹುದಾಗಿದೆ. ಮಕ್ಕಳಿಗೆ ಆದರ್ಶ ಗುಣಗಳ ತಿಳುವಳಿಕೆಗಾಗಿ ರಾಮಾಯಣ, ಮಹಾಭಾರತದ ಆಯ್ದ ಭಾಗಗಳನ್ನು ಕೊಡಲಾಗಿದೆ.

ಈ ಮೇಲಿನ ಪಠ್ಯಕ್ರಮದ ಅಧ್ಯಯನದಿಂದ ತಿಳಿದುಬರುವುದೇನೆಂದರೆ ಕನ್ನಡ ಭಾಷಾ ಪಠ್ಯಪುಸ್ತಕದಲ್ಲಿ ಸಂಸ್ಕೃತದ ವರ್ಣಗಳು, ಪದಗಳು, ಹಾಗೂ ವಾಕ್ಯಗಳ ರಚನೆ ಹೆಚ್ಚಾಗಿರುವುದು ಸ್ಪಷ್ಟವಾಗುತ್ತದೆ. ಇಲ್ಲಿ ಕಲಿಸುವ ವ್ಯಾಕರಣ ಪದ್ಧತಿಯು ಸಹ ಸಂಸ್ಕೃತ ಭಾಷೆಯ ಮಾದರಿಯದ್ದು ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ಕನ್ನಡ ವ್ಯಾಕರಣ ಎನ್ನುವ ರೀತಿಯಲ್ಲಿ ಸಂಸ್ಕೃತದ ಛಂದಸ್ಸು, ವ್ಯಾಕರಣಗಳನ್ನು ಹೇಳಿಕೊಡುತ್ತಿರುವುದು ಈ ಪಠ್ಯಗಳಿಂದ ಸ್ಪಷ್ಟವಾಗುತ್ತದೆ. ಆದರೆ ಇಷ್ಟೆಲ್ಲಾ ಪದಗಳು, ವಾಕ್ಯಗಳು, ವ್ಯಾಕರಣ ಅನ್ಯಭಾಷಾದ್ದಾಗಿದ್ದರು ಕನ್ನಡ ಪಠ್ಯಗಳಲ್ಲಿ, ಕನ್ನಡ ಭಾಷೆಯ ಪದಗಳಂತೆ ಕಲಿಸುತ್ತಿರುವುದನ್ನು ಕಾಣಬಹುದು. ಆದರೆ ಮಾಧ್ಯಮ ಮಾತ್ರ ಕನ್ನಡದ್ದು ಆಗಬೇಕು ಎನ್ನುವ ಹೋರಾಟ ಮಾತ್ರ ಇದ್ದಿತು. ಆದರೆ ಈ ಅಂಶ ಎಷ್ಟು ಸಮಂಜಸ ಎನ್ನುವುದನ್ನು ಅವಲೋಕಿಸಬೇಕಿದೆ.

**೧೯೬೧ರಲ್ಲಿ ಕನ್ನಡ ಐದನೇ ತರಗತಿ ಪುಸ್ತಕವನ್ನು ಶಿ.ಚಿ.ನಂದೀಮಠ** ರಚನೆ ಮಾಡಿದ್ದಾರೆ. ಈ ಪುಸ್ತಕದ ಮುನ್ನುಡಿಯನ್ನು ಗಮನಿಸಿದಾಗ ಮಕ್ಕಳ ಆಸಕ್ತಿಯನುಸಾರ ಭಾಷಾ ಕೌಶಲ್ಯಗಳನ್ನು ಕಲಿಸಲು ಪ್ರಯತ್ನಿಸಲಾಗಿದೆ ಎಂದು ಹೇಳಿದೆ. ಸಾಹಿತ್ಯ ಸಂಸ್ಕೃತಿಗಳ ಪ್ರೇಮ, ವಿಚಾರ ಶಕ್ತಿ, ಆಲಿಸುವ ಕ್ರಿಯೆಯನ್ನು ವೃದ್ಧಿಪಡಿಸುವುದಾಗಿದೆ. ಮಾನವನ ಅಗತ್ಯತೆಯ ಅಂಶಗಳನ್ನು ತಿಳಿಸುವ ಉದ್ದೇಶ ಹೊಂದಿದೆ ಎಂದು ಹೇಳಿರುವುದನ್ನು ಕಾಣಬಹುದು. ಬಳಕೆಯ

ಕನ್ನಡವನ್ನು ಈ ಸಂದರ್ಭದಲ್ಲಿ ಬಳಸಿರುವುದು ಬೆಳಕಿಗೆ ಬರುತ್ತದೆ. ಪ್ರಮಾಣೀಕರಣ ಕನ್ನಡವನ್ನು ಬಳಸಬೇಕೆಂಬ ಚೌಕಟ್ಟುಗಳಿದ್ದರು ಸಹ ಮಕ್ಕಳಿಗೆ ಪದಗಳ ತಿಳುವಳಿಕೆಗಾಗಿ ಪ್ರಾದೇಶಿಕ ಪದದ ಮೂಲಕ ಪರಿಚಯಿಸುತ್ತಿರುವುದನ್ನು ಕಾಣಬಹುದು. ಉದಾಹರಣೆಗೆ: ಪಾಠ ಒಂದು : ನಮ್ಮ ಶಾಲೆಯಲ್ಲಿ 'ಕಡ್ಡಿಕಸರು' ಎಂಬ ಪದವನ್ನು ಕೊಟ್ಟಿದೆ. ಪಾಠ ಎರಡು 'ಧೀರಚೆನ್ನ'ದಲ್ಲಿ ಮಲುಕು ಎಂಬ ಪದಕ್ಕೆ ಸರಗುಣಿಕೆ, ಸರಗಂಟು ಎಂಬ ಪದಗಳ ಮೂಲಕ ಪರಿಚಯಿಸಿರುವುದನ್ನು ಕಾಣುತ್ತೇವೆ. ಅಲ್ಲದೆ ಈ ಪಠ್ಯದಲ್ಲಿ 'ಕಂಬಳ' ಎಂಬ ಪಾಠವನ್ನು ಕೊಡಲಾಗಿದೆ. ಈ ಪಾಠವನ್ನು ಸ್ವಾತಂತ್ರ ಪೂರ್ವದ ಪಠ್ಯದಲ್ಲೂ ಗುರುತಿಸಬಹುದು. ನಾವೆಲ್ಲರೂ ಒಂದೇ ಎಂಬ ಮನೋಭಾವನೆ ಮಕ್ಕಳಿಗೆ ಬರಲೆಂದು ಕಾರ್ನಾಡು ಸದಾಶಿವರಾಯರ ಬಗ್ಗೆ ಕೊಡಲಾಗಿದೆ. ಇವರು ದಲಿತರಿಗಾಗಿ ದುಡಿದ ಅಂಶಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳು ಸಮಾನತೆಯನ್ನು ಕಂಡುಕೊಳ್ಳಲು ಸಹಾಯಕವಾದುದಾಗಿದೆ. ಜೊತೆಗೆ ಇವರು ಬಡವರಿಗಾಗಿ ಪರೋಪಕಾರ ತ್ಯಾಗ ಮಾಡಿದ ವಿಚಾರಗಳನ್ನು ಸವಿಸ್ತಾರವಾಗಿ ನೀಡಿರುವುದು ಪ್ರಶಂಸನೀಯವಾದುದು ಎಂದು ಹೇಳಬಹುದು, ವ್ಯಕ್ತಿಯ ಪರಿಚಯದಲ್ಲಿ ಸರೋಜಿನಿದೇವಿ, ಮಹಾದಾನಿ ನೋಬೆಲ್, ಪ್ಲಾರೆನ್ಸ್ ನೈಟಿಂಗೇಲ್ ಪಾಠಗಳು ಮೂಡಿಬಂದಿವೆ. ಅಂತರಾಷ್ಟ್ರೀಯ ತಿಳುವಳಿಕೆಗಾಗಿ ಹಡಗಿನಲ್ಲಿ ಪ್ರಯಾಣ, ಜಪಾನಿನ ಮಕ್ಕಳು, ವೆಸೂವಿಯಸ್ ಮತ್ತು ಪಾಂಪೆ ಪಾಠಗಳನ್ನು ಕೊಟ್ಟಿರುವುದನ್ನು ಕಾಣಬಹುದು. ಕನ್ನಡನಾಡಿನ ಬಗ್ಗೆ ತಿಳಿಯಲು 'ನಮ್ಮ ಕನ್ನಡ ನಾಡು' ನುಡಿ, ಹಂಪೆ, ಸತ್ಯಾಶ್ರಯ, ಪುಲಿಕೇಶಿ, ಅಕ್ಬರ್, ರವೀಂದ್ರನಾಥ ಠಾಕೋರರ ಭಾರತಿ ಎಂಬ ಇತ್ಯಾದಿ ಪಾಠಗಳನ್ನು ಕೊಟ್ಟು ಪರಿಚಯಿಸಿರುವುದನ್ನು ಕಾಣುತ್ತೇವೆ. ಈ ಮೇಲಿನ ಪಠ್ಯಕ್ರಮವನ್ನು ಗಮನಿಸಿದಾಗ ಕನ್ನಡ ಭಾಷೆಯನ್ನು ಕಲಿಸುವುದರ ಜೊತೆಗೆ ಸಂಸ್ಕೃತಿ, ಸಾಹಿತ್ಯ ಹಾಗೂ ಮಾನವನ ನಾಗರೀಕತೆಯ ಮೌಲ್ಯಗಳನ್ನು ಬೆಳೆಸುವ ನಿಟ್ಟಿನಲ್ಲಿ ಪಠ್ಯಕ್ರಮ ರಚನೆಯಾಗಿರುವುದು ಸ್ಪಷ್ಟವಾಗುತ್ತದೆ.

ಪದ್ಯಭಾಗವನ್ನು ಪ್ರತ್ಯೇಕವಾಗಿ ಕೊಡುವ ಪದ್ಧತಿ ೫ನೇ ತರಗತಿಯಿಂದ ಪ್ರಾರಂಭ ವಾಗಿದ್ದನ್ನು ನೋಡಬಹುದು. ಪದ್ಯಗಳ ಆಯ್ಕೆಯು ಸಾಮಾನ್ಯವಾಗಿ ಹಳೆಗನ್ನಡದಲ್ಲಿ ರಚನೆಯಾದವುಗಳನ್ನು ಕೊಡಲಾಗಿದೆ. ಉದಾಹರಣೆಗೆ : ರತ್ನಾಕರವರ್ಣಿಯ ಶತಕದಿಂದ ಆಯ್ದ ಪದ್ಯ, ಸೋಮೇಶ್ವರ ಶತಕ ಕುಮಾರ ವಾಲ್ಮೀಕಿಯ ಕಾವ್ಯ ಭಾಗಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಇದರ ಜೊತೆಗೆ ಹೊಸಗನ್ನಡ ಪದ್ಯಗಳನ್ನು ಕೊಡಲಾಗಿದೆ. ಉದಾಹರಣೆಗೆ. 'ತಾಯಿ' ಪದ್ಯ (ಎಲ್.ಗುಂಡಪ್ಪ) ಹಿ.ಮ. ನಾಗಯ್ಯ-ಮಳೆರಾಯಕರೆ, ಸರ್ವಜ್ಞನ ವಚನ, ಕನಕದಾಸರ ಕೀರ್ತನೆ ಇತ್ಯಾದಿ ಪದ್ಯಗಳು ಕೊಟ್ಟಿರುವುದು ಈ ಪಠ್ಯದಲ್ಲಿ ಕಾಣಬಹುದಾಗಿದೆ.

೧೯೬೩ ಏಳನೇ ತರಗತಿಯ ಪಠ್ಯದಲ್ಲಿ (ಶಿ.ಚೆ.ನಂದೀಮಠ) ಐದನೇ ತರಗತಿಯಲಿ ್ಲರುವಷ್ಟೇ ಹತ್ತು ಪದ್ಯಗಳನ್ನು ಕೊಡಲಾಗಿದೆ. ಬೇಂದ್ರೆಯವರ 'ಕನ್ನಡನಾಡರಾಣಿ' ಡಿ.ವಿ.ಜಿ.ಯವರ 'ವನಸುಮ' ಆಂಡಯ್ಯ, ವಿರೂಪಾಕ್ಷ ಪಂಡಿತ, ರಾಘವಾಂಕ ಇವರ ಕಾವ್ಯದ ಆಯ್ದ

ಭಾಗಗಳನ್ನು ಅಳವಡಿಸಿಕೊಳ್ಳಲಾಗಿದೆ. ಜೊತೆಗೆ ಪುರಂದರ ದಾಸರ ಕೀರ್ತನೆ, ಗರತಿಯ ಹಾಡು, ಅಕ್ಕಮಹಾದೇವಿ, ಬಸವಣ್ಣನವರ ವಚನಗಳನ್ನೂ ಅಳವಡಿಸಿಕೊಳ್ಳಲಾಗಿದೆ. ಮುದ್ದಣ್ಣ ಮನೋರಮೆಯಿಂದ ಸಲ್ಲಾಪ ಹೊಸಗನ್ನಡದಲ್ಲಿ ಸಂಭಾಷಣೆ ರೂಪದಲ್ಲಿ ಮೂಡಿ ಬಂದಿದೆ. ಚಾಲುಕ್ಯ ವಿಕ್ರಮವೀರ, ನರೇಂದ್ರ ಮತ್ತು ಸ್ವಾಮಿ ವಿವೇಕಾನಂದ, ನಾಡೋಜ, ಪಂಪ, ಕೃಷ್ಣದೇವರಾಯ, ಕವಿ ರಾಘವಾಂಕ, ಶ್ರೀ ಅರವಿಂದರವರ ಪರಿಚಯಾತ್ಮಕ ಪಾಠಗಳನ್ನು ಈ ಪಠ್ಯ ಕ್ರಮದಲ್ಲಿ ಕಾಣುತ್ತೇವೆ. ವಿಂಧ್ಯಾಟವಿ ಎನ್ನುವ ವರ್ಣನಾಪರ ಪ್ರಬಂಧ ಇರುವುದು ಈ ಪಠ್ಯದ ವಿಶೇಷವಾಗಿದೆ. ಭೋಜರಾಜ ಶಾಂತಲಾದೇವಿ ಇವರ ಕುರಿತು ಕ್ರಮಾನುಗತಿಯಲ್ಲಿ ಕತೆ ಮತ್ತು ನಾಟಕದ ಪಾಠಗಳು ರಚನೆಯಾಗಿವೆ. 'ಲಕ್ಕಣ್ಣ ದಂಡೇಶನ ಓಲೆ' ಓಲೆಯ ಪ್ರಕಾರವನ್ನು ನಾಡಿನ ವಿಜಯನಗರದ ಇತಿಹಾಸವನ್ನು ತಿಳಿಸುವ ಪಾಠವಾಗಿ ಮೂಡಿ ಬಂದಿರುವುದನ್ನು ಕಾಣಬಹುದು.

ಈ ರೀತಿಯಲ್ಲಿ ರಚನೆಯಾದ ಈ ಪಠ್ಯಕ್ರಮವನ್ನು ನೋಡಿದಾಗ ಪಠ್ಯಕ್ರಮ ಕೇವಲ ಕನ್ನಡ ನಾಡಿನ ಜನತೆಯನ್ನು, ಕಾವ್ಯವನ್ನು ಕಟ್ಟಿಕೊಡದೆ, ಇತಿಹಾಸ, ಚರಿತ್ರೆ ಹಾಗೂ ಹಳಗನ್ನಡ ಪದ್ಯಗಳ ಜೊತೆಗೆ ಜನಪದ ಗೀತೆಗಳು ಸಹ ಮೂಡಿ ಬಂದಿವೆ. ಆದರೆ ಇಲ್ಲಿ ಬಳಕೆಯಾದ ಪದ, ವಾಕ್ಯಗಳು ಮತ್ತು ಬೋಧನೆ, ಕಲಿಸುವ ವಿಧಾನ(ಮುನ್ನುಡಿಯಂತೆ) ಸೂಚನೆಗಳನ್ನು ಗಮನಿಸಿದಾಗ ಸಂಸ್ಕೃತ ಮಾದರಿಯನ್ನು ಅನುಸರಿಸಿರುವುದು ಭಾಷಾ ಬಳಕೆಯ ವಿಧಾನದಿಂದ ಸ್ಪಷ್ಟವಾಗುತ್ತದೆ. ಈ ವಿಧಾನದಲ್ಲಿ ರಚನೆಯಾಗುತ್ತಾ ಬಂದಿರುವುದನ್ನು ೧೯೮೪ರ ವರೆಗೂ (ದೊರೆತ ಪಠ್ಯಗಳ ಆಧಾರಿತವಾಗಿ) ಕಾಣುತ್ತೇವೆ. ನಂತರ ೧೯೮೬ ಹೊಸರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ ಪಠ್ಯಕ್ರಮ ರಚನೆಯ ಗಮನಾರ್ಹ ಮತ್ತು ಅಮೂಲಾಗ್ರ ಬದಲಾವಣೆ ಹೊಂದಿದ್ದನ್ನು ಕಾಣಬಹುದಾಗಿದೆ.

ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ ಪ್ರಾಥಮಿಕ ಶಿಕ್ಷಣ ಪಠ್ಯಕ್ರಮವನ್ನು ವಿದ್ಯಾರ್ಥಿಗಳು ಈ ಕೆಳಗಿನ ವಿಷಯಗಳನ್ನು ಕಲಿಸಲು ಶಿಫಾರಸ್ಸು ಮಾಡಿತು. ಕಿರಿಯ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮಾತೃಭಾಷೆಯನ್ನು ಕಲಿಯಬೇಕಾಯಿತು. ಇನ್ನು ಹಿರಿಯ ಪ್ರಾಥಮಿಕ ಶಾಲಾಹಂತದಲ್ಲಿ ತ್ರಿಭಾಷಾ ಸೂತ್ರದ ಪ್ರಕಾರ ಪ್ರಾಂತೀಯ ಪ್ರಾದೇಶಿಕ ಭಾಷೆ, ಇಂಗ್ಲೀಶ್ ಮತ್ತು ಹಿಂದಿ ಪಠ್ಯಗಳನ್ನು ಅಳವಡಿಸಲಾಗಿತ್ತು. ಮೂರನೇ ತರಗತಿಯವರೆಗೆ ಪರಿಸರ ಅಧ್ಯಯನವನ್ನು ಅಳವಡಿಸುವ ತೀರ್ಮಾನ ಕೈಗೊಳ್ಳಲಾಯಿತು. ಮೂರನೆಯ ತರಗತಿಯ ಬಳಿಕ ಪ್ರತ್ಯೇಕವಾಗಿ ವಿಜ್ಞಾನ ಹಾಗೂ ಸಮಾಜ ಅಧ್ಯಯನ ಪಠ್ಯಗಳನ್ನು ಮಾಡಲು ಸಲಹೆ ನೀಡಿತು. ಇದರ ಜೊತೆಗೆ ಭಾಷಾ ಪಠ್ಯಗಳಲ್ಲಿ ಭಾಷಾಭ್ಯಾಸ ಚಟುವಟಿಕೆ ಗಳನ್ನು ಹೇಳಿಕೊಡಲು ಶಿಫಾರಸ್ಸು ಮಾಡಿತು. ಈ ನೀತಿ ಅನ್ವಯ ಪಠ್ಯಕ್ರಮಗಳು ರಚನೆಯಾಗಿರುವುದನ್ನು ಕಲಿಯುತ್ತೇವೆ. ಇದರಿಂದ ಹಿರಿಯ ಪ್ರಾಥಮಿಕ ಹಂತದ ಮಕ್ಕಳು, ಕನ್ನಡ ಮಾಧ್ಯಮದಲ್ಲಿ ಕಲಿತರೂ ಇಂಗ್ಲೀಶ್, ಹಿಂದಿ ಪಠ್ಯಗಳನ್ನು ಕಡ್ಡಾಯವಾಗಿ ಕಲಿಯ ಬೇಕಾಯಿತು. ಇದರ ಜೊತೆಗೆ ಐಚ್ಛಿಕ ವಿಷಯಗಳಾದ ವಿಜ್ಞಾನ, ಸಮಾಜ, ಗಣಿತವನ್ನು

ಕಲಿಸಬೇಕಾಯಿತು. ಈ ಪದ್ಧತಿಯನ್ನು ಇಂದಿಗೂ ಕಾಣಬಹುದಾಗಿದೆ. ಈ ಪ್ರಯತ್ನ ಕನ್ನಡ ಪಠ್ಯದಲ್ಲಿ ಗೋಚರಿಸಿದರೂ ಅಲ್ಲಿ ಬಳಕೆಯಾದ ಪದಗಳ ಉದ್ದೇಶ, ಪಾಠ ಮಾದರಿ, ಬೋಧನೆಯ ವಿಧಿವಿಧಾನಗಳು, (ಮುನ್ನುಡಿಯನ್ನು ಗಮನಿಸಿದಂತೆ) ಅನ್ಯಭಾಷಿಕತನದ ಅಂಶಗಳು ಕಾಣಿಸಿಕೊಳ್ಳುವುದು ಸಹಜವಾಗಿದೆ. ಈ ರೀತಿಯಲ್ಲಿರುವ ಪಠ್ಯಗಳನ್ನು ಪರಿಶೀಲಿಸದೆ ಮತ್ತು ಬದಲಾವಣೆ ಮಾಡಿಕೊಳ್ಳದೆ ಅದನ್ನೇ ಇಂದಿಗೂ ಅನುಸರಿಸುತ್ತಾ ಬಂದಿರುವ ನಾವುಗಳು ಮಾಧ್ಯಮದ ಬಗ್ಗೆ ಚರ್ಚಿಸುತ್ತಲಿದ್ದೇವೆ. ಅಲ್ಲದೆ ಅನೇಕ ಭಾಷಾ ನೀತಿಗಳನ್ನು ಹುಟ್ಟು ಹಾಕುತ್ತಿದ್ದೇವೆ. ಆದರೆ ಕನ್ನಡ ಭಾಷಾ ಪಠ್ಯಗಳು ಕನ್ನಡ ಮಾಧ್ಯಮದಲ್ಲಿ ರಚನೆಯಾಗಿರುತ್ತವೆಯೇ ಎಂಬುದನ್ನು ಗಮನಿಸುವವರ ಸಂಖ್ಯೆ ತುಂಬಾ ವಿರಳ ಎಂದೇ ಹೇಳಬಹುದು.

ಈ ಶಿಫಾರಸ್ಸಿನ ಅನ್ವಯ ಕನ್ನಡ ಭಾಷೆ ಮತ್ತು ಐಚ್ಛಿಕ ವಿಷಯಗಳಾದ ಸಮಾಜ, ವಿಜ್ಞಾನ, ಗಣಿತವನ್ನು ಕನ್ನಡ ಮಾಧ್ಯಮ ಪಠ್ಯಗಳೆಂದು ರಚಿಸಲಾಗಿದೆ. ಆದರೆ ಅಲ್ಲಿ ಬಳಕೆಯಾದ ಪದ, ವಾಕ್ಯಗಳು ಮತ್ತು ವ್ಯಾಕರಣಾಂಶಗಳು ಮಾತ್ರ ಹೆಚ್ಚಾನು ಹೆಚ್ಚು ಬೇರೆ ಭಾಷೆಯಾದವುಗಳನ್ನು ಕಾಣುತ್ತೇವೆ. ಐಚ್ಛಿಕ ವಿಷಯದಲ್ಲಿಯೂ ಸಹ ಈ ವಿಧಾನದ ಬಳಕೆ ನಡೆದಿರುವುದನ್ನು ಕಾಣುತ್ತೇವೆ. ಉದಾ.ಗೆ. ಬೀಜಗಣಿತ, ಅಂಕಗಣಿತ, ಅರ್ಥಶಾಸ್ತ್ರ, ಪೌರನೀತಿಯಂತಹ ಪದಗಳು ಬಳಕೆಯಾಗಿರುವುದನ್ನು ಕಾಣುತ್ತೇವೆ. ಆದರೂ ಸಹ ರಾಷ್ಟ್ರೀಯ ಶಿಕ್ಷಣ ನೀತಿಯ ಪ್ರಭಾವದಿಂದಾಗಿ ಪ್ರಾಥಮಿಕ ಶಾಲಾ ಪಠ್ಯಗಳಲ್ಲಿ ಅಮೂಲಾಗ್ರ ಬದಲಾವಣೆ ಯನ್ನು ಗುರುತಿಸಬಹುದು.

ಉದಾಹರಣೆಗೆ : ೧೯೯೪ರ ೨ನೇತರಗತಿಯ ಕನ್ನಡ ಭಾಷಾ ಪಠ್ಯಪುಸ್ತಕವನ್ನು ಅಧ್ಯಯನ ಮಾಡಲಾಗಿದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯದಡಿಯಲ್ಲಿ ರಚಿತವಾದ ಈ ಕನ್ನಡ ಭಾಷಾ ಪಠ್ಯಪುಸ್ತಕವು ಕನ್ನಡ ಭಾಷಾ ರಚನೆಯ ದೃಷ್ಟಿಯಲ್ಲಿ ಮುಖ್ಯವೆನಿಸಿದೆ. ಈ ಪಠ್ಯವನ್ನು ವಿದ್ವಾಂಸರಿಂದ, ಶಿಕ್ಷಕರಿಂದ, ಶಿಕ್ಷಕರ ಸಂಘಗಳಿಂದ, ಕನ್ನಡ ಸಾಹಿತ್ಯ ಪರಿಷತ್ತಿನಿಂದ ಹಾಗೂ ಸಾರ್ವಜನಿಕರಿಂದ ಬಂದ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಈ ಪಠ್ಯವನ್ನು ರಚಿಸಲಾಗಿತ್ತು. ಆದರೆ ಉಚ್ಚನ್ಯಾಯಾಲಯದ ನಿರ್ದೇಶನದ ಹಿನ್ನೆಲೆಯಲ್ಲಿ ಪುನಃ ಪರಿಷ್ಕರಣ ಸಮಿತಿಯನ್ನು ರಚಿಸಿದ್ದು ಆ ಸಮಿತಿಯವರು ನೀಡಿದ ವರದಿಯ ಆಧಾರದ ಮೇಲೆ ಸೂಕ್ತ ಬದಲಾವಣೆಗಳನ್ನು ಮಾಡಲಾಯಿತು. ಈ ಬದಲಾವಣೆ ಗಳನ್ನು ಮಾಡುವಾಗ ಗ್ರಾಮೀಣ ಹಾಗೂ ನಗರ ಪ್ರದೇಶಗಳ ಮಕ್ಕಳನ್ನು ಗಮನದಲ್ಲಿಟ್ಟು ಕೊಳ್ಳಲಾಗಿದೆ. ಅದೇ ರೀತಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವ ಮಕ್ಕಳಿಗೆ ಬೋಧಿಸುವಾಗ ಕನ್ನಡ ಭಾಷೆಯ ಸೊಬಗು, ಸೌಂದರ್ಯಕ್ಕೆ ಚ್ಯುತಿ ಬಾರದ ಹಾಗೆ ಕನ್ನಡ ಭಾಷೆಯನ್ನು ಕಲಿಯಬೇಕೆಂಬ ಅಭಿಮಾನ ಹುಟ್ಟುವ ರೀತಿಯಲ್ಲಿ ಅಧ್ಯಾಪಕರು ಬೋಧಿಸುವರೆಂದು ಅದಕ್ಕೆ ಅನುಗುಣವಾಗಿ ಪಠ್ಯವನ್ನು ರಚಿಸಲಾಗಿದೆ ಎಂದು ಮುನ್ನುಡಿಯಲ್ಲಿ ಅಧ್ಯಕ್ಷರು ಹೇಳುವುದನ್ನು ಕಾಣುತ್ತೇವೆ.

ಉದಾಹರಣೆಗೆ; ನಮ್ಮ ನಾಡು (ಗದ್ಯ) ಕನ್ನಡನಾಡು(ಪದ್ಯ) ಜೈಜವಾನ್ ಜೈಕಿಸಾನ್ ಈ ಪಠ್ಯವನ್ನು ಮಾತೃಭಾಷೆಯಾಗಿ ಕನ್ನಡ ಕಲಿಯುವ ಮಕ್ಕಳ ಭಾಷಾ ಅವಶ್ಯಕತೆಗಳು ಪ್ರಚಲಿತ ಶಿಕ್ಷಣದ ಸಿದ್ಧಾಂತ ತತ್ವಗಳು, ಮಕ್ಕಳ ಮನೋವಿಕಾಸ, ಭಾಷಾ ಬೋಧನೆ ಹಾಗೂ ಕಲಿಕೆಯ ತತ್ವಗಳು, ಆಧಾರದ ಮೇಲೆ ಪಠ್ಯ ರಚಿಸುವ ಪ್ರಯತ್ನ ನಡೆದಿದೆ. ಮಕ್ಕಳು ಆಸಕ್ತಿಯಿಂದ ಆಲಿಸಿ ಮುಖ್ಯ ವಿಚಾರಗಳನ್ನು ಗ್ರಹಿಸಲು, ಕತೆ ಕವನಗಳನ್ನು(ಪದ್ಯ) ಕೇಳಿ ಆನಂದಿಸಲು, ಸಮವಯಸ್ಕರೊಡನೆ, ಹಿರಿಯರೊಡನೆ ಮಾತನಾಡಲು, ಚಿಕ್ಕ ಪುಟ್ಟ ಪ್ರಶ್ನೆಗಳಿಗೆ ಉತ್ತರಿಸಲು, ಕತೆ, ಪದ್ಯಗಳನ್ನು ಹೇಳಲು, ಸುತ್ತಮುತ್ತಲಿನ ಘಟನೆಗಳನ್ನು ಸ್ಪಷ್ಟವಾಗಿ ವಿವರಿಸಲು, ಅಕ್ಷರಗಳು, ಗುಣಿತಾಕ್ಷರಗಳು, ಸಂಯುಕ್ತಾಕ್ಷರಗಳ್ನು ಒಂಟಿಯಾಗಿ, ಪದಗಳು ಮತ್ತು ವಾಕ್ಯಗಳ ಸಂದರ್ಭದಲ್ಲಿ ತಪ್ಪಿಲ್ಲದೆ ಓದಲು, ತಾನು ಓದಲು ಕಲಿತ ಪದಗಳ ವಾಕ್ಯಗಳನ್ನು ಪ್ರತಿ ಮಾಡಲು ನೆನಪಿನ ಸಹಾಯದಿಂದ ಹಾಗೂ ಸ್ವತಂತ್ರವಾಗಿ ಸ್ಪಷ್ಟವಾಗಿ ತಪ್ಪಿಲ್ಲದೇ ಕನ್ನಡದಲ್ಲಿ ಬರೆಯಲು ಸಮರ್ಥರಾಗುತ್ತಾರೆ ಎಂಬ ಬಹುಮುಖ್ಯ ಉದ್ದೇಶವನ್ನು ಇಟ್ಟುಕೊಂಡು ಈ ಪಠ್ಯವನ್ನು ರಚಿಸಲಾಗಿದೆ. ಅಲ್ಲದೇ ಕನ್ನಡ ಭಾರತಿ ೨ನೇ ತರಗತಿಯ ಪುಸ್ತಕವು ಮುಖ್ಯವಾಗಿ ಈ ಕೆಳಗಿನ ಅಂಶಗಳನ್ನು ಮಕ್ಕಳಲ್ಲಿ ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಈ ಪಠ್ಯ ರಚನೆಯಾಗಿದೆ.

* ಸಾವಧಾನವಾಗಿ, ಶಿಸ್ತಿನಿಂದ, ಆಸಕ್ತಿಯಿಂದ ಆಲಿಸಿ ಮುಖ್ಯವಾದ ಅಂಶಗಳನ್ನು ಗ್ರಹಿಸಲು.
* ಪ್ರಬಂಧ, ಕಥೆ ಮತ್ತು ಪದ್ಯಗಳನ್ನು ಕೇಳಿ ಅರ್ಥ ಮಾಡಿಕೊಂಡು ಆನಂದಿಸಲು.
* ಸ್ಪಷ್ಟವಾದ ಉಚ್ಚಾರಣೆಯೊಂದಿಗೆ ನೋಡಿದ ಕೇಳಿದ ಸಂಗತಿಗಳನ್ನು ಮನಸ್ಸಿನ ಭಾವನೆಗಳನ್ನು ಸ್ವಂತ ಮಾತುಗಳಲ್ಲಿ ತಪ್ಪಿಲ್ಲದೆ ವಿವರಿಸಲು ಬೇಕಾದ ಅಂಶಗಳನ್ನು ಪಠ್ಯ ಚಟುವಟಿಕೆಗಳ ಮೂಲಕ ಕಲಿಸುವಂತದ್ದು.
* ಸಮವಯಸ್ಕರ ಮತ್ತು ಹಿರಿಯರನ್ನು ವಿಷಯ ಗ್ರಹಣಕ್ಕಾಗಿ ಪ್ರಶ್ನೆಗಳನ್ನು ಕೇಳುವಂತಹ ಕೌಶಲವನ್ನು ಬೆಳೆಸುವಂತದ್ದು.
* ಸಂದರ್ಭಾನುಸಾರ ಪ್ರಶ್ನೆಗಳನ್ನು ಕೇಳುವುದು ಅಥವಾ ಪ್ರಶ್ನೆಗಳಿಗೆ ಉತ್ತರಿಸುವ ಪ್ರಯತ್ನ ಮಾಡುವುದು.
* ಮನೆ, ಕುಟುಂಬ, ಶಾಲೆ ಹಾಗೂ ಸುತ್ತಮುತ್ತಲಿನ ಪರಿಸರದಲ್ಲಿ ದಿನ ಬಳಕೆಯ ಪದಗಳು, ವಾಕ್ಯಗಳನ್ನು ಪರಿಚಯಿಸುವುದು. ನಂತರ ವಿಷಯಗಳ ಬಗ್ಗೆ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ತಿಳಿಸುವಂತೆ ಮಾಡುವುದು.
* ಸರಳವಾದ ಗೀತೆಗಳನ್ನು ಪ್ರಾಸಬದ್ಧವಾಗಿ ಹಾಡಲು, ಸಣ್ಣಕಥೆಗಳನ್ನು ಹೇಳಲು, ಸ್ಪಷ್ಟವಾದ ಉಚ್ಚಾರಣೆಯೊಂದಿಗೆ ಸರಳ ಪದಗಳು, ಜೊತೆಗೆ ಹ್ರಸ್ವಸ್ವರ, ದೀರ್ಘಸ್ವರ,

ವ್ಯಂಜನಗಳ ಪರಿಚಯ ಹಾಗೂ ಗುಣಿತಾಕ್ಷರ ಸಂಯುಕ್ತಾಕ್ಷರಗಳಲ್ಲಿ ಧ್ವನಿ ವ್ಯತ್ಯಾಸ ಹಾಗೂ ಅವುಗಳ ಬಳಕೆ ಮಾಡುವ ವಿಧಾನವನ್ನು ಕಲಿಸುವುದು. ನಂತರ ಪದ ಪದಗಳ ರಚನೆಯ ಜೊತೆಗೆ ಚಿಕ್ಕ ಚಿಕ್ಕ ವಾಕ್ಯಗಳು ಇತ್ಯಾದಿಗಳನ್ನು ಕೂಡಿಸಿ ಓದಿಸುವ ಕೌಶಲವನ್ನು ವೃದ್ಧಿಸುವ ಪ್ರಯತ್ನ ನಡೆದಿದೆ.

* ಪಠ್ಯಪುಸ್ತಕದಲ್ಲಿರುವ ಪಾಠ, ಪದ್ಯಗಳನ್ನು ಓದಿ ಅರ್ಥ ಮಾಡಿಕೊಳ್ಳಲು ಈ ಪಠ್ಯಕ್ರಮದಲ್ಲಿ ಅವಕಾಶ ಮಾಡಿಕೊಡಲಾಗಿದೆ.

* ಈ ಪಠ್ಯದಿಂದ ಮಕ್ಕಳು ಪಠ್ಯಪುಸ್ತಕದ ಹೊರಗಿನ ಪುಸ್ತಕಗಳ, ಪತ್ರಿಕೆಗಳ ಶಿರೋವಾಕ್ಯಗಳನ್ನು ಅರ್ಥಪೂರ್ಣವಾಗಿ ಓದಲು ಹಾಗೂ ಪದಗಳ ರಚನೆಯ ವಿಧಾನ, ಪದಗಳನ್ನು ಬಿಡಿ ಬಿಡಿಯಾಗಿ ಅಂದವಾಗಿ, ಸ್ಪಷ್ಟವಾಗಿ, ಕ್ರಮಬದ್ಧವಾಗಿ, ತಪ್ಪಿಲ್ಲದೇ ಸಮಾನಾಂತರವಾಗಿ ಬರೆಯುವಂತಹ ಪಠ್ಯಕ್ರಮವನ್ನು ರಚಿಸಲಾಗಿದೆ.

* ಮಕ್ಕಳು ನೋಡಿದ, ಕೇಳಿದ ಘಟನೆಗಳನ್ನು, ಕಥೆಗಳನ್ನು ಸರಳವಾದ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಬರೆಯಲು ಕಲಿಸುವ ಪ್ರಯತ್ನ ನಡೆದಿದೆ.

* ಈ ಪಠ್ಯಕ್ರಮದಲ್ಲಿ ಕರ್ನಾಟಕ, ಕನ್ನಡನಾಡು, ಕನ್ನಡ ಭಾಷೆಯನ್ನು ಮುಖ್ಯವಾಗಿ ಪರಿಚಯಿಸುವ ಕ್ರಮ ಕನ್ನಡ ಭಾಷೆಯ ರಚನೆಯ ದೃಷ್ಟಿಯಿಂದ ನಡೆದಿದೆ. ಈ ಕ್ರಮವು ಮಗುವಿನ ಆಲಿಸುವ, ಮಾತನಾಡುವ, ಓದುವ, ಹಾಗೂ ಬರಹದ ಕೌಶಲಗಳ ಮೂಲಕ ಕನ್ನಡ ಭಾಷೆಯನ್ನು ಪರಿಚಯಿಸುವ ಪ್ರಕ್ರಿಯೆ ಈ ಒಂದು ಪಠ್ಯದಲ್ಲಿ ನಡೆದಿದೆ. ಏಕೆಂದರೆ ಭಾಷೆ ಮಗುವಿನ ಬೆಳವಣಿಗೆಯ ಜೀವನದ ಅವಿಭಾಜ್ಯ ಅಂಗ. ಈ ಮಹತ್ವದ ಅಂಶವನ್ನು ಗಮನಿಸಿ ಅದರ ಸರ್ವತೋಮುಖ ಬೆಳವಣಿಗೆಗೆ ಅನುಕೂಲವಾಗುವಂತೆ ಗಣಿತ, ಸಮಾಜೋಪಯೋಗಿ ಉತ್ಪಾದಕ ಕಾರ್ಯ, ಆರೋಗ್ಯ ಮತ್ತು ದೈಹಿಕ ಶಿಕ್ಷಣ, ಕಲೆ ಮತ್ತು ಸೃಜನ ಶೀಲ ಅಭಿವ್ಯಕ್ತಿ, ಮೌಲ್ಯಶಿಕ್ಷಣ ಮುಂತಾದುವನ್ನು ಕನ್ನಡ ಭಾಷೆಯ ಕಲಿಕೆಯೊಟ್ಟಿಗೆ ಪರೋಕ್ಷವಾಗಿ ಪರಿಚಯ ಮಾಡಿಕೊಳ್ಳಲು ಸಾಧ್ಯವಾಗುವಂತೆ ಈ ಪುಸ್ತಕದ ಪಾಠಗಳು, ಪದ್ಯಗಳು ರಚಿತವಾಗಿದೆ. ಆದರೆ ಕನ್ನಡ ಭಾಷಾ ಬೋಧನೆಯ ಹಿನ್ನೆಲೆಯಲ್ಲಿ ಪಠ್ಯಗಳು ರಚನೆಯಾಗಿವೆ ಎಂದಾಕ್ಷಣ ಬೋಧನೆ ಭಾಷಾ ಹಿನ್ನೆಲೆಯಲ್ಲಿ ನಡೆಯುತ್ತದೆ ಎಂದಲ್ಲ. ಆದರೆ ಇಲ್ಲಿ ಬಳಸಿದ ಪಠ್ಯಕ್ರಮ ಎಲ್ಲಾ ವಿಧದಲ್ಲೂ ಭಾಷಾ ಬೋಧನೆ ಮತ್ತು ಶಿಕ್ಷಣ ತತ್ವಗಳ ಆಧಾರಿತವಾಗಿ ರಚನೆಯಾಗಿರುವ ಅಂಶಗಳು ಹೆಚ್ಚಾಗಿ ಕಂಡು ಬರುವುದಿಲ್ಲ.

ಈ ಕನ್ನಡ ಭಾಷಾ ಪಠ್ಯಪುಸ್ತಕದ ಮೊದಲ ಭಾಗದಲ್ಲಿ ಎಂಟು ಚಿತ್ರಗಳನ್ನು ಕೊಡಲಾಗಿದ್ದು, ಅವುಗಳಲ್ಲಿ ಎರಡು ಚಿತ್ರ ಕಥೆಗಳು ಸೇರಿವೆ. ಈ ಚಿತ್ರಗಳನ್ನು ಕೊಟ್ಟಿರುವ ಉದ್ದೇಶ ಮಕ್ಕಳಿಗೆ ಮಾತನಾಡುವ ಕೌಶಲ, ಸಂಭಾಷಣೆಯ ಕೌಶಲ, ಐತಿಹಾಸಿಕ ತಿಳುವಳಿಕೆ ಅಂದರೆ ಸ್ಥಳಗಳು, ಪರಿಸರ, ಬೆಳೆಗಳು, ಗಿಡಮರಗಳು, ಮುಂತಾದವುಗಳ ಬಗ್ಗೆ ಮಾತನಾಡಲು

ಬೇಕಾಗುವ ದಿನಬಳಕೆಯ ಪದಗಳು, ಕುಶಲಕರ್ಮಿಗಳು, ವೃತ್ತಿನಿರತರು, ಈ ಅಂಶಗಳನ್ನು ಗಮನಿಸಿ ಚಿತ್ರ ಪುಟಗಳನ್ನು ಬಳಸಲಾಗಿದೆ. ಈಗಾಗಲೇ ಮಕ್ಕಳು ಒಂದನೇ ತರಗತಿಯಲ್ಲಿ, ಮಕ್ಕಳು ತರಗತಿಯ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಕ್ರಿಯೆಯಲ್ಲಿ ತೊಡಗಿದವರಾಗಿರುತ್ತಾರೆಂದು. ಎರಡನೆಯ ತರಗತಿಯಲ್ಲಿ ಅವರ ಅರಿವಿನ ಪರಿಸರ ಉತ್ಸಾಹ ವಿಸ್ತಾರದ ದಾರಿಯತ್ತ ಹೊರಟಿರುವುದರಿಂದ ತಾವು ಕೇಳುವ, ಆಲಿಸುವ ನೋಡುವ ವಿಷಯ ಹಾಗೂ ವಸ್ತುಗಳ ಬಗ್ಗೆ ಮಕ್ಕಳು ಪೋಷಕರನ್ನು ಇದು ಏನು? ಇದು ಏಕೆ? ಇವರು ಯಾರು? ಎಂಬ ಇತ್ಯಾದಿ ಪ್ರಶ್ನೆಗಳು ಇವರಲ್ಲಿ ಪುನಃ ಪುನಃ ಕೇಳಿ ಬರುತ್ತಿರುತ್ತವೆ. ಇದಕ್ಕೆ ಸೂಕ್ತ ಉತ್ತರಗಳು ದೊರಕಿದಾಗ ಮಕ್ಕಳ ಭಾಷಾ ತಿಳುವಳಿಕೆಯ ಜ್ಞಾನ ಹೆಚ್ಚಾಗುತ್ತದೆ. ಅಲ್ಲದೆ ಈ ಪರಿಸರದ ವ್ಯವಸ್ಥೆ ಸರಿಯಾದಲ್ಲಿ ಮಕ್ಕಳು ಹೊರಗಿನ ಪರಿಸರದ ವಿಷಯಗಳ (ಭಾಷಾನುಸಾರ) ಬಗ್ಗೆಯೂ ನಿರ್ಭಯವಾಗಿ, ಸುಲಲಿತವಾಗಿ ಮಾತನಾಡಲು ಅವರು ಹೇಳಿದ ಮಾಹಿತಿಯನ್ನು ಗ್ರಹಿಸಲು ಸಹಾಯಕವಾಗುತ್ತದೆ. ಇದರಿಂದ ತರಗತಿಯಲ್ಲಿಯು ಸಹ ಜಾಣತನವನ್ನು ಕಾಣುವುದಕ್ಕೆ ಸಹಾಯಕ. ಈ ಉದ್ದೇಶದಿಂದಲೇ ಕೆಲವು ಚಿತ್ರಗಳನ್ನು ಕೊಡಲಾಗಿದೆ.

ಈ ಪಠ್ಯದ ಮೊದಲನೆಯ ಭಾಗದಲ್ಲಿ ಎಂಟು ಪುಟ ಚಿತ್ರಗಳನ್ನು ಕೊಟ್ಟಿದೆ. ಮೊದಲಿಗೆ ಕುಶಲಕರ್ಮಿಗಳಾದ ರೈತ, ಗಾರೆ, ಕೆಲಸದವನು, ನೇಕಾರ, ಕಮ್ಮಾರ, ಬಡಗಿ, ಶಿಲ್ಪಿ, ಕುಂಬಾರ, ಬುಟ್ಟಿ ಹೆಣೆಯುವವನು ಮೀನುಗಾರ, ವೃತ್ತಿನಿರತರಾಗಿರುವ ಉಪಾಧ್ಯಾಯ, ವೈದ್ಯ, ದರ್ಜಿ, ಸೈನಿಕ, ಪೋಲೀಸ್, ಅಂಚೆಯವನು, ಕೆಲಸಗಾರ, ಕೂಲಿ, ಚಾಲಕ ಮುಂತಾದ ಹೆಸರುಗಳನ್ನು ಕೊಟ್ಟಿದ್ದಾರೆ. ಐತಿಹಾಸಿಕ ಸ್ಥಳಗಳ ಪರಿಚಯಕ್ಕಾಗಿ ಗೋಳಗುಮ್ಮಟ, ಹಂಪಿಯ ಕಲ್ಲಿನರಥ, ಬಾದಾಮಿಯ ಗುಹೆ, ಕೋಟೆ, ಜೋಗ್ ಜಲಪಾತ, ತುಂಗಭದ್ರಾ ಆಣೆಕಟ್ಟು, ಗೊಮ್ಮಟೇಶ್ವರ, ಸೋಮನಾಥಪುರದ ದೇವಾಲಯ, ದರಿಯಾದೌಲತ್ ಮುಂತಾದವು. ಅಷ್ಟೇ ಅಲ್ಲದೆ, ಪರಿಸರದ ವಿಷಯಕ್ಕೆ ಸಂಬಂಧಿಸಿದ ತಿಳುವಳಿಕೆಗಾಗಿ ವಿಧಾನಸೌಧ, ಲಾಲ್‌ಬಾಗ್, ಹೆಚ್.ಎ.ಎಲ್. ಕಾರ್ಖಾನೆ, ಬೃಂದಾವನ, ಅಭಯಾರಣ್ಯ, ಮೈಸೂರು ಅರಮನೆ, ಮಲ್ಪೆಸಮುದ್ರ ತೀರ, ಮಹಾತ್ಮಾಗಾಂಧಿ ಜಲವಿದ್ಯುತ್ ಕೇಂದ್ರ, ಶಾಖೋತ್ಪನ್ನ ವಿದ್ಯುತ್‌ಸ್ಥಾವರ, ಬೆಳೆಗಳ ಪರಿಚಯಕ್ಕಾಗಿ ಭತ್ತದಗದ್ದೆ, ಕಡಲೆಕಾಯಿ ಹೊಲ, ಕಬ್ಬಿನಗದ್ದೆ, ಮೆಕ್ಕೆಜೋಳದ ಹೊಲ, ಬಾಳೆಯ ತೋಟ, ಹತ್ತಿಯ ಹೊಲ ಹಾಗೂ ಗಿಡಮರಗಳಾದ ತೆಂಗಿನಮರ, ಹಿಪ್ಪುನೇರಳೆ ಹೊಲ, ಅಡಕೆ ಮರ, ಕಿತ್ತಳೆ ಹಣ್ಣಿನ ತೋಟ, ಕಾಫಿತೋಟ, ದ್ರಾಕ್ಷಿತೋಟ ಇತ್ಯಾದಿ ಗಿಡಮರಗಳ ಪರಿಚಯ ನಡೆದಿದೆ. ಚಿತ್ರಗಳ ಕೊನೆಯ ಪುಟಗಳಲ್ಲಿ ಸಿಂಹ ಮತ್ತು ಇಲಿ ಹಾಗೂ ತೆನಾಲಿ ರಾಮನ ಕಥೆ ಹಾಸ್ಯ ಹಾಗೂ ಚಾಣಾಕ್ಷತನವನ್ನು ತೋರಿಸುವಂತಹ ಚಿತ್ರಗಳ ಮೂಲಕ ಮೌಖಿಕ ಕಥೆಯನ್ನು ಹೇಳುವಂತಹ ಕೆಲಸವನ್ನು ಈ ಪಠ್ಯಗಳು ನಿರ್ವಹಿಸುತ್ತವೆ.

ಎರಡನೆಯ ಭಾಗದಲ್ಲಿ ಒಟ್ಟು ೨೫ ಪಾಠಗಳಿದ್ದು, ೧೬ ಗದ್ಯಪಾಠಗಳು, ೯ ಪದ್ಯಪಾಠಗಳೂ ಇವೆ. ೧೬ ಗದ್ಯಪಾಠಗಳಲ್ಲಿ ಹತ್ತು ವಿಷಯ ಪ್ರಧಾನ ಹಾಗೂ ೬ ಕಥಾ ಪ್ರಧಾನವಾದವೂ ಆಗಿವೆ. ಪ್ರತಿ ಗದ್ಯಪಾಠವೂ ಸಾಮಾನ್ಯವಾಗಿ ಯಾವುದಾದರೂ ಒಂದು ವಿಶಿಷ್ಟ ವಿಚಾರ, ಮೌಲ್ಯ, ಅಥವಾ ನೀತಿಯನ್ನು ಮಕ್ಕಳಿಗೆ ಪರಿಚಯ ಮಾಡಿಕೊಡುತ್ತದೆ.

ಉದಾಹರಣೆಗೆ : 'ನಮ್ಮೂರು' ಎಂಬ ಪಾಠದಲ್ಲಿ ಮಾದರಿ ಗ್ರಾಮವಾಗಿ ಹೇಳಲಾಗಿದೆ. ಅಂದರೆ ಒಂದು ಗ್ರಾಮಕ್ಕೆ ಇರಬೇಕಾದ ಸೌಲಭ್ಯಗಳು ಕುರಿತು ಹೇಳಲಾಗಿದೆ. ಮನೆಯ ಸುತ್ತಮುತ್ತಲಿನ ಪರಿಸರದ ಬಗ್ಗೆ ವಿವರಿಸಲಾಗಿದೆ. ಅಂದರೆ ಭಾಷಾ ತಿಳುವಳಿಕೆಯ ದೃಷ್ಟಿಯಿಂದ ಇಲ್ಲಿ ದಿನಬಳಕೆಯ ಮಾತುಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅಲ್ಲದೇ ಭಾಷೆಯ ಉಚ್ಚಾರಣೆಯ ದೃಷ್ಟಿಯಿಂದ ಹೆದ್ದಾರಿ, ರಸ್ತೆ, ಸುತ್ತಮುತ್ತ, ಸಂತೆಮಾಳ, ಆರೋಗ್ಯ ಕೇಂದ್ರ, ಮಧ್ಯ, ಮೈದಾನ, ಎಂಬ ಪದಗಳನ್ನು ಭಾಷಾಭ್ಯಾಸದಲ್ಲಿ ಕೊಟ್ಟು ಅವುಗಳ ಉಚ್ಚಾರಣೆಗೆ ಅವಕಾಶ ಕಲ್ಪಿಸಿ ಕೊಡಲಾಗಿದೆ. ನಂತರ ಕಂಬ, ಮನೆ, ಮರ, ದೀಪ, ನೀವು, ಅವರು, ಇವರು, ತಾವು ಎಂಬ ಇತ್ಯಾದಿ ಪದಗಳನ್ನು ನೀಡಿದ್ದು ಈ ಪದಗಳಿಗೆ 'ಗಳು' ಪ್ರತಯ್ಯ ಸೇರಿಸಲು ಹೇಳಲಾಗಿದೆ. ಉದಾಹರಣೆಗೆ:– ಗದ್ದೆ – ಗದ್ದೆಗಳು, ದೀಪ – ದೀಪಗಳು, ಅಂದರೆ ಇಲ್ಲಿ ಏಕವಚನ ಮತ್ತು ಬಹುವಚನಗಳ ಪರಿಕಲ್ಪನೆಯನ್ನು ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನ ನಡೆದಿದೆ. ನಂತರ 'ತಾವು', 'ತಮ್ಮದು', 'ನಿಮ್ಮದು' ಎಂಬ ಗೌರವ ಸೂಚಕವಾಗಿ ಬಳಸುವಂತಹ ಪದಗಳ ಪರಿಚಯವನ್ನು ಮಾಡಿಕೊಡಲಾಗಿದೆ.

ಮೊದಲು ಉಚ್ಚಾರಣೆ ನಂತರ ಧ್ವನಿಗಳ ವ್ಯತ್ಯಾಸ ಪದಗಳ ಬಳಕೆ ಅವುಗಳನ್ನು ವಾಕ್ಯಗಳಲ್ಲಿ ರಚನೆ ಮಾಡುವ ಭಾಷಾ ಕೌಶಲವನ್ನು ಹೇಳಿ ಕೊಡಲಾಗುತ್ತಿದೆ.

ಉದಾಹರಣೆಗೆ :

* ದೀಪದ ಕಂಬಗಳು ಇವೆ.
* ಊರಿನ ಪಕ್ಕದಲ್ಲಿ ಕೆರೆ ಇದೆ.
* ಊರಿನ ಮಧ್ಯ ನಮ್ಮ ಶಾಲೆಯಿದೆ.

ಈ ತರಹದ ವಾಕ್ಯಗಳನ್ನು ಕಲಿಸುವ ಮೂಲಕ ದಿನನಿತ್ಯದಲ್ಲಿ ಬಳಕೆಯಾಗುವ ಹಿಂದೆ, ಮುಂದೆ, ಎಡಗಡೆ, ಬಲಗಡೆ ಮುಂತಾದ ಸ್ಥಳವಾಚಕಗಳ ಬಳಕೆಯ ಬಗ್ಗೆ ತಿಳಿದುಕೊಳ್ಳುತ್ತಾರೆ. ಮಕ್ಕಳು ಈ ಪಾಠದಲ್ಲಿ ಗ್ರಹಿಸಿದ ಪದಗಳು ಹಾಗೂ ಪಠ್ಯಕ್ರಮ ನೆನಪಿಗಾಗಿ ತಾವು ಪಾಠದಲ್ಲಿ ಬಳಸಿದ ಪದಗಳ ಪುನರಾವರ್ತನೆಗಾಗಿ ಗುಂಪಿಗೆ ಸೇರದ ಪದವನ್ನು ಭಾಷಾಭ್ಯಾಸದ ಭಾಗದಲ್ಲಿ ಕಲಿಸುತ್ತಾರೆ.

ಉದಾಹರಣೆಗೆ : * ಮುಂದೆ, ಹಿಂದೆ, ಎದುರು, ಚಿಕ್ಕ

* ಊರು, ಹಳ್ಳಿ, ಮನೆ, ಪಟ್ಟಣ

* ಸುತ್ತಮುತ್ತ, ಅಕ್ಕಪಕ್ಕ, ಎಡಬಲ, ಕಟ್ಟಡ

* ಕೆರೆ, ಬಾವಿ, ಹಿಂದೆ, ಕಟ್ಟೆ

ಈ ತರಹದ ಅಭ್ಯಾಸಗಳ ಮೂಲಕ ಪದಗಳನ್ನು ನೆನಪಿಡುವುದರ ಜೊತೆಗೆ ಹಳ್ಳಿಯ ಪರಿಸರದ ಬಗ್ಗೆ ಮಾಹಿತಿಯನ್ನು ಪಡೆಯುತ್ತಾರೆ. ಒಟ್ಟಾರೆ ಈ ಪಾಠದಲ್ಲಿ ಮುಖ್ಯವಾಗಿ ಸಮಾಜದಲ್ಲಿ ಕಂಡುಬರುವ ಹಳ್ಳಿಯ ಪ್ರದೇಶವನ್ನು ಪರಿಚಯಿಸುವ ಕೌಶಲವು ಭಾಷಾ ದೃಷ್ಟಿಯ ಹಿನ್ನೆಲೆಯಲ್ಲಿ ನಡೆಯುತ್ತಾ ಬಂದಿರುವುದು ಈ ಪಾಠದಿಂದ ಸ್ಪಷ್ಟವಾಗುತ್ತದೆ.

ನಂತರ ಬರುವ 'ನರಿಯ ಉಪಾಯ' ಎಂಬ ಪಾಠವು ಮೇಲ್ನೋಟಕ್ಕೆ ಕಥಾ ಪ್ರಧಾನವಾದುದು ಆಗಿದೆ. ಈ ಪಾಠವು ಚಾಣಾಕ್ಷತನದ ಸಂಭಾಷಣೆಯನ್ನು ವಿವರಿಸುವಲ್ಲಿ ಬಹಳ ಮುಖ್ಯವೆನಿಸಿ ಭಾಷಾ ದೃಷ್ಟಿಯ ಬೆಳವಣಿಗೆಗೆ ಉಪಯುಕ್ತವೆನಿಸುತ್ತದೆ. ಅಂದರೆ ಈ ಪಾಠದಲ್ಲಿ ಬರುವ ಈ ಕಥೆಯು "ಉಪಾಯ ಬಲ್ಲವನಿಗೆ ಅಪಾಯವಿಲ್ಲ" ಎಂಬ ನೀತಿಯನ್ನು ಹೇಳುತ್ತದೆ. ಇಲ್ಲಿ ಕಥೆಯ ಮೂಲಕ ಬೋಧನೆ ನಡೆಯುವುದರಿಂದ ಆಲಿಸುವ ಕೌಶಲವನ್ನು ವೃದ್ಧಿಸುವಲ್ಲಿ ಮುಖ್ಯವೆನಿಸುತ್ತದೆ. ಇದರಿಂದ ಮಕ್ಕಳು ಬಹುಬೇಗನೆ ಕಲಿಯುತ್ತಾರೆ. ಅಲ್ಲದೇ ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆ. ಶೈಕ್ಷಣಿಕ ದೃಷ್ಟಿಯಲ್ಲಿ ಮಕ್ಕಳನ್ನು ಸೃಜನಶೀಲರಾಗಿ ಮಾಡಲು ಇಂತಹ ಪಾಠವನ್ನು ಅಳವಡಿಸಿಕೊಳ್ಳಲಾಗಿದೆ. ಭಾಷಾ ದೃಷ್ಟಿಯಿಂದ ಈ ಪಾಠದಲ್ಲಿ ಈ ಹಿಂದೆ ಕಲಿಯದ ಪದಗಳನ್ನು ಸಹ ಪರಿಚಯಿಸಿ ಕೊಡಲಾಗುತ್ತಿದೆ.

ಉದಾಹರಣೆಗೆ:– ಹೆಜ್ಜೆ ಗುರುತು, ಸುಳಿವು, ಅಪಾಯ, ಫಲಿಸು, ಬುದ್ಧಿ, ಪ್ರಾಣ, ಈ ಪದಗಳನ್ನು ಮಕ್ಕಳಿಗೆ ಓದಿಸುವುದರಿಂದ ಧ್ವನಿಮಾಗಳಲ್ಲಿ ಉಚ್ಚಾರಣೆಯ ಬದಲಾವಣೆಗಳನ್ನು ಗುರುತಿಸಿಕೊಂಡು ಉಚ್ಚಾರಣೆಯ ದೋಷಗಳನ್ನು ಸರಿಪಡಿಸಲಿಕ್ಕಾಗಿ ಈ ಪದಗಳನ್ನು ಓದಿಸಲಾಗುತ್ತದೆ. ಈ ಪಾಠದಲ್ಲಿ ಮುಖ್ಯವಾಗಿ ಮಕ್ಕಳಿಗೆ ಚಿಹ್ನೆಗಳ ಬಳಕೆಗಳನ್ನು ಪರಿಚಯಿಸಲಾಗಿದೆ. ಈ ಪರಿಚಯವು ವಾಕ್ಯಗಳ ಸಂದರ್ಭಾನುಸಾರ ಬಳಕೆ ಮಾಡಿ ಅವುಗಳನ್ನು ತಿಳಿಸಿ ಕೊಡಲಾಗಿದೆ.

ಉದಾಹರಣೆಗೆ :–

* ಅಲ್ಲಿ ಕಂಡದ್ದೇನು?

* ಗುಹೆಯ ಹತ್ತಿರ ಹೆಜ್ಜೆ ಗುರುತು!

* "ಅಯ್ಯಾ ಸ್ನೇಹಿತನೇ, ನೀನು ಬಂದುದು ಬಹಳ ಸಂತೋಷ. ಒಳಗೆ ಬಾ"

* ಇಂದೇಕೆ ಸುಮ್ಮನಿರುವೆ?

ಈ ತರಹದ ವಾಕ್ಯಗಳನ್ನು ಕೊಟ್ಟು ಚಿಹ್ನೆಗಳ ಬಳಕೆಯ ಕ್ರಮವನ್ನು ಮಾಡಿಕೊಡಲಾಗಿದೆ. ಸನ್ನಿವೇಶಕ್ಕೆ ಅನುಗುಣವಾಗಿ ವಾಕ್ಯಗಳಲ್ಲಿ ಚಿಹ್ನೆಗಳ ಬಳಕೆಯಾಗಬೇಕೆನ್ನುವುದನ್ನು ಭಾಷಾ ನಿಯಮದಡಿಯಲ್ಲಿ ಹೇಳಿಕೊಡಲಾಗುತ್ತದೆ. ಅಲ್ಲದೆ ವಾಕ್ಯಕ್ಕೆ ಅನುಗುಣವಾಗಿ ಚಿಹ್ನೆಗನುಸಾರವಾಗಿ

ಬದಲಾವಣೆಗಳಿಗನುಸಾರವಾಗಿ ಹೇಳಿಕೊಡುವುದರಿಂದ ಚಿಹ್ನೆಗಳ ಬಳಕೆಯ ವಿಧಾನ ಸ್ಪಷ್ಟವಾಗುತ್ತದೆ. ನಂತರ ಈ ಪಾಠಕ್ಕೆ ಸಂಬಂಧಿಸಿದಂತೆ ಪದಗಳನ್ನು ಕೊಟ್ಟು ಆ ಪದಗಳಿಗೆ 'ಇಲ್ಲ' ಹಾಗೂ 'ಏನೇ' ಎಂಬ ನಿಷೇದಾರ್ಥಕ ಹಾಗೂ ಪ್ರತ್ಯಯದ ಪರಿಕಲ್ಪನೆಯನ್ನು ಗುರುತಿಸಿ, ಇದರಿಂದ ಅರ್ಥಗಳಲ್ಲಿ ನಡೆಯುವ ವ್ಯತ್ಯಾಸವನ್ನು ತಿಳಿಸಿಕೊಡುವುದಾಗಿದೆ.

ಉದಾಹೆಣೆಗೆ : 'ಇಲ್ಲ' ಎಂಬ ನಿಷೇದಾರ್ಥಕ್ಕೆ

* ಮಾಡು – ಮಾಡಲಿಲ್ಲ
* ನೋಡು – ನೋಡಲಿಲ್ಲ
* ಆಡು – ಆಡಲಿಲ್ಲ
* ಯೋಚಿಸು – ಯೋಚಿಸಲಿಲ್ಲ

'ಏ' ಕಾರ ಪ್ರತ್ಯಯಕ್ಕೆ

* ಗೆಳೆಯ – ಗೆಳೆಯನೇ
* ಅಣ್ಣ – ಅಣ್ಣನೇ
* ತಮ್ಮ – ತಮ್ಮನೇ
* ಜಾಣ – ಜಾಣನೇ

ಇದೇ ಪಾಠದ ಭಾಷಾಭ್ಯಾಸದ ಮುಂದಿನ ಭಾಗದಲ್ಲಿ ಎರಡು ಪದಗಳನ್ನು ಕೂಡಿಸಿ ಅದಕ್ಕೆ ಅರ್ಥ ಬಾದೆ ಬರದ ಹಾಗೆ ರಚಿಸುವ ಪ್ರಯತ್ನ ಮಾಡಲಾಗಿದೆ. ಇದರಿಂದ ಮಕ್ಕಳು ಒಂದೇ ಪದವನ್ನು ಬಿಡಿಸಿ ಬರೆಯದೆ ಕೂಡಿಸಿ ಬರೆಯುವುದನ್ನು ರೂಢಿಸಿಕೊಳ್ಳುತ್ತಾರೆ ಎನ್ನುವುದು ಈ ರಚನೆಯ ಹಿನ್ನೆಲೆಯ ಉದ್ದೇಶವಾಗಿದೆ.

ಉದಾಹರಣೆಗೆ :

* ಅವನಿಗೆ + ಏನಾಗಿದೆ = ಅವನಿಗೇನಾಗಿದೆ.
* ಗೆಳೆಯನಿಗೆ + ಏನಾಗಿದೆ = ಗೆಳೆಯನಿಗೇನಾಗಿದೆ.
* ನನಗೆ + ಏನಾಗಿದೆ = ನನಗೇನಾಗಿದೆ.

ನಂತರ ವಾಕ್ಯವನ್ನು ಸರಿಪಡಿಸುವ ಕೌಶಲಕ್ಕೆ ವಾಕ್ಯದಲ್ಲಿ ಒಂದು ಪದವನ್ನು ಬಿಟ್ಟು ಅದಕ್ಕೆ ಸೂಕ್ತ ಪದ ತುಂಬಲು ಅವಕಾಶ ಮಾಡಿಕೊಡಲಾಗಿದೆ. ಅಂದರೆ ಮಕ್ಕಳಿಗೆ ವಾಕ್ಯದ ಪರಿಕಲ್ಪನೆಯನ್ನು ಮೂಡಿಸುವ ಸಲುವಾಗಿ ಇಂತಹ ಪ್ರಶ್ನೆಗಳು ಸರಿ ಎನಿಸುತ್ತವೆ.

ಉದಾಹರಣೆಗೆ :

* ನರಿಯೊಂದು ------- ಹುಡುಕುತ್ತಾ ಹೊರಟಿತು

(ನೀರು, ಹುಲ್ಲು, ಆಹಾರ)

* ನರಿಯು ಮುಂದೆ ಬರುವ ------- ಯೋಚಿಸಿತು.

(ಉಪಾಯವನ್ನು, ಅಪಾಯವನ್ನು, ಗುರುತನ್ನು)

ಈ ಒಂದು ವಿಧಾನದಿಂದ ಮಕ್ಕಳು ವಾಕ್ಯದಲ್ಲಿ ಬರುವ ಪದವನ್ನು ಗುರುತಿಸಿ ವಾಕ್ಯದ ರಚನೆಯ ಬಗ್ಗೆ ಸ್ಪಷ್ಟತೆಯನ್ನು ತಿಳಿದುಕೊಳ್ಳುತ್ತಾರೆ. ಈ ಪಾಠದಲ್ಲಿ ಬರುವ ಒತ್ತಾಕ್ಷರಗಳ ಪದಗಳನ್ನು ಕೊಟ್ಟು ವಾಕ್ಯಗಳಲ್ಲಿ ಬಳಸುವಂತೆ ಕೇಳಲಾಗಿದೆ. ಅಂದರೆ ಇದರ ಉದ್ದೇಶ ಮಕ್ಕಳಲ್ಲಿ ಧ್ವನಿಮಾಗಳನ್ನು ಉಚ್ಚರಿಸುವ ಹಾಗೂ ಒತ್ತಾಕ್ಷರಗಳನ್ನು ಬರೆಯುವ ಕೌಶಲವನ್ನು ಗುರುತಿಸಲಾಗುತ್ತದೆ.

ಉದಾಹರಣೆಗೆ : ಕಣ್ಣಲ್ಲಿ ಕಣ್ಣಿಡು, ಕಾಲಿಗೆ ಬುದ್ಧಿ ಹೇಳು, ಈ ಮೇಲೆ ಹೇಳಿದ ಕೌಶಲಗಳನ್ನು ವೃದ್ಧಿಸುವ ಜೊತೆಗೆ ಈ ಪದಗಳ ಬಳಕೆಯ ವಿಶೇಷತೆ ಏನು ಎಂಬುದನ್ನು ಹೇಳಿ ಕೊಡಲಾಗುತ್ತದೆ. ಈ ಪದಗಳು ಕನ್ನಡದ ನುಡಿಗಟ್ಟುಗಳಲ್ಲಿ ಗುರುತಿಸುವುದರಿಂದ ಆ ಮಕ್ಕಳಿಗೆ ಕನ್ನಡದ ನುಡಿಗಟ್ಟುಗಳ ಪರಿಕಲ್ಪನೆಯನ್ನು ಪರಿಚಯಿಸುವ ಪ್ರಯತ್ನ ನಡೆದಿದೆ. ಉದಾಹರಣೆಯಾಗಿ ಈ ಪಾಠದಲ್ಲಿ,

* ನರಿಯು ಸಿಂಹದ ಹೆಜ್ಜೆಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿತು.

* ನಾಯಿ ಬೊಗಳಿದ ಕೂಡಲೇ ಅವನು ಕಾಲಿಗೆ ಬುದ್ಧಿ ಹೇಳಿದ ಎಂದು ಕೊಡಲಾಗಿದೆ.

ಅಲ್ಲದೆ ಈ ತರಗತಿಯ ಪಠ್ಯದಲ್ಲಿ ಮುಂದುವರಿದಂತೆ ಪದ್ಯವನ್ನು ಕೊಟ್ಟಿದೆ. ಇದರ ಉದ್ದೇಶ ಮಕ್ಕಳಿಗೆ ರಾಗಬದ್ಧವಾಗಿ ಹಾಡುವುದನ್ನು ಕಲಿಸಿ, ಅದರ ನೆನಪಿಗಾಗಿ ಕಂಠಪಾಠ ಮಾಡಿಸುವಂತೆ ಹೇಳಲಾಗಿದೆ. ಇದರಿಂದ ಮಕ್ಕಳು ಆಲಿಸುವ ಹಾಗೂ ರಾಗವಾಗಿ ಹಾಡುವ ಕೌಶಲವನ್ನು ಹೆಚ್ಚಿಸಿಕೊಳ್ಳುತ್ತಾರೆ. ಇಂತಹ ಅಂಶಗಳನ್ನು ಈ ಪಠ್ಯದ ಪದ್ಯಗಳಲ್ಲಿ ಕಾಣಬಹುದು.

ಉದಾಹರಣೆಗೆ :

* ಬಣ್ಣದ ಬಗರಿ (ಪದ್ಯ)

ಈ ಪದ್ಯದಲ್ಲಿ ಭಾಷಾ ದೃಷ್ಟಿಯಿಂದ ಹೊಸ ಪದಗಳ ಅರ್ಥವನ್ನು ಮಾಡಿ ಕೊಡಲಾಗುತ್ತದೆ. ಇದರಿಂದ ಒಂದು ಪದಕ್ಕೆ ಇರುವ ಸಮಾನಾರ್ಥಕ ಪದಗಳನ್ನು ತಿಳಿದು ಮಕ್ಕಳಲ್ಲಿ ಪದಗಳ ಸಂಗ್ರಹ ಹೆಚ್ಚಾಗುತ್ತದೆ.

ಉದಾಹರಣೆಗೆ :

* ಬಗರಿ – ಬುಗುರಿ
* ಜಾಳಿಗೆ – ಬುಗುರಿಯಾಡಿಸುವ ದಾರ, ಚಾಟಿ,
* ಮೋಜು – ತಮಾಷೆ
* ಕೆಚ್ಚೆದೆ – ಧೈರ್ಯ

ಇಂತಹ ಪದಗಳ ಅರ್ಥವನ್ನು ಕೊಡಲಾಗುತ್ತಿದೆ. ಈ ಪದ್ಯದಲ್ಲಿ ಬರುವ ಪ್ರಾಸಗಳ ತಿಳುವಳಿಕೆಗಾಗಿ ಭಾಷಾಭ್ಯಾಸದಲ್ಲಿ ಮಕ್ಕಳಿಗೆ ಪದ್ಯಗಳ ಸಾಲುಗಳನ್ನು ಬರೆಯಲು ಹೇಳಲಾಗಿದೆ.

ಉದಾಹರಣೆಗೆ : * ನನ್ನಯ ಬಗರಿ * ಜಾಳಿಗೆ ಸುತ್ತಿ

ಬಣ್ಣದ ---- ಕೈಯನು ------ ಎಂದು ಕೊಡಲಾಗಿದೆ.

ಇದಲ್ಲದೆ ಮಕ್ಕಳಿಗೆ ಗುರುಗುರು, ಗಿರಿಗಿರಿ, ಗರಗರ, ಈ ಪದಗಳು ಬಳಕೆಯಾಗಿರುವ ವಾಕ್ಯಗಳನ್ನು ಬರೆಯಲು ಹೇಳಲಾಗಿದೆ. ಇದರಿಂದ ಮಕ್ಕಳಿಗೆ ಅನುಕರಣಾವ್ಯಯಗಳ ತಿಳುವಳಿಕೆಯನ್ನು ಹೇಳಿಕೊಡುವ ಕಾರ್ಯ ನಡೆಯುತ್ತದೆ.

ಒಟ್ಟಾರೆ ಈ ಪಠ್ಯಪುಸ್ತಕ ಗದ್ಯಪಾಠಗಳಲ್ಲಿನ ಪದಗಳು ಸಾಧ್ಯವಾದಷ್ಟು ವಿದ್ಯಾರ್ಥಿಗಳ ಪರಿಸರದಲ್ಲಿ ಬಳಕೆಯಲ್ಲಿರುವಂತಹದ್ದಾಗಿದೆ. ವಾಕ್ಯಗಳು ಮಕ್ಕಳ ತರಗತಿಗೆ ತಕ್ಕಂತೆ ಚಿಕ್ಕ ಹಾಗೂ ಸುಲಭವಾದ ವಾಕ್ಯಗಳನ್ನು ಮೊದಲ ಪ್ರಾರಂಭದ ಪಾಠಗಳಲ್ಲಿ ನೀಡಲಾಗಿದೆ. ನಂತರ ಪಾಠದಿಂದ ಪಾಠಕ್ಕೆ ಭಾಷಾಭ್ಯಾಸದ ವಿವಿಧ ಆಯಾಮಗಳನ್ನು ನಿಧಾನವಾಗಿ ಅರ್ಥಪೂರ್ಣವಾಗಿ ಕಲಿಸುವ ಪ್ರಯತ್ನ ನಡೆದಿದೆ. ಪಾಠದಿಂದ ಪಾಠಕ್ಕೆ ಭಾಷಾಭ್ಯಾಸ ಸಾಗಿದಂತೆ, ನಿಧಾನವಾಗಿ ವಾಕ್ಯಗಳು ಮತ್ತು ಪಾಠಗಳು ದೊಡ್ಡವಾಗುತ್ತವೆ. ಇವು ಕ್ರಮವಾಗಿ ಮನೆ, ಶಾಲೆ, ಊರು, ರಾಜ್ಯ, ಮತ್ತು ದೇಶಗಳ ಬಗ್ಗೆ ತಿಳಿಸುತ್ತವೆ.

ಎಂಡು ಗದ್ಯಪಾಠಗಳ ನಂತರ ಒಂದರಂತೆ ಪದ್ಯಪಾಠಗಳು ಗದ್ಯಪಾಠಗಳ ನಡುವೆ ಇದ್ದರೂ ಬೋಧನೆಯ ಎಲ್ಲಾ ಹಂತಗಳಲ್ಲಿಯೂ ಇವನ್ನು ತರಗತಿಯ ಕೊಠಡಿಯಲ್ಲಿ ಹಾಡಲು ಬಳಸಿದರೆ ತಪ್ಪೇನಿಲ್ಲ. ಇವು ಗೇಯ ಗೀತೆಗಳಾಗಿರುವುದರಿಂದ ಮಕ್ಕಳು ಒಬ್ಬಬ್ಬರಾಗಿ ಹಾಡುವುದು ಅಥವಾ ಗುಂಪಿನಲ್ಲಿ ಸಾಮೂಹಿಕವಾಗಿ ಹಾಡುವಂತೆ ಪ್ರೇರೇಪಿಸುವ, ಪ್ರೋತ್ಸಾಹಿಸುವ ಸಲುವಾಗಿ ಈ ಪಠ್ಯದಲ್ಲಿ ಇಂತಹ ಗದ್ಯಗಳನ್ನು ಇಡಲಾಗಿದೆ. ಮಕ್ಕಳು ಇವುಗಳನ್ನು ಹಾಡಿ ಕಂಠಪಾಠ ಮಾಡಬಹುದು. ಆಗಾಗ್ಗೆ ಈ ಹಾಡುವಿಕೆಯನ್ನು ಪುನರಾವರ್ತಿಸುವುದರಿಂದ ಪದ್ಯಗಳು ಮಕ್ಕಳ ನೆನಪಿನಲ್ಲಿ ಉಳಿದು ಪದಗಳ ಮತ್ತು ವಾಕ್ಯಗಳ ಪರಿಕಲ್ಪನೆ ಬಹುಕಾಲ ಉಳಿಯುವ ಪ್ರಯತ್ನ ನಡೆಯುತ್ತದೆ.

ಪ್ರತಿ ಗದ್ಯಪಾಠವೂ ಅಭ್ಯಾಸ ಮತ್ತು ಸೂಚನೆ ಎಂಬ ಮೂರು ಭಾಗಗಳನ್ನು ಹೊಂದಿದೆ. ಎಲ್ಲಾ ಗದ್ಯಪಾಠಗಳಲ್ಲಿಯೂ ಆರರಿಂದ ಎಂಟರವರೆಗೆ ಅಭ್ಯಾಸಗಳಿದ್ದರೆ ಪ್ರತಿ ಪದ್ಯಪಾಠದಲ್ಲಿಯೂ ನಾಲ್ಕರಿಂದ ಆರರವರೆಗೆ ಅಭ್ಯಾಸಗಳಿವೆ. ಸಾಮಾನ್ಯವಾಗಿ ಪಾಠವನ್ನು ಕಲಿತು ಪ್ರಶ್ನೆಗಳಿಗೆ ಉತ್ತರಿಸುವ ಅಭ್ಯಾಸವು ವಿಷಯಗ್ರಹಣಕ್ಕೆ ಮತ್ತು ಆ ಪಾಠಗಳ ಮೌಲ್ಯಮಾಪನಕ್ಕೆ ಒತ್ತು ಕೊಡುವುದನ್ನು ಕಾಣುತ್ತೇವೆ. ಎಲ್ಲ ಪಾಠಗಳಲ್ಲಿನ ಅಭ್ಯಾಸಗಳನ್ನು ಮಕ್ಕಳ ಭಾಷಾ ಸಾಮರ್ಥ್ಯಕ್ಕೆ ಅನುಗುಣವಾಗಿ ಬಾಯ್ಮಾತಿನಲ್ಲಿ, ಬರವಣಿಗೆಯಲ್ಲಿ ಅಭ್ಯಾಸ ಮಾಡಿಸಬಹುದು. ಪಾಠಗಳಲ್ಲಿ, ಅಭ್ಯಾಸಗಳಲ್ಲಿ, ಅಲ್ಪವಿರಾಮ, ಪೂರ್ಣವಿರಾಮ, ಪ್ರಶ್ನಾರ್ಥಕ, ಆಶ್ಚರ್ಯಸೂಚಕಗಳು ಮುಂತಾದ ಲೇಖನ ಚಿಹ್ನೆಗಳು ಬಳಕೆಯಾಗಿವೆ. ಅವುಗಳನ್ನು

ಅಭ್ಯಾಸ ಮಾಡಲು ಅನುಕೂಲವಾಗುವಂತೆ ಪ್ರತ್ಯೇಕವಾಗಿ ಅಭ್ಯಾಸಗಳನ್ನು ಕೊಟ್ಟಿಲ್ಲ. ಆದರೆ ಅರ್ಥಪೂರ್ಣ ಬರಹದ ಅವಿಭಾಜ್ಯ ಅಂಗಗಳಾಗಿರುವ ಇವುಗಳ ತಿಳುವಳಿಕೆ ವಿದ್ಯಾರ್ಥಿಗಳಿಗೆ ಮುಖ್ಯ. ಅದರಲ್ಲೂ ಕನ್ನಡ ಭಾಷಾ ಪಠ್ಯಗಳಲ್ಲಂತೂ ತೀರಾ ಮುಖ್ಯವೆಂದೇ ಹೇಳಬಹುದು. ಆದ್ದರಿಂದ ಶಿಕ್ಷಕರಾದವರು ಇದರ ಬಗ್ಗೆ ವಿದ್ಯಾರ್ಥಿಗಳಿಗೆ ಪರಿಚಯಿಸುವುದು ಸೂಕ್ತ. ಇಲ್ಲವಾದಲ್ಲಿ ಮಕ್ಕಳು ಅರ್ಥಪೂರ್ಣ ಬರಹದಲ್ಲಿ ಈ ತೊಂದರೆ ಅನುಭವಿಸುವ ಆಪತ್ತು ಬಂದರೂ ಬರಬಹುದು. ಅದಕ್ಕಾಗಿ ಸಂದರ್ಭಾನುಸಾರ ಅಂದರೆ ಪಾಠ, ಪದ್ಯದ ಮಧ್ಯ ಮಧ್ಯೆ, ಈ ಚಿಹ್ನೆಗಳ ತಿಳುವಳಿಕೆಗಾಗಿ ಶಿಕ್ಷಕರು ಜವಾಬ್ದಾರಿಯನ್ನು ನಿರ್ವಹಿಸಬೇಕು. ಇದರಿಂದ ಬರವಣಿಗೆ ಕೌಶಲದ ಜೊತೆಗೆ ಸೂಕ್ತವಾದ ಓದುವುವಿಕೆಗೂ ತುಂಬಾ ಸಹಾಯಕ.

ಈ ತರಗತಿಯ ಪಠ್ಯಕ್ರಮದಲ್ಲಿ ಗುಣಿತಾಕ್ಷರಗಳು, ಒತ್ತಾಕ್ಷರಗಳ ಬಳಕೆ, ಅರ್ಥ ಮತ್ತು ರಚನೆಯ ದೃಷ್ಟಿಯಿಂದ ತಿಳುವಳಿಕೆಗೆ ವಿಶಿಷ್ಟವೆನಿಸುವ ಪದಗಳನ್ನು, ವಾಕ್ಯಗಳನ್ನು ವಿಶೇಷವಾಗಿ ಅಭ್ಯಾಸ ಮಾಡಿಸಲು 'ಓದಿ' ಅಭ್ಯಾಸವಿರುವುದು ಕಂಡುಬರುತ್ತದೆ. ಇದರಿಂದ ಮಕ್ಕಳು ಧ್ವನಿ ಹಾಗೂ ಓದಿನಲ್ಲಿನ ಸಮಸ್ಯೆಗಳನ್ನು ಸೂಕ್ತವಾಗಿ ಅರಿತು ಅದಕ್ಕೆ ಸೂಕ್ತವಾದ ಬದಲಾವಣೆ ತರಲು ಈ ಒಂದು ಅಭ್ಯಾಸ ತುಂಬಾ ಸಹಕಾರಿಯಾಗಿದೆ. ಈ ಪದ್ಯ ಪಾಠಗಳ ಬಹುಮುಖ್ಯ ಉದ್ದೇಶ, 'ಅಭ್ಯಾಸದಲ್ಲಿ' ಮಕ್ಕಳು ಪದ್ಯವನ್ನು ಗ್ರಹಿಸಲು, ಕಾವ್ಯಗುಣವನ್ನು ಅರಿಯಲು ಸಹಾಯಕವಾಗುವ ಅಭ್ಯಾಸಗಳಿವೆ. 'ಓದು' ಅಭ್ಯಾಸದಲ್ಲಿ ಪದಗಳಿಗೆ ಅರ್ಥ, ಪ್ರಾಸ ಪದಗಳನ್ನು ಜೋಡಿಯಾಗಿ ಓದಲು, ಪದ್ಯರೂಪವನ್ನು ಗದ್ಯ ರೂಪದಲ್ಲಿ ಓದಲು ಸೂಕ್ತವಾದ ಕೆಲವು ಅಭ್ಯಾಸಗಳಿವೆ. ಎರಡು ಗದ್ಯಪಾಠಗಳು ಮತ್ತು ಒಂದು ಪದ್ಯಪಾಠ ಸೇರಿ ಒಂದು ಬೋಧನಾ ಘಟಕವಾಗುವುದರಿಂದ ಇವನ್ನು ಕಲಿಸಿದ ನಂತರ ಕಲಿಕೆಯ ಮೌಲ್ಯಮಾಪನ ಮಾಡಿದಾಗ ಭಾಷೆಯ ತಿಳುವಳಿಕೆಯ ಮಟ್ಟ ಮಕ್ಕಳಲ್ಲಿ ಯಾವ ಹಂತದಲ್ಲಿದೆ ಎಂಬುದನ್ನು ಸುಲಭೋಪಾಯದಲ್ಲಿ ಕಂಡುಕೊಳ್ಳಬಹುದು.

ಭಾಷಾ ಬೋಧನಾ ಸಫಲತೆಗಾಗಿ ಪ್ರತಿಪಾಠದ ಅಭ್ಯಾಸದ ನಂತರ ಮಕ್ಕಳನ್ನು ಬೋಧನೇತರ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಬಹುದು. ಆಂದರೆ ಹೆಚ್ಚಿನ ಮಾಹಿತಿಗಾಗಿ ಪದ ಹಾಗೂ ವಾಕ್ಯ ರಚನೆಗೆ ಸಂಬಂಧಪಟ್ಟ ವಿಶೇಷ ಅಂಶಗಳು ಪ್ರತಿಪಾಠದಲ್ಲೂ ಪರೋಕ್ಷವಾಗಿ ಒಳಗೊಂಡಿರುವ ಕರ್ತವ್ಯ ನಿಷ್ಠೆ, ಪ್ರಾಣಿದಯೆ, ಸಮಯಪ್ರಜ್ಞೆ ಮೊದಲಾದವುಗಳ ವಿವರ ಮತ್ತು ಚಟುವಟಿಕೆಗೆ ತೊಡಗಿರುವ ಪ್ರಯತ್ನ ನಡೆಸುವುದರಿಂದ ಇಂತಹ ಪಠ್ಯಗಳಲ್ಲಿ ಶೈಕ್ಷಣಿಕ ಹಾಗೂ ಭಾಷಿಕ ಅಭಿವೃದ್ಧಿಯತ್ತ ಕೊಂಡೊಯ್ಯಲು ಸುಲಭ. ಅಲ್ಲದೇ ಭಾಷಾ ಹಾಗೂ ಶೈಕ್ಷಣಿಕ ವೈಫಲ್ಯತೆಗೆ ಸೂಕ್ತವಾದ ಕಾರಣಗಳನ್ನು ಗುರುತಿಸಿಕೊಂಡು ಅದರ ಪರಿಹಾರಕ್ಕೆ ಸೂಕ್ತ ಮಾರ್ಗೋಪಾಯಗಳನ್ನು ಕಂಡುಕೊಳ್ಳಬಹುದು. ಮೊದಲೇ ಹೇಳಿದ ಬೋಧನೇತರ ಚಟುವಟಿಕೆಗಾಗಿ ಪಠ್ಯಕ್ರಮದ ಹಾಗೂ ಭಾಷಿಕ ಅಭ್ಯಾಸದ ನಂತರ ಈ ಕೆಳಗಿನಂತೆ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಬಹುದು.

ಉದಾಹರಣೆಗೆ : ಸೋಮ, ಭೀಮ ಎಂಬ ಪಾಠವನ್ನು ಬೋಧಿಸಿ ನ್ಯಾಯ ಅನ್ಯಾಯದ ತಿಳುವಳಿಕೆ ಬಂದ ನಂತರ ಅಭ್ಯಾಸದಲ್ಲಿ ಭಾಷಿಕ ತಿಳುವಳಿಕೆಯ ಅಂಶಗಳನ್ನು ಹೇಳಿ ಕೊಡಲು ಪ್ರಯತ್ನಿಸಲಾಗಿದೆ. ಜೊತೆಗೆ ಮಕ್ಕಳಿಗೆ ಬಾಳೆ ಹಾಗೂ ಗೆಣಸಿನ ಬೆಳೆ ಹಂಚಿಕೊಂಡ ಕರಡಿ ಮತ್ತು ನರಿಯ ಕಥೆ ಹೇಳಬಹುದು. ನಂತರ ಅಣ್ಣ ತಮ್ಮಂದಿರು ಹಂಚಿಕೊಳ್ಳು, ಮೇಯಿಸತೊಡಗು, ಹೇಳಿಕೊಡು ಮುಂತಾದ ರೂಪಗಳ ಬಳಕೆ, ಸಮಾನತೆ, ನ್ಯಾಯಪರತೆ, ಸಹಬಾಳ್ವೆಗಳ ಮಹತ್ವ ನಾವೆಲ್ಲರೂ ಒಂದೇ ಕುಟುಂಬದವರು ಎಂಬುದರ ಬಗ್ಗೆ ಮಕ್ಕಳಿಗೆ ಹೆಚ್ಚಿನ ತಿಳುವಳಿಕೆಯನ್ನು ತಿಳಿಸಬಹುದು. ಈ ತರಹದ ನಿಟ್ಟಿನಲ್ಲಿ ಪಠ್ಯಪುಸ್ತಕ ರಚನಾ ಸಮಿತಿ ಗುರಿ ಉದ್ದೇಶಗಳನ್ನು ಹಾಕಿಕೊಂಡು ಪಠ್ಯವನ್ನು ರಚನೆ ಮಾಡಿದೆ.

ಈ ನಿಟ್ಟಿನಲ್ಲಿ ಹಾಕಿಕೊಂಡ ಯೋಜನೆಗಳು ಎಷ್ಟರಮಟ್ಟಿಗೆ ಸಫಲತೆಯನ್ನು ಕಂಡುಕೊಂಡಿದೆ ಎಂಬುದು ಮುಖ್ಯ. ಈ ಪಠ್ಯವನ್ನು ನೋಡಿದಾಗ ಕನ್ನಡ ಭಾಷಾ ರಚನೆಯ ದೃಷ್ಟಿಯಿಂದ ಮಾತ್ರ ಈ ಪಠ್ಯ ಸಫಲತೆಯನ್ನು ಕಂಡಿದೆ. ಪ್ರಾಯೋಗಿಕವಾಗಿ ಎಲ್ಲಿಯೂ ಉತ್ತಮವಾದ ಸಫಲತೆಯನ್ನು ಕಾಣುವಲ್ಲಿ ವಿಫಲವಾಗಿದೆ. ಇದಕ್ಕೆ ಬೋಧನಾ ವಿಧಾನ ಕಾರಣವೇ, ಬೋಧಿಸುವ ಶಿಕ್ಷಕರು ಕಾರಣವೇ ಅಥವಾ ಪಠ್ಯಕ್ರಮ ದೋಷವೇ, ಯೋಜನೆಗಳಲ್ಲಿ, ನೀತಿಗಳಲ್ಲಿ ತೊಂದರೆಗಳಿವೆಯೇ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ಪಠ್ಯರಚನೆಯ ದೃಷ್ಟಿಯು ಮುಖ್ಯವಾಗಿರುವುದರಿಂದ ಮಕ್ಕಳಿಗೆ ಕೇವಲ ಕನ್ನಡ ಭಾಷೆಯ ರಚನೆಯನ್ನು ಸಂಕುಚಿತಾರ್ಥದಲ್ಲಿ ಕಲಿಸಲು ನೆರವಾಗುತ್ತದೆ. ಈ ಪಠ್ಯದ ಪಠ್ಯಕ್ರಮವನ್ನೇ ನೋಡಿದಾಗ 'ಬಣ್ಣದ ಬಗರಿ' ಪದ್ಯದಿಂದ ಮಕ್ಕಳು ಭಾಷಾ ದೃಷ್ಟಿಯಿಂದ ಏನನ್ನು ಕಲಿಯುತ್ತಾರೆ ಎಂಬ ಪ್ರಶ್ನೆಯನ್ನು ಪಠ್ಯಕ್ರಮ ರಚನಾ ಸಮಿತಿಯು ಅವಲೋಕಿಸಬೇಕಾಗಿದೆ. ಹಾಗೆಂದ ಮಾತ್ರಕ್ಕೆ ಕನ್ನಡ ಪಠ್ಯದಲ್ಲಿ ಪದ್ಯ ಬೇಡೆಂದರ್ಥವಲ್ಲ. ಈ ಪದ್ಯದಿಂದ ಮಕ್ಕಳು ಆಲಿಸುವುದನ್ನು, ಹಾಡುವುದನ್ನು ಕಲಿಯುತ್ತಾರೆ ಎಂಬ ಅಂಶವನ್ನು ನಾವು ಸುಲಭವಾಗಿ ಹೇಳಬಹುದು. ಆದರೆ ಎಷ್ಟರಮಟ್ಟಿಗೆ ಅದನ್ನು ಆಲಿಸಲು ಪ್ರಯತ್ನಿಸುತ್ತಾರೆ ಎನ್ನುವುದು ಮುಖ್ಯ.

ಇದರಿಂದ ಮಕ್ಕಳು ಭಾಷೆಯ ಪಠ್ಯದಲ್ಲಿ ಕಲಿತಿದ್ದಾದರೂ ಏನು? ಎಂಬ ಪ್ರಶ್ನೆ ನಮ್ಮ ಮುಂದೆ ಬರುವುದು ಸಹಜ. ಈ ಪದ್ಯ ಕಂಠಪಾಠ ಮಾಡಿಸಿ ಉತ್ತಮವಾಗಿ ಹಾಡುವ ಅಭ್ಯಾಸ ನಡೆಸುತ್ತದೆ. ಆದರೆ ಅದೇ ಮಕ್ಕಳಿಗೆ ಪುಸ್ತಕದಲ್ಲಿ ಓದಲು ಹೇಳಿದಾಗ ಹೇಳುವುದು ಒಂದು ಕಡೆ ಪದ್ಯದ ಸಾಲುಗಳನ್ನು ತೋರಿಸುವುದು ಎಲ್ಲೋ ಒಂದು ಕಡೆ, ಇದನ್ನು ನೋಡಿದಾಗ ನಾವು ಯಾವ ಕೌಶಲವನ್ನು ವೃದ್ಧಿಸಿದಂತಾಗುತ್ತದೆ. ಕನ್ನಡ ಭಾಷೆಗಾಗಿ ಕಲಿಕೆಗಾಗಿ ಹಾಕಿಕೊಂಡ ಈ ಯೋಜನೆ ಏಕೆ ವಿಫಲತೆಯನ್ನು ಕಂಡಿತು ಎಂಬುದನ್ನು ಮನಗಂಡಾಗ ಮಾತ್ರ ಇದನ್ನು ಸುಲಭವಾಗಿ ಪರಿವರ್ತಿಸಿಕೊಳ್ಳಬಹುದು. ಮೇಲೆ ಹೇಳಿದ ಈ ಪಠ್ಯಕ್ರಮವು ಮಕ್ಕಳಿಗೆ ಪದರಚನೆ, ವಾಕ್ಯರಚನೆ, ಒತ್ತಕ್ಷರ ತಿಳುವಳಿಕೆ, ಚಿಹ್ನೆಗಳ

ತಿಳುವಳಿಕೆ ನೀಡುವಲ್ಲಿ ಸಮರ್ಥವಾಗಿದೆ ಎಂದು ಹೇಳುವ ಈ ಪಠ್ಯಪುಸ್ತಕ ರಚನಾ ಸಮಿತಿಯು ಅದನ್ನು ಪ್ರಾಯೋಗಿಕವಾಗಿ ನೋಡಿದಾಗ ಇದರ ಸಫಲತೆಗಿಂತ ವಿಫಲತೆ ಹೆಚ್ಚಾಗುವುದನ್ನು ಕಾಣಬಹುದು.

ಉದಾಹರಣೆಗೆ : ೨ನೇ ತರಗತಿಯ ಮಕ್ಕಳ ಬರವಣಿಗೆಯ ಪುಸ್ತಕ ಗಮನಿಸಿದಾಗ ಅವರ ಬರಹದ ಭಾಗಗಳಾದ ಪದರಚನೆ, ಧ್ವನಿಗಳಲ್ಲಿನ ತೊಂದರೆ ವಾಕ್ಯರಚನೆಯಲ್ಲಿನ ತೊಂದರೆಗಳನ್ನು ಕಾಣುತ್ತೇವೆ.

* ಆಧುನಿಕ – ಅದುನಿಕ
* ಧನಸ್ಸು – ದನಸ್ಸು
* ಠಕ್ಕೆ – ಟಕ್ಕೆ

ಇಂತಹ ತಪ್ಪುಗಳು ಪ್ರತಿ ಪುಟಗಳಲ್ಲಿಯೂ ಕಾಣುತ್ತೇವೆ. ಅಷ್ಟೇ ಏಕೆ! ಇವರ ಉತ್ತರ ಪತ್ರಿಕೆಯನ್ನು ನೋಡಿದಾಗ ಬಹುತೇಕ ಉತ್ತರ ಪತ್ರಿಕೆಗಳು ಭಾಷಾ ದೃಷ್ಟಿಯಿಂದ ಗಮನಿಸಿ ನೋಡಿದ್ದೇ ಆದರೆ ಅವರು ತೇರ್ಗಡೆಯಾಗುವುದು ಸಹ ಕಷ್ಟವಾಗುತ್ತದೆ. ಇಲ್ಲಿ ಮೌಲ್ಯಮಾಪನ ನಡೆಯುವುದೆಲ್ಲ ಪಠ್ಯಕ್ರಮ ಆಧಾರಿತವೇ ಹೊರತು ಭಾಷಾದೃಷ್ಟಿಯಿಂದ ಅಲ್ಲ ಎಂಬುದು ಅವರ ಅಂಕಗಳ ಉತ್ತರಪತ್ರಿಕೆ ನೋಡಿದಾಗ ಸ್ಪಷ್ಟವಾಗುತ್ತದೆ.

ಈ ಮೇಲಿನ ಎರಡನೇ ತರಗತಿಯ ಕನ್ನಡ ಭಾಷಾ ಪಠ್ಯಕ್ರಮದಲ್ಲಿ ಅಮೂಲಾಗ್ರ ಬದಲಾವಣೆಯನ್ನು ಕಾಣುತ್ತೇವೆ. ಈ ಹಿಂದೆ (ನನಗೆ ದೊರೆತ ಪಠ್ಯಾನುಸಾರ) ಅಂದರೆ ೧೯೮೬ರ ಪೂರ್ವದಲ್ಲಿ ಪಠ್ಯಗಳು ಈ ರೀತಿ ರಚನೆಯಾದ ದಾಖಲೆಗಳು ಸಿಗುವುದಿಲ್ಲ. ಆ ಸಂದರ್ಭದಲ್ಲಿ ಕೇವಲ ಮಕ್ಕಳಿಗೆ ಪಠ್ಯವನ್ನು ಕಾವ್ಯಭ್ಯಾಸ ಮತ್ತು ಹಳೆಗನ್ನಡದ ಪಠ್ಯಗಳನ್ನು ಕಾಣುತ್ತೇವೆ. ಆಭ್ಯಾಸದಲ್ಲಿ ಪ್ರಶ್ನೆಗಳು ಮಾತ್ರ ಕಾಣಿಸಿಕೊಳ್ಳುತ್ತವೆ. ಆದರೆ ಈ ಶಿಕ್ಷಣ ನೀತಿ ಅನ್ವಯ ಕನ್ನಡ ಭಾಷಾ ಪಠ್ಯಗಳು ಸೃಜನಶೀಲ ಚಟುವಟಿಕೆಯಲ್ಲಿ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಈ ಕಾಲ ಘಟ್ಟದ ಪಠ್ಯಗಳು ಮಗುವಿನ ಸರ್ವತೋಮುಖ ಅಭಿವೃದ್ಧಿಯ ಕಡೆಗೆ ನಾಂದಿ ಹಾಡಿದ್ದರೂ, ಮಾಧ್ಯಮದ ದೃಷ್ಟಿಯಿಂದ ಸುಧಾರಣೆಯಾಗಬೇಕಿದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ ಸೂಚಿಸಲಾದ ೧೦ ಮೂಲಾಂಶಗಳು ಹಾಗೂ ೮೪ ಮಾನವೀಯ ಮೌಲ್ಯಗಳನ್ನು ಆಧರಿಸಿ ಪಠ್ಯಗಳು ರಚನೆಯಾಗುತ್ತಾ, ಪರಿಷ್ಕರಣಗೊಳ್ಳುತ್ತಾ ಬಂದಿರುವುದನ್ನು ಇಂದಿನ ಪಠ್ಯದಲ್ಲಿಯೂ ಗುರುತಿಸಬಹುದಾಗಿದೆ. ೨೦೦೧–೨೦೦೨ನೇ ಶೈಕ್ಷಣಿಕ ವರ್ಷದಿಂದ ಕರ್ನಾಟಕ ರಾಜ್ಯಾದ್ಯಂತ ೧ರಿಂದ ೪ನೇ ತರಗತಿವರೆಗಿನ ನಾಲ್ಕು ಪಠ್ಯಗಳನ್ನು 'ಕನ್ನಡ ಕಲಿ–ನಲಿ' ಎಂಬ ಹೆಸರಿನಲ್ಲಿ ರಚನೆಗೊಂಡಂತವು ಗಳಾಗಿವೆ. ಈ ಪಠ್ಯಗಳಲ್ಲಿ ಅಭ್ಯಾಸ ಚಟುವಟಿಕೆಗಳ ಮೂಲಕ ಬೋಧನೆ ಮತ್ತು ಮೌಲ್ಯಮಾಪನ

ಮಾಡುವ ರೀತಿಯಲ್ಲಿ ರಚನೆಯಾಗಿವೆ. ಅಲ್ಲದೇ ಕಲಿಕೆಯ ಕನಿಷ್ಠ ಮಟ್ಟದ ತತ್ವಗಳನ್ನು ಅಳವಡಿಸಿಕೊಂಡು ಪಠ್ಯಕ್ರಮ ರಚನೆಯಾಗಿದೆ. ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರು ಮುನ್ನುಡಿಯ ಭಾಗದಲ್ಲಿ ತಿಳಿಸಿದ್ದಾರೆ.

ಮಾತೃಭಾಷೆಯಾಗಿ ಕನ್ನಡ ಕಲಿಯುವ ಸಂದರ್ಭದಲ್ಲಿ ಕನ್ನಡ ಭಾಷಾ ಬಳಕೆಯನ್ನು ಪ್ರಚಲಿತ ಶಿಕ್ಷಣದ ಸಿದ್ಧಾಂತದ ಅನ್ವಯ ವೈಜ್ಞಾನಿಕ ರೀತಿಯಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಈ ನಾಲ್ಕು ಪಠ್ಯಗಳಲ್ಲಿ ಆಲಿಸುವ, ಮಾತನಾಡುವ, ಓದುವ ಹಾಗೂ ಬರೆಯುವ ಭಾಷಾ ಕೌಶಲಗಳನ್ನು ಕಲಿಸುವುದರ ಜೊತೆಗೆ ಮಕ್ಕಳ ಸುತ್ತಮುತ್ತಲಿನ ಪರಿಸರ, ನಾಡಿನ ಸಂಸ್ಕೃತಿ, ನಾಡಹಬ್ಬಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಇದರ ಜೊತೆಗೆ ಮಕ್ಕಳ ಸಾಮರ್ಥ್ಯಾನುಸಾರ ಅಭ್ಯಾಸ ಮತ್ತು ಭಾಷಾಭ್ಯಾಸ ಚಟುವಟಿಕೆಗಳು ಸೃಜನಶೀಲ ರೀತಿಯಲ್ಲಿ ಕಲಿಕೆಯಾಗುವಂತೆ ಅಭ್ಯಾಸ ಸಹಿತ ಪಠ್ಯಕ್ರಮ ರಚನೆಯಾಗಿದೆ.

ಉದಾಹರಣೆಗೆ:– ಕನ್ನಡ 'ನಲಿ–ಕಲಿ' ಒಂದನೇ ತರಗತಿ (೨೦೦೨)ಯ ಪಠ್ಯಪುಸ್ತಕವಾಗಿದೆ. ಇದರಲ್ಲಿ ಚಿತ್ರ ನೋಡಿ ಮಕ್ಕಳು ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದನ್ನು ಕಲಿಕೆಯಾಗುವ ರೀತಿಯಲ್ಲಿ ಪಠ್ಯಕ್ರಮ ರಚನೆಗೊಂಡಿದೆ. ಒಂದೊಂದು ಅಕ್ಷರಕ್ಕೂ ಸೂತ್ರಧಾರಿತವಾಗಿ ರಚನೆಯಾಗಿ ಕಲಿಸುವ ಪ್ರಕ್ರಿಯೆಯನ್ನು ಕಾಣುತ್ತೇವೆ. ಈ ಕಲಿಕೆ ಅಕ್ಷರಗಳನ್ನೇ ಮುಂದಿನ ಪಾಠಕ್ಕೆ ಪೀಠಿಕೆಯಾಗಿ ಬಳಸಿ, ಕಲಿತ ಅಕ್ಷರಗಳನ್ನು, ಪದಗಳನ್ನು ನೆನಪಿಸಿ ನಂತರ ಮುಂದಿನ ಅಕ್ಷರ ಕಲಿಕಾ ಸೂತ್ರಧಾರಿತವಾಗಿ ಪಾಠಗಳು ಮುಂದುವರೆಯುವುದನ್ನು ಈ ಪಠ್ಯದಿಂದ ಗಮನಿಸಬಹುದಾಗಿದೆ. ಹೀಗೆ ಅಕ್ಷರ ಕಲಿಯುವುದು, ಕಲಿತಿರುವ ಅಕ್ಷರಗಳಿಂದ ಪದಗಳನ್ನು, ವಾಕ್ಯಗಳನ್ನು ರಚಿಸುವ ರೀತಿಯಲ್ಲಿ ಪಠ್ಯಕ್ರಮ ರಚನೆಯಾಗಿದೆ. ಇದರ ಸಹಾಯದಿಂದ ಓದುವುದು ಮತ್ತು ಬರೆಯುವ ಕೌಶಲ ನಿರಂತರ ಕಲಿಕೆಯ ಪ್ರಕ್ರಿಯೆಯಲ್ಲಿ ಸಾಗಿದೆ. ಈ ಕಲಿಕೆಯು ಸ್ಪಷ್ಟವಾದ ಮೇಲೆ ಮೂಲಾಕ್ಷರ ವರ್ಣಮಾಲೆಯನ್ನು ಪರಿಚಯಿಸಿಕೊಡಲಾಗಿದೆ. ಅದರಂತೆ ಪುನಃ ಮಕ್ಕಳು ಅಕ್ಷರ ಗುರುತಿಸಿ ಪದ ಓದಿ, ಗುಣಿತಾಕ್ಷರದ ಪರಿಚಯ, ಗುಣಿತಾಕ್ಷರ ಪದರಚನೆ ಮತ್ತು ವಾಕ್ಯ ರಚನೆಯ ಕಲಿಕೆಗಾಗಿ ಪಾಠಗಳನ್ನು ಕೊಡಲಾಗಿದೆ. ಒತ್ತಕ್ಷರ ತಿಳುವಳಿಕೆಗಾಗಿ ಪದರಚನೆ, ಓದು ಮತ್ತು ಸ್ವ ರಚನೆಗೆ ಅವಕಾಶ ಮಾಡಿಕೊಡಲಾಗಿದೆ. ಈ ಪಠ್ಯದಲ್ಲಿ ಮಕ್ಕಳಿಗೆ ಆಲಿಸುವಿಕೆಗೆ ಹೆಚ್ಚು ಒತ್ತು ಕೊಟ್ಟು ಮೊದಲನೇ ಒಂದು, ಎರಡು, ಮೂರು, ನಾಲ್ಕು, ಮತ್ತು ಆರನೇ ಪಾಠಗಳು ಈ ಸಾಮರ್ಥ್ಯಕ್ಕಾಗಿಯೇ ಕೊಟ್ಟಿರುವ ಅಂಶ ಸ್ಪಷ್ಟವಾಗುತ್ತದೆ. ಬರಹ ಕಲಿಸಲು ರೇಖಾವಿನ್ಯಾಸ, ಓದು ಬರಹ ಒಟ್ಟೊಟ್ಟಿಗೆ ಸೂತ್ರ ಬದ್ಧವಾಗಿ ನಡೆಯುತ್ತಿರುವುದು ಈ ಪಠ್ಯಕ್ರಮದಿಂದ ಸ್ಪಷ್ಟವಾಗುತ್ತದೆ.

ಹಿರಿಯ ಪ್ರಾಥಮಿಕ ಕನ್ನಡ ಭಾಷಾ ಪಠ್ಯಪುಸ್ತಕಗಳು ಕನ್ನಡ ಕಸ್ತೂರಿ ೫, ೬, ೭, ಎಂಬ ಹೆಸರಿನಲ್ಲಿ ರಚನೆಗೊಂಡಿವೆ. ಇಲ್ಲಿಯೂ ಸಹ ಕಲಿಕೆಯ ಕನಿಷ್ಟ ಸಾಮರ್ಥ್ಯಗಳನ್ನು

ಗುರುತಿಸಿಕೊಂಡು ಸಮನಾಂತರ ಶ್ರೇಣಿಕೃತ ಅನ್ವಯ ಪಠ್ಯಕ್ರಮವನ್ನು ರಚನೆಮಾಡಿ, ಬೋಧನೆಗೆ ವ್ಯವಸ್ಥೆ ಮಾಡಿರುವುದನ್ನು ಈ ಎಲ್ಲಾ ಪಠ್ಯಗಳಲ್ಲಿ ಕಾಣಬಹುದಾಗಿದೆ. ಲಿಂಗ ಸಮಾನತೆಗೆ ಹೆಚ್ಚಿನ ಮನ್ನಣೆ ನೀಡಿರುವುದನ್ನು ಗುರುತಿಸಬಹುದಾಗಿದೆ. ಮಕ್ಕಳಿಗೆ ಆಸಕ್ತಿ ಹುಟ್ಟಿಸುವ ಸಲುವಾಗಿ ಮತ್ತು ಭಾಷಾ ರಚನಾಂಶಗಳನ್ನು ಉದ್ದೀಪನಗೊಳಿಸುವ, ತಾತ್ವಿಕ ಹಾಗೂ ಪ್ರಾಯೋಗಿಕ ಪ್ರಯತ್ನಗಳ ಫಲವಾಗಿ ಈ ಪಠ್ಯಗಳು ರಚನೆಯಾಗಿರುವುದು ಸ್ಪಷ್ಟವಾಗುತ್ತದೆ. ಮಕ್ಕಳಿಗೆ ಅಭ್ಯಾಸ, ಭಾಷಾಭ್ಯಾಸ ಚಟುವಟಿಕೆಗಳನ್ನು ಕೊಡಲಾಗಿದೆ. ಚಟುವಟಿಕೆಗಳಿಂದ ಮಕ್ಕಳು ಸ್ವ ಕಲಿಕೆಯ ಮೂಲಕ ಕಲಿಯಲು ಸಹಾಯಕವಾಗಬಲ್ಲದು. ತರಗತಿಗನುಸಾರ ಮಕ್ಕಳ ಗ್ರಹಿಕೆಗೆ ಅನುಗುಣವಾಗಿ ಬಹುಆಯ್ಕೆ ಪ್ರಶ್ನೆ, ಬಿಟ್ಟಸ್ಥಳ ತುಂಬಿ, ಹೊಂದಿಸಿ ಬರೆಯಿರಿ ಎಂಬ ಇತ್ಯಾದಿ ಚಟುವಟಿಕೆಗಳನ್ನು ಕೊಟ್ಟಿದೆ. ಹೀಗೆಯೇ ವೈಜ್ಞಾನಿಕ ಮತ್ತು ತಾತ್ವಿಕ ಹಿನ್ನೆಲೆಯಲ್ಲಿ ಪಾಠ, ಪದ್ಯಗಳು ಮತ್ತು ಅಭ್ಯಾಸ ಚಟುವಟಿಕೆಗಳನ್ನು ಕೊಟ್ಟಿರುವುದನ್ನು ಕಾಣಬಹುದು.

ಉದಾಹರಣೆಗೆ : ಕನ್ನಡ ಕಸ್ತೂರಿ ಆರನೇ ಪುಸ್ತಕದಲ್ಲಿ ನೋಡಬಹುದಾಗಿದೆ. ಈ ಪಠ್ಯದಲ್ಲಿ ಸುಮಾರು ೧೫೧ ಪುಟದಲ್ಲಿ ರಚನೆಯಾಗಿದೆ. ೨೩ ಪಾಠಗಳು, ೧೪ ಪದ್ಯಪಾಠಗಳಿವೆ. 'ದಸರಾ', ಚದುರಂಗ, ಪಂಡಿತ ತಾರಾನಾಥ, ಸಂಗೀತ ಸಾಮ್ರಾಜ್ಞೆ ಸುಬ್ಬಲಕ್ಷ್ಮಿ, ಶಾಂತವೇರಿ ಗೋಪಾಲಗೌಡ ಎಂಬ ಇತ್ಯಾದಿ ಪಾಠಗಳನ್ನು ಕೊಡಲಾಗಿದೆ. ಅಂದರೆ ನಾಡಿಗಾಗಿ ದುಡಿದ ವ್ಯಕ್ತಿಗಳನ್ನು ಪರಿಚಯಿಸಿದೆ. ನಾಡ ಹಬ್ಬಗಳನ್ನು ವಿಶ್ಲೇಷಿಸಿದೆ. ಅಲ್ಲದೆ 'ಕನ್ನಡಿಗರಿಗೆ ಟಿಪ್ಪುವಿನ ಪತ್ರ' ಎಂಬ ಪಾಠದಲ್ಲಿ ಬ್ರಿಟೀಷರ ವಿರುದ್ಧ ಹೋರಾಟದ ಕೊನೆಯ ಕ್ಷಣಗಳನ್ನು ಟಿಪ್ಪು ನೆನಪಿಸಿಕೊಂಡಂತೆ ಪತ್ರ ರಚಿಸಲಾಗಿದೆ. ಪ್ರವಾಸ ಕಥನ ಎಂಬ ಪಾಠದಲ್ಲಿ ಕೊಡಲಾಗಿದೆ. ಇದರಲ್ಲಿ ವಿಜಾಪುರ, ಪಟ್ಟದಕಲ್ಲು, ಐಹೊಳೆ, ರಾವಳ ಫಡಿ, ಬಾದಾಮಿಯ ಶಿಲ್ಪ ಕಲಾ ವೈಭವವನ್ನು ವಿವರಿಸಲಾಗಿದೆ. ಮುಂದೆ 'ಸಮೂಹ ಮಾಧ್ಯಮ' ಗಳು ಎಂಬ ಪಾಠ ಕೊಟ್ಟಿದೆ. ಇದರಲ್ಲಿ ಸಮೂಹ ಮಾಧ್ಯಮದಿಂದ ಪ್ರಪಂಚ ಹತ್ತಿರವಾಗಿದೆ ಎಂಬ ಸಂದೇಶದ ರೀತಿಯಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಈ ಎಲ್ಲಾ ಪಾಠಗಳ ನಂತರ 'ಕಾಣಿಕೆ' (ಬಿ.ಎಮ್.ಶ್ರೀ), 'ಪಂಜರದ ಪಕ್ಷಿ' (ಸಿದ್ದಣ್ಣ ಮಸಳಿ), 'ಚುಟುಕುಗಳು' (ದಿನಕರ ದೇಸಾಯಿ), 'ಗೋವಿನ ಬಾಳು' (ಎಸ್.ಜಿ. ನರಸಿಂಹಾಚಾರ್ಯ), 'ವನಸುಮ' (ಡಿ.ವಿ.ಜಿ), 'ಸ್ವಾಭಿಮಾನಿ ಅಂಬೇಡ್ಕರ್' (ಬಾಬು ಭಂಡಾರಿಗಲ್), 'ತ್ರಿಪದಿಗಳು' (ಸರ್ವಜ್ಞ ಮತ್ತು ಜನಪದ), 'ಪರಿಹಾಸ್ಯ' (ಪುರಂದರ ದಾಸರು) 'ಕನ್ನಡ ನಾಡಿನ ವರ್ಣನೆ' (ವಿರುಪಾಕ್ಷ ಪಂಡಿತ) ಇವು ಪದ್ಯ ಹಾಗು ಪಾಠಗಳಾಗಿವೆ.

ಒಟ್ಟಾರೆಯಾಗಿ ಈ ಪುಸ್ತಕವು ಕನ್ನಡ ಭಾಷಾ ಚಟುವಟಿಕೆಗಳನ್ನು ಕಲಿಸುವುದರ ಜೊತೆಗೆ ಮಕ್ಕಳ ಸಾಮರ್ಥ್ಯಾನುಸಾರ ಭೌಗೋಳಿಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಕನ್ನಡ ನಾಡಿನ ವೈಭವದ ಪರಂಪರೆಯನ್ನು ವಿವರಿಸಲು ಪ್ರಯತ್ನಿಸಿದೆ. ಇದರ ಉದ್ದೇಶ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಸ್ಪಂದಿಸುವ ನಿಟ್ಟಿನಲ್ಲಿ ಈ ಕಾಲದ ಪಠ್ಯಗಳು

ರಚನೆಯಾಗಿರುವುದು ಸ್ಪಷ್ಟವಾಗುತ್ತದೆ. ಈ ರೀತಿಯಾಗಿ ರಚನೆಯಾದ ಪಠ್ಯಕ್ರಮವನ್ನು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಅನ್ವಯ (ಹಿಂದೆ ವಿವರಿಸಿದಂತೆ) ಪ್ರಾಥಮಿಕ ಶಿಕ್ಷಣ ಮಾಧ್ಯಮ ಮಾತೃಭಾಷೆಯಲ್ಲಿ ನಡೆಯಲು ಪ್ರಾರಂಭವಾಯಿತು. ಆದರೆ ಈ ಸಮಸ್ಯೆ ಪರಿಪೂರ್ಣವಾಗದೇ ಪುನಃ ಇಂಗ್ಲೀಶನ್ನು ಒಂದನೇ ತರಗತಿಯಿಂದಲೇ ಕಲಿಸಬೇಕು ಎಂಬ ಪ್ರಯತ್ನಕ್ಕೆ ಪರ, ವಿರೋಧಗಳು ನಡೆಯುತ್ತಾ ಬಂದಿವೆ. ಈ ಎಲ್ಲಾ ಪ್ರಯತ್ನಗಳ ಬಳಿಕ ೧೯೯೮ರಲ್ಲಿ ಚಂಪಾ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿ ನೇಮಕವಾಗಿ ೧ರಿಂದ ೭ನೇ ತರಗತಿವರೆಗೆ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯ ಶಿಕ್ಷಣ ಮಾಧ್ಯಮವಾಗಬೇಕು ಎಂದು ವರದಿಯನ್ನು ಸಲ್ಲಿಸಿತು. ಸರಕಾರ ಇದನ್ನು ಅಂಗೀಕರಿಸಿತು. ಈ ಅಂಗೀಕಾರಕ್ಕೆ ತೃಪ್ತವಾಗದ ಕನ್ನಡ ಮತ್ತು ಇಂಗ್ಲೀಶ್ ಎಂಬ ಎರಡು ಬಣಗಳು ಚರ್ಚೆ ಮುಂದುವರೆಸಿದವು. ಈ ಸಮಸ್ಯೆಗೆ ಪರಿಹಾರವಾಗಿ ಬರಗೂರು ರಾಮಚಂದ್ರಪ್ಪನವರನ್ನೊಳಗೊಂಡ ಸಮಿತಿ ರಚನೆಯಾಯಿತು. ಈ ಸಮಿತಿಯು ಪ್ರಚಲಿತ ಮಾಧ್ಯಮದ ಸಮಸ್ಯೆಗೆ ಅನುಗುಣವಾಗಿ ಎಸ್.ಎಮ್. ಕೃಷ್ಣ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿತು. ಇದರ ಶಿಫಾರಸ್ಸಿನ ಅನ್ವಯ ಸರ್ಕಾರ ಕನ್ನಡೇತರ ಮಾಧ್ಯಮದವರಿಗೆ ಕನ್ನಡ ಭಾಷಾ ಕಲಿಕೆ ಮೂರನೇ ಭಾಷೆಯಾಗಿ ಐದನೇ ತರಗತಿಯಿಂದ ಕಡ್ಡಾಯವಾಗಿ ಕಲಿಸಬೇಕೆಂದು ಸೂಚಿಸಿತು. ಈ ಚಿಂತನೆಯ ಜೊತೆಗೆ ಮಕ್ಕಳಿಗೆ ಒಂದನೆ ತರಗತಿಯಿಂದಲೇ ಇಂಗ್ಲೀಶ್ ಒಂದು ಭಾಷೆಯಾಗಿ ಕಲಿಸಲು ಪ್ರಯತ್ನಗಳು ನಡೆಸಿದವು. ಇದರ ಪರಿಣಾಮವಾಗಿ ಸರ್ಕಾರ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಒಂದು ಭಾಷೆಯಾಗಿ ಕಲಿಸಲು ಪ್ರಯತ್ನಿಸಿತು. ಆದರೂ ಸಹ ತೃಪ್ತವಾಗದ ಕನ್ನಡ ಮತ್ತು ಇಂಗ್ಲೀಶ್ ಮಾಧ್ಯಮವಾದಿಗಳ ಪರ ವಿರೋಧದ ಅಂಶಗಳು ಕೇಳಿ ಬಂದವು. ಸರ್ಕಾರ ಈ ವಿಚಾರದ ಬಗ್ಗೆ ಜಟಿಲವಾದ ಸಮಸ್ಯೆಯನ್ನು ಎದುರಿಸುತ್ತಾ ಬಂದಿರುವುದನ್ನು ಇಂದಿನ ಸರ್ಕಾರದಲ್ಲೂ ಕಾಣುತ್ತೇವೆ. ಹೀಗೆ ಭಾಷಾ ಮಾಧ್ಯಮ ಕನ್ನಡ ಕಲಿಕೆಯ ಶಾಲೆಗಳಲ್ಲಿ ಕನ್ನಡವನ್ನುಳಿಸುವ ಹೋರಾಟ ಎಂಬ ಚಳುವಳಿಗಳೇನೋ ಹುಟ್ಟಿಕೊಂಡು ಬಹಳ ವರ್ಷಗಳನ್ನೇ ಕಳೆದಿದ್ದೇವೆ. ಆದರೆ ಈ ಮಾಧ್ಯಮದ ಬಗ್ಗೆ ಇನ್ನೂ ಸ್ಪಷ್ಟವಾದ, ನಿಖರವಾದ ಸರ್ವಸಮ್ಮತವಾದ ನಿರ್ಣಯ ತೆಗೆದುಕೊಳ್ಳದೆ ಕರ್ನಾಟಕದ ವಿದ್ವಾಂಸರು, ಚಿಂತಕರು, ಶೈಕ್ಷಣಿಕ ಮನೋವಿಜ್ಞಾನಿಗಳು ಮತ್ತು ಸರ್ಕಾರ ತೊಳಲಾಟದಲ್ಲಿರುವುದನ್ನು ಇಂದಿಗೂ ಕಾಣಬಹುದಾಗಿದೆ. ತೊಳಲಾಟವನ್ನು ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿಯೂ ಮತ್ತು ಇತರೆ ಎಲ್ಲಾ ಪ್ರಾಥಮಿಕ ಪಠ್ಯಗಳಲ್ಲಿಯೂ ಗುರುತಿಸಬಹುದಾಗಿದೆ. ಮಾಧ್ಯಮದ ಬಗ್ಗೆ ಮಾತನಾಡುತ್ತಿರುವ ಚಿಂತಕರು, ಕನ್ನಡ ಭಾಷಾಶಾಸ್ತ್ರಜ್ಞರು, ಶೈಕ್ಷಣಿಕ ಮನೋವಿಜ್ಞಾನಿಗಳು ಹಾಗೂ ಸಾಹಿತಿಗಳು ಕನ್ನಡ ಮಾಧ್ಯಮದಲ್ಲಿ ಕಲಿಯುವ ಪಠ್ಯಗಳ ಬಗ್ಗೆಯಾಗಲಿ ಪಠ್ಯಕ್ರಮದ ಬಗ್ಗೆಯಾಗಲಿ ಮಾತನಾಡುವವರ ಸಂಖ್ಯೆ ತುಂಬಾ ವಿರಳವಾದುದು ಎಂದು ಹೇಳಬಹುದು. ಮಾಧ್ಯಮದ ಬಗ್ಗೆ ಮಾತನಾಡುವವರು ಪಠ್ಯಕ್ರಮದ ಬಗ್ಗೆ ಯೋಚಿಸುತ್ತಿಲ್ಲ. ಏಕೆಂದರೆ ಪ್ರಾಥಮಿಕ ಪಠ್ಯಗಳೆಲ್ಲವೂ ಕನ್ನಡ ಮಾಧ್ಯಮದಲ್ಲಿಯೇ ರಚನೆಯಾಗಿವೆ ಎಂದು ತಿಳಿದಿರಬೇಕು.

ಆದರೆ ಇಲ್ಲಿ ವಾಸ್ತವವಾಗಿಲ್ಲ. ಅಲ್ಲದೆ ಲಿಪಿ ಬಳಕೆ ಕನ್ನಡದ್ದಾಗಿದೆ. ಅಲ್ಲಿ ಕಲಿಯುವ ಪಠ್ಯಕ್ರಮ ವಿಧಾನ ಮತ್ತು ಪದಗಳು, ವಾಕ್ಯಗಳ ರಚನೆ, ವ್ಯಾಕರಣಗಳೆಲ್ಲವೂ ಮತ್ತು ಬೋಧನಾ ವಿಧಾನ ಶಿಕ್ಷಣದ ತತ್ವಗಳು ಮಾತ್ರ ಸಂಸ್ಕೃತ ಮತ್ತು ಇಂಗ್ಲೀಶ್ ಭಾಷೆಗೆ ಸಂಬಂಧಿಸಿದ ರೀತಿಯಲ್ಲಿ ರಚನೆಯಾಗಿವೆ. ಪ್ರಾಥಮಿಕ ಹಂತದಲ್ಲಿ ಕನ್ನಡ ಪದಗಳಿದ್ದು ಇಂಗ್ಲೀಶ್ ಪದಗಳನ್ನು ಬಳಸಲಾಗಿದೆ. ಉದಾಹರಣೆಗೆ : ಕಂಡಕ್ಟರ್, ಪೋಲಿಸ್, ಕಂಪ್ಯೂಟರ್, ಅಷ್ಟೇ ಅಲ್ಲದೇ ವಾಕ್ಯದ ರಚನೆಯಲ್ಲೂ ಇಂಗ್ಲೀಶ್ ಬಳಕೆಯನ್ನು ಸಹಜವಾಗಿ ಕಾಣುತ್ತೇವೆ.

ಉದಾ:– ಕಂಪ್ಯೂಟರ್ ಎಂದರೇನು?

ಸಾಪ್ಟ್‌ವೇರ್ ಎಂದರೇನು? ಇತ್ಯಾದಿ ಪ್ರಶ್ನೆಗಳನ್ನು ಕೊಟ್ಟಿರುವಂತೆ ಪಾಠದ ವಾಕ್ಯಗಳಲ್ಲಿಯೂ ಸಹಜವಾಗಿ ಬಳಸಲಾಗಿದೆ. ಇದರ ಜೊತೆಗೆ ಸಂಸ್ಕೃತದ ಪದ ಮತ್ತು ವಾಕ್ಯಗಳು ಕನ್ನಡ ಭಾಷಾ ಪಠ್ಯಗಳಲ್ಲಿ ಕನ್ನಡದ ಪದ, ವಾಕ್ಯಗಳೆನ್ನುವಷ್ಟರ ಮಟ್ಟಿಗೆ ರಚನೆಗೊಂಡಿವೆ. "ಇಲ್ಲಿ ಕಲಿಸುವ ಧ್ವನಿ, ಪದ, ವಾಕ್ಯ ಮತ್ತು ವ್ಯಾಕರಣದ ನಿಯಮಗಳೆಲ್ಲವು ಹೆಚ್ಚಾನು ಹೆಚ್ಚು ಸಂಸ್ಕೃತದಲ್ಲಿ ನೇರವಾಗಿ ಕೊಡಲಾಗಿದೆ" ಎಂದು ಡಿ.ಎನ್. ಶಂಕರಭಟ್ಟರು ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಎಂಬ ಪುಸ್ತಕದಲ್ಲಿ ಸ್ಪಷ್ಟಪಡಿಸುತ್ತಾರೆ. ಇವರ ಮಾತುಗಳು ನಿಖರವೆಂದು ಇಲ್ಲಿ ಬಳಕೆಯಾದ ಪದಗಳು, ವಾಕ್ಯಗಳು ಮತ್ತು ವ್ಯಾಕರಣದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಮಾಧ್ಯಮದ ಬಗ್ಗೆ ಚರ್ಚೆ ಮಾಡುವ ಜನತೆ ಮೊದಲು ಪಠ್ಯಕ್ರಮದಲ್ಲಿ ಬಳಕೆಯಾದ ಭಾಷಾ ಮಾಧ್ಯಮವನ್ನು ಸರಿಪಡಿಸಿ ನಂತರ ಶಿಕ್ಷಣ ಮಾಧ್ಯಮವನ್ನು ಕನ್ನಡ ಮಾಧ್ಯಮವಾಗಿ ಮಾಡುವುದರ ಬಗ್ಗೆ ಯೋಚಿಸಬೇಕಾಗುತ್ತದೆ. ಇನ್ನು ಗಣಿತ, ಸಮಾಜ ವಿಜ್ಞಾನ ಪಠ್ಯಗಳಲ್ಲಿಯೂ ಕಲಿಸುವ ಕಲಿಕೆ ಮತ್ತು ಬಳಕೆಯಾದ ಪದ ವಾಕ್ಯಗಳು ಅನ್ಯಭಾಷೆಯಾದವುಗಳಾಗಿವೆ. ಹೀಗಿದ್ದಾಗ ಶಿಕ್ಷಣ ಮಾಧ್ಯಮದ ಬಗ್ಗೆ ನಾವು ಚಳುವಳಿ ಮಾಡುತ್ತಿರುವುದು ಎಷ್ಟೊಂದು ಸಮಂಜಸ ಹಾಗೂ ಅದರ ಪರಿಣಾಮವೇನು ಎಂಬುದನ್ನು ಇದಕ್ಕೆ ಸಂಬಂಧಿಸಿದ ವಿದ್ವಾಂಸರೆಲ್ಲರೂ ಯೋಚಿಸುವ ಅಗತ್ಯತೆ ತುಂಬಾ ಇದೆ ಎಂಬುದು ಈ ಪಠ್ಯಕ್ರಮಗಳ ರಚನೆಯಿಂದ ಸ್ಪಷ್ಟವಾಗುತ್ತದೆ.

ಪಠ್ಯಕ್ರಮ ಮಾಧ್ಯಮದ ಒಂದು ಮುಖ್ಯ ಭಾಗವಾಗಿ ಶಿಕ್ಷಣ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಇಂತಹ ಸಂದರ್ಭದಲ್ಲಿ ಪಠ್ಯಕ್ರಮದಲ್ಲಿ ರಚನೆಯಾದ ಧ್ವನಿ, ಪದ, ವಾಕ್ಯ, ಚಟುವಟಿಕೆ ಹಾಗೂ ವ್ಯಾಕರಣಗಳೆಲ್ಲವೂ ಬೋಧಿಸುತ್ತಿರುವ ಭಾಷಾ ಮಾಧ್ಯಮ ಭಾಷಾ ನಿಯಮಕ್ಕೆ ಒಳಪಟ್ಟು ರಚನೆಯಾಗಿರುವುದನ್ನು ಕಾಣುವುದಿಲ್ಲ. ಇಂತಹ ಸನ್ನಿವೇಶದಲ್ಲಿ ಶಿಕ್ಷಣ ಮಾಧ್ಯಮದ ಭಾಷೆಯಂತೆ ಪಠ್ಯಕ್ರಮ ರಚನೆ ಮಾಡಿಕೊಳ್ಳುವುದು ಅಗತ್ಯತೆ ಇದೆ ಎಂಬುದು ಸ್ಪಷ್ಟವಾಗುತ್ತದೆ.

• • •

## ಅಧ್ಯಾಯ : ಆರು

# ಪ್ರಾಥಮಿಕ ಹಂತದ ಶಿಕ್ಷಣದ ಭಾಷೆ ಮತ್ತು ಮಾಧ್ಯಮ ಕುರಿತು ನಡೆದ ವಾಗ್ವಾದಗಳು

---

## ಅಧ್ಯಾಯ : ಆರು

# ಪ್ರಾಥಮಿಕ ಹಂತದ ಶಿಕ್ಷಣದ ಭಾಷೆ ಮತ್ತು ಮಾಧ್ಯಮ ಕುರಿತು ನಡೆದ ವಾಗ್ವಾದಗಳು

ಮಗು ಹುಟ್ಟಿನಿಂದಲೇ ಎರಡು ಬಳುವಳಿಗಳನ್ನು ಪಡೆದುಕೊಂಡಿರುತ್ತದೆ. ಒಂದು ಒಡಲು ಮತ್ತೊಂದು ನುಡಿ. ಒಡಲು 'ದೇಹ', ಅಂದರೆ ಶರೀರವನ್ನು ಸೂಚಿಸುತ್ತದೆ. ಇದು ಪರಿಸರದಲ್ಲಿ ಮಗು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಮುಖ್ಯವಾದರೆ, ಅದೇ ಪರಿಸರದಲ್ಲಿ ಮಗು ತನ್ನ ಇರವನ್ನು ವ್ಯಕ್ತಪಡಿಸುವ ಮೂಲ ಆಧಾರ 'ನುಡಿ' ಆಗಿರುತ್ತದೆ. ಅಂದರೆ ಭಾಷೆ, ಮಾಧ್ಯಮವೇ ನುಡಿಯಾಗಿರುತ್ತದೆ. ಮಗು ಭಾಷೆಯನ್ನು ತನ್ನ ಪರಿಸರದ ಬಳಕೆಗನುಸಾರವಾಗಿ ಎಳವೆಯಲ್ಲಿಯೇ ಮಾತನಾಡುವುದನ್ನು ಮತ್ತು ಅರ್ಥಮಾಡಿಕೊಳ್ಳುವುದನ್ನು ಈಗಾಗಲೇ ಪಡೆದುಕೊಂಡಿರುತ್ತದೆ. ನಂತರದಲ್ಲಿ ಬರೆಯುವುದನ್ನು ಮತ್ತು ಓದುವುದನ್ನು ಮಗು ಶಾಲಾ ಪರಿಸರದಲ್ಲಿ ಲಭ್ಯವಾಗುವ ಶಿಕ್ಷಣದಿಂದ ಪಡೆದುಕೊಳ್ಳುತ್ತದೆ. ಇಂಥ ಸಂದರ್ಭದಲ್ಲಿ ಮಗು ಮನೆ ಮಾತಿನ ಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಶಾಲೆಯಲ್ಲಿ ಅಕ್ಷರಭ್ಯಾಸವನ್ನು ಕಲಿಯಬೇಕು ಎನ್ನುವುದೇ ಇಲ್ಲಿ ಮಾಧ್ಯಮದ ಪ್ರಶ್ನೆಯಾಗಿದೆ. ಇತ್ತೀಚಿನ ಸಂದರ್ಭದಲ್ಲಿ ಈ ಮಾಧ್ಯಮದ ಪ್ರಶ್ನೆ ಶೈಕ್ಷಣಿಕ ಸಮಸ್ಯೆಯನ್ನು ಉಲ್ಬಣಗೊಳಿಸುತ್ತಿದೆ. ಮಗು ಶೈಕ್ಷಣಿಕ ಹಂತದಲ್ಲಿ ಶಿಕ್ಷಣ ಪಡೆಯುವುದು ಯಾವ ಭಾಷೆಯಿಂದ? ಎನ್ನುವಲ್ಲಿ 'ಮಾಧ್ಯಮ' ಹೆಚ್ಚು ಅಧಿಕೃತತೆಯನ್ನು ಪಡೆದುಕೊಳ್ಳುತ್ತಿದೆ. ಮಗು ಪಡೆದುಕೊಳ್ಳುವ ಶಿಕ್ಷಣ ಎಂಥದ್ದಾಗಿರಬೇಕು? ಯಾವ ರೀತಿಯ ಪಠ್ಯವಿಷಯವಾಗಿರಬೇಕು, ಎನ್ನುವದಕ್ಕಿಂತಲೂ ಅದನ್ನು ಪಡೆದುಕೊಳ್ಳುವ ಶಿಕ್ಷಣ ಮಾಧ್ಯಮ ಯಾವುದಾಗಿರಬೇಕು ಎನ್ನುವುದೇ ಮುಖ್ಯವಾಗಿದೆ. ಮಗುವಿನ ತಿಳುವಳಿಕೆಯ ಭಾಷೆ ಯಾವುದು? ಯಾವ ಭಾಷೆಯನ್ನು ಸುಲಭವಾಗಿ ಅರ್ಥೈಸಿಕೊಳ್ಳುತ್ತದೆ ಮತ್ತು ಅಭಿವ್ಯಕ್ತಿಸುತ್ತದೆ ಎನ್ನುವುದನ್ನು ಪರಿಗಣಿಸುವಂತಿಲ್ಲ. ಮಗುವಿನ ಭಾಷಾ ಸಾಮರ್ಥ್ಯಕ್ಕನುಗುಣವಾಗಿ ಶಿಕ್ಷಣದ ಮಾಧ್ಯಮವನ್ನು ಆಯ್ಕೆಮಾಡುವುದಿಲ್ಲ. ಈ ಆಯ್ಕೆಯ ಸಂದರ್ಭದಲ್ಲಿಯು ಸಹ ಮಗುವಿಗಿಂತ ಪಾಲಕರದ್ದೇ ಅಧಿಕ ಪಾಲು.

ಪ್ರಸ್ತುತ ವಲಯದಲ್ಲಿ ನಾವು ಗಮನಿಸಿದ ಹಾಗೆ ಕನ್ನಡಕ್ಕಿಂತ ಇಂಗ್ಲೀಶ್ ಭಾಷೆಗೆ ಅಧಿಕ ಬೇಡಿಕೆ ಹಾಗೂ ಹೆಚ್ಚಿನ ಒಲವು ಸಾಮಾಜಿಕರಲ್ಲಿ ಕಂಡುಬರುತ್ತದೆ. ಅಧಿಕವಾಗಿ, ಮಗುವಿನ ಶಿಕ್ಷಣವನ್ನು ಇಂಗ್ಲೀಶ್ ಮಾಧ್ಯಮಕ್ಕೆ ಮೀಸಲಾಗಿಡುತ್ತಿರುವುದನ್ನು ನಾವು ಗಮನಿಸಬಹುದಾಗಿದೆ. ಇಂದಿನ ಶಿಕ್ಷಣದ ಭತ್ಯೆ ತುಟ್ಟಿಯಿದ್ದಾಗ್ಯೂ, ಒಬ್ಬ ಗುಮಾಸ್ತನ ಮಗ/ಮಗಳೂ ಸಹ ಇಂಗ್ಲೀಶ್ ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿರುವುದು ಸಾಕ್ಷಿಯಾಗಿದೆ. ಅಂದರೆ 'ಮಾಧ್ಯಮ' ಕ್ಕಿರುವ ಪ್ರಾಮುಖ್ಯತೆ ಮತ್ತು ಬೇಡಿಕೆಯನ್ನು ಇಲ್ಲಿ ಗುರಿತಿಸಬಹುದಾಗಿದೆ. ಇದು ಮಗುವಿನ ಆರಂಭಿಕ ಶಿಕ್ಷಣ ಮಾತ್ರವಾಗಿರದೆ ಉನ್ನತ ಹಂತದ ಶಿಕ್ಷಣದವರೆಗೂ ಈ ಮಾಧ್ಯಮದ ಪ್ರಶ್ನೆ ಹೆಮ್ಮರವಾಗಿ ಬೆಳೆದುನಿಂತಿದೆ. ಕೇವಲ ಪ್ರಾಥಮಿಕ ಹಂತದ ಶಿಕ್ಷಣ ಮಾಧ್ಯಮ ಪ್ರಶ್ನೆಯಾಗಿ ಉಳಿದಿಲ್ಲ. ಮಗುವಿಗೆ ನೀಡುವ ಶಿಕ್ಷಣ ಯಾವ ವಿಷಯಗಳನ್ನು ಒಳಗೊಂಡಿರಬೇಕು ಎನ್ನುವ ಕಡೆಗೆ ಶಿಕ್ಷಣ ಸಂಸ್ಥೆಗಳು ಮತ್ತು ಸರ್ಕಾರ ಹೆಚ್ಚು ಗಮನ ಕೊಡುವುದು ಮುಖ್ಯವೆನಿಸುತ್ತದೆ. ಮಗು ಪಡೆಯುವ ಶಿಕ್ಷಣಕ್ಕಿಂತ, ಶಿಕ್ಷಣ ಮಾಧ್ಯಮದ ಬೇಡಿಕೆ ಅಧಿಕವಾಗಿದೆ. ಪ್ರಸ್ತುತ ತಂತ್ರಜ್ಞಾನದ ತೀವ್ರ ಬೆಳವಣಿಗೆ ಹಾಗು ಔದ್ಯೋಗಿಕದ ದೃಷ್ಠಿಯಿಂದ ಇಂಗ್ಲೀಶ್ ಮಾಧ್ಯಮದ ಬೇಡಿಕೆ ಹೆಚ್ಚುತ್ತಿರುವುದನ್ನು ನಾವು ಪರಿಗಣಿಸಬಹುದಾಗಿದೆ.

ಶಿಕ್ಷಣದ ಮಾಧ್ಯಮ ಕುರಿತಾಗಿ ಪ್ರಶ್ನೆ ಅಥವಾ ಅದರ ಅಗತ್ಯತೆ ಮೂಡಿರುವುದು ನಿನ್ನೆ ಮೊನ್ನೆಯಿಂದಲ್ಲ. ಹಲವಾರು ವರ್ಷಗಳ ಇತಿಹಾಸದ ಚಿತ್ರಣವಿರುದು ಕಂಡು ಬರುತ್ತದೆ. ಆಯಾ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಗತ್ಯತೆಗೆ ಅನುಸಾರವಾಗಿ ಶಿಕ್ಷಣ ಮಾಧ್ಯಮದ ಅವಶ್ಯಕತೆ ಬೆಳೆದುಕೊಂಡು ಬಂದಿದೆ. ಅದಕ್ಕೆ ಹಲವಾರು ಚಿಂತಕರ, ತಜ್ಞರ ಅಭಿಪ್ರಾಯಗಳು ನೆರವಾಗಿವೆ. ಈ ಶಿಕ್ಷಣ ಮಾಧ್ಯಮ ವಿಚಾರ ಕುರಿತಂತೆ ಅನೇಕ ಶಿಕ್ಷಣ ತಜ್ಞರ, ಚಿಂತಕರ ಅಭಿಪ್ರಾಯದಂತೆ ಮಗುವಿನ ಮನೆಮಾತು ಅಥವಾ ಮಾತೃಭಾಷೆಯಲ್ಲಿ ಶಿಕ್ಷಣ ನಡೆಯುವುದೇ ಅತ್ಯಂತ ಸಮರ್ಪಕವಾಗಿದೆ. ಅನ್ಯ ಭಾಷಿಕ ಮಕ್ಕಳಾಗಿದ್ದಲ್ಲಿ ಅವರ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡುವುದು ಹೆಚ್ಚು ಸೂಕ್ತವಾದುದು ಎಂದು ತಿಳಿಸಿದ್ದಾರೆ. ಕರ್ನಾಟಕದಲ್ಲಾದರೆ ಕನ್ನಡ ಭಾಷೆ ಅನೇಕ ಜನರ ಮಾತೃ ಭಾಷೆ ಮತ್ತು ಪರಿಸರದ ಭಾಷೆಯಾಗಿರುವುದರಿಂದ ಕನ್ನಡದಲ್ಲಿಯೇ ಶಿಕ್ಷಣವನ್ನು ನೀಡುವುದು ಉಚಿತ ಎಂದಿದ್ದಾರೆ. ಮಾಧ್ಯಮ ಕುರಿತಾಗಿ ಸಾಕಷ್ಟು ಚರ್ಚೆಗಳು ವಾದ, ವಿವಾಧಗಳು ಬೆಳೆದು ಬಂದಿರುವುದು ಹಲವಾರು ದಶಕಗಳ ಹಿಂದೆಯೇ. ಅದಕ್ಕೆ ಕನ್ನಡ ಮಾಧ್ಯಮವನ್ನು ಕುರಿತು ರವೀಂದ್ರನಾಥ ಠಾಗೂರರ ಪದ್ಯದ ಉಲ್ಲೇಖವನ್ನು ಇಲ್ಲಿ ಗಮನಿಸಬಹುದು.

ತನ್ನ ಹೃದಯಾಂತರಾಳದ ಭಾವನೆಗಳನ್ನು
ಪರಭಾಷೆಯಲ್ಲಿ ತಿಳಿಸಲು ಪ್ರಯತ್ನಿಸುವುದು
ಪ್ರಿಯತಮಗೆ ತನ್ನ ಮುಗುಳ್ನಗೆಯನ್ನು
ವಕೀಲನ ಮೂಲಕ ತಿಳಿಸಲು ಪ್ರಯತ್ನಿಸಿದಂತೆ. (ಎ.ಆರ್. ನಾರಾಯಣ ಘಟ್ಟ, ಶಿಕ್ಷಣ ಮಾಧ್ಯಮ ಸಮಗ್ರ ಚಿಂತನಾ, ಗೀತಾ ಕುಟೀರ ಬೆಂಗಳೂರು, ೧೯೯೩, ಪುಟ-೪)

ಹಲವು ವರ್ಷಗಳಿಂದ ಈ ವಿವಾದಗಳು ಬೆಳೆದುಕೊಂಡು ಬರುತ್ತಿವೆ. ಕಲಿಕೆಯ ಮಾಧ್ಯಮ ಮತ್ತು ವಿದ್ಯಾರ್ಥಿಗಳ ಮೊದಲ ಭಾಷೆ ಬೇರೆ ಬೇರೆಯಾದರೆ ಅದರಿಂದ ಮಾನಸಿಕ ಮತ್ತು ಶೈಕ್ಷಣಿಕ ಪ್ರಗತಿ ಕುಗ್ಗುತ್ತಿದೆ ಎನ್ನುವುದು ಒಂದು ವಾದ. ಇತ್ತೀಚೆಗೆ ಬಹಳ ಚರ್ಚೆಯಾಗುತ್ತಿರುವ ವಿಷಯಗಳಲ್ಲಿ ಶಿಕ್ಷಣ ಮಾಧ್ಯಮವೂ ಒಂದು. ಶಿಕ್ಷಣ ಮಾಧ್ಯಮವು ಮುಖ್ಯವಾಗಿ ಮೂರು ರೀತಿಯಲ್ಲಿ ಆದರ ವಿಸ್ತಾರತೆಯನ್ನು ಪಡೆದುಕೊಂಡಿದೆ.

* ಕನ್ನಡವನ್ನೇ ಪ್ರಥಮ ತರಗತಿಯಿಂದ ಶಿಕ್ಷಣದ ಎಲ್ಲಾ ಹಂತಗಳಲ್ಲೂ ಕಲಿಕೆಯ ಮಾಧ್ಯಮವನ್ನಾಗಿ ಬಳಸಬೇಕು ಎನ್ನುವ ಒಂದು ವಾದ.

* ಮುಂದುವರಿಯುತ್ತಿರುವ ಜಾಗತೀಕರಣ ಮತ್ತು ತಂತ್ರಜ್ಞಾನದ ದೃಷ್ಟಿಯಿಂದ ಔದ್ಯೋಗಿಕ ಅವಕಾಶಗಳು ಲಭ್ಯವಾಗಬೇಕಾದರೆ, ಅನ್ಯ ರಾಜ್ಯಗಳಿಗೆ ಹೋಗಬೇಕಾದರೆ ಕನ್ನಡವನ್ನು ಮಾಧ್ಯಮವಾಗಿ ಬಳಸುವುದು ಸೂಕ್ತವಲ್ಲ. ಕನ್ನಡವನ್ನು ನಿರಾಕರಿಸುವ ಮೂಲಕ ಇಂಗ್ಲೀಶ್ ಮಾಧ್ಯಮವನ್ನು ಬಯಸುವವರದು ಒಂದು ವಾದವಾಗಿದೆ.

* ಶಿಕ್ಷಣದ ಒಂದು ಹಂತದವರೆಗೆ ಕನ್ನಡವನ್ನು ಮಾಧ್ಯಮವನ್ನಾಗಿ ಬಳಸಿ, ಮುಂದಿನ ಹಂತಗಳಲ್ಲಿ ವಿದ್ಯಾರ್ಥಿ ತಾನು ಯಾವ ಮಾಧ್ಯಮದ ಮೂಲಕ ಕಲಿಯಬೇಕು ಎಂಬುದನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡಬೇಕು ಎನ್ನುವುದು ಹಲವರ ವಾದ.

ವಾಸ್ತವವಾಗಿ ಎರಡನೆಯ ವಾದ ಕೆಲವು ಕಡೆ ಜಾರಿಯಲ್ಲಿದೆ. ಆದರೆ ಮೂರನೆಯ ವಾದದ ವರ್ಗವೇ ಸರ್ಕಾರದ ಘೋಷಿತ ನೀತಿಯಾಗಿ ಜಾರಿಯಲ್ಲಿದೆ. ಈ ಎಲ್ಲಾ ಅಂಶಗಳ ಮೂಲಕ ಶಿಕ್ಷಣದಲ್ಲಿ ಮಾಧ್ಯಮದ ಪ್ರಭಾವವೇನು ಎಂಬುದನ್ನು ಪರಿಶೀಲಿಸಬೇಕಾಗಿದೆ. ಶಾಲೆಗಳಲ್ಲಿ ಮಕ್ಕಳು ಕಲಿಯುತ್ತಿರುವ ವಿಷಯವನ್ನು ಯಾವ ಭಾಷೆಯ ಮೂಲಕ ಕಲಿಸಬೇಕು ಎಂಬುದೇ ಇಲ್ಲಿನ ಮುಖ್ಯ ಪ್ರಶ್ನೆಯಾಗಿದೆ. ಪ್ರತಿಯೊಂದು ರಾಜ್ಯದಲ್ಲಿಯೂ ಆ ರಾಜ್ಯದ ಭಾಷೆಯೇ ಮಾಧ್ಯಮವಾಗಬೇಕೆನ್ನುವುದು ಅಲ್ಲಿಯ ಒತ್ತಾಸೆ. ಅದರಂತೆ ಅಲ್ಲಿಯ ಸರಕಾರವು ಸಹ ಅದಕ್ಕೆ ಅಂಗೀಕಾರವನ್ನು ನೀಡಿರುತ್ತದೆ. ಇದಕ್ಕೆ ತಮಿಳುನಾಡು ಉತ್ತಮ ನಿದರ್ಶನ. ಅದೇ ರೀತಿ ಶಿಕ್ಷಣ ವ್ಯವಸ್ಥೆಯಲ್ಲಿ ಅ ಭಾಷೆಗೆ ಪ್ರಥಮ ಸ್ಥಾನ ದೊರಕಬೇಕೆನ್ನುವುದು, ಮಾಧ್ಯಮಕ್ಕೆ ಆಗ್ರಸ್ಥಾನ ಸಿಗಬೇಕಾಗಿರುವುದು ಅಷ್ಟೇ ಸತ್ಯ. ಯಾವ ರಾಜ್ಯದಲ್ಲಿಯಾದರೂ ಅಲ್ಲಿಯ ದೇಶ ಭಾಷೆಯ ನಂತರ, ಬೇರೆ ಭಾಷೆಯ ಕಲಿಕೆಯನ್ನು ಕಡ್ಡಾಯಗೊಳಿಸುವುದು ಭಾಷಾ ನಿಯಮ. ಅಂದರೆ ಕರ್ನಾಟಕದಲ್ಲಿ ಇಂಗ್ಲೀಶ್ ಭಾಷೆಯ ಕಲಿಕೆಯನ್ನು ಕಡ್ಡಾಯ ಗೊಳಿಸುವುದು. ನೈತಿಕ ಹಾಗೂ ಶೈಕ್ಷಣಿಕ ದೃಷ್ಟಿಯಿಂದ ಒಳಿತಲ್ಲ ಎಂಬ ಧೋರಣೆಯಿದೆ.

ಪ್ರಮುಖವಾಗಿ ಪ್ರಾಥಮಿಕ ಶಿಕ್ಷಣದಲ್ಲಿ ಒಂದನೇ ತರಗತಿಯಿಂದ ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಕಲಿಸಬೇಕೆ ಅಥವಾ ಮಾಧ್ಯಮವನ್ನಾಗಿ ಶಿಕ್ಷಣ ವ್ಯವಸ್ಥೆಯಲ್ಲಿ ಜಾರಿಗೆ ತರಬೇಕೆ? ಎಂಬುದರಲ್ಲಿಯೇ ಅನೇಕ ಗೊಂದಲ ಹಾಗೂ ಭಿನ್ನಾಭಿಪ್ರಾಯಗಳಿವೆ.

ಆದರೆ ಈ ತರ್ಕವನ್ನು ನಾವು ಸೂಕ್ಷ್ಮವಾಗಿ ಗಮನಿಸುವುದು ಸೂಕ್ತವೆನಿಸುತ್ತದೆ. ಪ್ರಾಥಮಿಕ ಶಿಕ್ಷಣದ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಕಲಿಸಬೇಕೆ? ಬೇಡವೇ? ಎನ್ನುವ ತರ್ಕವೇ ಹೆಚ್ಚು ಸೂಕ್ತವಾಗಿದ್ದು, ಚರ್ಚೆಗೆ ದಾರಿಮಾಡಿಕೊಟ್ಟಿದೆ. ಈ ವಿಚಾರ ಎಷ್ಟರಮಟ್ಟಿಗೆ ಅಗತ್ಯವಿದೆ ಎಂಬುದನ್ನು ಕುರಿತು ಮುಂದೆ ಚರ್ಚಿಸಲಾಗಿದೆ. ಇನ್ನು ಪ್ರಾಥಮಿಕ ಶಿಕ್ಷಣದ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಮಾಧ್ಯಮವಾಗಿ ಕಲಿಸಬೇಕು ಎನ್ನುವ ವಿಚಾರ ಅತ್ಯಂತ ಆಘಾತಕಾರಿ ಎನ್ನುವಲ್ಲಿ ಎರಡು ಮಾತಿಲ್ಲ. ಏಕೆಂದರೆ ಕನ್ನಡ ನಾಡಿನಲ್ಲಿ ಕನ್ನಡ ಭಾಷೆಗೆ ಸ್ಥಾನವಿರಬೇಕೆ ಹೊರತು ಅನ್ಯ ಭಾಷೆಯ ಯಜಮಾನ್ಯ/ಅಧಿಕಾರತ್ವ ಸಲ್ಲದು. ಒಂದು ಮಗುವಿಗೆ ಅದರ ಜನ್ಮವಿದಾತರ ಹೊಣೆಗಾರಿಕೆ ಹೆಚ್ಚಿರುತ್ತದೆಯೇ ಹೊರತು ಅದರ ಪೋಷಕರಿಗಲ್ಲ. ಪ್ರಾರಂಭದಿಂದಲೂ ಇಲ್ಲಿಯವರಗೆ ಪ್ರಾದೇಶಿಕ ಭಾಷೆಯಲ್ಲಿ ಅಥವಾ ಬಹುಸಂಖ್ಯಾತ ಜನರ ಭಾಷೆಯಲ್ಲಿ ಶಿಕ್ಷಣ ಬೆಳೆದುಕೊಂಡು ಬಂದಿದೆ. ಸ್ವಾತಂತ್ರ ನಂತರದಿಂದ ಇಲ್ಲಿಯವರೆಗೆ ಅನೇಕ ಭಾಷಾ ನೀತಿ ಕ್ರಮವನ್ನು ಕೈಗೊಂಡಿದ್ದಾಗಲೂ ಸ್ವಭಾಷಾ ಮಾಧ್ಯಮ ಶಿಕ್ಷಣ ಕ್ರಮ ಬೆಳೆದು ಬಂದಿದೆಯೇ ಹೊರತು ಅನ್ಯಭಾಷಾ ಮಾಧ್ಯಮ ಅಲ್ಲ. ಪ್ರಾಥಮಿಕ ಶಿಕ್ಷಣ ಒಂದನೇ ತರಗತಿಯಿಂದ ಇಂಗ್ಲೀಶ್ ಮಾಧ್ಯಮ ಎನ್ನುವ ತರ್ಕ ಅನಗತ್ಯವಾಗಿದೆ. ಇದು ಕೇವಲ ಇಂಗ್ಲೀಶ್ ಮಾಧ್ಯಮವನ್ನು ಅಪೇಕ್ಷಿಸುವವರ ಮತ್ತು ಆರ್ಥಿಕ ಮುಖಂಡರ, ರಾಜಕೀಯ ಧುರೀಣರ ಕೂಗು ಮಾತ್ರವೇ ಆಗಿದೆ. ಶಿಕ್ಷಣ ತಜ್ಞರ, ಚಿಂತಕರ, ವಿಚಾರ ವಾದಿಗಳ, ಸಾಹಿತಿಗಳು ಮುಂತಾದವರು ಆಯಾ ಪರಿಸರದ ಪ್ರಾದೇಶಿಕ ಭಾಷೆ, ಮಾತೃ ಭಾಷೆಗಳನ್ನು ಕಡ್ಡಾಯ ಮಾಡಬೇಕೆನ್ನುವುದು ಅವರ ದೃಢ ನಿರ್ಧಾರವಾಗಿದೆ. ಬ್ರಿಟೀಷರ ಕಾಲದಲ್ಲಿಯೂ ಸಹ ಪ್ರಾದೇಶಿಕ ಭಾಷಾ ಶಿಕ್ಷಣ ಪದ್ಧತಿ ಜಾರಿಗೆ ತಂದಿದ್ದನ್ನು ಗಮನಿಸಬಹುದು. ಸ್ವಾತಂತ್ರ ನಂತರದಿಂದ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು ಅನೇಕ ಭಾಷಾ ನೀತಿಗಳನ್ನು ಜಾರಿಗೆ ತರುವುದರ ಮೂಲಕ ಮಾತೃಭಾಷಾ ಮಾಧ್ಯಮವನ್ನೇ ಅನುಷ್ಟಾನಗೊಳಿಸಿರುವುದನ್ನು ಕಾಣಬಹುದು. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಮಾತೃ ಭಾಷೆಯನ್ನು ತೊರೆದು ಅನ್ಯ ಭಾಷೆಯನ್ನು ಮಾಧ್ಯಮವನ್ನಾಗಿ ಪರಿಗಣಿಸುವುದು ಅತ್ಯಂತ ಅಸಮರ್ಪಕವಾದ ಚಿಂತನೆಗೆ ಗುರಿಯಾಗಿಸುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಥಮಿಕ ಶಿಕ್ಷಣದ ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಕಲಿಸಬೇಕೊ? ಬೇಡವೇ ಎಂಬ ಚರ್ಚೆಯನ್ನೇ ಪ್ರಧಾನವನ್ನಾಗಿಟ್ಟುಕೊಂಡು ಅದರ ಅಗತ್ಯತೆ ಹಾಗೂ ಪ್ರಯೋಜನಗಳನ್ನು ಕುರಿತು ತಾತ್ವಿಕವಾಗಿ ವಿಶ್ಲೇಷಿಸಲಾಗಿದೆ.

ಪ್ರಾಥಮಿಕ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ನೀಡಬೇಕು ಎನ್ನುವ ಪ್ರಶ್ನೆ ಅಧಿಕೃತವಾಗಿ ಬೆಳೆದು ಬಂದಿದೆ. ಬ್ರಿಟೀಷರ ಕಾಲದಲ್ಲಿ ಅದರಲ್ಲೂ ಲಾರ್ಡ್ ಮೆಕಾಲೆ ಆಡಳಿತಾವಧಿಯಲ್ಲಿ ಎಂದು ಹೇಳಬಹುದು. ಇದಕ್ಕೂ ಪೂರ್ವದಲ್ಲಿ ಅಂದರೆ ಪ್ರಾಚೀನ ಸಂದರ್ಭದಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಮಾಧ್ಯಮದ ಪ್ರಶ್ನೆ ಇದ್ದಿಲ್ಲ ಎಂತಲ್ಲ. ಪ್ರತ್ಯೇಕವಾಗಿ ಮಾಧ್ಯಮದ ಚರ್ಚೆ ಬಳೆದು ಬಂದಿಲ್ಲ. ಆದರೆ ಪ್ರಾಥಮಿಕ ಶಿಕ್ಷಣವನ್ನು ನೀಡುವಾಗ,

ಅನಾದಿಕಾಲದಿಂದಲೂ ಸಂಸ್ಕೃತ ಭೂಯಿಷ್ಟವಾದ ಯಜಮಾನ್ಯದ ಪರಿಸರದಲ್ಲಿ ಯಾವ ಭಾಷೆಯಲ್ಲಿ ಮಕ್ಕಳಿಗೆ ಶಿಕ್ಷಣ ನೀಡಬೇಕು ಎನ್ನುವ ಸಮಸ್ಯೆ ಮುಂದುವರಿಯುತ್ತಲೇ ಬಂದಿದೆ. ಅದು ಕ್ರಿ.ಶ. ೧ನೇ ಶತಮಾನದ ಅಶೋಕನ ಕಾಲದಿಂದಲೂ ಕಾಣಿಸಿಕೊಂಡಿದೆ. ಬೌದ್ಧ, ಜೈನ, ವೈದಿಕ, ಮುಸ್ಲಿಂ ಮುಂತಾದ ಧರ್ಮಗಳ ಸಂದರ್ಭದಲ್ಲಿ ಜನರು ಏಕ ಭಾಷಿಕರಾಗಿರಲಿಲ್ಲ. ಅನ್ಯಭಾಷಿಕರೂ ನೆಲೆಸಿದಂತಹ ಪರಿಸರದಲ್ಲಿ ಪ್ರಾದೇಶಿಕ ಭಾಷೆಯ ಶಿಕ್ಷಣ ಬೆಳೆದು ಬರಲಿಲ್ಲ. ಬದಲಾಗಿ, ಯಾವ ಧರ್ಮ ಆಡಳಿತಾತ್ಮಕ ಸಾಂಸ್ಕೃತಿಕ, ಸಾಮಾಜಿಕವಾಗಿ ಪ್ರಬಲಗೊಂಡು ಆಳ್ವಿಕೆ ನಡೆಸುತ್ತಿತ್ತೋ ಅದೇ ಧರ್ಮದ ನೀತಿ ಭಾಷಿಕವಾಗಿ, ಶೈಕ್ಷಣಿಕವಾಗಿ ಜಾರಿಯಲ್ಲಿತ್ತು. ಇದರಿಂದ ಆ ಕಾಲದಲ್ಲಿ ಬಹುಸಂಖ್ಯಾತ ಜನರ ಭಾಷೆಯೇ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಪ್ರಚಲಿತಗೊಂಡಿದ್ದಿರಬೇಕು ಎಂಬ ಅಂಶ ವ್ಯಕ್ತವಾಗುತ್ತದೆ. ಇದು ಕ್ರಿಶ ೧ರಿಂದ ಕ್ರಿಶ ೧೫, ೧೬ ಶತಮಾನದರವರೆಗೆ ಅಂದರೆ ಮುಸ್ಲಿಂ ಆಳ್ವಿಕೆಯವರೆಗೂ ಬೆಳೆದುಕೊಂಡು ಬಂದಿರುವುದನ್ನು ಇತಿಹಾಸದಲ್ಲಿ ಕಾಣಬಹುದಾಗಿದೆ. ಅಲ್ಲಿಯವರೆಗೂ ಶಿಕ್ಷಣವನ್ನು ಮಕ್ಕಳಿಗೆ ಹೇಗೆ ನೀಡಬೇಕು; ಯಾವ ಯಾವ ವಿಷಯಗಳನ್ನು ಕಲಿಸಬೇಕು; ಯಾವ ಭಾಷೆಯಲ್ಲಿ ಶಿಕ್ಷಣ ನೀಡಬೇಕು ಎನ್ನುವ ಅಂಶಗಳಿಗೆ ಮಾತ್ರ ಆದಿಕಾಲದಲ್ಲಿ ಶಿಕ್ಷಣ ವಿಸ್ತರಿಸಿಕೊಂಡಿತ್ತು. ನಂತರ ಸುಮಾರು ೧೬ನೇ ಶತಮಾನದ ಸಂದರ್ಭದಲ್ಲಿ ಬ್ರಿಟೀಷರ ಆಗಮನ, ಆಕ್ರಮಣ ಯಾವಾಗ ಭಾರತದ ಮೇಲೆ ಆಯಿತೋ ಅಂದಿನಿಂದ ಭಾಷಿಕ, ಆಡಳಿತಾತ್ಮಕ, ಸಾಂಸ್ಕೃತಿಕ, ಶೈಕ್ಷಣಿಕವಾಗಿ ದಬ್ಬಾಳಿಕೆ ಪ್ರಾರಂಭವಾಯಿತು. ಈ ದಬ್ಬಾಳಿಕೆಯಿಂದಾಗಿ ಆಡಳಿತ ಹಾಗೂ ಶೈಕ್ಷಣಿಕ ಹಂತದಲ್ಲಿ ಸಂಪೂರ್ಣ ಬದಲಾವಣೆಯನ್ನು ಹುಟ್ಟು ಹಾಕಿದರು. ಹೊಸ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರುವುದರ ಮೂಲಕ 'ಮಾಧ್ಯಮ' ಎನ್ನುವ ಪ್ರಶ್ನೆಯನ್ನು ಜಾರಿಗೆ ತರುವಲ್ಲಿ 'ಲಾರ್ಡ್ ಮೆಕಾಲೆ' ಕಾರಣಕರ್ತರಾದರು. ಮೆಕಾಲೆ ಕ್ರಿ.ಶ. ೧೮೩೪ರಲ್ಲಿ ಗವರ್ನರ್ ಜನರಲ್ ಆಗಿ ಅಧಿಕಾರ ನಿರ್ವಹಿಸುತ್ತಿದ್ದಾಗ ವರದಿ ಮೂಲಕ ಕೆಲ ಶಿಫಾರಸ್ಸುಗಳನ್ನು ಹೊರಡಿಸಿದರು. ಅದರಂತೆ ಭಾರತೀಯ ಶಿಕ್ಷಣದ ಬೋಧನಾ ಮಾಧ್ಯಮವಾಗಿ ಇಂಗ್ಲೀಶ್ ಇರಬೇಕು ಎನ್ನುವ ಮೂಲಕ 'ಮಾಧ್ಯಮ'ಕ್ಕೆ ನಾಂದಿಹಾಡಿದರು. ಅಂದಿನಿಂದ ಈ ಚರ್ಚೆ ಪ್ರಾರಂಭವಾಯಿತು ಎಂದು ಹೇಳಬಹುದು. ನಂತರ ಬಂದ ಅಧಿಕಾರಿಗಳು ಮಾತೃಭಾಷೆ/ಪ್ರಾದೇಶಿಕ ಭಾಷಾ ಮಾಧ್ಯಮಕ್ಕೆ ಪ್ರಾಶಸ್ತ್ಯ ಕಲ್ಪಿಸಿದರು. ಜೊತೆಗೆ ಶಿಕ್ಷಣದ ಸುಧಾರಣೆಗೆ ದುಡಿದರು. ಹೀಗೆ ಮಾಧ್ಯಮ ಶಿಕ್ಷಣ ಕುರಿತಾದ ವಿಚಾರ, ಚಿಂತನೆಗಳು ಬೆಳೆಯುತ್ತಾ ಬಂದಿರುವುದರಿಂದ ಮಾಧ್ಯಮದ ಚರ್ಚೆಯೂ ಸಹ ಕಾಲಾಂತರದಲ್ಲಿ ವಿಭಿನ್ನ ಆಯಾಮಗಳನ್ನು ಗುರುತಿಸಿಕೊಳ್ಳುತ್ತಾ ಬರತೊಡಗಿತು.

ಬ್ರಿಟೀಷರು ಮುಖ್ಯವಾಗಿ ಆಡಳಿತ ಹಾಗೂ ಶೈಕ್ಷಣಿಕ ನೆಲೆಯಲ್ಲಿ ಬದಲಾವಣೆಯನ್ನು ತಂದರು. ಒಂದೇ ಭಾಷೆಯನ್ನಾಡುವ ಜನಾಂಗವು ಒಂದೇ ಆಡಳಿತಕ್ಕೆ ಒಳಪಟ್ಟಾಗ ಮಾತ್ರ ಆ ಪ್ರದೇಶದ ಅಭಿವೃದ್ಧಿಯನ್ನು/ಸರ್ವಾಂಗೀಣ ಉನ್ನತಿಯನ್ನು ಸಾಧಿಸಬಹುದು. ಈ ಹಿನ್ನೆಲೆಯಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲಿಯೇ ಭಾಷಾವಾರು ಪ್ರಾಂತ

ರಚನೆಯ ಹೋರಾಟದ ಬೆಳವಣಿಗೆ ಪ್ರಾರಂಭವಾಯಿತು. ಆದರೆ ಇದಕ್ಕೆ ಸಂಪೂರ್ಣ ಅಸ್ತಿತ್ವ ದೊರೆತದ್ದು ಭಾರತೀಯರಿಂದ ಎಂದು ಹೇಳಬಹುದು. ಬ್ರಿಟೀಷ ಆಡಳಿತಗಾರರ ಸಮಯದಲ್ಲಿಯೇ ಭಾಷಾ ಅನ್ವಯ ಪ್ರಾಂತ ರಚನೆಗಾಗಿ ಚಳುವಳಿಗಳು ಪ್ರಾರಂಭವಾಗಿದ್ದರೂ, ಅದಕ್ಕೆ ನ್ಯಾಯಯುತ ನಿರ್ಣಯ ಲಭ್ಯವಾಗಿದ್ದು ಭಾರತೀಯ ಭಾಷಿಕ ಚಳುವಳಿ ಮೂಲಕ ಎಂದು ಹೇಳಬಹುದು. ಕನ್ನಡ ಪ್ರಾಂತ್ಯವನ್ನು ಒಟ್ಟುಗೂಡಿಸಿ ಕನ್ನಡವನ್ನು ಆಡಳಿದಲ್ಲಿ ಜಾರಿಗೆ ತರುವಂತೆ ಹಕ್ಕೊತ್ತಾಯಿಸಿದರು. ಆಡಳಿತದಲ್ಲಿ ಕನ್ನಡ ಭಾಷೆಯನ್ನು ಸಂಪೂರ್ಣವಾಗಿ ಜಾರಿಗೊಳಿಸುವ ಮೂಲಕ ಕರ್ನಾಟಕವನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಿಸಿದರು. ಅಲ್ಲದೆ ಕನ್ನಡ ಭಾಷೆಯನ್ನು ಬೆಳೆಸುವುದು ಅದರ ಉದ್ದೇಶವಾಗಿತ್ತು. ಆಡಳಿತದ ಕಾರ್ಯ ಚಟುವಟಿಕೆ ಗಳೆಲ್ಲವನ್ನು ಪ್ರಾಂತೀಯ ಭಾಷೆಯಲ್ಲಿ ನಡೆಸುವುದರಿಂದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪ್ರಗತಿ ಸಾಧಿಸಲು ಸಾಧ್ಯ. ಇಂತಹ ಆಲೋಚನೆಯ ಹಿಂದೆಯೇ ಅನೇಕ ಹೊಸ ಹೊಸ ಚಿಂತನೆಗಳು ಬೆಳೆದು ಬರಲು ಸಾಧ್ಯವಾಯಿತು. ಅದರಂತೆ ಆಡಳಿತದಲ್ಲಿ ಕನ್ನಡ ಭಾಷೆ ಜಾರಿಯಾಗಬೇಕು. ಹಾಗೂ ಪ್ರಾಥಮಿಕ ಶಿಕ್ಷಣ ಕನ್ನಡದಲ್ಲಿ ಬೆಳೆದು ಬರಬೇಕು. ಪಠ್ಯಪುಸ್ತಕಗಳು ಕನ್ನಡದಲ್ಲಿ ಮುದ್ರಣಗೊಳ್ಳಬೇಕು. ಇಂತಹ ಹಲವಾರು ಚಿಂತನಾಕ್ರಮಗಳು ಬೆಳೆದು ಬಂದವು. ಭಾಷಾವಾರು ಪ್ರಾಂತ್ಯ ರಚನೆ ಪೂರ್ವದಲ್ಲಿ ಕರ್ನಾಟಕ ಪ್ರದೇಶ ಅನೇಕ ಸಂಸ್ಥಾನಗಳ ಆಡಳಿತಕ್ಕೊಳಪಟ್ಟಿತ್ತು. ಆ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಲ್ಲಿಯೇ ಆಡಳಿತ, ಆರ್ಥಿಕ, ಶೈಕ್ಷಣಿಕ ಚಟುವಟಿಕೆಗಳು ನಡೆಯುತ್ತಿದ್ದವು. ಸಾಮಾನ್ಯವಾಗಿ ಪಠ್ಯಪುಸ್ತಕಗಳು ಸಹ ಅಲ್ಲಿಯ ಭಾಷೆಯಲ್ಲಿಯೇ ಇರುತ್ತಿದ್ದವು. ಹೀಗಾಗಿ ಆ ಪ್ರಾಂತೀಯ ಸಂಸ್ಥಾನಗಳ ಗಮನವನ್ನು ಮೊಟಕುಗೊಳಿಸಿದರು. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯನ್ನು ಬೆಳೆಸಲು ಚಳಿವಳಿ ಮೂಲಕ ಆಡಳಿತ ಹಾಗೂ ಶಿಕ್ಷಣದಲ್ಲಿ ಸ್ವಭಾಷೆಯನ್ನು ಜಾರಿಗೆ ತರಲು ಪ್ರಯತ್ನಿಸಿದರು, ಆ ಮೂಲಕ ಶಿಕ್ಷಣ ರಂಗದಲ್ಲಿ ಸಾಕಷ್ಟು ಚಿಂತನೆಗಳು, ಭಿನ್ನಾಭಿಪ್ರಾಯಗಳು, ವಾದವಿವಾದಗಳು ಬೆಳೆದು ಬರತೊಡಗಿದವು. ಕಳೆದ ಐವತ್ತು ವರ್ಷಗಳಿಂದ ಪ್ರಾಥಮಿಕ ಶಿಕ್ಷಣ ಕುರಿತಾದ ಚರ್ಚೆ ಸಂವಾದಗಳು ವಿವಿಧ ಆಯಾಮಗಳನ್ನು ಪಡೆದುಕೊಂಡಿವೆ. ಸಾಹಿತಿಗಳ, ಚಿಂತಕರ, ಶಿಕ್ಷಣ ತಜ್ಞರ, ಲೇಖಕರ ವಾದಗಳನ್ನು/ಅಭಿಪ್ರಾಯಗಳನ್ನು ತಾತ್ವಿಕವಾಗಿ ಪುನರ್‌ಪರಿಶೀಲಿಸಿ ಚರ್ಚಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಪ್ರಾಥಮಿಕ ಶಿಕ್ಷಣದ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಭಾಷೆಯ ಕಲಿಕೆ ಬೇಕು ಮತ್ತು ಬೇಡ ಎನ್ನುವ ಎರಡು ರೀತಿಯ ಚಿಂತನೆಗಳನ್ನು ವಿಭಜಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದೆ. ಪ್ರಾಥಮಿಕ ಶಿಕ್ಷಣ ಮತ್ತು ಮಾತೃಭಾಷಾ ಮಾಧ್ಯಮ ಇವೆರಡರ ನಡುವಿನ ಅವಿನಾಭಾವ ಸಂಬಂಧವನ್ನು ಅರ್ಥಮಾಡಿಕೊಳ್ಳಬೇಕಾಗಿರುವುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಇತರೆ ಭಾಷೆಗಳನ್ನು ಹೇಗೆ ಮತ್ತು ಯಾವ ಹಂತದ ತರಗತಿಯಲ್ಲಿ ಕಲಿಸಬೇಕು ಎನ್ನುವ ಚರ್ಚೆಗಳು ಸಾಮಾನ್ಯ. ಇದರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳು ತೋರ್ಪಡುತ್ತವೆ. ಆದರೆ ಇಂಗ್ಲೀಶ್ ಭಾಷೆಯನ್ನು ಒಂದನೇ

ತರಗತಿಯಿಂದಲೇ ಕಲಿಸಬೇಕೆಂದು ಬೆಂಬಲಿಸುತ್ತಿರುವವರಿಗೆ ಹಾಗೂ ಮಾತೃಭಾಷಾ ಮಾಧ್ಯಮದ ಪರವಾಗಿರುವವರ ನಡುವೆ ವಿರೋಧಗಳು ವ್ಯಕ್ತವಾಗುತ್ತಿವೆ. ಆ ವಿರೋಧಗಳನ್ನು ವ್ಯಕ್ತಪಡಿಸುವುದು ಸೂಕ್ತವಲ್ಲ. ಮಾತೃಭಾಷಾ ಮಾಧ್ಯಮವನ್ನು ಪ್ರಾಥಮಿಕ ಶಿಕ್ಷಣದಲ್ಲಿ ಅನುಷ್ಠಾನವಾಗಬೇಕೆಂದು ಕೆಲವು ಬುದ್ಧಿ ಜೀವಿಗಳು ಚಳುವಳಿ ನಡೆಸುತ್ತಲೇ ಇರುತ್ತಾರೆ.

ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮವನ್ನು ಜಾರಿಗೊಳಿಸಬೇಕು ಎನ್ನುವವರ ನೀತಿಯ ವಿರುದ್ಧವಾಗಿ ಇಂಗ್ಲೀಶ್ ಮಾಧ್ಯಮದ ಪ್ರಶ್ನೆಯನ್ನು ಪ್ರತಿಪಾದಿಸುವುದು ಸರಿಯಲ್ಲ. ಕನ್ನಡ ಮತ್ತು ಇಂಗ್ಲೀಶ್ ಇಲ್ಲಿ ಇವು ಎರಡು ಪ್ರತ್ಯೇಕ ಮಾಧ್ಯಮಗಳು. ಇವೆರಡರಲ್ಲಿ ಯಾವುದಾದರೂ ಒಂದು ಶಿಕ್ಷಣ ಮಾಧ್ಯಮದ ಪರವಾಗಿರಲು ಮಾತ್ರ ಸಾಧ್ಯ. ಇವೆರಡರಲ್ಲಿ ಯಾವುದು ಅಧಿಕೃತ ಮಾಧ್ಯಮ ಎನ್ನುವ ಚರ್ಚೆಯೇ ಪ್ರಸ್ತುತದಲ್ಲಿ ಹೆಮ್ಮರವಾಗಿ ಬೆಳೆಯುತ್ತಿದೆ. ಆದರೆ ಇಂಗ್ಲೀಶ್ ಒಂದು ಭಾಷೆಯಾಗಿ ಕಲಿಸುವುದು ಮತ್ತು ಸಂಪೂರ್ಣ ಇಂಗ್ಲೀಶ್ ಮಾಧ್ಯಮದಲ್ಲಿ ಕಲಿಸುವುದು ಪ್ರತ್ಯೇಕವಾದ ಅಂಶಗಳಾಗಿವೆ. ಎರಡೂ ಒಂದೇ ಅಲ್ಲ. ಪ್ರಾಥಮಿಕ ಹಂತದಲ್ಲಿ ಕನ್ನಡ ಮಾತೃಭಾಷೆಯ ಬದಲಿಗಾಗಿ ಅಥವಾ ಕನ್ನಡವನ್ನು ಭಾಷೆ ಕಲಿಕೆಯ ಬದಲಾಗಿ ಇಂಗ್ಲೀಶ್‌ನ್ನು ಕಲಿಸಬೇಕು ಎಂದು ಇಂಗ್ಲೀಶ್ ಪರವಾಗಿರುವವರು ವಾದಿಸುತ್ತಿಲ್ಲ. ಕನ್ನಡ ಮಾಧ್ಯಮ ಬದಲಾಗಿ ಇಂಗ್ಲೀಶ್ ಮಾಧ್ಯಮ ಎನ್ನುವುದು ಅವರ ಅಭಿಮತ. ಅದೇ ರೀತಿ ಮಾತೃಭಾಷಾ ಮಾಧ್ಯಮದ ಪರವಾಗಿರುವವರು ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದ ಜೊತೆಗೆ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕೆನ್ನುತ್ತಾರೆ ಹೊರತು ಇಂಗ್ಲೀಶನ್ನು ವಿರೋಧಿಸುತ್ತಿಲ್ಲ. ಈ ಕಾರಣದಿಂದಾಗಿ ಮಾತೃಭಾಷಾ ಮಾಧ್ಯಮದ ಪರವಾಗಿ ಹಾಗೂ ಇಂಗ್ಲೀಶನ್ನು ಮಾಧ್ಯಮ ಮತ್ತು ಇಂಗ್ಲೀಶ್‌ನ್ನು ಭಾಷೆಯಾಗಿ ಕಲಿಸಬೇಕು ಎನ್ನುವವರು ಯಾರು? ಅವರ ಧೋರಣೆಗೆ ಕಾರಣಗಳೇನು? ಅವರ ಪ್ರತಿಪಾದನೆಯ ಹಿನ್ನೆಲೆಗೆ ಕಾರಣಗಳೇನು ಎಂಬುದನ್ನು ಕಂಡುಕೊಳ್ಳುವ ಅಗತ್ಯತೆ ಇದೆ. ಸಾಮಾನ್ಯವಾಗಿ, ಮಾತೃಭಾಷಾ ಮಾಧ್ಯಮದ ಚಿಂತನೆಯ ಪರವಾಗಿರುವವರ ದೊಡ್ಡ ಪಡೆಯೇ ಇದೆ. ಅದರಲ್ಲಿ ಸಾಹಿತಿಗಳು, ಚಿಂತಕರು, ಶಿಕ್ಷಣತಜ್ಞರು, ಪಾಲಕರು, ಶಿಕ್ಷಕರ ಪಾತ್ರವೇ ಬಹಳ ಮುಖ್ಯವಾದುದು. ಇವರೆಲ್ಲರ ಮಾತೃಭಾಷಾ ಮಾಧ್ಯಮದ ಪರವಾಗಿರುವವರೇ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕೆಂದು ಹೇಳುತ್ತಾರೆ. ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕೆನ್ನುವವರ ಪ್ರತ್ಯೇಕ ಧೋರಣೆ ಇರದು. ಅದು ಇಂಗ್ಲೀಶ್ ಒಂದು ಭಾಷೆ ಮಾತ್ರವಾಗಿರಬೇಕು ಎಂಬುದು ಕೆಲವರ ಅಭಿಪ್ರಾಯವಾಗಿದೆ.

ಕನ್ನಡ ಮಾಧ್ಯಮ ಅಥವಾ ಮಾತೃಭಾಷಾ ಮಾಧ್ಯಮದ ಪರವಾಗಿ ವಾದ ಮಂಡಿಸುವವರ ವಾದಗಳ ಹಿನ್ನೆಲೆಯ ಅರ್ಥವನ್ನು ಇಲ್ಲಿ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಇವರ ವಾದಗಳು ಪರ ಹಾಗೂ ವಿರೋಧ ನೆಲೆಯಲ್ಲಿ ಎರಡು ಬಗೆಯಲ್ಲಿ ವ್ಯಕ್ತವಾಗಿವೆ. ಅದರಂತೆ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮವನ್ನು ಕುರಿತು ಚರ್ಚಿಸಲಾಗಿದೆ. ಪರ ಹಾಗೂ ವಿರೋಧವಾಗಿ ಮಂಡಿಸಿರುವ ವಾದಗಳ ಹಿನ್ನೆಲೆಗೆ ಕಾರಣಗಳನ್ನು ಕಂಡುಕೊಳ್ಳಬೇಕಾಗಿರುವುದರಿಂದ ಈ ಕೆಳಗಿನಂತೆ ಕಾಲಾನುಕ್ರಮದಲ್ಲಿ ವಿಶ್ಲೇಷಿಸಲಾಗಿದೆ.

### ೬.೧. ಕನ್ನಡ ಸಾಹಿತಿಗಳು, ಶಿಕ್ಷಣ ತಜ್ಞರು ಮತ್ತು ಚಿಂತಕರು

**ಇಂಗ್ಲೀಶ್ ಕಲಿಕೆ ಕುರಿತಾಗಿ ಗಾಂಧೀಜಿಯವರು** ಈ ರೀತಿಯಾಗಿ ಹೇಳಿದ್ದಾರೆ. "ಈಗ ಇಂಗ್ಲೀಶ್ ಜಾಗತಿಕ ಭಾಷೆಯಾಗಿ ಸ್ವೀಕೃತವಾಗಿದೆ. ಆದ್ದರಿಂದ ಐಚ್ಛಿಕ ಭಾಷೆಯಾಗಿ ಎರಡನೇ ಸ್ಥಾನದಲ್ಲಿ ಇಂಗ್ಲೀಶನ್ನು ಕಲಿಸಲು ನಾನು ಒಪ್ಪುತ್ತೇನೆ. ಆದರೆ ಪ್ರಾಥಮಿಕ ಶಾಲೆಗಳಲ್ಲಿ ಅಲ್ಲ. ವಿಶ್ವವಿದ್ಯಾನಿಲಯದ ತರಗತಿಗಳಲ್ಲಿ ಅದು ಎಲ್ಲರಿಗೂ ಅಲ್ಲ; ಆಸಕ್ತಿ ಇರುವವರಿಗೆ ಮಾತ್ರ, ಹಾಗೆ ಕಲಿತವರು ಆ ಭಾಷೆಯ ಜ್ಞಾನ ಭಂಡಾರಗಳನ್ನು ತಮ್ಮ ತಾಯಿನುಡಿಗೆ ಅನುವಾದಿಸಿ ಕೊಡಲಿ ಇಂಗ್ಲೀಶ್ ಕಲಿಯದೆ ಏನೂ ಮಾಡಲಾಗದು ಎಂಬ ಭಾವನೆಯು ನಮ್ಮ ಮಾನಸಿಕ ಗುಲಾಮಗಿರಿಯ ದ್ಯೋತಕ ಅಷ್ಟೆ. ಅದನ್ನು ನಾನು ಒಪ್ಪಲಾರೆ" ಎಂದಿದ್ದಾರೆ. **(ಡಿ.ಎಸ್.ನಾಗಭೂಷಣ, ನಮ್ಮ ಶಿಕ್ಷಣ ನೀತಿ ಮತ್ತು ಇಂಗ್ಲೀಶ್, ಲೋಹಿಯ ಪ್ರಕಾಶನ, ಬಳ್ಳಾರಿ).** ಅಷ್ಟೇ ಅಲ್ಲದೆ "ಈಗ ಕೊಡುತ್ತಿರುವ ಇಂಗ್ಲೀಶ್ ಭಾಷೆಯ ವಿದ್ಯಾಭ್ಯಾಸ ಇಂಗ್ಲೀಶ್ ಕಲಿತ ಭಾರತೀಯರನ್ನು ನಿರ್ವೀರ್ಯರನ್ನಾಗಿ ಮಾಡಿದೆ. ನಮ್ಮ ವಿದ್ಯಾರ್ಥಿಗಳ ಶಕ್ತಿ ಸಾಮರ್ಥ್ಯಗಳಿಗೆ ಒಂದು ದೊಡ್ಡ ಹೊರೆಯಾಗಿದೆ. ಅದರಿಂದ ನಾವು ಬರೀ ಅನುಕರಣ ಶೀಲರಾಗಿದ್ದೇವೆ. ಮಕ್ಕಳ ಕಾಲಾವಧಿ ಇಂಗ್ಲೀಶ್ ಶಬ್ಧಗಳನ್ನು ಗಟ್ಟಿಮಾಡುವುದರಲ್ಲಿಯೇ ಕಳೆದು ಹೋಗುತ್ತದೆ. ಶಿಕ್ಷಣ ಮಾಧ್ಯಮವನ್ನು ಈ ಕ್ಷಣವೇ ಬದಲಾಯಿಸಬೇಕು. ದೇಶ ಭಾಷೆಗಳಿಗೆ ಸರಿಯಾದ ಸ್ಥಾನ ಕೊಡಬೇಕು. ಇಂಗ್ಲೀಶ್ ಜ್ಞಾನವಿಲ್ಲದೆಯೆ ಭಾರತೀಯ ಮನಸ್ಸು ಅತ್ಯುತ್ತಮ ವಿಕಾಸವನ್ನು ಪಡೆಯುವಂತಿರಬೇಕು" ಎಂದು ಬಹಳ ಸ್ಪಷ್ಟವಾಗಿ ವಿಶ್ಲೇಷಿಸಿದ್ದಾರೆ. **(ಎ.ಆರ್.ನಾರಾಯನಘಟ್ಟ, ಶಿಕ್ಷಣ ಮಾಧ್ಯಮ, ಗೀತಾಕುಟೀರ ಬೆಂಗಳೂರು, ೧೯೯೩, ಪುಟ–೮೭,೮೮)**

ಭಾಷಾ ವಿಜ್ಞಾನಿಯಾದ **ವಿಲ್ಯಂಮಾಡ್ತ** ಅವರು ಮಾತೃಭಾಷೆಯನ್ನು ಸ್ವಭಾಷೆ ಎಂದು ಅರ್ಥೈಸುತ್ತಾರೆ. ಕನ್ನಡ ನಾಡಿನಲ್ಲಿ ಕನ್ನಡ ಸಮಾಜದಲ್ಲಿ ಕನ್ನಡ ಸ್ವಭಾಷೆಯಾಗಿದೆ. ಆ ಸ್ವಭಾಷೆಯಲ್ಲಿಯೇ ಅವರು ಸಾಮಾಜಿಕವಾಗಿ ವ್ಯವಹರಿಸಬೇಕು. ಕನ್ನಡದಲ್ಲಿ ಶಿಕ್ಷಣ ಪಡೆಯಬೇಕು ಆದರೆ ಇಂದಿನ ಪ್ರಪಂಚದಲ್ಲಿ ಹಲವು ಭಾಷೆಗಳನ್ನು ಕಲಿಯುವುದು ಅನಿವಾರ್ಯ. ಕನ್ನಡದ ಅಭಿವೃದ್ಧಿಗಾಗಿ ಜೊತೆಗೆ ಇಂಗ್ಲೀಶ್ ಮತ್ತಿತರ ಭಾಷೆಗಳ ಕಲಿಕೆ ಅಗತ್ಯವಾಗಿದೆ. ಆದರೆ ಅವು ಯಾವುವೂ ಮಾತೃಭಾಷೆ/ಸ್ವಭಾಷೆಯ ಸ್ಥಾನವನ್ನು ಪಡೆದು ಕೊಳ್ಳುವುದಿಲ್ಲ ಎಂದು ಹೇಳುತ್ತಾರೆ. ಅಂದರೆ ಇಂಗ್ಲೀಶ್ ಹಾಗೂ ಮತ್ತಿತರ ಭಾಷೆಗಳು ಪೋಷಕ ಭಾಷೆಗಳಾಗುತ್ತವೆಯೇ ವಿನಃ ಮಾತೃಭಾಷೆ/ಪ್ರಥಮ ಭಾಷೆಗಳಾಗುವುದು ಅಸಾಧ್ಯ ಎನ್ನುವುದು ಇದರ ಮೂಲಾರ್ಥ.

ಶಿಕ್ಷಿತ ವರ್ಗಕ್ಕೆ ಸೇರಿರುವ ನಾವು ವಿದೇಶಿ ಭಾಷೆಯೊಂದರ ಮೂಲಕ ನಮ್ಮ ಶಿಕ್ಷಣವನ್ನು ಪಡೆದಿದ್ದೇವೆ. ಆದ್ದರಿಂದ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿಲ್ಲ. ನಾವು ಜನಸಾಮಾನ್ಯರನ್ನು ಪ್ರತಿನಿಧಿಸಲು ಬಯಸುತ್ತೇವೆ. ಆದರೆ ಸೋಲನ್ನಪ್ಪುತ್ತಿದ್ದೇವೆ. ಆಂಗ್ಲ ಅಧಿಕಾರಿಗಳನ್ನು ಗುರುತಿಸುತ್ತಿದ್ದುದಕ್ಕಿಂತ ಭಿನ್ನವಾದ ರೀತಿಯಲ್ಲಿ ಅವರು ನಮ್ಮನ್ನೇನೂ

ಗುರುತಿಸುವುದಿಲ್ಲ. ಅವರ ಹೃದಯ ಯಾರಿಗೂ ತೆರೆದ ಪುಸ್ತಕವಾಗಿಲ್ಲ, ಅವರ ಆಶೋತ್ತರಗಳು ನಮ್ಮ ಆಶೋತ್ತರಗಳಾಗಿಲ್ಲ ಎಂದು **'ಆಡಳಿತ ಭಾಷೆ ಕೆಲವು ವಿಚಾರಗಳು'** ಎನ್ನುವ ಕೃತಿಯಲ್ಲಿ **ಪ್ರಧಾನ್ ಗುರುದತ್ತ** ಅವರು ಮಾತೃಭಾಷಾ ಶಿಕ್ಷಣ ಕುರಿತಾಗಿ ತಮ್ಮ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೆ ಮಹಾತ್ಮ ಗಾಂಧೀಜಿಯವರ ಹೇಳಿಕೆಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ. "ಮಾತೃಬಾಷೆಯನ್ನು ಒಂದೇ ಸಮನೆ ನಿರ್ಲಕ್ಷಿಸಿಕೊಂಡು ಬಂದಿರುವುದಕ್ಕಾಗಿ ನಾವು ಭಾರಿ ಬೆಲೆಯನ್ನು ತೆರಬೇಕಾಗುತ್ತದೆ, ಎಂದು ಹೇಳಿದ್ದಾರೆ." ಭಾರತವನ್ನು ಬಿಟ್ಟರೆ ಜಗತ್ತಿನ ಇನ್ನಾವ ರಾಷ್ಟ್ರಗಳಲ್ಲೂ ಶಿಕ್ಷಣದ ಭಾಷೆ ವಿದ್ಯಾರ್ಥಿಯ ಭಾಷೆಗಿಂತ ಭಿನ್ನವಾಗಿರುವಂಥ ಈ ಪರಿಸ್ಥಿತಿ ಕಾಣ ದೊರೆಯುವುದಿಲ್ಲ ಎಂದು ರವೀಂದ್ರನಾಥ ಠಾಗೂರರು ಹೇಳಿರುವುದನ್ನು ಚರ್ಚಿಸಿದ್ದಾರೆ. (**ಡಾ. ಪ್ರಧಾನ ಗುರುದತ್ತ, ಆಡಳಿತ ಭಾಷೆ ಕೆಲವು ವಿಚಾರಗಳು, ಮೈಸೂರು, ೧೯೭೬, ಪುಟ-೧೯,೨೦**)ಈ ಮಾತು ನಿಜಕ್ಕೂ ಪ್ರಸ್ತುತದಲ್ಲಿ ಸಾಧ್ಯವಾಗಿದೆ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಲೇಖಕರು (ಉತ್ತರಕನ್ನಡದ) ವಿದ್ಯಾರ್ಥಿಗಳನ್ನು ಸಂದರ್ಶಿಸಿದಾಗ ಕೆಲವು ವಿದ್ಯಾರ್ಥಿಗಳು ಇಂಗ್ಲೀಶ್ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆದವರಾಗಿರುತ್ತಾರೆ. ಆದರೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕನ್ನಡದಲ್ಲಿ ಉತ್ತರಿಸುವರಾಗಿದ್ದಾರೆ ಎಂದಿದ್ದಾರೆ. ಅಂದರೆ ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಅವರ ಮಾತೃಭಾಷೆಯಲ್ಲಿ ಶಿಕ್ಷಣವನ್ನು ಕೊಡುವುದು ಹೆಚ್ಚು ಪರಿಣಾಮಕಾರಿಯಾದ ವಿಧಾನ. ಅವರಿಗೆ ನೀಡುವ ಶಿಕ್ಷಣವೂ ಸಹ ಅಷ್ಟೇ ಯಶಸ್ವಿ ಕಲಿಕೆಯಾಗಬೇಕು. ಪರಿಪೂರ್ಣ ಕಲಿಕೆಯಾಗುವಂತೆ ಅವರಿಗೆ ಶಿಕ್ಷಣವನ್ನು ನೀಡಬೇಕಾದ ಅವಶ್ಯಕತೆಯಿದೆ ಎಂಬುದು ಇದರಿಂದ ತಿಳಿಯುತ್ತದೆ. ಇದಕ್ಕೆ **ಜಿ. ಎಸ್.ಸುಬ್ಬಣ್ಣ** ಅವರ ವಿಚಾರವನ್ನು ಉಲ್ಲೇಖಿಸಬಹುದು. "ಮನೋವೈಜ್ಞಾನಿಕ ವಿಶ್ಲೇಷಣೆಯಂತೆ ಯಾವುದೇ ತಿಳುವಳಿಕೆಯ ಜ್ಞಾನದ ಗ್ರಹಿಕೆ ಮತ್ತು ಅಭಿವ್ಯಕ್ತಿ ಸಹಜವಾಗಿ ಮತ್ತು ಸಮರ್ಥವಾಗಿ ಮಾತೃಭಾಷೆಯಲ್ಲಿ ಆದಂತೆ ಬೇರಾವ ಭಾಷೆಯಲ್ಲೂ ಆಗಲಾರದು." (**ಜಿ. ಎಸ್. ಸುಬ್ಬಣ್ಣ, ಪ್ರಜಾತಂತ್ರ: ಶಿಕ್ಷಣ ಮತ್ತು ಭಾಷೆ, ಸಂಕ್ರಮಣ ಪತ್ರಿಕೆ ಸಂಚಿಕೆ ೧೧೩, ೧೯೮೧-೮೨**) ಇನ್ನೂ ಅನೇಕ ಚಿಂತಕರ, ಶಿಕ್ಷಣ ತಜ್ಞರ ವೈಚಾರಿಕ ಧೋರಣೆಯೂ ಸಹ ಇದೆ ಆಗಿದೆ.

ಮಗುವಿಗೆ ಮಾತೃಭಾಷೆ ಮತ್ತು ಪರಭಾಷಾ ಬೋಧನೆ ಮುಖಾಂತರ ಸಂವಾದಿಸಿಕೊಳ್ಳ ಬಹುದಾದ ಭಾಷಾ ಸಾಮರ್ಥ್ಯದ ಕಲಿಕೆಗೆ ಹೆಚ್ಚು ಪೂರಕ ಹಾಗೂ ಫಲಕಾರಿಯಾಗುವುದು ಯಾವ ಭಾಷೆಯಲ್ಲಿ ಎನ್ನುವುದನ್ನು ಕುರಿತು **ಕೆ. ಅನಂತರಾಮು** ಅವರು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಇವೆರಡು ಭಾಷೆಯ ನಡುವಿನ ವ್ಯತ್ಯಾಸಗಳನ್ನು ಪರಿಗಣಿಸಬಹುದು. ಮಗು ಬೆಳೆದ ಹಾಗೆ ಬೇರೆ ಬೇರೆ ಪರಿಸರಗಳ ಅಗತ್ಯತೆಗೆ ತಕ್ಕಂತೆ ಪರಭಾಷೆಗಳನ್ನು ಸಾಮಾಜಿಕವಾಗಿ ಕಲಿಯುತ್ತಾ ಬರತ್ತವೆ. ಮಗು ತನ್ನ ಮನೆಯ ಮಾತಿನೊಂದಿಗೆ ತಾನು ಬೆಳೆಯುವ ಪರಿಸರದ ಭಾಷೆಯನ್ನು ಅವಶ್ಯವಾಗಿ ಕಲಿಯುತ್ತದೆ. ಆ ಪರಿಸರದಲ್ಲಿಯೇ ಶಾಶ್ವತವಾಗಿ ಉಳಿಯುವಂತಾದರೆ ಆಗ ಮಗುವಿಗೆ ಪರಿಸರದ ಭಾಷೆಯೇ ಮಾತೃಭಾಷೆ

ಯಾಗುತ್ತದೆಯೇ ಹೊರತು ಮಗುವಿನ 'ಮನೆ' ಮಾತಲ್ಲ. ಆ ಭಾಷೆಯೇ ಮಗುವಿಗೆ 'ತಾಯ್ನುಡಿ', 'ಮಾತೃಭಾಷೆ', 'ಮೊದಲ ನುಡಿ' ಯಾಗಿ ಪರಿಣಮಿಸುತ್ತದೆ. ಮಗು ಆ ಭಾಷೆಯಲ್ಲಿಯೇ ಶಿಕ್ಷಣ ಪಡೆಯುತ್ತದೆ ಅನ್ನುವುದಾದರೆ, ಮಗುವಿನ ಭಾವನೆಗಳು, ಸಂವೇದನೆಗಳು ವಿಸ್ತರಣೆಗೊಳ್ಳುವುದು ಮಗುವಿನ ತಾಯ್ನುಡಿಯಲ್ಲಿ. ಅಂದರೆ ಪರಿಸರದ ಭಾಷೆಯಲ್ಲಿಯೇ, ಹೊರತು ತಂದೆ ತಾಯಿಗಳ ಭಾಷೆಯಲ್ಲಿ ಅಲ್ಲ. ಇದರಿಂದ ಮಗು ಹುಟ್ಟಿದಾಗಿನಿಂದ ತಂದೆ ತಾಯಿಗಳ ಭಾಷೆಯನ್ನು ಬಿಟ್ಟು ಅನ್ಯ ಪರಿಸರದಲ್ಲಿ ಬೆಳೆಯುತ್ತಾ ಬಂದರೆ ಆ ಪರಿಸರ ಭಾಷೆ ಮಗುವಿನ ಮಾತೃ ಭಾಷೆಯಾಗಿರುತ್ತದೆ. ಅಂತಹ ಮಾತೃಭಾಷೆ ಸಾಮಾಜಿಕ ಮತ್ತು ವೈಯಕ್ತಿಕ ಚಟುವಟಿಕೆಗಳಿಗೆ ಸಹಾಯಕವಾಗುತ್ತದೆ. ಅಭಿವ್ಯಕ್ತಿ, ಆಲೋಚನೆ, ವಿವೇಚನೆ ಎಲ್ಲವನ್ನು ಬಳಸುವುದು ತಾಯ್ನುಡಿಯಲ್ಲಿಯೇ ಎನ್ನುವುದನ್ನು ಬಹಳ ಸೂಕ್ಷ್ಮವಾಗಿ ಲೇಖಕರು ಗ್ರಹಿಸಿದ್ದಾರೆ.

ಇದನ್ನು ಒಂದು ನಿದರ್ಶನದ ಮೂಲಕ ಅರ್ಥೈಸಿಕೊಳ್ಳಬಹುದು. ಒಂದು ಮಗುವಿನ ಮನೆ ಮಾತು ಹಿಂದಿ. ಆ ಭಾಷೆಯನ್ನು ಮಾತೃ ಭಾಷೆಯಾಗಿ ಹೊಂದಿರುವ ಮಗು ಹುಟ್ಟಿದಾಗಿನಿಂದ ಬಂದು ಕನ್ನಡ ನೆಲದಲ್ಲಿಯೇ ನೆಲೆಸಿ ಇಲ್ಲಿಯೇ ನೆಲೆಯಾದರೆ ಆಗ ಆ ಮಗುವಿನ ತಾಯಿಮಾತು ಕೇವಲ ಬಳಕೆಯ ಮಾತಾಗಿ ಕುಟುಂಬಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಆಗ ಪರಿಸರದ ಭಾಷೆಯಾದ ಕನ್ನಡವೇ ಮಾತೃಭಾಷೆಯಾಗಿ ನಿಲ್ಲುತ್ತದೆ. ಮಗುವಿನ ಶಿಕ್ಷಣ ಮಾತೃಭಾಷೆಯಲ್ಲಿಯೇ ನಡೆಯುತ್ತದೆ. ಅಷ್ಟೇ ಅಲ್ಲದೆ ಗ್ರಹಿಕೆ, ಅಭಿವ್ಯಕ್ತಿ, ಅರ್ಥೈಸಿಕೊಳ್ಳುವಿಕೆ ಎಲ್ಲವೂ ಮಾತೃಭಾಷೆಯ (ಕನ್ನಡ) ಮೂಲಕ ವ್ಯಕ್ತವಾಗುತ್ತದೆ.

ಇದನ್ನು ಮತ್ತೊಂದು ಉದಾಹರಣೆ ಮೂಲಕ ಅರ್ಥೈಸಿಕೊಳ್ಳಬಹುದು. ಹುಟ್ಟಿದ ಮಗುವಿನ ತಾಯಿ ಭಾಷೆ ಕನ್ನಡವಾಗಿರುತ್ತದೆ. ಆದರೆ ಮಗು ಬೆಳೆಯುತ್ತಿರುವ ಪರಿಸರದ ಭಾಷೆ ತೆಲಗು ಭಾಷೆಯಾಗಿರಬಹುದು. (ಇಲ್ಲವೆ ಇತರ ಯಾವುದೇ ಭಾಷೆ) ಅಲ್ಲಿ ತೆಲಗು ಭಾಷೆಯೇ ಅಧಿಕೃತ. ಅದೇ ಅದರ ಮಾತೃಭಾಷೆಯಾಗಿ ಪರಿವರ್ತನೆಯಾಗುತ್ತದೆ. ಶಿಕ್ಷಣವೂ ಅದೇ ಭಾಷೆಯಲ್ಲಿ ನಡೆಯುತ್ತದೆ. ಮಗು ಮನೆಯಲ್ಲಿ ಮಾತ್ರ ಕನ್ನಡವನ್ನು ಬಳಸುವಂತಾಗುತ್ತದೆ. ಉಳಿದಂತೆ ಸಾಮಾಜಿಕ ಪರಿಸರ, ಶಿಕ್ಷಣ ವಲಯ ಎಲ್ಲ ಕಡೆಗಳಲ್ಲೂ ತೆಲುಗು ಭಾಷೆಯನ್ನೇ ಅವಲಂಬಿಸಬೇಕಾಗುತ್ತದೆ. ಇದು ಕೇವಲ ಕನ್ನಡ ಭಾಷಿಕರಿಗೆ ಅಷ್ಟೇ ಅನ್ವಯಿಸದೆ, ಉಳಿದಂತೆ ಆಯಾ ರಾಜ್ಯದ/ಪರಿಸರದಲ್ಲಿರುವ ಭಾಷಿಕರಿಗೆ, ಅಲ್ಪ ಸಂಖ್ಯಾತರಿಗೂ ಈ ನಿಯಮ ಕಡ್ಡಾಯ ರೂಪದಲ್ಲಿರುತ್ತದೆ. ಆಗ ಮಾತ್ರ ಪ್ರಾಥಮಿಕದಿಂದ ಉನ್ನತ ಶಿಕ್ಷಣದವರೆಗೂ, ಆಡಳಿತದಲ್ಲೂ ಸರ್ವಮಾನ್ಯತೆ ಅಭಿವೃದ್ಧಿಯನ್ನು ಸುಲಭವಾಗಿ ಸಾಧಿಸಬಹುದು. ಈ ಬಗೆಯ ತಾತ್ವಿಕ ಹಿನ್ನೆಲೆಯಲ್ಲಿ ಕನ್ನಡ ನಾಡಿನ ಎಲ್ಲಾ ಕಡೆಗಳಲ್ಲಿ ಕನ್ನಡ ಮಾಧ್ಯಮ ಕಡ್ಡಾಯವಾಗಬೇಕೆನ್ನುವುದು ಸ್ಪಷ್ಟವಾದ ವಿಚಾರ.

ಆದರೆ ಇದಕ್ಕೆ ಸ್ವಲ್ಪ ವ್ಯತಿರಿಕ್ತವಾಗಿ(ಗಡಿಭಾಗದ) ಒಂದು ಪರಿಸರದ ಶೈಕ್ಷಣಿಕ, ಆಡಳಿತ ಮಾಧ್ಯಮ ಆ ರಾಜ್ಯದ ಭಾಷೆಯಲ್ಲಿ ನಡೆಯುವುದು ಅಗತ್ಯವಾದ ವಿಚಾರ.

ಉದಾಹರಣೆಯಾಗಿ ಬಳ್ಳಾರಿ ಪರಿಸರವನ್ನು ಇಟ್ಟುಕೊಳ್ಳಬಹುದು. ಬಳ್ಳಾರಿ ಪ್ರದೇಶ ಕರ್ನಾಟಕ ಪ್ರದೇಶ/ ರಾಜ್ಯದ ಗಡಿಯ ಕೊನೆ ಭಾಗದಲ್ಲಿರುವ ಪರಿಸರ. ಇಲ್ಲಿ ಸಾಮಾನ್ಯವಾಗಿ ಕನ್ನಡ ಮಾತೃ ಭಾಷೆ/ ಮನೆ ಮಾತಾಗಿರುವವರು ಬಹು ಸಂಖ್ಯಾತರಾಗಿದ್ದಾರೆ. ಆದರೆ (ಆಂಧ್ರ ಪ್ರದೇಶದ ಗಡಿ ಭಾಗಕ್ಕೆ ಹೊಂದಿಕೊಂಡು ಪ್ರಾರಂಭವಾಗುವ) ಈ ಪ್ರದೇಶದಲ್ಲಿ ಸಹಜತೆ ಎನ್ನುವಂತೆ ಈಗ ಸಂಪೂರ್ಣವಾಗಿ ಎಲ್ಲಾ ವಲಯದಲ್ಲಿ ತೆಲುಗು ಭಾಷೆ ಆವರಿಸಿಕೊಂಡಿದೆ. ಮಗುವಿನ ಶಿಕ್ಷಣ ಸಂಪೂರ್ಣವಾಗಿ ಪ್ರಾದೇಶಿಕ ಭಾಷೆಯಾದ 'ತೆಲುಗು' ಭಾಷೆಯಲ್ಲಿಯೇ ನಡೆಯುತ್ತಿದೆ. ಶಾಲಾ ಪರಿಸರ ಹಾಗೂ ಸಾಮಾಜಿಕ ವಲಯದಲ್ಲಿ ತೆಲುಗು ಭಾಷೆಯನ್ನೆ ಮಾತನಾಡಬೇಕಾಗುತ್ತದೆ. ಆದರೆ ಇದು ಕನ್ನಡನಾಡಿನ ಪ್ರದೇಶವಾದ್ದರಿಂದ ಕನ್ನಡ ಭಾಷಾ ಬೆಳವಣಿಗೆಗೆ ತಡೆ ಉಂಟಾಗುತ್ತದೆ. ಇಲ್ಲಿ ಮಾತೃಭಾಷೆಯ ಶಿಕ್ಷಣವು ಕಂಡು ಬರುತ್ತಿಲ್ಲ. ಕನ್ನಡ ನಾಡಿನಲ್ಲಿ ಕನ್ನಡ ಭಾಷೆ ಮಗುವಿನ ಮಾತೃಭಾಷೆ(ದ್ವಿತೀಯ ಮಾತೃಭಾಷೆ) ಆಗಿರುವುದರಿಂದ ಕನ್ನಡದಲ್ಲಿ ಅದರ ಶಿಕ್ಷಣ ಮುಂದುವರಿಯಬೇಕಿತ್ತು ಆದರೆ ಹಾಗಾಗುತ್ತಿಲ್ಲ. ಅನ್ಯ ಭಾಷೆಯ ದಮನ ಅಥವಾ ಹೇರಿಕೆಯ ಸ್ವರೂಪದಲ್ಲಿ ತೆಲುಗು ಭಾಷಿಕ ಪ್ರಭುತ್ವ ಚಾಲ್ತಿಯಲ್ಲಿರುವುದನ್ನು ನಾವಿಲ್ಲಿ ಕಾಣುತ್ತಿದ್ದೇವೆ. ಈ ದೃಷ್ಟಿಯಿಂದ ಮಗುವಿನ ಪ್ರಾಥಮಿಕ ವಿದ್ಯಾಭ್ಯಾಸ ಅದರ ಮಾತೃ ಭಾಷೆಯಲ್ಲಿ ನಡೆಯದೆ ಅನ್ಯ ಭಾಷೆಯಲ್ಲಿ ನಡೆಯುತ್ತಿರುವುದನ್ನು ತಪ್ಪಿಸಲು ಸರ್ಕಾರ ಕ್ರಮವನ್ನು ಜಾರಿಯಲ್ಲಿ ತರಬೇಕು. ಅಲ್ಲದೆ ಆ ಪ್ರದೇಶ ಭಾಷೆಯಲ್ಲಿ ನಡೆಯುವಂತೆ ಕಡ್ಡಾಯಗೊಳಿಸಬೇಕು. ಈ ಸಂದರ್ಭ, ಕನ್ನಡ ನಾಡಿನಲ್ಲಿ ಇಂಗ್ಲಿಶ್‌ನ ಪ್ರಭಾವದಿಂದಾಗಿ ಇಂಗ್ಲಿಶ್‌ನ ಬೇಡಿಕೆ ಪ್ರಬಲವಾಗಿರುವುದಕ್ಕೂ ಈ ಮೇಲಿನ ಸಂದರ್ಭಕ್ಕೂ ನಿಕಟ ಸಂಬಂಧವನ್ನು ಗುರುತಿಸಬಹುದು ಈ ಎರಡೂ ಭಾಷಿಕ ಸಮಸ್ಯೆ ಒಂದೇ ಆಗಿದೆ. ತೆಲುಗು ಮನೆ ಮಾತುಳ್ಳವರು ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಕಲಿಯುವ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಸರಿಯಾಗಿ ಬಳಸದೆ ಕೆಲವು ದೋಷಗಳನ್ನು ಮಾಡುತ್ತಾರೆ. ದಿನಪೂರ್ತಿ ತೆಲುಗು ಭಾಷೆಯನ್ನೇ ಬಳಸುತ್ತಿರುವುದರಿಂದ ಶಾಲೆಯಲ್ಲೂ ಇದನ್ನೇ ಬಳಸಿ ಕನ್ನಡವನ್ನು ಸರಿಯಾಗಿ ಕಲಿಯದೇ ಹೋಗುತ್ತಾರೆ. ಹೀಗಾಗಿ ಮೊದಲು ಆ ಪ್ರದೇಶದ ಭಾಷೆಯಲ್ಲಿ ಶಿಕ್ಷಣ ನೀಡಬೇಕು. ಪ್ರಥಮ ಭಾಷೆ ಮಾತ್ರ ಮಕ್ಕಳ ಮನೆ ಮಾತುಳ್ಳ ಮಾಧ್ಯಮ ಅಳವಡಿಸಬೇಕು. ಉಳಿದಂತೆಲ್ಲಾ ವಿಷಯಗಳನ್ನು ಆ ಪ್ರದೇಶದ ಭಾಷೆಯಲ್ಲಿ ಕಲಿಸಬೇಕು. ಇದು ಕನ್ನಡ ಹಾಗೂ ತೆಲುಗು ಭಾಷಿಕರಿಬ್ಬರಿಗೂ ಅನ್ವಯವಾಗುವಂತಿರಬೇಕು.

**'ಸ್ಕುಟನಾಬ್ ಕಾಂಗಾಸ್'** ಎಂಬ ಲೇಖಕರು ಬರೆದ 'ಅನ್ಯಭಾಷಾ ಶಿಕ್ಷಣ ಮಾಧ್ಯಮ: ಭಾಷೆಯ ಹತ್ಯೆ, ಜನಾಂಗದ ಹತ್ಯೆಯೇ?' ಎನ್ನುವ ಲೇಖನಕ್ಕೂ ಪ್ರಸ್ತುತದಲ್ಲಿ ಪ್ರಾಥಮಿಕ, ಶಿಕ್ಷಣ ಭಾಷಾ ಮಾಧ್ಯಮ ಕುರಿತ ಚಿಂತನೆಗಳು ನಡೆಯುತ್ತಿರುವುದಕ್ಕೂ ಅಂತರ ಸಂಬಂಧವನ್ನಿಲ್ಲಿ ಗುರುತಿಸಬಹುದು. ಉದಾಹರಣೆಗೆ : ಫ್ರಾನ್ಸ್ ದೇಶದ ನೈಋತ್ಯ ಮತ್ತು ಸ್ಪೇನ್ ಸರ್ಕಾರದ ಆಳ್ವಿಕೆ ಇದ್ದಾಗ ೧೯೩೭ ರಿಂದ ೧೯೫೦ರವರೆಗೆ ಭಾಸ್ಕ್ ಭಾಷೆಯ ಮೇಲೆ ಅನೇಕ ಪ್ರತಿಬಂಧಗಳಿದ್ದವು. ಆ ಭಾಷೆಯನ್ನು ಶಾಲೆಗಳಲ್ಲಿ ಕಲಿಸುವಂತಿರಲಿಲ್ಲ. ಚರ್ಚ್‌ಗಳಲ್ಲಿ

ಪ್ರಾರ್ಥನೆ ಹೇಳುವಂತಿರಲಿಲ್ಲ. ಆ ಭಾಷೆಯನ್ನು ಸಾರ್ವಜನಿಕ ಸ್ಥಳಗಳಲ್ಲಿ ಆಡುವುದಕ್ಕೆ, ಪತ್ರಿಕೆಗಳನ್ನು ಪ್ರಕಟಿಸುವುದಕ್ಕೂ ಅವಕಾಶವಿರಲಿಲ್ಲ. ಭಾಸ್ಕ್ ಭಾಷೆಯ ಪುಸ್ತಕಗಳನ್ನು ಸುಟ್ಟು ಹಾಕಲಾಗುತ್ತಿತ್ತು. ಆದರೆ ೧೯೬೦ರ ನಂತರ ಚರ್ಚಿನ ಭಾಷೆಯಾಗಿ, ಪ್ರಾಥಮಿಕ ಹಂತದ ಮಾಧ್ಯಮವಾಗಿ ಭಾಸ್ಕ್ ಭಾಷೆಗೆ  ಅವಕಾಶ ದೊರೆಯಿತು. ೧೯೭೯ರಲ್ಲಿ ಎಲ್ಲಾ ಹಂತದ ಶಿಕ್ಷಣದಲ್ಲೂ ಆ ಭಾಷೆಗೆ ಅವಕಾಶ ದೊರೆಯಿತು. ೧೯೮೦ರಲ್ಲಿ ಭಾಸ್ಕ್ ಭಾಷಾ ಸಂಸತ್ತು ಅಸ್ತಿತ್ವಕ್ಕೆ ಬಂದಿತು. ಈ ಭಾಷೆಯ ಶೈಕ್ಷಣಿಕ ಕುರಿತ ಚಿಂತನೆಗಳು ಮತ್ತು ಕನ್ನಡದ ಭಾಷಾ ಸಮಸ್ಯೆಗಳನ್ನು ಚರ್ಚಿಸಲೂ ಸೂಕ್ತವಾದ ತಾತ್ವಿಕ ಚೌಕಟ್ಟನ್ನು ಈ ಲೇಖನ ಒದಗಿಸಿಕೊಡುತ್ತದೆ.

ಒಬ್ಬ ವ್ಯಕ್ತಿಯ ಮಾತೃ ಭಾಷೆ ನಾಶ ಹೊಂದುವ ಮೂಲಕ ಜನಸಮುದಾಯದ ಭಾಷೆ ನಾಶ ಹೊಂದಲು ಸಾಧ್ಯವೇ? ಆ ಭಾಷೆ ನಾಶಹೊಂದಲು ಗುರುತಿಸಬಹುದಾದ ಕಾರಣಗಳು. ಒಂದು ಭಾಷೆಯ ಸ್ಥಾನವನ್ನು ಇನ್ನೊಂದು ಭಾಷೆಯ ಸ್ಥಾನದಲ್ಲಿ ತಂದಿಟ್ಟಾಗ ಶಿಕ್ಷಣ ಕ್ರಮದಲ್ಲಾಗುವ ವ್ಯತ್ಯಾಸಗಳು ಮತ್ತು ಶಿಕ್ಷಣದ ಪಾತ್ರ ಹೇಗಿರುತ್ತದೆ? ಸಾಮಾಜಿಕ ವಲಯಗಳಲ್ಲಾಗುವ ಬದಲಾವಣೆಗಳಾವುವು? ಎಂಬ ಪ್ರಶ್ನೆಗಳಿಗೆ ಪರಿಶೀಲನೆ ನಡೆಸಲು ಯತ್ನಿಸಿದ್ದಾರೆ.

ಇವರು ಉಲ್ಲೇಖಿಸಿದಂತೆ "ಶಿಕ್ಷಣದಲ್ಲಿ ಬದಲಾವಣೆ ಆಗುವ ಮೊದಲು ಸಮಾಜದಲ್ಲಿ ಬದಲಾವಣೆ ಆಗಬೇಕು. ನಾವು ನಮ್ಮ ಶಿಕ್ಷಣ ಕ್ರಮವು ನಮ್ಮ ಬಾಸ್ಕತನವನ್ನು ಬೆಳೆಸುತ್ತದೆಂದು ಆಶಿಸಿದ್ದೆವು. ಆದರೆ ಅದು ಸಾಧ್ಯವಿಲ್ಲ. ನಮ್ಮ ಸಮಾಜ ಮತ್ತು ನಮ್ಮ ಶಾಲಾ ವ್ಯವಸ್ಥೆ ಎರಡೂ ಒಟ್ಟಿಗೆ ಬಾಸ್ಕನ್ನು ಕಲಿಯಬೇಕು. ಬೇರೆ ದಾರಿಯೇ ಇಲ್ಲ. ಇದು ೧೯೮೬ರಲ್ಲಿ ಶಿಕ್ಷಣ ಸಚಿವರೊಬ್ಬರು ಹೇಳಿದ ಮಾತು. ಇದು ಒಂದು ಧೋರಣೆ. ಶಿಕ್ಷಣವೆಂಬುದು ಕೇವಲ ಪರಾವಲಂಬಿ, ಸಮಾಜವೇ ಎಲ್ಲಾ ಬದಲಾವಣೆಗಳ ಮೂಲ ಕಾರಣವೆಂದು ನಂಬುತ್ತದೆ. ಸಮಾಜದಲ್ಲಿ ಬದಲಾವಣೆಯಾದರೆ ಮಾತ್ರ  ಶಿಕ್ಷಣ ಕ್ರಮದಲ್ಲಿ ಬದಲಾವಣೆ ಸಾಧ್ಯ. ಶಿಕ್ಷಣವೂ ತನ್ನಷ್ಟಕ್ಕೆ ಬಾಸ್ಕ್ ಭಾಷೆಗೆ ಮತ್ತೆ ಜೀವ ತುಂಬಲಾರದು ಎಂದು ಭಾವಿಸುತ್ತದೆ. ಕೇವಲ ಆರ್ಥಿಕ ಮೂಲದ ಶಕ್ತಿಗಳು ಹಾಗೂ ಶೋಷಣೆ ಮಾತ್ರವಲ್ಲ, ಶಿಕ್ಷಣ ಕ್ರಮ ಕೂಡ ಸ್ಥಳೀಯ ಜನರ ವೈಶಿಷ್ಟ್ಯ ಮತ್ತು ಸಾಂಸ್ಕೃತಿಕ ಚಹರೆಗಳನ್ನು ನಾಶಮಾಡಿದೆ" ಎಂದು ಡೆರಿಡ್ರಿ ಜೋರ್ಡನ್ ವಿವರಿಸುತ್ತಾರೆ. (**ಸಂ: ಎಚ್.ಎಸ್. ರಾಘವೇಂದ್ರ ರಾವ್, ಕನ್ನಡ ಅಧ್ಯಯನ, ಸ್ಕುಟ್ ನಾಬ್ ಕಾಂಗಾಸ್, ಲೇ: ಅನ್ಯಭಾಷಾ ಶಿಕ್ಷಣ ಮಾಧ್ಯಮ: ಭಾಷೆಯ ಹತ್ಯೆ ಜನಾಂಗದ ಹತ್ಯೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪು-೮೪**).

ಭಾಷೆ, ಸಮಾಜ ಮತ್ತು ಶಿಕ್ಷಣಗಳ ಸಂಬಂಧವನ್ನು ಕುರಿತು ಹೇಳುವಾಗ, ಸಮಾಜವೇ ಈ ಎಲ್ಲಾ ಬದಲಾವಣೆಗಳ ಮೂಲ ಕಾರಣ ಎಂಬುದು ಈ ಧೋರಣೆಯಾಗಿದೆ. ಮಾತೃಭಾಷೆಯು ಸಾಂಸ್ಕೃತಿಕ ಮೌಲ್ಯಗಳಲ್ಲೊಂದು ಮಾತ್ರವಲ್ಲ, ಅದು ಜನಾಂಗದ

ತಳಹದಿಯಾಗಿರುತ್ತದೆ. ಮಾತೃ ಭಾಷೆಯಲ್ಲಿ ಶಿಕ್ಷಣ ನೀಡದೆ ಅನ್ಯ ಭಾಷೆಯಲ್ಲಿ ಶಿಕ್ಷಣ ನೀಡಿದರೂ ಹೊರ ಹೊಮ್ಮುವ ಭಾವನೆಗಳು ಮಾತೃಭಾಷೆಯಲ್ಲಿ ವ್ಯಕ್ತಿತ್ವಗೊಳ್ಳುತ್ತವೆ. ಆದ್ದರಿಂದ ಮಾತೃ ಭಾಷೆ ಪ್ರಮುಖವಾದದ್ದು. ಅನ್ಯ ಭಾಷಾ ಶಿಕ್ಷಣ ಮಾಧ್ಯಮವು ಜನರ ಮಾತೃ ಭಾಷೆಯನ್ನು ಶಿಕ್ಷಣ ಕ್ರಮದ ಮೂಲಕ ಪುನರುಜ್ಜೀವನಗೊಳಿಸಬಹುದು. ಶಿಕ್ಷಣ ಕ್ರಮದ ಮೂಲಕ ಸಮಾಜದ ಪ್ರತಿ ವ್ಯವಸ್ಥೆಯನ್ನು ಜಾರಿಗೆ ತರಲು ಸಾಧ್ಯ. ಅಂತಹ ಶಕ್ತಿ ಮಾತೃ ಭಾಷೆಯಿಂದಲೇ ಸಾಧ್ಯ ಎನ್ನುವುದನ್ನು ಅರ್ಥೈಸಿದ್ದಾರೆ.

**ಎ.ಆರ್. ನಾರಾಯಣ ಘಟ್ಟ** ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿ ಅವರ ಮಾತೃಭಾಷೆಯಲ್ಲಿಯೇ ಏಕೆ ಮುಂದುವರಿಯಬೇಕು ಎನ್ನುವುದನ್ನು ಈ ರೀತಿಯಾಗಿ ವಿವರಿಸಿದ್ದಾರೆ. ಮಾತೃಭಾಷೆಯ ಶಿಕ್ಷಣ ಸುಲಭ. ಅನ್ಯ ಭಾಷೆಯ ಕಲಿಕೆ ಕಠಿಣ ಎನ್ನುವುದನ್ನು ಬಾವಿಯ ನೀರಿಗೆ, ಮಾತೃಭಾಷೆಯನ್ನು ಕೆರೆಯ ನೀರಿಗೆ ಹೋಲಿಸಿದ್ದಾರೆ. ಕೆರೆಯ ನೀರನ್ನು ಕಾಲುವೆಯ ಮೂಲಕ ಗದ್ದೆಗೆ ಹಾಯಿಸುವುದು ಸುಲಭವೂ, ಸ್ವಾಭಾವಿಕವೂ ಆಗಿರುವ ವ್ಯವಸ್ಥೆಯೊಂದನ್ನು ಅಲಕ್ಷ್ಯಮಾಡಿ, ಬಾವಿಯ ನೀರನ್ನು ಕಪಿಲೆಯ ಮೂಲಕ ಸುಲಭವಲ್ಲದ ರೀತಿಯಲ್ಲಿ ಹರಿಸುವಂತಹ ದುಬಾರಿ ವ್ಯವಸ್ಥೆಯನ್ನು ಆಶ್ರಯಿಸುವುದು ಎಷ್ಟರಮಟ್ಟಿನ ಜಾಣತನವಾಗುತ್ತದೆ? ಎಂದು ಪ್ರಶ್ನಿಸಿದ್ದಾರೆ. 'ಮಗು ಯಾವ ಭಾಷೆಯನ್ನು ತನ್ನ ತಾಯಿಯೊಂದಿಗೆ ಕಲಿಯುತ್ತ ನಿತ್ಯ ಜೀವನದ ಚಟುವಟಿಕೆಗಳಿಗೆ ತನ್ನ ಪ್ರತಿಕ್ರಿಯೆಯನ್ನು ಸುಲಭವಾಗಿ ವ್ಯಕ್ತಪಡಿಸಲು ತಕ್ಕ ಸಾಮರ್ಥ್ಯವನ್ನು ಪಡೆಯಬಲ್ಲದೋ ಅದೇ ಆ ಮಗುವಿನ ಶಿಕ್ಷಣ ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತದೆ.' ಎಂದಿದ್ದಾರೆ. **(ಎ.ಆರ್. ನಾರಾಯಣಘಟ್ಟ, ಶಿಕ್ಷಣ ಮಾಧ್ಯಮ, ಗೀತಾ ಕುಟೀರ ಬೆಂಗಳೂರು, ೧೯೬೩, ಪುಟ ೨೧,೧೧)** .

'ಕನ್ನಡ ಮಾಧ್ಯಮವು ಸುಲಿದ ಬಾಳೆಹಣ್ಣಿನಂತೆ, ಅಳಿದ ಉಷ್ಣದ ಹಾಲಿನಂತೆ, ಕಳಿದ ಸಿಗುರಿನ ಕಬ್ಬಿನಂತೆ ಸ್ವಾದವುಳ್ಳದ್ದು ಪ್ರಿಯವು ಆರೋಗ್ಯಕರವೂ ಆದುದಾಗಿದೆ' ಎಂದು 'ಮಹಾಲಿಂಗರಂಗರ' ಹೇಳಿಕೆಯನ್ನು ದೃಷ್ಟಾಂತ ಕೊಡುವುದರ ಮೂಲಕ ಸರಳವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. **(ಪು-೧೨)** 'ಮಗುವಿಗೆ ಮಾತೃಭಾಷೆಯಲ್ಲಿ ಶಿಕ್ಷಣವನ್ನು ನೀಡುವುದರಿಂದ ವಿಷಯವನ್ನು ಸುಲಭವಾಗಿ ಗ್ರಹಿಸಬಲ್ಲದು, ಸ್ವತಂತ್ರ ಚಿಂತನಾಶಕ್ತಿ ಬೆಳೆಯುತ್ತದೆ. ಉರು ಹೊಡೆಯುವ ಅವಕಾಶ ತಪ್ಪುತ್ತದೆ. ಸ್ವಾಭಾವಿಕ ಕಲಿಕೆ, ನೈಜವಾದ ಪ್ರಗತಿ ಈ ಶಿಕ್ಷಣದಿಂದ ಲಭ್ಯವಾಗುತ್ತದೆ. ಮಗು ವಿಷಯವನ್ನು ಅರ್ಥೈಸಿಕೊಳ್ಳುವ, ಗ್ರಹಿಸುವ ವಿಧಾನ ಸುಲಭವಾಗಿರಬೇಕು. ಅದು ಮಾತೃಭಾಷೆಯಿಂದ ಮಾತ್ರ ಸಾಧ್ಯ ಎನ್ನುವುದನ್ನು ಇಲ್ಲಿ ಬಿಂಬಿಸಿದ್ದಾರೆ.

**'ಮತ್ತಷ್ಟು ಶೈಕ್ಷಣಿಕ ಚಿಂತನೆಗಳು'** ಎನ್ನುವ ಕೃತಿಯಲ್ಲಿ **ಪ್ರೊ. ಮ.ಗಂ. ರೇಣುಕ ಪ್ರಸನ್ನ** ಅವರು ಶಿಕ್ಷಣದಲ್ಲಿ ಕನ್ನಡ ಮಾಧ್ಯಮವೇ ಬಳಕೆಗೊಳ್ಳುವುದು ಸೂಕ್ತವಾದ ಕ್ರಮ ಎಂದು ಅರ್ಥೈಸಿದ್ದಾರೆ. ಕನ್ನಡ ಮಾಧ್ಯಮ ಕುರಿತು ಏರ್ಪಡುತ್ತಿರುವ ಚರ್ಚೆಗಳಿಗೆ ವ್ಯತಿರಿಕ್ತವಾಗಿ,

ವಿದ್ಯಾರ್ಥಿಗಳ ಅನಿಸಿಕೆಗಳನ್ನು, ಸಾಮಾಜಿಕ ಪ್ರತಿಕ್ರಿಯೆಗಳನ್ನು ತಿಳಿದುಕೊಳ್ಳಲು ಕಾಲೇಜಿನ ವಿದ್ಯಾರ್ಥಿಗಳನ್ನು ಸಂದರ್ಶನ ಮಾಡಿದ್ದಾರೆ. ಈ ಸಂದರ್ಶನದ ಮೂಲಕ ಅವರು ಕನ್ನಡ ಮಾಧ್ಯಮ ಕುರಿತಾಗಿ ಸಾಮಾಜಿಕ ವಲಯದಲ್ಲಿ ಉಂಟಾಗಿರುವ ಕೆಲವು ಗೊಂದಲಗಳನ್ನು ಕಂಡು ಕೊಂಡಿದ್ದಾರೆ.

ವಿದ್ಯಾರ್ಥಿಗಳು ಕನ್ನಡ ಮಾಧ್ಯಮವನ್ನು ಬಿಟ್ಟು ಇಂಗ್ಲೀಶ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳಲು ಎರಡು ಮುಖ್ಯ ಕಾರಣಗಳನ್ನು ನೀಡಿದ್ದಾರೆ. ಅದೇನೆಂದರೆ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಜರುಗುವ "ಸ್ಪರ್ಧಾತ್ಮಕ ಪರೀಕ್ಷೆ" ಗಳು ಆಯಾ ಪ್ರಾಂತಗಳಲ್ಲಿ ನಡೆಯದೆ ಇಂಗ್ಲೀಶ್ ನಲ್ಲಿ ನಡೆಯುತ್ತಿರುವುದು. ಇನ್ನೊಂದು ಕನ್ನಡ ಮಾಧ್ಯಮದಲ್ಲಿ ಕಲಿತ ಪಧವಿದರರನ್ನು ಕನಿಷ್ಠವಾಗಿ ಕಾಣುವುದು, ಇವು ಎರಡೂ ಕಾರಣಗಳಿಗೆ ವಿದ್ಯಾರ್ಥಿಗಳ ಆತಂಕವಾಗಿದೆ ಎಂದು ಗುರುತಿಸಿದ್ದಾರೆ.

ಇಲ್ಲಿ ಮೊದಲು ಹೇಳುವುದಾದರೆ, ಪ್ರಾಥಮಿಕ ಹಂತದಿಂದ ಶಿಕ್ಷಣ ಅವರವರ ಮಾತೃಭಾಷೆಯಲ್ಲಿ ಮತ್ತು ಪ್ರಾದೇಶಿಕ ಭಾಷೆಯಲ್ಲಿ ನಡೆಯಬೇಕಾಗಿರುವುದು ಅತ್ಯಗತ್ಯವಾಗಿದೆ. ಮಗುವಿನ ಮಾತೃಭಾಷೆ ಅದು ಕನ್ನಡ, ಹಿಂದಿ, ತೆಲಗು, ತಮಿಳು ಇತ್ಯಾದಿ ಯಾವ ಭಾಷೆಯಾದರೂ ಆಗಿರಬಹುದು. ಮಗು ಮಾತನಾಡುವುದು, ಅರ್ಥೈಸಿಕೊಳ್ಳುವುದು, ಯೋಚನೆ ಮಾಡುವುದು ಎಲ್ಲವೂ ಮಾತೃಭಾಷೆಯ ಮೂಲಕವೇ ಅಂದಾಗ ಪ್ರಾಥಮಿಕ ಹಂತದಲ್ಲಿ ಮೊದಲು ಆ ಭಾಷೆಯ ತಿಳುವಳಿಕೆ, ಬಳಕೆ ಇತರ ವಿಷಯಗಳನ್ನು ಸರಿಯಾಗಿ ಸಂಪೂರ್ಣವಾಗಿ ಕಲಿಸಬೇಕು. ಹಾಗಾದಾಗ ಮಾತ್ರ ತನ್ನ ಮಾತೃಭಾಷೆಯ ಮೂಲಕ ಇತರ ಎಲ್ಲಾ ಭಾಷೆಗಳನ್ನು ಸಹಜವಾಗಿ ಕಲಿತುಕೊಳ್ಳುತ್ತದೆ. ಇದು ಮಗು, ವಿದ್ಯಾರ್ಥಿ, ವ್ಯಕ್ತಿ ಎನ್ನದೇ ಎಲ್ಲರಿಗೂ ಅನ್ವಯವಾಗುತ್ತದೆ. 'ಕನ್ನಡ'ವೆಂಬ ಉದಾರ ಮನೋಭಾವ ಇಂಗ್ಲೀಶ್ ಎಂಬ ಭಯ, ಆತಂಕದ ವಾತಾವರಣ ಸೃಷ್ಟಿಯಾಗುವುದಿಲ್ಲ. ಹಾಗೂ ಶಾಲೆಯ ವಾತಾವರಣ ಮತ್ತು ಮನೆ ಪರಿಸರದಲ್ಲಿ ಶಿಕ್ಷಕರು, ಪೋಷಕರು ಮೊದಲು ಮಾತೃಭಾಷೆಯಲ್ಲಿ ಸರಿಯಾದ ಪಾಠ ಕ್ರಮವನ್ನು ತಿಳಿಸಿಕೊಡಬೇಕು. ಅಲ್ಲದೆ ಮಾತೃಭಾಷೆಗೆ ಪ್ರಾಧಾನ್ಯತೆಯನ್ನು ನೀಡಬೇಕು. ಕನ್ನಡವನ್ನು ಸುಲಭವಾಗಿ ಕಲಿಯಬಹುದು ಮತ್ತು ಪಾಸುಮಾಡಿಕೊಳ್ಳಬಹುದು. ಆದರೆ ಇಂಗ್ಲೀಶ್ ಕಷ್ಟವಾದ ಕಲಿಕೆ ಎಂದು ಕನ್ನಡಕ್ಕೆ ಭವಿಷ್ಯವಿಲ್ಲ, ಇಂಗ್ಲೀಶ್ ಮಾಧ್ಯಮದವರಿಗೆ ಮಾತ್ರ ಭಾವಿ ಭವಿಷ್ಯದಲ್ಲಿ ಉತ್ತಮ ಅವಕಾಶಗಳು, ಉದ್ಯೋಗಗಳು ಲಭಿಸುತ್ತವೆ ಎಂಬ ಭಾಷಾ ತಾರತಮ್ಯ ಕೀಳರಿಮೆಯನ್ನು ಶಾಲೆಯಲ್ಲಿ ಶಿಕ್ಷಕರು ಹಾಗೂ ಮನೆಯಲ್ಲಿ ಪೋಷಕರು ಮಾಡುತ್ತಿರುವುದನ್ನು ನಾವು ಗಮನಿಸಬಹುದು. ಎಲ್ಲಾ ಭಾಷೆಗಳೂ ಸಮಾನ. ಪ್ರಸ್ತುತ ಜಾಗತಿಕ ಸ್ಪರ್ಧಾತ್ಮಕ ಯುಗದಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳಲು ಎಷ್ಟು ಅಗತ್ಯವಿದೆಯೋ ಅಷ್ಟರಮಟ್ಟಿಗೆ ಇತರ ಭಾಷೆಗಳ ಸಾಮಾನ್ಯ ಜ್ಞಾನ ಅಗತ್ಯ ಎನ್ನುವುದನ್ನು ಅರಿಯಬೇಕು. ಈ ನಿಟ್ಟಿನಲ್ಲಿಯೇ ವಿದ್ಯಾರ್ಥಿಗಳು ಭಾಷೆಗಳನ್ನು ಕಲಿಯುವಂತೆ ಮಾಡಬೇಕು. ಹಾಗಾದಾಗ

ಮಾತ್ರ ಮಾತೃಭಾಷೆಯಾಗಲೀ ಇಂಗ್ಲೀಶ್‌ನ್ನಾಗಲಿ ಕಲಿಯಲು ಸಾಧ್ಯ. ಇಂಗ್ಲೀಶ್‌ನ ಬಗೆಗೆ ಭಯದ ವಾತಾವರಣವನ್ನು ಸೃಷ್ಟಿಮಾಡುವುದನ್ನು ತಡೆಯಬೇಕು. ವಿದ್ಯಾರ್ಥಿಗಳು ತಾವಾಗಿಯೇ ಇಂಗ್ಲೀಶನಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸುವಂತೆ ಶಾಲಾ ಆವರಣದಲ್ಲಿ ಅವರ ಮೂಲ ಶಿಕ್ಷಣ ಭದ್ರವಾಗಿ ರೂಪುಗೊಳ್ಳುವಂತೆ ಮಾಡಬೇಕು.

ಇನ್ನು, ಇಂಗ್ಲೀಶ್ ಮಾಧ್ಯಮದಲ್ಲಿ ಕಲಿತವರಿಗಿಂತ ಕನ್ನಡ ಮಾಧ್ಯಮದಲ್ಲಿ ಕಲಿತವರನ್ನು ಕಡೆಗಣಿಸುವುದು, ಕೀಳಾಗಿ ಕಾಣುವುದು ಇದು ಬಲವಾದ ಸಾಮಾಜಿಕ ಮನಸ್ಥಿತಿಯ ಧೋರಣೆಯಾಗಿದೆ. ಇಂಗ್ಲೀಶ್‌ನ್ನು ಕಲಿಯುವುದು ಕೇವಲ ಸಾಮಾಜಿಕ ಪ್ರತಿಷ್ಠೆಯ ತೋರಿಕೆಯಾಗಿದೆ. ಆರ್ಥಿಕ, ಔದ್ಯೋಗಿಕ ನೆಲೆಯಲ್ಲಿ ಅದನ್ನು ಪ್ರಮುಖವಾಗಿ ಗುರುತಿಸಲ್ಪಡುತ್ತಿರುವುದು ಒಂದು ಕಾರಣವಾಗಿದೆ. ಪ್ರಸ್ತುತದಲ್ಲಿ ವೈಜ್ಞಾನಿಕ ಹಾಗೂ ತಾಂತ್ರಿಕ ನೆಲೆಯ ತೀವ್ರಗತಿಯ ಬೆಳವಣಿಗೆಗೆ ಇಂಗ್ಲೀಶ್‌ನ್ನು ಪ್ರಮುಖವಾಗಿ ಅಸ್ತ್ರವನ್ನಾಗಿ ಬಳಸಿಕೊಳ್ಳುತ್ತಿರುವುದು ಮತ್ತೊಂದು ಕಾರಣವಾಗಿದೆ. ಸಾಪ್ಟವೇರ್ ತಂತ್ರಜ್ಞಾನದಿಂದಾಗಿ ಪ್ರತಿಯೊಂದು ನೆಲೆಯಲ್ಲಿಯೂ ಇಂಗ್ಲೀಶಗೆ ಮಾತ್ರ ಸ್ಥಾನವನ್ನು ಕಲ್ಪಿಸುತ್ತಿರುವುದರಿಂದ ವಿದ್ಯಾರ್ಥಿಗಳು, ಪಾಲಕರು, ಶಿಕ್ಷಕರನ್ನೂ ಒಳಗೊಂಡಂತೆ ಪ್ರತಿಯೊಬ್ಬರೂ ಶಿಕ್ಷಣವನ್ನು ಕೇವಲ ಆರ್ಥಿಕ, ಸಾಮಾಜಿಕ, ಔದ್ಯೋಗಿಕ ನೆಲೆಯಲ್ಲಿ ಮಾತ್ರ ಗುರುತಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ಇಂಗ್ಲೀಶ್ ಕಲಿಕೆಗೆ ಹೆಚ್ಚು ಬೆಲೆಯನ್ನು ನೀಡುತ್ತಿರುವವರು ಮಾತೃಭಾಷೆಯ ಸ್ಥಾನವನ್ನು ಮರೆಯುತ್ತಿದ್ದಾರೆ. ಮನೆ/ ಕುಟುಂಬ ವಲಯ ಹಾಗೂ ಸಾಮಾಜಿಕ ಪರಿಸರದಲ್ಲಿ ಮಾತ್ರ ಕನ್ನಡವನ್ನು/ಮಾತೃಭಾಷೆಯನ್ನು ಬಳಸುತ್ತಾರೆ. ಅಲ್ಲಿ ಮಾತ್ರ ಅವಶ್ಯಕವಾಗಿ ಕನ್ನಡ ಮನೆಮಾತು ಬರಬೇಕು. ಇಂಗ್ಲೀಶನ್ನು ಅಲ್ಲಿ ಬಳಸುವುದಿಲ್ಲ. ಆದರೆ ಶಿಕ್ಷಣ, ಉದ್ಯೋಗ ವಲಯದಲ್ಲಿ ಕನ್ನಡ ಮಾತೃಭಾಷೆಯ ಅಗತ್ಯವಿಲ್ಲವೆ? ಅಲ್ಲಿ ಮಾತ್ರ ಇಂಗ್ಲೀಶನ ಅಗತ್ಯತೆ ಏಕೆ? ಇಂತಹ ಸೂಕ್ಷ್ಮತೆಯನ್ನು ಅರಿತಾಗ ಮಾತ್ರ ಭಾಷೆಗಳ ನಡುವಿನ ವಿವಾದಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು ಎಂದೆನಿಸುತ್ತದೆ. ಈ ಬಗೆಯ ಪರಿಸ್ಥಿತಿಯ ನಿರ್ಮಾಣಕ್ಕೆ ಸಾಮಾಜಿಕರೇ ಕಾರಣಕರ್ತರು. ಮುಖ್ಯವಾಗಿ ಮಾತೃಭಾಷೆಯ ಮಹತ್ವವನ್ನು ಅರಿಯಬೇಕು. ಕೇವಲ ಸಾಮಾಜಿಕ, ಆರ್ಥಿಕ ಪ್ರಯೋಜನಕ್ಕಾಗಿ ಭಾಷೆಯನ್ನು ಬಳಸುವಂತಾಗಬಾರದು. ಯಾವ ಭಾಷೆಯನ್ನು ಬಳಸಬೇಕೆನ್ನುವುದು ಮನುಷ್ಯನ ಮನಸ್ಸಿನಿಂದಲೇ ದೃಢವಾಗಬೇಕು.

**ಪ್ರೊ. ಎನ್.ಚಿ. ಕರೂರ** ಅವರು "ಮಗುವಿನ ನಾಲ್ಕನೇ ತರಗತಿಯವರೆಗೆ ವಿಚಾರ ಶಕ್ತಿ, ಸ್ಮರಣಶಕ್ತಿ, ಭಾವನಾ ಶಕ್ತಿಗಳು ಹಾಗೂ ಸೃಜನಾತ್ಮಕ ಶಕ್ತಿಗಳು ಸಹಜವಾಗಿ ವಿಕಾಸಗೊಳ್ಳುತ್ತಿರುತ್ತವೆ, ಇದು ವೈಜ್ಞಾನಿಕ ಸತ್ಯವೂ ಹೌದು. ಆದ್ದರಿಂದ ಮಗುವಿನ ಪ್ರಾರಂಭಿಕ ಶಿಕ್ಷಣ ಮಾತೃಭಾಷೆಯಲ್ಲಿಯೇ ಜರುಗಬೇಕು. ಐದನೇ ತರಗತಿಯಿಂದ ಇಂಗ್ಲೀಶ್ ಭಾಷೆಯ ಕಲಿಕೆಯನ್ನು ಅಳವಡಿಸಬೇಕು ಎಂದಿದ್ದಾರೆ. ಕನ್ನಡ ಮಾಧ್ಯಮ ಶಾಲೆಗಳಲ್ಲಿ ಉತ್ತಮವಾದ ಬೋಧನೆಯನ್ನು ನಿರ್ವಹಿಸಬೇಕು. ಕನ್ನಡ ಮತ್ತು ಇಂಗ್ಲೀಶ್ ಎನ್ನುವ ತಾರತಮ್ಯವನ್ನು

ಮೂಲವಾಗಿ ಹೊಡೆದೊಡಿಸಬೇಕು. ಆಗ ಮಾತ್ರ ಮಾತೃ ಭಾಷಾ ಶಿಕ್ಷಣ ಅರ್ಥವಂತಿಕೆಯನ್ನು ಪಡೆದುಕೊಳ್ಳುತ್ತದೆ" ಎಂದಿದ್ದಾರೆ. **(ಪ್ರೊ. ಎನ್.ಜಿ. ಕರೂರ, ಶಿಕ್ಷಣ ಮಾರ್ಗ, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೧, ಪುಟ -೪೭,೪೮)**

ಪ್ರಾಥಮಿಕ ಶಾಲೆಯ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಬೇಕು ಬೇಡ ಎನ್ನುವ ಚರ್ಚೆಯಲ್ಲಿ ಪರ ವಿರೋಧದ ಛಾಯೇ ಕಂಡರೂ ವಾಸ್ತವಿಕವಾಗಿ ಪರಿಸ್ಪರ ಕಾಳಜಿಗಳನ್ನು ವಿರೋಧಿಸುತ್ತಿಲ್ಲ ಎಂದು **ಡಾ. ಡಿ. ಪಾಂಡುರಂಗಬಾಬು** ಅವರು ಇಂಗ್ಲೀಶ್ ಕಲಿಕೆ ಬೇಡ ಎನ್ನುವವರು ನೀಡುವ ಕಾರಣಗಳು ಮತ್ತು ಇಂಗ್ಲೀಶ್ ಕಲಿಕೆ ಬೇಕು ಎನ್ನುವವರು ಅಪೇಕ್ಷಿಸುವ ಕಾರಣಗಳನ್ನು ಕುರಿತು ಚರ್ಚಿಸಿದ್ದಾರೆ.

ಶಿಕ್ಷಣಕ್ಕೂ ಮತ್ತು ಉದ್ಯೋಗಕ್ಕೂ ಆ ಮೂಲಕ ಗಳಿಕೆಯಾಗುವ ಸಾಮಾಜಿಕ ಸ್ಥಾನಮಾನಕ್ಕೂ ನಿಕಟ ಸಂಬಂಧವಿದೆ. ಇಂಗ್ಲೀಶ್ ಔದ್ಯೋಗಿಕ, ಆರ್ಥಿಕ ಸ್ಥಾನ ಮಾನ, ವ್ಯವಹಾರಿಕ ಸಾಧನವಾಗಿ ಕಂಡು ಬರುತ್ತಿರುವುದರಿಂದ ಅದಕ್ಕೆ ಬೇಡಿಕೆ ಹೆಚ್ಚಾಗಿದೆ. ಇಂಗ್ಲೀಶ್ ಕಲಿಕೆ ಬೇಡ ಎನ್ನುವವರು ಇಂಗ್ಲೀಶ್ ಕಲಿಸಲು ಇರುವ ಅಡತಡೆಗಳನ್ನು, ಮಕ್ಕಳ ಭಾಷಾ ಕಲಿಕೆಯ ಸಾಮರ್ಥ್ಯವನ್ನು ಮತ್ತು ಕನ್ನಡ ಭಾಷೆಯ ಅಸ್ತಿತ್ವದ ಪ್ರಶ್ನೆಗಳನ್ನು ಮುಂದಿಡುತ್ತಾರೆ. ಅಲ್ಲದೆ ಬೋಧನೆಗೆ ಶಿಕ್ಷಕರ ಕೊರತೆ, ತಜ್ಞರ ಕೊರತೆ, ಬೋಧನಾ ವಿಧಾನ ಮುಂತಾದ ಅಂಶಗಳನ್ನು ಕಾರಣಗಳನ್ನಾಗಿ ನೀಡುತ್ತಾರೆ. ಆದರೆ ಮನಶಾಸ್ತ್ರಜ್ಞರ ಪ್ರಕಾರ ಕನ್ನಡ ಕಲಿಕೆಗೂ ಇಂಗ್ಲೀಶ್ ಭಾಷೆ ಕಲಿಕೆಗೂ ನೇರವಾದ ಸಂಬಂಧವಿಲ್ಲ. ಸಾಮಾಜಿಕ ಬಳಕೆಗನುಗುಣವಾಗಿ ಅದರ ಸ್ವರೂಪ ಕಂಡು ಬರುತ್ತದೆ ಎಂದು ಅರ್ಥೈಸುತ್ತಾರೆ. ಇಂಗ್ಲೀಶ್ ಭಾಷೆಯಿಂದಾಗಿ ಕನ್ನಡವನ್ನು ಕಡೆಗಣಿಸಲಾಗುತ್ತಿದೆ. ಇಂಗ್ಲೀಶ್ ನಿಂದಾಗಿ ಕನ್ನಡ ಹಿಂಜರಿಯುತ್ತದೆ ಎಂಬ ಮಾತುಗಳನ್ನು ಅಲ್ಲಗಳೆಯುತ್ತಾರೆ. ಕನ್ನಡ ಹಿಂಜರಿದಂತೆ ಇಂಗ್ಲೀಶ್ ಮುಂದಾಗುತ್ತಿದೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ ಎಂದು ಹೇಳುತ್ತಾರೆ.

ಕನ್ನಡವನ್ನು ಉಪೇಕ್ಷೆ ಮಾಡಿ ಇಂಗ್ಲೀಶ್‌ನ್ನು ಸ್ವೀಕರಿಸುತ್ತಿಲ್ಲ. ಹಾಗೆಯೇ ಕನ್ನಡದ ಕಾಳಜಿಯ ಕೊರತೆಯಿಂದಾಗಿ ಇಂಗ್ಲೀಶ್‌ನ ಅಪೇಕ್ಷೆ ಹೆಚ್ಚುತ್ತಿಲ್ಲ. ಅನಿವಾರ್ಯತೆಯಿಂದಾಗುವ ಸಾಮಾಜಿಕ ಒತ್ತಾಯಗಳು ರೂಪುಗೊಳ್ಳುತ್ತಿವೆ. ವೃತ್ತಿ ವಲಯಗಳಲ್ಲಿನ ಆರ್ಥಿಕ ಲಾಭ ಉತ್ಪಾದನೆ ಹೆಚ್ಚುತ್ತಿರುವುದು ಇಂಗ್ಲೀಶ್ ಭಾಷೆಯಿಂದಾಗಿ. ಸಮಾಜಿಕ ವಲಯಗಳಲ್ಲಿ ಕೆಲವು ನಿರ್ದಿಷ್ಟ ಕ್ಷೇತ್ರಗಳ ಬಗೆಗೆ ಆಕರ್ಷಣೆ ದಿನೇ ದಿನೇ ಹೆಚ್ಚುತ್ತಿದೆ. ಸಿ.ಇ.ಟಿ ಮೂಲಕ ಶಿಕ್ಷಣದ ವಿವಿಧ ಕೋರ್ಸಗಳಿಗೆ ಪ್ರವೇಶವನ್ನು ಪಡೆಯುವ ಸಂದರ್ಭದಲ್ಲಿ ಆಡಳಿತಾತ್ಮಕ ಸಮಸ್ಯೆಗಳಿಂದಾಗಿ ಸಾಮಾಜಿಕ ಒತ್ತಡವನ್ನು ಬಿಂಬಿಸುತ್ತವೆ. ಬಹುಪಾಲು ವಿದ್ಯಾರ್ಥಿಗಳು ವಿವಿಧ ಔದ್ಯೋಗಿಕ (ವೃತ್ತಿ) ಕೋರ್ಸುಗಳಿಗೆ ಪ್ರವೇಶ ಪಡೆಯಲು ಮುಂದಾಗುತ್ತಾರೆ. ಅಂತವರು ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳಾಗಿರುತ್ತಾರೆಯೇ ಹೊರತು, ಕನ್ನಡ ಮಾಧ್ಯಮ ವಿದ್ಯಾರ್ಥಿಗಳಲ್ಲ. ಅದು ಕೇವಲ ಮೇಲ್ವರ್ಗದ ಮಕ್ಕಳು ಮಾತ್ರ, ಕೆಳವರ್ಗದ

ಗ್ರಾಮೀಣ ಪ್ರದೇಶದ ಬಹುಪಾಲು ಮಕ್ಕಳು ಕನ್ನಡ ಮಾಧ್ಯಮದಲ್ಲಿಯೇ ಕಲಿಯುತ್ತಿದ್ದಾರೆ. ಈ ನೆಲೆಯಲ್ಲಿ ಕಲಿಯುತ್ತಿರುವುದರಿಂದ ಇಂಗ್ಲೀಶಿನಿಂದ ಇದು ಸಾಧ್ಯವಾಗುತ್ತಿಲ್ಲ ಎಂದು ಭಾವಿಸಿ ಒಂದನೇ ತರಗತಿಯಿಂದ (ಇಂಗ್ಲೀಶ್ ಕಲಿಯುವ) ಕಲಿಸುವ ವ್ಯವಸ್ಥೆಗೆ ಜನ ಮುಂದಾಗುತ್ತಿದ್ದಾರೆ. ಕನ್ನಡದ ಅಸ್ತಿತ್ವಕ್ಕೆ ಕುಂದಾಗುತ್ತಿದೆ ಎಂದು ಇಂಗ್ಲೀಶ್ ಕಲಿಕೆಯನ್ನು ವಿರೋಧಿಸುತ್ತಿರುವವರು ಕನ್ನಡದ ಅಸ್ತಿತ್ವದ ಉಳಿವಿಗಾಗಿ ಮಾಡುತ್ತಿರುವವರ ಪ್ರಯಾಸವಾಗಿದೆ. ಕನ್ನಡವನ್ನು ರಕ್ಷಿಸಿಕೊಳ್ಳಬೇಕಾದ ಜವಾಬ್ದಾರಿ ಕೇವಲ ಸರ್ಕಾರಿ ಶಾಲೆಗಳ ಮಕ್ಕಳ ಮತ್ತು ನಿರ್ಧಿಷ್ಟ ಸಾಮಾಜಿಕ ಆರ್ಥಿಕ ವರ್ಗಗಳಿಂದ ಮಾತ್ರವಲ್ಲ, ಕನ್ನಡದ ಅಸ್ತಿತ್ವಕ್ಕೆ ಇರುವ ಆಂತರಿಕ ಬೇರುಗಳು ಶಿಕ್ಷಣ ರಂಗಕ್ಕೆ ಸೀಮಿತವಲ್ಲ. ಇದು ಕನ್ನಡ ಪರಿಸರದ ಔದ್ಯೋಗಿಕ, ಆರ್ಥಿಕ, ರಾಜಕೀಯ, ಆಡಳಿತದ ವಿವಿಧ ವಲಯಗಳನ್ನು ಚಾಚಿಕೊಂಡಿದೆ. ಶೈಕ್ಷಣಿಕ ರಂಗದಲ್ಲಿ ಕನ್ನಡವನ್ನು ಉಳಿಸಿಕೊಳ್ಳುವ ಅಳವಡಿಸುವ ಪ್ರಶ್ನೆಯನ್ನು ವಿದ್ಯಾರ್ಥಿ ಪ್ರಶ್ನಿಸುವ ಅಂಶವನ್ನು ಒಳಗೊಂಡಿರಬೇಕು. ಅಲ್ಲದೆ ಶಿಕ್ಷಣೋತ್ತರ ಔದ್ಯೋಗಿಕ ಸಾಮಾಜಿಕ ಕ್ಷೇತ್ರಗಳ ಭಾಷಿಕ ಆಕ್ಷೇಪಗಳ ಹಿನ್ನೆಲೆಯಲ್ಲಿ ಗ್ರಹಿಸಬೇಕು ಎಂದು ಅಭಿಪ್ರಾಯ ಪಡುತ್ತಾರೆ.

'ಕನ್ನಡ'ವನ್ನು ಔದ್ಯೋಗಿಕ, ರಾಜಕೀಯ, ಆರ್ಥಿಕ, ಆಡಳಿತ ವಲಯಗಳಲ್ಲಿ ಸಾಮಾಜಿಕ ಬಳಕೆಯ ವಿಧಾನ ನೆಲೆಯನ್ನು ಮುಖ್ಯವಾಗಿ ಪರಿಗಣಿಸುವುದು ಉದ್ದೇಶವಲ್ಲ. ಪ್ರಾಥಮಿಕ ಹಂತದಲ್ಲಿ ಮಗು ಗಳಿಸುವ ಭಾಷಾ ಸಾಮರ್ಥ್ಯ ಅದರ ಮುಂದಿನ ಉನ್ನತ ಹಂತದ ಗ್ರಹಿಕಾ ಸಾಮರ್ಥ್ಯಕ್ಕೆ ಭದ್ರ ಅಡಿಪಾಯವನ್ನು ನಿರ್ಮಿಸಿಕೊಡುವ ರಂಗ ಸಜ್ಜಿಕೆಯಾಗಿ ಪ್ರಾಥಮಿಕ ಹಂತ ನಿರ್ಮಾಣವಾಗಬೇಕು. ಮಗು ತನ್ನ ಮೂಲ ಭಾಷೆ ಅಥವಾ ಪ್ರಾದೇಶಿಕ ಭಾಷೆಯನ್ನು ಸಮರ್ಥವಾಗಿ ಬಳಸುವಂತಾದರೆ ಸಹಜವಾಗಿಯೇ ಅನ್ಯಭಾಷೆಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳುತ್ತದೆ. ಮಗು ಒಂದು ಹಂತದವರೆಗೆ ತನ್ನ ಭಾಷೆಯಲ್ಲಿ ಸಂಪೂರ್ಣ ತಿಳುವಳಿಕೆ, ಮಾಹಿತಿ ಪಡೆಯುವಂತಾದ ಮೇಲೆ ಅನ್ಯಭಾಷೆಗಳನ್ನು ಕಲಿಯುವುದು ಸುಲಭ. ಆಗ ತಾನಾಗಿಯೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತೆ ಮಾಡುವುದು ಪ್ರಾಥಮಿಕ ಶಿಕ್ಷಣದ ಪ್ರಥಮ ಆದ್ಯತೆಯಾಗಿ ಮಾತೃ ಭಾಷೆ ಬಳಕೆಯ ಅಗತ್ಯತೆ ಇಲ್ಲಿ ಕಂಡು ಬರುತ್ತದೆ. ಮಗುವಿಗೆ ಭಾಷಾ ಬಳಕೆ ಮತ್ತು ಕಲಿಕೆಯಲ್ಲಿ ಸಮರ್ಥತೆಯನ್ನು ತಂದು ಕೊಡುವಲ್ಲಿ ಸಾಮಾಜಿಕ, ಆರ್ಥಿಕ, ಆಡಳಿತ, ರಾಜಕೀಯದ ಪಾತ್ರ ಮತ್ತು ಬೆಂಬಲದ ಅಗತ್ಯತೆಯಿದೆ.

**ಡಾ. ಅಶೋಕ ಕುಮಾರ ರಂಜೇರೆ** ಅವರು **'ಪ್ರಾಥಮಿಕ ಒಂದನೆ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ'** ಎಂಬ ಚರ್ಚೆಯ ಪ್ರಸ್ತಾಪದ ಹಿಂದಿರುವ ಕಾರಣಗಳನ್ನು ವಿಶ್ಲೇಷಿಸುತ್ತಾರೆ. ಅಲ್ಲದೆ ಪರಿಹಾರಗಳನ್ನು ನೀಡುವ ಪ್ರಯತ್ನ ಮಾಡಿದ್ದಾರೆ. 'ಯಾವುದೇ ಒಂದು ಭಾಷೆ ಕೇವಲ ಸಂವಹನದ ಮಾಧ್ಯಮದ ಪರಿಕರವಷ್ಟೆ ಅಲ್ಲ. ಅದು ಆ ಭಾಷೆಯನ್ನು ಬಳಸುವ ಜನಸಮುದಾಯದ ಪ್ರತಿನಿಧಿಯೂ ಆಗಿರುತ್ತದೆ. ಒಂದನೇ ತರಗತಿಯಿಂದ ಇಂಗ್ಲೀಶ್

ಕಲಿಕೆ ಎಂಬ ಒತ್ತಾಯ ಇದು ದೇಶದ ಆರ್ಥಿಕ ನೆಲೆಯ ನೀತಿಯಿಂದಾಗಿದೆ, ಎಂದು ವಿವರಿಸಿದ್ದಾರೆ. ಮಗು ತನ್ನ ಮನೆಮಾತಿನೊಂದಿಗೆ ಮತ್ತೊಂದು ಭಾಷೆಯನ್ನು ಕಲಿಯಲು ಅವಕಾಶವಿದೆ. ಆದರೆ ಇಂಗ್ಲೀಶ್ ಭಾಷೆಯನ್ನು ಪಕ್ಕದ ಭಾಷೆಯಂತೆ ಸಹಜವಾಗಿ ಕಲಿಯಲು ಸಾಧ್ಯವಿಲ್ಲ. ಏಕೆಂದರೆ ಭಾರತದಲ್ಲಿ ಶೇಕಡಾ ೯೮ರಷ್ಟು ಜನರಿಗೆ ಇಂಗ್ಲೀಶ್ ಮನೆಮಾತಲ್ಲ. ಅದನ್ನು ಯಾರೂ ಮನೆ ಭಾಷೆಯಾಗಿ ಬಳಸುವುದಿಲ್ಲ. ಶಾಲೆಯಲ್ಲಿಯೂ ಸಹ ಇಂಗ್ಲೀಶ್ ಬರಹದ ಭಾಷೆಯಾಗಿ ಕಲಿಸುತ್ತಿರುವುದು. ಜಗತ್ತಿನಲ್ಲಿ ವ್ಯಾಕರಣದ ಮೂಲಕವೇ ಒಂದು ಭಾಷೆಯನ್ನು ಕಲಿಸಿರುವುದಕ್ಕೆ ಯಾವುದೇ ಸಾಕ್ಷಿ ಇಲ್ಲ. ಕೇವಲ ಪರಿಸರದಿಂದಲೇ ಒಂದು ಭಾಷೆಯನ್ನು ಕಲಿಸಲು/ಕಲಿಯಲು ಸಾಧ್ಯ ಎಂದಿದ್ದಾರೆ. ಇದು ಅಕ್ಷರಶಃ ನಿಜರೂಪ. ನಮ್ಮ ಪೂರ್ವಜರು, ಅವಿದ್ಯಾವಂತರು, ಅಕ್ಷರ ಬಲ್ಲದೇ ಇರುವವರು ಎಲ್ಲರೂ ಸರಾಗವಾಗಿ ಅವರವರ ಮನೆ ಮಾತನ್ನು ಬಳಸುತ್ತಿದ್ದರೆ. ಅವರ್‍ಯಾರು ಕನ್ನಡವನ್ನು ವ್ಯಾಕರಣದ ಮೂಲಕವೇ ಕಲಿತಿಲ್ಲ? ಇಲ್ಲಿ ಇಂಗ್ಲೀಶ್ ಭಾಷೆ ಮೊದಲೆ ನಮ್ಮ ನೆಲದ ಭಾಷೆ ಅಲ್ಲ. ಅದು ಅನ್ಯ ಭಾಷೆ. ಜೊತೆಗೆ ಇಂಗ್ಲೀಶನ್ನು ಶಾಲೆಯಲ್ಲಿ ವ್ಯಾಕರಣದ ಮೂಲಕ ಕಲಿಸಿದರೆ ಎಷ್ಟರ ಮಟ್ಟಿಗೆ ಚಾಲ್ತಿಯಲ್ಲಿ ಬರುತ್ತದೆ. ಇಲ್ಲಿ ಮಕ್ಕಳಿಗೆ ಜ್ಞಾನದ ದೃಷ್ಟಿಯಿಂದ ಇಂಗ್ಲೀಶ್ ಭಾಷೆಯ ಸ್ವರೂಪವನ್ನು ಪ್ರಾಥಮಿಕ ಶಾಲೆಯಲ್ಲಿ ಹೇಳಿಕೊಡುವ ಉದ್ದೇಶ ಸರ್ಕಾರಕ್ಕಿದೆಯೋ? ಅಥವಾ ಮಕ್ಕಳಿಗೆ ಪ್ರಾರಂಭದಿಂದಲೇ ಇಂಗ್ಲೀಶನ್ನು ಮಾತಾಡುವ ಸಾಮರ್ಥ್ಯವನ್ನು ಕಲಿಸಿಕೊಡುವುದು ಸರ್ಕಾರದ ಉದ್ದೇಶವಾಗಿದೆಯೋ? ಎಂದು ನೋಡಿದಾಗ, ಬಹುಶಃ :ಪ್ರಾಥಮಿಕ ಹಂತದಿಂದ ಮಕ್ಕಳಿಗೆ ಇಂಗ್ಲೀಶ್ ಭಾಷೆಯನ್ನು ಮಾತಾಡಲು ಬರುವಂತೆ ಅವರನ್ನು ರೂಪಿಸುವ ಒಂದು ಪ್ರಯತ್ನ ಸರ್ಕಾರದ್ದಾಗಿರಬಹುದು ಎಂಬುದು ತಿಳಿದು ಬರುತ್ತದೆ. ಈ ಪ್ರಯತ್ನ ಮುಂದೆ ಮಗುವಿನ ಔದ್ಯೋಗಿಕ, ಆರ್ಥಿಕ ನೆಲೆಗೆ ವಿಸ್ತರಿಸಿಕೊಳ್ಳಲು ಪ್ರಯೋಜನವಾಗುತ್ತದೆ ಎಂದು ನಂಬಲಾಗಿದೆ. ಆದರೆ ಒಂದು ಭಾಷೆಯನ್ನು ಪರಿಸರದಲ್ಲಿ ಸತತವಾಗಿ ಬಳಸುತ್ತಿದ್ದಾಗಲೇ ಕಲಿಯಲು ಮತ್ತು ಭಾಷೆಯನ್ನು ಬಳಸಲು ಸಾಧ್ಯ. ಇಲ್ಲದಿದ್ದರೆ ಆ ಭಾಷೆಯನ್ನು ಪೂರ್ಣವಾಗಿ ಬಳಸಲು ಸಾಧ್ಯವಿಲ್ಲ, ಇದನ್ನು ಸರ್ಕಾರ ಗಮನದಲ್ಲಿಡಬೇಕಾಗಿದೆ.

೧ನೇ ತರಗತಿಯಿಂದಲೇ ಇಂಗ್ಲೀಶ್ ಕಲಿಸಬೇಕು ಎಂದು ವಾದಿಸುತ್ತಿರುವ ಜನರು ಇಂಗ್ಲೀಶ್ ಕಲಿಕೆಗೂ ಮತ್ತು ಉದ್ಯೋಗಕ್ಕೂ ಸಂಬಂಧ ಕಲ್ಪಿಸುತ್ತಿದ್ದಾರೆ. ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿತ ಕೂಡಲೇ ಜನರಿಗೆ ಉದ್ಯೋಗ ದೊರಕುತ್ತದೆ ಎನ್ನುವುದಕ್ಕೆ ಯಾವ ಅಧಾರಗಳಿವೆ. ಎಷ್ಟೋ ಜನರು ಇಂಗ್ಲೀಶ್ ವಿದ್ಯಾಭ್ಯಾಸ ಪಡೆದು ನಿರುದ್ಯೋಗಿಗಳಾಗಿದ್ದಾರೆ. ಇಂಗ್ಲೀಶ್ ಎಂ.ಎ. ಮಾಡಿರುವವರೂ ಸಾಕಷ್ಟು ಜನರಿದ್ದಾರೆ. ಅಷ್ಟೇ ಅಲ್ಲದೆ ಪ್ರಸ್ತುತದಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನ ಶಿಕ್ಷಣ ಪಡೆದವರು ಸಹ ಅಪೇಕ್ಷಿಸಿದ ಉದ್ಯೋಗ ಸಿಗದೆ ತೊಳಲಾಡುತ್ತಿದ್ದಾರೆ. ಇಂಗ್ಲೀಶ್ ಕಲಿತು ನಿರುದ್ಯೋಗಿಗಳಾಗಿರುವುದು ನಮ್ಮ ಕಣ್ಮುಂದೆ ಅಪಾರ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಹತ್ತನೇ ತರಗತಿ ಹಾಗೂ ಪಿ.ಯು.ಸಿ ಯಲ್ಲಿ

ಇಂಗ್ಲೀಶ್ ಫೇಲಾಗುವ ಮೂಲಕ ಅನೇಕರು ಡ್ರಾಪೌಟ್ ಆಗುತ್ತಿದ್ದಾರೆ. ಇದನ್ನು ತಪ್ಪಿಸಬೇಕಾದರೆ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಸುವ ಮೂಲಕ ಇದನ್ನು ಹೊಡೆದು ಹಾಕಬಹುದು ಎಂಬ ಇನ್ನೊಂದು ವಾದವಿದೆ. ಆದರೆ ಇಂಗ್ಲೀಶ್‌ಗಿಂತ ಹೆಚ್ಚು ಗಣಿತ ಅಭ್ಯಾಸದಲ್ಲೂ ಫೇಲಾಗುವುದರ ಮೂಲಕ ಡ್ರಾಪೌಟ್ ಆಗುತ್ತಿದ್ದಾರೆ ಇದಕ್ಕೆ ಕಾರಣವನ್ನು ಯಾರು ಗುರುತಿಸುತ್ತಿಲ್ಲ ಎಂದು ವಿಶ್ಲೇಷಿಸುತ್ತಾರೆ.

ಬಹುಮುಖ ಸಮಾಜದಿಂದ ಕೂಡಿದ ಭಾರತಕ್ಕೆ ಅದರದೇ ಆದ ಶಿಕ್ಷಣ ನೀತಿಯನ್ನು ರೂಪಿಸಿ, ಅಳವಡಿಸದಿದ್ದರೆ ಅಪಾಯ ತಪ್ಪಿದ್ದಲ್ಲ. ಜನರಲ್ಲಿ ವಿದ್ಯಾರ್ಥಿಗಳಲ್ಲಿ, ಸಮಾಜದಲ್ಲಿ ಎಚ್ಚರ ಮೂಡಿಸುವ ಜವಾಬ್ದಾರಿ ವಿದ್ವಾಂಸರ, ಶಿಕ್ಷಕರ, ಶಿಕ್ಷಣ ತಜ್ಞರ ಮೇಲಿದೆ. ಸರಿಯಾದ ರೂಪುರೇಷೆಗಳು ಸಿದ್ಧಗೊಳ್ಳದಿದ್ದರೆ ಮತ್ತೆ ಮುಂದಿನ ನೂರಾರು ವರ್ಷಗಳ ಕಾಲ ನಮ್ಮ ಮುಂದಿನ ಪೀಳಿಗೆಗೆ ಮತ್ತೊಬ್ಬರಿಗೆ ಅಡಿಯಾಳಾಗಿ ಇರಬೇಕಾದ ಕಾಲ ಬರುತ್ತದೆ. ಆದ್ದರಿಂದ ಪರಿಹಾರ ಕಂಡುಕೊಳ್ಳಬೇಕಾದದ್ದು ಅನಿವಾರ್ಯ ಮತ್ತು ಅಗತ್ಯವಾಗಿದೆ ಎನಿಸುತ್ತದೆ. **(ಡಾ. ಅಶೋಕಕುಮಾರ ರಂಜೇರೆ, ಶಿಕ್ಷಣ ಮತ್ತು ಭಾಷೆ, ನಿಧಿ ಪ್ರಕಾಶನ, ಹೊಸಪೇಟೆ, ೨೦೦೫, ಪುಟ–೭,೨೮,೨೯,೩೨,೩೩.)**

ಅಂದರೆ ಇಂಗ್ಲೀಶ್ ಹಾಗೂ ಗಣಿತವನ್ನು ಹೊರತುಪಡಿಸಿ ಉಳಿದ ವಿಷಯಗಳು ಸರಳವಾದ ಮಾತೃಭಾಷೆಯಲ್ಲಿರುವುದು. ಇದು ಸಾಮಾಜಿಕ ಭಾಷೆಯೂ ಆಗಿರುವುದರಿಂದ ಇದರ ಪರಿಕಲ್ಪನೆಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು. ಆದರೆ ಗಣಿತದ ಪರಿಕ್ಪನೆಗಳು, ಸೂತ್ರಗಳು ಸ್ವಲ್ಪ ಭಿನ್ನವಾಗಿದ್ದು ಕಠಿಣವಾಗಿವೆ. ಅವುಗಳನ್ನು ಇಂಗ್ಲೀಶನಲ್ಲಿಯೂ ಬೋಧಿಸುತ್ತಿರುವುದರಿಂದ ಅದು ಸಾಮಾನ್ಯ ಗ್ರಹಿಕೆಗೆ ಅಸಾಧ್ಯವಾಗಿದೆ. ಇಂಗ್ಲೀಶ್ ಸಾಮಾಜಿಕ ಭಾಷೆಯಲ್ಲಿ ಹೆಚ್ಚು ಬಳಕೆಗೊಳ್ಳದೇ ಇರುವುದರಿಂದ ಇವು ಎರಡೂ ಭಾಷೆಗಳು ಹೆಚ್ಚು ಸಂಕೀರ್ಣವಾಗಿ ಕಂಡು ಬರುತ್ತಿವೆ. ಅಂದರೆ ಯಾವುದೇ ವಿಷಯಗಳನ್ನು ಮಾತೃಭಾಷೆಯ ಮೂಲಕ ಕಲಿತಾಗ ಅದನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಮೂಲಕ ನಾವು ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಇಂದಿನ ಅನೇಕ ವಿದ್ಯಾರ್ಥಿಗಳು ಪದವಿ ಹಂತಕ್ಕೆ ಬಂದಾಗಲೂ ಕನ್ನಡವನ್ನು ಸ್ಪಷ್ಟವಾಗಿ ಬರೆಯಲು ಬರುವುದಿಲ್ಲ. ಕಾಗುಣಿತದ ದೋಷ, ವಾಕ್ಯರಚನಾ ದೋಷಗಳು ಕಂಡುಬರುತ್ತಿವೆ ಎನ್ನುವಾಗ ಮಾತೃಭಾಷೆ ಶಿಕ್ಷಣದ ಸಮಸ್ಯೆಯನ್ನು ಮೊದಲು ಬಗೆಹರಿಸಬೇಕಾಗಿದೆ. ಕನ್ನಡವನ್ನು ಮೊದಲು ಸ್ಪಷ್ಟವಾಗಿ, ಸಂಪೂರ್ಣವಾಗಿ ಕಲಿಯುವಂತೆ ಬೋಧನಾ ವ್ಯವಸ್ಥೆಯನ್ನು ಅಳವಡಿಸಬೇಕು. ಆ ನಂತರದಲ್ಲಿ ಇಂಗ್ಲೀಶ್ ಭಾಷೆಯ ಕಲಿಕೆಯ ಕಡೆಗೆ ಗಮನಹರಿಸಬೇಕು. ಮಾತೃಭಾಷೆಯಲ್ಲಿಯೇ ಪ್ರಧಾನ ಸಮಸ್ಯೆಗಳನ್ನಿಟ್ಟುಕೊಂಡು ಅನ್ಯಭಾಷೆಯ ಕಲಿಕೆಗೆ ಪ್ರೇರೇಪಿಸುವುದು ಯಾವ ತರ್ಕ? ಎನ್ನುವುದನ್ನು ಆಲೋಚಿಸಬೇಕಾಗಿದೆ.

'ಮಗು ತನ್ನ ಪರಿಸರದಲ್ಲಿ ಒಂದಾಗಬೇಕೆಂದು ಸಾಮಾಜಿಕ ಗುರಿಯನ್ನು ಸಾಧಿಸಲು ಮಾತೃಭಾಷಾ ಮಾಧ್ಯಮ ಹೆಚ್ಚು ಪರಿಣಾಮಕಾರಿ. ಆದರೆ ಪರಕೀಯ ಭಾಷೆಯಲ್ಲಿ ನೀಡುವ ಶಿಕ್ಷಣ ನಿಷ್ಕ್ರಿಯವಾಗಬಹುದು' ಎಂದು ಲೇಖಕರಾದ **ಸ.ರ. ಸುದರ್ಶನ** ಅವರು ಮಗುವಿನ ಆಲೋಚನೆ ಹಾಗೂ ಅಭಿವ್ಯಕ್ತಿಯ ಕ್ರಮ ಯಾವ ಬಗೆಯದು ಎಂದು ನಿರೂಪಿಸಿದ್ದಾರೆ. ಅಲ್ಲದೆ ಇತರ ಕೆಲವು ಚಿಂತಕರ ಉಲ್ಲೇಖಗಳನ್ನು ಇಲ್ಲಿ ಗುರುತಿಸಿದ್ದಾರೆ.

"ಚಿಂತನೆ, ಭಾಷೆ ಎರಡೂ ದೇಹ ಮತ್ತು ಆತ್ಮವಿದ್ದಂತೆ, ಮಗು ಬದುಕಿನ ಮೊದಲ ಹಂತದ ಅನುಭವಗಳನ್ನು ಗಳಿಸುವ ಮಾತೃಭಾಷೆಯಲ್ಲೇ ಚಿಂತಿಸಿ ಕನಸು ಕಾಣುತ್ತದೆ." ಎನ್ನುತ್ತಾರೆ **ಜಿ.ಸಿ. ಶರ್ಮಾರವರು.** "ಚಿಂತನೆ ಮತ್ತು ಒಳಭಾಷೆಗಳು ಪರಸ್ಪರ ಎಷ್ಟೊಂದು ಹೆಣೆದುಕೊಂಡಿರುತ್ತವೆ ಎಂದರೆ ಅವೆರಡೂ ಒಟ್ಟಿಗೆ ಬೆಳೆಯುತ್ತವೆ ಮತ್ತು ನಶಿಸುತ್ತವೆ. ಒಂದನ್ನು ಬಿಟ್ಟು ಇನ್ನೊಂದನ್ನು ಬೆಳೆಸಲಾಗದು. ಮಗು ಚಿಂತಿಸಿ, ಕನಸು ಕಾಣುವ ಭಾಷೆಯಲ್ಲಿ ಶಿಕ್ಷಣ ನೀಡುವುದು ಶಾಲಾ ಶಿಕ್ಷಣದ ಮೊದಲ ಅಗತ್ಯಾಂಶವಾಗಿದೆ" ಎಂದು ರೈಬರ್ನ ಹೇಳುತ್ತಾರೆ. "ಸೃಜನಶೀಲತೆ ಯಾವಾಗಲೂ ಸಹಜ ಸ್ವಭಾವದ ಭಾವನೆಯಲ್ಲಿ ಅಭಿವ್ಯಕ್ತವಾಗುತ್ತದೆ" ಎಂದು ಚೌಮಸ್ಕಿ ಹೇಳುತ್ತಾರೆ. **(ಸ.ರ. ಸುದರ್ಶನ, ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಲೇಖನ: ಶಿಕ್ಷಣ ಮಾಧ್ಯಮ-ಸೈದ್ಧಾಂತಿಕ ಹಿನ್ನೆಲೆ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೬, ಪುಟ-೪)**

ಶಿಕ್ಷಣದಲ್ಲಿ ಪ್ರದೇಶ ಭಾಷೆಗಳ ಕಲಿಕೆ ಬಗ್ಗೆ ಒತ್ತು ಕೊಡಲಾಗಿದೆ. ಈ ಬಗ್ಗೆ ೧೯೫೧ರಲ್ಲಿ ನಡೆದ ಯುನೆಸ್ಕೊ ಸಮ್ಮೇಳನದಲ್ಲೂ ನೇರ ಕಲಿಕೆಯಲ್ಲಿ ಮಾತೃಭಾಷೆ ಮೂಲಕದ ಕಲಿಕೆಗೆ ಹೆಚ್ಚು ಆದ್ಯತೆ ನೀಡಲಾಗಿದೆ. ಮಕ್ಕಳು ತಮಗೆ ತಿಳಿದ ಭಾಷೆಗಳಿಗಿಂತ ಮಾತೃಭಾಷೆಯಲ್ಲಿ ಬೇಗನೆ ಕಲಿಯತ್ತಾರೆ ಎನ್ನುವುದು ನಿಜಕ್ಕೂ ಸತ್ಯವಾಗಿದೆ.

ಈ ನಿಯಮ ಕೇವಲ ಮಕ್ಕಳಿಗೆ ಅನ್ವಯಿಸುವುದಿಲ್ಲ. ಭಾಷೆಯನ್ನು ಬಳಸುತ್ತಿರುವ ಎಲ್ಲರಿಗೂ ಅನ್ವಯವಾಗುತ್ತದೆ. ವ್ಯಕ್ತಿ ತಾನು ಕಲಿಯುತ್ತಿರುವ ಅಥವಾ ಕೇಳಿಸಿಕೊಳ್ಳುವ ವಿಷಯವನ್ನು ಮೊದಲು ತನ್ನ ಭಾಷೆಯಲ್ಲಿಯೇ ಅರ್ಥೈಸಿಕೊಳ್ಳುತ್ತಾನೆ. ಆದರೆ ಅಭಿವ್ಯಕ್ತಿಗೊಳಿಸುವುದು ಇತರ ಭಾಷೆಯಲ್ಲಾಗಿರಬಹುದು ಅದು ಸಂದರ್ಭಕ್ಕನುಗುಣವಾಗಿರುತ್ತದೆ.

೧೯ನೇ ಶತಮಾನದ ಪ್ರಾರಂಭದವರೆಗೆ ಕನ್ನಡ ನಾಡಿನಲ್ಲಿ ಕೇವಲ ಐದನೇ ತರಗತಿವರೆಗೆ ಮಾತ್ರ ಕನ್ನಡ ಮಾಧ್ಯಮವಿತ್ತು. ಐದರಿಂದ ಮುಂದಿನ ತರಗತಿಯಲ್ಲಿ ಇದ್ದದ್ದು ಇಂಗ್ಲೀಶ್ ಮಾಧ್ಯಮ. ೧೯೧೫ರಿಂದಲೇ ವಿಶ್ವವಿದ್ಯಾಲಯಗಳವರೆಗೂ ಕನ್ನಡ ಮಾಧ್ಯಮ ಮುಂದು ವರಿಯಬೇಕು ಎಂದು ಸಮ್ಮೇಳನಾಧ್ಯಕ್ಷರು (ಸಾಹಿತ್ಯ) ಆರಂಭಿಸಿದ್ದರೂ ಅದು ಹಾಗೇ ಉಳಿದುಕೊಂಡು ಬಂತು. ಆದರೆ ೧೯೩೯ನೇ ಇಸ್ವಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ. ಎನ್ ಎಸ್. ಸುಬ್ಬರಾಯರು ಎಷ್ಟೇ ವಿರೋಧವಿದ್ದರೂ ಲೆಕ್ಕಿಸದೆ ಮೆಟ್ರಿಕ್‌ವರೆಗೆ ಕನ್ನಡ ಮಾಧ್ಯಮವನ್ನು ವಿಸ್ತರಿಸಿದ್ದುದನ್ನು ಒಂದು ಐತಿಹಾಸಿಕ ಘಟ್ಟವೆಂದು

ಪರಿಗಣಿಸಲಾಗಿದೆ. ೧೯೫೦ರ ಸಂದರ್ಭದಲ್ಲಿ ಕುವೆಂಪು ಅವರು ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ, ಇಂಟರ್ ಮೀಡಿಯಟ್/ಪಿಯುಸಿ ತರಗತಿಯಲ್ಲಿ ವಿಜ್ಞಾನ ವಿಷಯಗಳಲ್ಲಿ ಕನ್ನಡ ಮಾಧ್ಯಮ ತರಗತಿಗಳನ್ನು ಆರಂಭಿಸಿದರು. ಬಿ.ಎ. ಹಾಗೂ ಬಿ.ಎಸ್‌ಸಿ.ಗಳಲ್ಲೂ ಕನ್ನಡ ಮಾಧ್ಯಮ ತರಗತಿಗಳನ್ನು ತೆರೆದರು. ನಂತರ ಇದು ನಿರಂತರವಾಗಿ ಮುಂದುವರೆಯಲಿಲ್ಲ. ಕುವೆಂಪು ಅವರ ಶಿಕ್ಷಣ ಕುರಿತ ಈ ವಿಚಾರ, ಯೋಜನೆ ನಿಜಕ್ಕೂ ಶ್ಲಾಘನೀಯ. ಅಂದರೆ ವಿದ್ಯಾರ್ಥಿಗಳಿಗೆ ಪ್ರಾಥಮಿಕದಿಂದ ಉನ್ನತ ಹಂತದವರೆಗೂ ಮಾತೃಭಾಷೆಯ ಶಿಕ್ಷಣ ಪೂರಾ ಅಗತ್ಯವಾದುದು. ಹಾಗೂ ವಿದ್ಯಾರ್ಥಿಗಳ ಉನ್ನತ ಜ್ಞಾನಾಭಿವೃದ್ಧಿ, ವೈಯಕ್ತಿಕ ಬೆಳವಣಿಗೆಯನ್ನು ಮತ್ತು ಶಿಕ್ಷಣದ ಗುಣಮಟ್ಟ ಉನ್ನತೀಕರಿಸುವುದಕ್ಕೆ ಮಾತೃಭಾಷೆ ಮೂಲ ಪ್ರೇರಣೆಯಾಗಿರುತ್ತದೆ ಎಂಬುದನ್ನು ಇಲ್ಲಿ ಸೂಚಿಸಿದ್ದಾರೆ. ಸುಮಾರು ೬೦ರ ದಶಕದಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ವಿಜ್ಞಾನ, ಗಣಿತ, ಭೂವಿಜ್ಞಾನ, ಭೌತಶಾಸ್ತ್ರ ಮುಂತಾದ ವಿಷಯಗಳನ್ನು ಕನ್ನಡದಲ್ಲೇ ಪರೀಕ್ಷೆಗಳಲ್ಲಿ ಉತ್ತರಿಸುವ ಅವಕಾಶವನ್ನು ದೇಜಗೌ ಅವರು ಕಲ್ಪಿಸಿದ್ದರು. ಇದರಿಂದ ಕನ್ನಡದಲ್ಲಿ ಉತ್ತರಿಸುವವರ ಸಂಖ್ಯೆ ಹೆಚ್ಚಾಗುತ್ತಾ ಹೋಯಿತು. ಮುಂದೆ ೧೯೯೧ರಲ್ಲಿ ಶ್ರೀ ಕೇಶವ ಹೆಗ್ಡೆಯವರು ಮೈಸೂರು ಯುವರಾಜ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ಬಿ.ಎಸ್‌ಸಿ. ಯಲ್ಲಿ ಕನ್ನಡ ಮಾಧ್ಯಮ ತರಗತಿ ಮೊದಲು ಆರಂಭವಾಯಿತು. ಆದರೆ ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಬಿ. ಎಸ್‌.ಸಿ. ಕನ್ನಡ ಮಾಧ್ಯಮ ತರಗತಿಯಲ್ಲಿ ಪ್ರವೇಶ ಪಡೆಯುವರ ಸಂಖ್ಯೆ ಕಡಿಮೆಯಾಗಿತ್ತು. ಇದರಿಂದ ಈ ಮಾಧ್ಯಮ ತರಗತಿ ಮುಂದುವರಿದುಕೊಂಡು ಬರಲಿಲ್ಲ. ಆದರೆ ಇಂಗ್ಲೀಶ್ ಮಾಧ್ಯಮದಲ್ಲಿ ಬೋಧನೆ ಪಡೆಯುತ್ತಿದ್ದವರು ಹೆಚ್ಚಿನ ಸಂಖ್ಯೆಯಲ್ಲಿದ್ದು ಪರೀಕ್ಷೆಯ ಉತ್ತರಗಳನ್ನು ಮಾತ್ರ ಕನ್ನಡ ಮಾಧ್ಯಮದಲ್ಲಿ ಉತ್ತರಿಸುವವರು. ಅಂದರೆ ಪ್ರಾಥಮಿಕದಿಂದ ಪದವಿ/ಉನ್ನತ ಹಂತದವರೆಗೂ ಇಂಗ್ಲೀಶ್ ಮಾಧ್ಯಮ ಶಿಕ್ಷಣವಾದರೂ ಇಂಗ್ಲೀಶ್ ಕಲಿಕೆ ಪರಿಪೂರ್ಣಗೊಳ್ಳದೆ ಇರುವುದನ್ನು ಕಾಣಬಹುದು. ವಿದ್ಯಾರ್ಥಿಗಳು ಮಾತೃಭಾಷೆಗಳಲ್ಲಿ ಮಾತ್ರ ವಿಷಯಗಳನ್ನು ಚೆನ್ನಾಗಿ ಗ್ರಹಿಸಿ ಮನನ ಮಾಡಿಕೊಳ್ಳುವರು ಎನ್ನುವುದಕ್ಕೆ ಇದಕ್ಕಿಂತಲೂ ಪಕ್ವವಾದ ನಿದರ್ಶನ ಉಂಟೇ? ಎಂಬುದು ತಿಳಿಯುತ್ತದೆ. ಆ ಸಮಯದಲ್ಲಿಯೇ ಸರ್ಕಾರ ಅಧಿಕೃತವಾಗಿ ಕಡ್ಡಾಯವಾಗಿ ಉನ್ನತ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೊಳಿಸಿದ್ದಿದ್ದರೆ ಇಂದು ಅತ್ಯಂತ ಅಧಿಕ ಪ್ರಮಾಣದಲ್ಲಿ ಅದರ ಪ್ರಯೋಜನವನ್ನು ಪಡೆಯಬಹುದಾಗಿತ್ತು. ಪದವಿ ತರಗತಿ ಕನ್ನಡ ಮಾಧ್ಯಮದಲ್ಲಿ ಮುಂದುವರಿಯುತ್ತ ಬಂದಿದ್ದರೆ ಇವತ್ತಿನ ಸಂದರ್ಭದಲ್ಲಿ ಭಾಷಾ ಮಾಧ್ಯಮದ ಚರ್ಚೆ ತೀವ್ರ ಸ್ವರೂಪ ಪಡೆಯುತ್ತಿರಲಿಲ್ಲ ಎನಿಸುತ್ತದೆ.

ರಾಜ್ಯಕ್ಕೆ 'ಕರ್ನಾಟಕ' ಎಂದು ಹೆಸರಿಟ್ಟ ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಆಗ ರಾಜ್ಯದ ಲೋಕಸೇವಾ ಆಯೋಗದ ಪರೀಕ್ಷೆಗಳನ್ನು ಇಂಗ್ಲೀಶಿನಲ್ಲೇ ಉತ್ತರಿಸಬೇಕಿತ್ತು. ಆದರೆ ಇದನ್ನು ಪ್ರತಿಭಟಿಸಿ ಕನ್ನಡದಲ್ಲಿ ಉತ್ತರಿಸಲು ಅವಕಾಶವನ್ನು ನೀಡುವಂತೆ 'ದೇಜಗೌ' ಅವರು ೨೦-೧೧-೧೯೭೪ರಂದು ಅನಿರ್ದಿಷ್ಟ

ಉಪವಾಸವನ್ನು ಕೈಗೊಂಡರು. ಇವರೊಂದಿಗೆ ಸಿದ್ಧಯ್ಯ ಪುರಾಣಿಕ್ ಹಾಗೂ ಬೆಂಗಳೂರು ನಗರದ ವಿದ್ಯಾರ್ಥಿ ಮಿತ್ರರು ಸಹಸ್ರಗಟ್ಟಲೆ ಪಾಲ್ಗೊಂಡು ಬೆಂಬಲ ನೀಡಿದರು. ಇದಕ್ಕೆ ದೇವರಾಜ ಅರಸು ಸ್ಪಂಧಿಸಿ ಲೋಕಸೇವಾ ಆಯೋಗದ ಪರೀಕ್ಷೆಗಳಲ್ಲಿ ಕನ್ನಡದಲ್ಲಿ ಉತ್ತರಿಸಲು ಅವಕಾಶ ನೀಡಲಾಗಿದೆ ಎಂದು ಘೋಷಿಸಿದರು. ಈ ಅವಕಾಶ ಇವತ್ತಿನ ಸಂದರ್ಭದಲ್ಲಿಯೂ ಜಾರಿಯಲ್ಲಿದೆ. ಮುಖ್ಯವಾಗಿ 'ದೇಜಗೌ' ಅವರ ಕಠಿಣವಾದ ಹೋರಾಟ ನಡೆಸಿದ್ದು ಮತ್ತು ದೇವರಾಜ ಅರಸು ಅವರ ಉತ್ತಮವಾದ ಆಡಳಿತ, ಭಾಷೆ ಮತ್ತು ನಾಡಿನ ಕಾಳಜಿ, ಅಭಿಮಾನವೇ ಇದಕ್ಕೆ ಪ್ರಮುಖ ಕಾರಣ. ಇದನ್ನು ವಿವಿಧ ಬಗೆಯ ವಿಷಯಗಳ ಸಿಇಟಿ ಪರೀಕ್ಷೆಗಳಿಗೆ ಅನ್ವಯಿಸಬೇಕಾಗಿತ್ತು. ಪ್ರಶ್ನೆ ಪತ್ರಿಕೆಗಳನ್ನು ಕನ್ನಡ (ನಾಡಿನ ವಿದ್ಯಾರ್ಥಿಗಳಿಗೆ ಅನುಕೂಲಮಾಡಿಕೊಡಲು) ಮಾಧ್ಯಮದಲ್ಲಿ ಪ್ರಕಟ ಮಾಡಬೇಕಿತ್ತು. ಪ್ರಸ್ತುತ ಜಾಗತಿಕ ಸ್ಪರ್ಧಾತ್ಮಕ ಪರೀಕ್ಷೆಗಳು ಕಡ್ಡಾಯ ಹಾಗೂ ತೀವ್ರವಾಗಿದ್ದುದರಿಂದ ಹೆಚ್ಚು ಪ್ರಯೋಜನವಾಗುತ್ತಿತ್ತು.

ಪ್ರಾಥಮಿಕ ಶಿಕ್ಷಣ ಕುರಿತಾಗಿ ಒಂದು ಚರ್ಚೆಯ ವಾದಗಳು ಮುಖ್ಯವಾಗಿ ಮೂರು ಅಂಶಗಳಲ್ಲಿ ವಿಧಿತವಾಗಿದೆ. ಆಯಾ ಪ್ರದೇಶದ ದೇಶ ಭಾಷೆಗೆ ಅಲ್ಲಲ್ಲಿ ಪ್ರಾಧಾನ್ಯವಿರಬೇಕು ಎನ್ನುವವರದು ಒಂದು ವಾದವಾದರೆ, ಭಾರತೀಯ ಸಂಯುಕ್ತ ಭಾಷೆಗಳಿಗೆ ಪ್ರಥಮ ಸ್ಥಾನವಿರಬೇಕು ಎನ್ನುವ ವಾದವೂ ಒಂದು. ವಿದ್ಯೆಗೆ ಆಗರವಾಗಿರುವ, ವ್ಯವಹಾರ ದೃಷ್ಟಿಯಿಂದ ಅಂತರಾಷ್ಟ್ರೀಯವಾಗಿರುವ ಇಂಗ್ಲೀಶ್ ಭಾಷೆಗೆ ಪ್ರಥಮ ಸ್ಥಾನವಿರಬೇಕೆಂದು ವಾದಿಸುವವರು ಕೆಲವರು. ಅಷ್ಟೇ ಅಲ್ಲದೆ, ಪ್ರಾಥಮಿಕ ಹಂತದಲ್ಲಿ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಬೇಕು, ಬೇಡ ಎನ್ನುವವರದೂ ಒಂದು ವಾದವಾಗಿದೆ. ಮೂರರಿಂದ ಐದನೇ ತರಗತಿಯಲ್ಲಿ ಇಂಗ್ಲೀಶ್‌ನ್ನು ಕಡ್ಡಾಯ ಭಾಷಾ ಪತ್ರಿಕೆಯನ್ನಾಗಿ ಮಾಡುವುದು. ಅದೇ ರೀತಿಯಾಗಿ ಪದವಿಪೂರ್ವ ಹಾಗೂ ಪದವಿ ತರಗತಿಗಳಲ್ಲಿಯೂ ಸಹ ಎಲ್ಲಾ ವಿಷಯಗಳನ್ನು ಮಾತೃಭಾಷಾ ಬೋಧನೆ ಮತ್ತು ಪಠ್ಯ ಪುಸ್ತಕಗಳನ್ನು ಅಳವಡಿಸಬೇಕು ಎನ್ನುವ ಚರ್ಚೆಗಳು ಸಾಕಷ್ಟು ವಿಸ್ತಾರತೆಯನ್ನು ಪಡೆದುಕೊಂಡಿದೆ.

ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲೀಶ್‌ನ ಸ್ಥಾನವನ್ನು ಕುರಿತು ಕುವೆಂಪು ಅವರ ತತ್ವಗಳನ್ನು ಇಲ್ಲಿ ಬಳಸಿಕೊಳ್ಳಬೇಕಾದ ಅಗತ್ಯತೆಯಿದೆ. " ಇಂಗ್ಲೀಶ್ ಬಂದದ್ದು ಮುಖ್ಯವಾಗಿ ರಾಜಕೀಯ ಕಾರಣಕ್ಕಾಗಿ. ಅದನ್ನು ಅಧಿಕಾರಿ ಭಾಷೆಯೆಂದು ಘೋಷಿಸಿ ಕಡ್ಡಾಯವಾಗಿ ಎಲ್ಲರೂ ಕಲಿಯ ಬೇಕೆಂದು ವಿಧಿಸಿದುದೂ ಇದೇ ಕಾರಣಕ್ಕಾಗಿ. ಬಹುಜನರು ನಮ್ಮ ದೇಶದಲ್ಲಿ ಇಂಗ್ಲೀಶನ್ನು ಕಲಿತುದದಕ್ಕೆ ಕಾರಣವೂ ರಾಜಕೀಯವೇ." **(ಕೆ.ವಿ. ಪುಟ್ಟಪ್ಪ, ಸಂ- ಕೆ.ಸಿ. ಶಿವಾರೆಡ್ಡಿ, ಸಮಗ್ರ ಗದ್ಯ ಸಂಪುಟ ೨, ಲೇ : ನಮಗೆ ಬೇಕಾದ ಇಂಗ್ಲಿಶ್, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೧೫೫)** ಇಂಗ್ಲೀಶನ್ನು ಇಂದು ಕಲಿಯುತ್ತಿರುವವರು ಕೇವಲ ಆರ್ಥಿಕ ಪ್ರಯೋಜನಕ್ಕಾಗಿ. ಭಾಷಾ ದೃಷ್ಟಿಯಿಂದ ಓದುತ್ತಿರುವವರ

ಸಂಖ್ಯೆ ತುಂಬಾ ವಿರಳ. ಆ ಭಾಷೆಯಲ್ಲಿ ಓದಲು, ಬರೆಯಲು, ಮಾತನಾಡಲು, ಅರ್ಥೈಸಿಕೊಳ್ಳುವವರಾಗಿರುವುದಿಲ್ಲ. ಇವರಿಗೆ ಬೇಕಾದುದು ಇಂಗ್ಲೀಶ್ ಸಾಹಿತ್ಯವಲ್ಲ. ವ್ಯವಹಾರಕ್ಕೋಸ್ಕರ ಸಂಪರ್ಕ ಮಾಧ್ಯಮವಾಗಿ ಅಗತ್ಯತೆಯ ಅನುಕೂಲಕ್ಕಾಗಿ ಮಾತ್ರ ಇಂಗ್ಲೀಶನ್ನು ಬಳಸುತ್ತಿದ್ದಾರೆ ಎಂದು ಹೇಳಿದ್ದಾರೆ. ಕೆ.ವಿ. ನಾರಾಯಣರು ಈ ಬಗೆಯ ಇಂಗ್ಲೀಶನ್ನು 'ಕಂಗ್ಲೀಶ್' ಎಂದು ಕರೆದಿದ್ದಾರೆ. ಏಕೆಂದರೆ ನಾವು ಮೂಲ ಇಂಗ್ಲೀಶನ್ನು ಬಳಸುತ್ತಿಲ್ಲ. ನಮ್ಮ ಕನ್ನಡ ಭಾಷೆಯ ಬಳಕೆಯೊಂದಿಗೆ ಆ ಭಾಷೆಯನ್ನು ವ್ಯವಹಾರಿಕವಾಗಿ ಬಳಸುತ್ತಿರುವುದರಿಂದ ಅದು ಕನ್ನಡದೊಂದಿಗಿನ ಇಂಗ್ಲೀಶ್ ಭಾಷೆಯಾಗಿ ಪ್ರಸ್ತುತದಲ್ಲಿ ನಿರ್ಮಾಣವಾಗುತ್ತಿದೆ ಎಂದಿದ್ದಾರೆ.

ಇನ್ನು **ಕುವೆಂಪು** ಅವರ ವಿಚಾರದಂತೆ ಹೇಳುವುದಾದರೆ, ಇಂಗ್ಲೀಶ್ ಸಾಹಿತ್ಯವನ್ನು ಅಭ್ಯಾಸ ಮಾಡುವವರಿಗೆ ಅದನ್ನು ಬರೆಯುವ ಶ್ರಮವಹಿಸಬೇಕಿಲ್ಲ. ಓದಿ ಅರಿತರೆ ಸಾಕು. ಇಂತಹ ಪರ ಭಾಷೆಯ ಸಾಹಿತ್ಯವನ್ನು ದೇಶಭಾಷಾ ಮಾಧ್ಯಮದ ಮೂಲಕ/ಸ್ವಭಾಷೆಯ ಮೂಲಕ ಕಲಿಯುವುದರಿಂದ ಅದರ ರಸತತ್ವದ ತಿಳಿವು ಸುಲಭವಾಗಿ ಶೀಘ್ರವಾಗಿ ಜೀರ್ಣವಾಗುತ್ತದೆ ಎನ್ನುತ್ತಾರೆ. ಇದರಿಂದ ದೇಶೀ ಭಾಷೆಗೆ ಪ್ರಥಮಸ್ಥಾನ ಸಲ್ಲಬೇಕು. ದೇಶಭಾಷೆ ಶಿಕ್ಷಣ ಮಾಧ್ಯಮವಾಗಬೇಕು. ಕನ್ನಡವನ್ನು ಪ್ರಥಮ ಭಾಷೆಯನ್ನಾಗಿರಿಸಬೇಕು. ಇಂಗ್ಲೀಶನ್ನು ದ್ವಿತೀಯ ಭಾಷೆಯನ್ನಾಗಿಸಬೇಕು. ಪ್ರಥಮ ಭಾಷೆಯಲ್ಲಿ ಮೂರು ಪ್ರಶ್ನೆಪತ್ರಿಕೆಗಳನ್ನು ಅಳವಡಿಸಿ ಅದರಲ್ಲಿ ಇಂಗ್ಲೀಶ್ ಸಾಹಿತ್ಯವನ್ನು ಒಂದು ಪತ್ರಿಕೆಯಾಗಿ ಮೀಸಲಾಗಿರಿಸಿ ಕನ್ನಡದಲ್ಲಿ ಪಾಠ ಹೇಳಿ, ಕನ್ನಡದಲ್ಲಿ ಉತ್ತರಿಸುವಂತೆ ಮಾಡಿದರೆ, ಮಕ್ಕಳಿಗೆ ಇಂಗ್ಲೀಶ್ ಭಾಷೆಯ ಹೊರೆಯನ್ನು ತಪ್ಪಿಸಬಹುದು. ಎಂತಹ ಗಹನವಾದ ವಿಚಾರವನ್ನೂ ಸಹ ಕನ್ನಡದಲ್ಲಿ ಸುಲಭವಾಗಿ ವಿವರಿಸಲು ಸಾಧ್ಯ. ಕನ್ನಡಿಗರ ಸರ್ವತೋಮುಖವಾದ ಉದ್ಧಾರ ಕನ್ನಡದಿಂದಲೇ ಸಾಧ್ಯ. ಕನ್ನಡಿಗರಿಗೆ ಕನ್ನಡವೇ ಗತಿ! ಕನ್ನಡ ನಾಡಿನಲ್ಲಿ ವಿದ್ಯಾಭ್ಯಾಸ ಎಲ್ಲಾ ಘಟ್ಟಗಳಲ್ಲೂ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು; ಕನ್ನಡವೇ ಪ್ರಧಾನ ಭಾಷೆಯಾಗಬೇಕು. ಅಂದೇ ನಮ್ಮೆಲ್ಲರಿಗೂ ಅಮೃತ ಪಾನ ಎಂದಿದ್ದಾರೆ. ಬಹುಮತ ಚಿಂತಕರ ನಿರ್ಣಯವೂ ಇದೇ ಆಗಿದೆ. ಆದರೆ ಸರ್ಕಾರಕ್ಕೆ ಮಾತ್ರ ಶಿಕ್ಷಣ ಚಿಂತಕರ, ತಜ್ಞರ, ಸಾಹಿತಿಗಳ ಕೂಗು ಕೇಳಿ ಬರುತ್ತಿಲ್ಲ. ಈ ಕ್ರಮ ಜಾರಿಗೆ ಬರದೆ ವಿಳಂಬ ವಾಗುತ್ತಲೇ ನಡೆದಿದೆ. ಸುಮಾರು ಐವತ್ತು ವರ್ಷಗಳಿಂದಲೂ ಮಾಧ್ಯಮ ಪರವಾಗಿ ಸಾಕಷ್ಟು ತೀವ್ರವಾದ ವರದಿಗಳನ್ನು ಹೊರಡಿಸಿದಾಗಲೂ, ಕಠಿಣವಾದ ಚಳುವಳಿಗಳನ್ನು ನಡೆಸಿದಾಗಲೂ ಈ ಕ್ರಮ ಜಾರಿಗೊಳ್ಳದೆ ಇರುವುದು ಬಹು ದೊಡ್ಡ ದುರಂತ. ಮುಖ್ಯವಾಗಿ ಜನತೆ, ಸರ್ಕಾರ ಮನಸ್ಸು ಮಾಡಬೇಕು. ಜನತೆ, ಸರ್ಕಾರದ ಮನಸ್ಸಿನಲ್ಲಿ ಕನ್ನಡ ಮಾಧ್ಯಮದ, ಭಾಷೆಯ ಮಹತ್ವದ ಅರಿವಾಗಬೇಕು. ಭಾಷೆಯ ಬಗೆಗೆ ಅಭಿಮಾನ, ಸ್ವಾಭಿಮಾನವನ್ನು ಬೆಳೆಸಿಕೊಂಡು ಆಡಳಿತ ಮಾಧ್ಯಮ ಮತ್ತು ಶಿಕ್ಷಣ ಮಾಧ್ಯಮವನ್ನಾಗಿ ಕನ್ನಡವನ್ನು ಜಾರಿಗೆ ತರಲು ಶ್ರಮಿಸಬೇಕು.

'ಕನ್ನಡ ನಾಡಿನಲ್ಲಿ ಕನ್ನಡ ಪ್ರಥಮ ಭಾಷೆಯಾಗಬೇಕು ಶಿಕ್ಷಣದ ಎಲ್ಲ ಘಟ್ಟಗಳಲ್ಲಿಯೂ ಅದು ಮಾಧ್ಯಮವಾಗಬೇಕು. ಈ ಎರಡು ಸಂಕಲ್ಪಗಳು ಕೈಗೂಡಿದರೆ ಉಳಿದೆಲ್ಲ ಕೇಡುಗಳೂ ಮಾಯವಾಗುತ್ತವೆ.' **(ಲೇ: ಕನ್ನಡ ಮಾಧ್ಯಮ ಪ್ರಸಾರ. ಪುಟ-೬೨೨)** ಇದು ಕನ್ನಡ ನಾಡಿಗೆ ಮಾತ್ರವೇ ಸೀಮಿತವಾದದ್ದಲ್ಲ. ಆಂಧ್ರ, ತಮಿಳುನಾಡುಗಳಿಗೂ ಅನ್ವಯಿಸುತ್ತದೆ. ಪರಭಾಷೆಯಿಂದ ಮಕ್ಕಳ ಶಕ್ತಿ ದುರ್ವ್ಯಯವಾಗುತ್ತಿರುವುದನ್ನು ತಡೆಯಬೇಕು ಎನ್ನುವುದು ಕುವೆಂಪು ಅವರ ನಿಲುವಾಗಿದೆ. ನಮ್ಮ ಭಾಷೆಯ ಮಹತ್ವವನ್ನು ಅನ್ಯಭಾಷಿಕರು ನಮಗೇ ತಿಳಿಸಿಕೊಡುವಂತಹ ಪರಿಸ್ಥಿತಿಯಲ್ಲಿ ನಾವು ಬದುಕುತ್ತಿದ್ದೇವೆ. ಅಷ್ಟರ ಮಟ್ಟಿಗೆ ನಾವು ಪರಭಾಷೆಯ ಮೇಲೆ ಅವಲಂಬಿತರಾಗಿದ್ದೇವೆ. ಕುವೆಂಪುರವರು ಇಂಗ್ಲೀಶ್ ಭಾಷಾ ಮಾಧ್ಯಮದಲ್ಲಿ ಸಾಹಿತ್ಯ ರಚನೆ ಮಾಡತೊಡಗಿದ್ದಾಗ ಐರಿಶ್ ಕವಿ 'ಕಸಿನ್ಸ್' ಎಂಬುವರು "ಉಡುಪು ಖಾದಿ, ಕವನ ಇಂಗ್ಲೀಶ್ ಹಿಂಗೇಕೆ? ನಿಮ್ಮ ಭಾಷೆ ಇಲ್ಲವೆ? ಅದರಲ್ಲಿ ಬರೆಯಲಾಗುವುದಿಲ್ಲವೆ?" ಎಂದು ಅವರನ್ನು ಎಚ್ಚರಿಸಿದ್ದೇ ರಾಷ್ಟ್ರಕವಿಯಾಗಿ ರೂಪಗೊಳ್ಳಲು ಸಾಧ್ಯವಾಯಿತು ಎನ್ನಲಾಗಿದೆ. **(ಲೇ : ಭಾರತದಲ್ಲಿ ಇಂಗ್ಲೀಶಿನ ಸ್ಥಾನ, ಪುಟ-೨೨೨)**

ಅದೇ ರೀತಿಯಲ್ಲಿ **ಎ.ಆರ್.ಕೃಷ್ಣ ಶಾಸ್ತ್ರಿಯವರ** ವಾದ ವ್ಯಕ್ತವಾಗಿದೆ. ಕನ್ನಡ ಕಲಿಕೆಯ ಜೊತೆಗೆ ಇತರ ಭಾಷೆಗಳನ್ನು ಕಲಿಯಬಹುದು. ಆದರೆ ಅನ್ಯಭಾಷೆಯ ಕಲಿಕೆ ಅದು ಯಾವತ್ತಿದ್ದರೂ ಪರಭಾಷೆಗಳಾಗುತ್ತವೆಯೇ ಹೊರತು ಮಾತೃಭಾಷೆಗಳಾಗಲು ಸಾಧ್ಯವಿಲ್ಲ. ಅವು ನಮ್ಮ ಸ್ವಭಾಷೆಗಳು ಎನಿಸಿಕೊಳ್ಳುವುದಿಲ್ಲ ಎಂಬ ಮಾತನ್ನು ಹೇಳುತ್ತಾರೆ. ಮಾತೃಭಾಷೆ ಎಂದೆಂದಿಗೂ ಮಾತೃಭಾಷೆಯಾಗಿ ಇರುತ್ತದೆ. ಮಾತೃಭಾಷೆಯ ಶಿಕ್ಷಣವೇ ಬೇರೆ ಎಂದು ಸ್ಪಷ್ಟಪಡಿಸಿದ್ದಾರೆ. **(ವಿಲ್ಯಂ ಮಾಡ್ತ, ಅನ್ಯಭಾಷಾ ಬೋಧನೆ, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿ.ವಿ. ಧಾರವಾಡ, ೧೯೭೬)**

"ಇಂಗ್ಲೀಶ್‌ಗೆ ನಮ್ಮ ಶಿಕ್ಷಣದಲ್ಲಿ ಸ್ಥಾನವಿರಬೇಕೆಂಬುದಿಷ್ಟೇ ನನ್ನ ಆಶಯ. ಆದರೆ ಅದಕ್ಕಿಂತ ಪ್ರಾಧಾನವಾದ ಸ್ಥಾನವಿರಬೇಕಾದದ್ದು;ಮಾತೃಭಾಷೆಗೆ. ಮಾತೃಭಾಷಾ ಮೂಲಕ ಕಲಿತದ್ದೇ ಮೈಹತ್ತುವುದು, ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದು."**(ಎ.ಆರ್. ಕೃಷ್ಣಶಾಸ್ತ್ರಿ, ಭಾಷಣಗಳು ಮತ್ತು ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೨೦೦೯, ಪುಟ-೮)** ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. 'ಮಾತೃಭಾಷೆಯೇ ಪ್ರಥಮ ಭಾಷೆ, ದೇಶಭಾಷೆ ದ್ವಿತೀಯ ಭಾಷೆ ಹಾಗೂ ಇಂಗ್ಲೀಶ್ ತೃತೀಯ ಭಾಷೆ ಕಲಿಕೆಯಾಗಬೇಕು' **(ಪುಟ-೧೦)** ಮಾತೃಭಾಷೆಯೇ ದೇಶಭಾಷೆಯಾದಲ್ಲಿ ದ್ವಿತೀಯ ಭಾಷೆಯ ಪ್ರತ್ಯೇಕ ಕಲಿಕೆ ಅಗತ್ಯವಿಲ್ಲ ಎಂದು ಅವರು ಅರ್ಥೈಸಿದ್ದಾರೆ. ಆದರೆ ಈ ಭಾಷೆ ಕಲಿಕೆಯನ್ನು ಯಾವ ತರಗತಿಯಿಂದ ಅಳವಡಿಸಬೇಕೆಂಬುದನ್ನು ತಿಳಿಸಿರುವುದಿಲ್ಲ.

ಮಾತೃಭಾಷಾ ಶಿಕ್ಷಣವನ್ನು ಎತ್ತಿ ಹಿಡಿಯುತ್ತಾ, ಮಗುವಿನ ಶಿಕ್ಷಣ ಮಾತೃಭಾಷೆಯಲ್ಲಿಯೇ ನಡೆಯಬೇಕು ಎನ್ನುವುದು **ಡಾ. ದೇ. ಜವರೇಗೌಡ** ಅವರ ಅಭಿಮತವಾಗಿದೆ. ವ್ಯಕ್ತಿ ತಾನು

ವಲಸೆ ಹೋಗಿ ನಿಂತ ನಿಲುವು/ದೇಶವೆ ತನ್ನದಾದಾಗ ಅಲ್ಲಿಯ ಭಾಷೆ ಮಾತೃಭಾಷೆಯಾಗುತ್ತದೆ. ಆ ಮಾತೃಭಾಷೆಯಲ್ಲಿಯೇ ಶಿಕ್ಷಣ ಪಡೆಯಬೇಕು. ಇನ್ನು ಅನ್ಯಭಾಷಿಕರು/ಭಾಷಾ ಅಲ್ಪಸಂಖ್ಯಾತರು ತಮ್ಮ ಮಾತೃ ಭಾಷೆಯಲ್ಲಿ ಶಿಕ್ಷಣ ಪಡೆಯುವ ಅವಕಾಶವಿದೆ. ಜೊತೆಗೆ ಆ ಪ್ರದೇಶದ ದೇಶಭಾಷೆಯನ್ನು ಎರಡನೇ/ದ್ವಿತೀಯ ಭಾಷೆಯನ್ನಾಗಿ ಕಡ್ಡಾಯವಾಗಿ ಕಲಿಯಲೇಬೇಕೆಂದು ಸೂಚಿಸುತ್ತಾರೆ. 'ದೇಶ ಭಾಷೆಯೇ ಆಡಳಿತ ಮಾಧ್ಯಮವಾಗಬೇಕು. ಯಾವುದು ಆಡಳಿತ ಮಾಧ್ಯಮವೋ ಅದೇ ಶಿಕ್ಷಣ ಮಾಧ್ಯಮವಾಗಬೇಕೆಂದು ಸೂಚಿಸಿದ್ದಾರೆ. ಇದು ವೈಜ್ಞಾನಿಕ ಹಾಗೂ ತಾರ್ಕಿಕವಾದ ಅಂತಿಮ ನಿರ್ಣಯ. ಜನರ ಕಷ್ಟಗಳಿಗೆ ನೇರ ಸಂಪರ್ಕವನ್ನು ಸಾಧಿಸದೇ ಅವರಿಗೆ ಅರ್ಥವಾಗದ ಭಾಷೆಯಲ್ಲಿ ವ್ಯವಹಾರ ನಡೆಸುವ ಸರ್ಕಾರ ಶವ ಸದೃಶವಾದದ್ದೆಂದು ಹೇಳಬೇಕಾಗುತ್ತದೆ.' **(ದೇ. ಜವರೇಗೌಡ, ಕನ್ನಡ ಚಿಂತನೆ, ಪ್ರಸಾರಾಂಗ ಕನ್ನಡ ಕನ್ನಡ ವಿಶ್ವವಿದ್ಯಾಲಯ, ೨೦೦೭, ಪುಟ-೧೬೮)**

ಆಡಳಿತ ಮಾಧ್ಯಮಕ್ಕೂ, ಶಿಕ್ಷಣ ಮಾಧ್ಯಮಕ್ಕೂ ನಿಕಟವಾದ ಸಂಬಂಧ ಇರುವುದರಿಂದ ಎರಡೂ ಒಂದೇ ಭಾಷೆಯಲ್ಲಿ ನಡೆಯಬೇಕಾದ್ದು ಅವಶ್ಯಕ. **(ಭಾಷಣಗಳು ಮತ್ತು ಲೇಖನಗಳು, ಎ.ಆರ್. ಕೃಷ್ಣಶಾಸ್ತ್ರಿ, ಕನ್ನಡ ಮತ್ತು ಸಂಸ್ಕೃತ ಇಲಾಖೆ ಬೆಂಗಳೂರು, ೨೦೦೬.)** ಆಡಳಿತ ಹಾಗೂ ಶಿಕ್ಷಣ ಎರಡೂ ದೇಶಭಾಷೆಯಲಿ ನಡೆಯುವುದರಿಂದ ಪ್ರಗತಿಯನ್ನು ಸಾಧಿಸುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಯಾರ ಸಮ್ಮತಿಯ ಅಗತ್ಯವೂ ಇಲ್ಲ. 'ಕೆರೆಯ ನೀರನ್ನು ಕುಡಿಯುವುದಕ್ಕೆ (ಊರಿನ) ಯಾವ ದೊರೆ ನಾಯಕನ ಅಪ್ಪಣೆ ಬೇಕು?' ಎಂಬಂತೆ ಪ್ರತಿಯೊಬ್ಬ ವ್ಯಕ್ತಿಗೆ ತನ್ನ ಸ್ವಭಾಷೆ/ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯುವ ಸಂಪೂರ್ಣ ಸ್ವಾತಂತ್ರ ಇದೆಯೋ ಹಾಗೆಯೇ ನಾಡಿನ ಭಾಷೆಯಲ್ಲಿಯೇ ಶಿಕ್ಷಣ/ಆಡಳಿತ ನಡೆಯಬೇಕಾದ್ದು ಅವಶ್ಯಕ. ಅದು ಆ ನಾಡಿನ ಮೂಲಭೂತ ಹಕ್ಕು. ಅದನ್ನು ಹೊರತು ಪಡಿಸಿ, ಇಂಗ್ಲೀಶನ್ನು ಪ್ರಾಥಮಿಕ ಒಂದನೆಯ ತರಗತಿಯಿಂದಲೆ ಕಲಿಸುತ್ತೇವೆ ಎನ್ನುವವರಿಗೆ ಕುವೆಂಪು ಅವರ 'ಸಾಕು ಈ ಬಲತ್ಕಾರ ಬಲಾತ್ಕಾರದ ಭಾಷೆ ತ್ರಿಶೂಲ' ಎಂಬ ಎರಡು ಪದ್ಯಗಳನ್ನು ಓದಿ ಅರ್ಥೈಸಿ ಕೊಳ್ಳಬೇಕು ಎಂದಿದ್ದಾರೆ.

ಇಂಗಿ ಹೋಗುತಿದೆ ಇಂಗ್ಲೀಶಿನ ಮರಭೂಮಿಯಲಿ
ನಿನ್ನ ಮಕ್ಕಳ ಶಕ್ತಿ – ಬುದ್ಧಿ – ಪ್ರತಿಭಾ
ಬಲಾತ್ಕಾರಕ್ಕಾಗಿ ಮಾತ್ರವೆ ಹೊರತು ಈ ರೋಷ
ಭಾಷೆಗಾಗಿಯೆ ನಮ್ಮ ದ್ವೇಷವೇನಿಲ್ಲ.

ಎಂದು ಭಾಷೆ ಸೌಹಾರ್ದ ಮನೋಭಾವವನ್ನು ಮೆರೆಯುತ್ತಾರೆ. ಮುಂದುವರಿದು

ಬೇಕಾದವರಿಗೆ ಕೊಡಿರೊ, ಬೇಡವೆಂದವರಾರೋ?
ಹೇರಿ ಎಲ್ಲರ ಮೇಲೆ ಕೊಲೆಗೈವಿರೇಕೊ?
ಓ, ಕಂದಾ ಓ, ತರುಣ ಓ, ಯುವಕ ಭಾರತೀಯ

ಮೇಲೆ ಕುಳಿತವರಿಕ್ಕಿದುಕ್ಕು ಬಲೆಯನು ಕಿತ್ತು
ನಿನ್ನ ಸ್ವಾತಂತ್ರ್ಯವನ್ನು ಓ, ನೀನೆ ರಕ್ಷಿಸಿಕೊ !

ಎಂದು ಭಾರತೀಯ ತರುಣರಿಗೆ ಎಚ್ಚರಿಕೆ ನೀಡುತ್ತಾರೆ. ಯಾರು ಯಾರಿಗೆ ಯಾವ ಯಾವ ಭಾಷೆ ಏಕೆ ಬೇಕೆನ್ನುವುದನ್ನವರು ದೇವವಾಣಿ ಎನ್ನುವಂತೆ ಕವನಿಸುತ್ತಾರೆ.

ಮುಂದೆ ದಿಳ್ಳಿಯ ಮಂತ್ರಿಯಾಗುವವ ನೀನೊ?
ಬೇಡವೆಂದವರಾರು? ಹಿಂದಿ–ಯನು ಕಲಿಯೊ !
ಬದುಕಿ ಇಲ್ಲಿಯೆ ಬಾಳಿ ಸಾಯುವವ ನಾನೊ !
ನಿನ್ನ ಸೂತ್ರಕೆ ಏಕೆ ನನ್ನ ಬಲಿಯೊ?
ಮುಂದೆ ಇಂಗ್ಲೆಂಡಿನಲಿ ನೀ ರಾಯಭಾರಿ?
ಬೇಡವೆಂಬುವರಾರು?
ಹೊಡೆ ಬಿರಿಯೆ ಕುಡಿಯೊ ಇಂಗ್ಲಿಷಿನ ಹೆಂಡ ಹೀರಿ !

ನನ್ನ ಮೇಲೇತಕ್ಕೆ ಮಾಡುವೆ ಬಲಾತ್ಕರ ಸವಾರಿ ಎಂದು ಹೇಳುತ್ತಾರೆ. **(ಡಾ.ದೇ.ಜವರೇಗೌಡ, ಕನ್ನಡ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೭, ಪುಟ–೧೭೪)** ಇದರಿಂದ ಯಾವ ಭಾಷೆಯೂ ಹೇರಿಕೆಯಾಗ ಬಾರದು ಎನ್ನುವುದು ಸ್ಪಷ್ಟವಾಗಿ ಅರ್ಥವಾಗುತ್ತದೆ. ಕೇಂದ್ರ ಸರ್ಕಾರ ಹೇರಿರುವ ತ್ರಿಭಾಷಾ ಸೂತ್ರ ಭಾಷಾ ಹೇರಿಕೆಯಾಗುತ್ತದೆ. "ಯಾವ ರಾಜ್ಯದಲ್ಲಿಯೇ ಆಗಲಿ ದೇಶ ಭಾಷೆಯ ನಂತರ, ಬೇರೆ ಭಾಷೆಯ ಕಲಿಕೆಯನ್ನು ಕಡ್ಡಾಯಗೊಳಿಸುವುದು ನೈತಿಕ ಹಾಗೂ ಶೈಕ್ಷಣಿಕ ದೃಷ್ಟಿಗಳಿಂದ ಸಾಧುವಲ್ಲ."**(ಪುಟ–೧೩೭)** ಎಂದಿದ್ದಾರೆ. ದ್ವಿತೀಯ ಹಾಗೂ ತೃತೀಯ ಭಾಷೆಗಳೆಂದು ಅನ್ಯಭಾಷೆಗಳನ್ನು ಕಲಿಯುವುದಕ್ಕಿಂತ ಬೇರೆ ಭಾಷೆಗಳನ್ನು ಕಲಿಯುವ ಇಚ್ಛೆ ಅವರಿಗೇ ಬಿಡಬೇಕು. ಆದರೆ ಪ್ರಾದೇಶಿಕ ಭಾಷೆಯನ್ನು ಕಲಿಯಬೇಕಾಗಿರುವುದು ಕಡ್ಡಾಯ. ವ್ಯವಹಾರ ದೃಷ್ಟಿಯಿಂದ ಯಾವ ಭಾಷೆ ಅಗತ್ಯವೋ ಆ ಭಾಷೆಯನ್ನು ಕಲಿಯುವುದು ಅವರ ಸ್ವಂತ ನಿರ್ಣಯವಾಗಿರುತ್ತದೆ. ಹೀಗಾಗಿ ಬಹು ಭಾಷೆಗಳಿಗಿಂತ ದ್ವಿಭಾಷಾ ಸೂತ್ರವೇ ಸರಿಯೆಂದು ತ್ರಿಭಾಷಾ ಸೂತ್ರ ಅಂದರೆ ತ್ರಿಶೂಲವೆಂದು ಹೇಳಿರುವ ಕುವೆಂಪು ಅವರ ವಿಚಾರಗಳಿಗೆ ದೇಜಗೌ ಅವರು ಸಮ್ಮತಿ ನೀಡಿದ್ದಾರೆ.

ಸಂಶೋಧನಾ ಚಿಂತಕರಾದ **ಎಂ. ಚಿದಾನಂದಮೂರ್ತಿ**ಯವರು ಹೇಳುವಂತೆ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ಹಂತದಲ್ಲಿ ಮಾತೃಭಾಷೆಯನ್ನು ಮಾಧ್ಯಮವಾಗಿ ನಿರೂಪಿಸಬೇಕು. ಭಾಷಾ ಅಲ್ಪಸಂಖ್ಯಾತರಿಗೆ ಪ್ರಾದೇಶಿಕ ಭಾಷೆಯನ್ನು ಎರಡನೆ ಮಾತೃಭಾಷೆ ಯನ್ನಾಗಿ ಕಲಿಸುವುದು ಅವಶ್ಯಕ. ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸುವುದು ಹೆಚ್ಚು ಸೂಕ್ತ. ಮಗುವಿನ ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡುವುದು ಸಮರ್ಪಕ. ಮಗು ಮೊದಲು ಪ್ರಾರಂಭದ ಶಿಕ್ಷಣವನ್ನು ತನ್ನ ಮನೆಮಾತಿನಲ್ಲಿ ಸರಿಯಾಗಿ ಅರ್ಥೈಸಿಕೊಂಡ

ನಂತರ ಐದನೆ ತರಗತಿಗೆ ಬರುವ ಹೊತ್ತಿಗೆ ತಿಳುವಳಿಕೆಯ ಸಾಮರ್ಥ್ಯ ಬೆಳೆದಿರುತ್ತದೆ. ಆಗ ಇತರ ಭಾಷೆಗಳನ್ನು ಕಲಿಸುವುದು ಸರಿಯಾದ ಕ್ರಮ ಎಂದು ಚಿದಾನಂದಮೂರ್ತಿಯವರು ತಿಳಿಸಿದ್ದಾರೆ. ಇದು ವೈಜ್ಞಾನಿಕ ತರ್ಕವೂ ಆಗಿರುವುದರಿಂದ ಈ ವಿಧಾನ ಕಲಿಕೆಯಲ್ಲಿ ಅಳವಡಿಸುವುದು ಹೆಚ್ಚು ಪ್ರಯೋಜನಕಾರಿ ಎನಿಸುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ ಕನ್ನಡ ಮಾಧ್ಯಮ ಹಾಗೂ ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳ ಸಾಧನೆಯ ಮಟ್ಟದಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ವಿಜ್ಞಾನ, ಗಣಿತ ಹಾಗೂ ಸಮಾಜ ವಿಷಯಗಳಲ್ಲಿ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳ ಸಾಧನೆಯಲ್ಲಿ ವ್ಯತ್ಯಾಸವಿದ್ದುದನ್ನು **ಜಿ.ಎಚ್. ಪಾರ್ವತಮ್ಮ ಅವರು "ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲಗಳ ಸಾಧನೆ"** ಎಂಬ ಪಿಎಚ್‌ಡಿ ಪ್ರಬಂಧದಲ್ಲಿ ತಿಳಿಸಿದ್ದಾರೆ. ವಿಜ್ಞಾನ ಮತ್ತು ಸಮಾಜ ವಿಷಯಗಳಲ್ಲಿ ಕನ್ನಡ ಮಾಧ್ಯಮ ವಿದ್ಯಾರ್ಥಿಗಳ ಸಾಧನೆ ಉನ್ನತ ಮಟ್ಟದ್ದಾಗಿದ್ದರೆ. ಗಣಿತದಲ್ಲಿ ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳ ಸಾಧನೆ ಉನ್ನತಮಟ್ಟದ್ದಾಗಿದೆ ಎಂದು ಸೂಚಿಸಿದ್ದಾರೆ. ಪ್ರಾಥಮಿಕ ಹಂತದಲ್ಲಿ ಯಾವುದೇ ವಿಷಯವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲು, ಪರಿಣಾಮಕಾರಿಯಾಗಿ ಕಲಿಯಲು ಪರಕೀಯ ಭಾಷೆಗಿಂತ ಮಾತೃಭಾಷೆ/ಪ್ರಾಂತೀಯ ಭಾಷೆ ಉತ್ತಮ ಮಾಧ್ಯಮವಾಗಿರುತ್ತದೆ ಎಂದು ದಾಖಲಿಸಿದ್ದಾರೆ. ಅಂತೆಯೇ ಪ್ರಾಥಮಿಕ ಶಾಲೆಯ ಮಟ್ಟದ ವಿಜ್ಞಾನ ಮತ್ತು ಸಮಾಜ ಪಾಠಗಳಲ್ಲಿ ಬರುವ ಪರಿಕಲ್ಪನೆಗಳು, ನಿಯಮಗಳು, ತತ್ವಗಳು ಶಾಬ್ದಿಕ ವಿವರಣೆಯನ್ನು ಅಪೇಕ್ಷಿಸುತ್ತವೆ. ಆದ್ದರಿಂದ ಇವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗೆ ಸುಲಭವೆನಿಸುವುದು. ಮಾತೃಭಾಷಾ ಮಾಧ್ಯಮದಲ್ಲಿ ಬೋಧನೆ, ಕಲಿಕೆ ಪ್ರಕ್ರಿಯೆಯನ್ನು ಮಕ್ಕಳು ಸರಿಯಾಗಿ ಗ್ರಹಿಸಬಲ್ಲರು. ಇಂಗ್ಲೀಶ್ ಮಾಧ್ಯಮದ ವಿದ್ಯಾರ್ಥಿಗಳ ಪರಿಕಲ್ಪನೆಗಳ ಗ್ರಹಿಕೆಯ ಜೊತೆಗೆ ಭಾಷೆಗೂ ಗಮನ ಕೊಡಬೇಕಾದುದರಿಂದ ಕಲಿಕೆಯಲ್ಲಿ ಸ್ವಲ್ಪ ಮಟ್ಟಿಗೆ ಕುಂಠಿತವಾಗುವುದು. ಗಣಿತದಲ್ಲಿ ಭಾಷೆಗಿಂತ ಹೆಚ್ಚಾಗಿ ತಾರ್ಕಿಕ ಚಿಂತನೆ ಅಮೂರ್ತೀಕರಣ ಹಾಗೂ ಲೆಕ್ಕಾಚಾರಗಳು ಪ್ರಮುಖವಾಗಿರುವುದರಿಂದ ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳು ಗಣಿತದಲ್ಲಿ ಹೆಚ್ಚಿನ ಮಟ್ಟದ ಸಾಧನೆ ತೋರಿಸಲು ಸಾಧ್ಯವಿರಬಹುದು ಎಂದು ತಮ್ಮ ಪ್ರಬಂದದಲ್ಲಿ ಸೂಚಿಸಿದ್ದಾರೆ. ಗಣಿತದ ಹಲವಾರು ಪರಿಕಲ್ಪನೆಗಳೆಲ್ಲವನ್ನೂ ಇಂಗ್ಲೀಶನಲ್ಲಿ ಹೆಚ್ಚು ಬೋಧನೆ ಮಾಡುವುದರಿಂದಲೂ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಗ್ರಹಿಸಲು ಸಾಧ್ಯವಾಗದೇ ಇರಬಹುದು ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಆಂಗ್ಲ/ಇಂಗ್ಲೀಶ್ ಮಾಧ್ಯಮದ ಮಕ್ಕಳು ಕನ್ನಡ ಅಕ್ಷರ ಹಾಗೂ ಪದಗಳನ್ನು ಗುರುತಿಸುವಲ್ಲಿ ಕನ್ನಡ ಮಾಧ್ಯಮದ ಮಕ್ಕಳಿಗಿಂತ ಹೆಚ್ಚು ದೋಷಗಳನ್ನು ಮಾಡುತ್ತಾರೆ. ಕನ್ನಡವನ್ನು ಓದುವುದರಲ್ಲಿನ ದೋಷಗಳ ಬಗ್ಗೆ **ಟಿ. ಮಂಜುನಾಥ ಗೌಡ** ಅವರು ತಮ್ಮ

ಎಂ.ಇಡಿ. ಕಿರುಪ್ರಬಂಧವಾದ **ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳ ಒಂದು ವಿಶ್ಲೇಷಣಾತ್ಮಕ ಅಧ್ಯಯನದಲ್ಲಿ** ನಿರೂಪಿಸಿದ್ದಾರೆ. ಅಂದರೆ ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳಿಗಾಗಲಿ/ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗಾಗಲಿ ಅವರ ಮಾತೃಭಾಷೆಯಲ್ಲಿ ಬೋಧನೆ ನೀಡಿದಾಗ ಅವರ ಗ್ರಹಿಕೆಯ ಸಾಮರ್ಥ್ಯವೂ ಹೆಚ್ಚುತ್ತದೆ ಎನ್ನುವುದು ಇದರಿಂದ ಸೂಚಿತವಾಗುತ್ತದೆ.

ನಮ್ಮ ನಾಡಿನಲ್ಲಿ ಯಂತ್ರನಾಗರಿಕತೆ ಬೆಳೆದಿದ್ದೇ ಇಂಗ್ಲೀಶ್ ಸಂಸ್ಕೃತಿಯ ಮೂಲಕ. ಜ್ಞಾನ, ಸಾಹಿತ್ಯ, ವ್ಯವಹಾರ ದೃಷ್ಟಿಯಿಂದ ಇಂಗ್ಲೀಶನ್ನು ಕಲಿಯುವುದು, ಇಂಗ್ಲೆಂಡಿನ ಸಾಹಿತ್ಯ, ಸಂಸ್ಕೃತಿ ರಾಜಕೀಯವನ್ನು ಅರಿಯುವುದು ತಪ್ಪಲ್ಲ. ಆದರೆ ಆ ಜ್ಞಾನವನ್ನು ಪಡೆದುಕೊಂಡು ನಂತರ ಅದನ್ನು ನಮ್ಮದೇ ಆದ ಮತ್ತೊಂದು ವಿಚಾರದ ಮೂಲಕ ನಮ್ಮ ಭಾಷೆಯಲ್ಲಿ ಅಭಿವ್ಯಕ್ತಿಸುವುದು ಮುಖ್ಯ. ನಮ್ಮ ಭಾಷೆಯಲ್ಲಿ ಅಭಿವ್ಯಕ್ತಿಸಿದಾಗಲೇ ಅದು ಹೊಸದೊಂದು ರೂಪ ಪಡೆಯಲು ಸಾಧ್ಯ ಎಂದು ಚಿಂತಕ ಹಾಗೂ ಜ್ಞಾನಪೀಠ ಪ್ರಶಸ್ತಿ ವಿಜೇತರಾದ **ಯು.ಆರ್. ಅನಂತಮೂರ್ತಿ ಇಂಗ್ಲೀಶ ಬ್ರಾಹ್ಮಣ, ಕನ್ನಡ ಶೂದ್ರ** ಎಂಬ ಲೇಖನದಲ್ಲಿ ವಿವರಿಸಿದ್ದಾರೆ. ಮನುಷ್ಯರ ನಡುವೆ ಅನ್ಯೋನ್ಯತೆ ವಿಚಾರದ ಕೊಡುಕೊಳ್ಳುವಿಕೆ ವ್ಯಕ್ತವಾಗುವುದು ನಮ್ಮ ಭಾಷೆಗಳ ಮೂಲಕವೇ. ಎಲ್ಲವನ್ನೂ ನಮ್ಮ ಭಾಷೆಯಲ್ಲಿ ವಿಚಾರಗಳನ್ನು ಹೊರಹಾಕಬೇಕಾಗಿದೆ. ನಮ್ಮ ಭಾಷೆಯನ್ನು ಬಿಟ್ಟು ಅನ್ಯಭಾಷೆಯಲ್ಲಿ ಅಲ್ಲ. ಸಾಹಿತ್ಯ ಮತ್ತು ಸಂಸ್ಕೃತಿಯ ಅಭಿವೃದ್ಧಿ ಸಾಧ್ಯವಾಗುವುದು ನಮ್ಮ ಭಾಷೆಯಿಂದಲೇ ಎಂಬುದನ್ನು ವ್ಯಕ್ತಪಡಿಸಿದ್ದಾರೆ.

ಪ್ರಾಥಮಿಕ ಶಿಕ್ಷಣದ ಮಾಧ್ಯಮ ವಿಷಯ ಕುರಿತಾಗಿ **ಡಾ. ಪಿ. ಮಹಾದೇವಯ್ಯ**ನವರ ವಿಚಾರಗಳನ್ನು ಗಮನಿಸುವುದಾದರೆ "ವಾಸ್ತವಾಗಿ ಕರ್ನಾಟಕದಲ್ಲಿ ಕನ್ನಡ ಮಾಧ್ಯಮದಲ್ಲೇ ಪ್ರಾಥಮಿಕ ಶಿಕ್ಷಣ ಎನ್ನುವುದೇ ನಗೆ ಪಾಟಲಿನ ವಿಷಯ. ನಾವು ಹೋರಾಟ ಮಾಡಬೇಕಾಗಿ ರುವುದು ಕನ್ನಡೇತರರಿಗೆ ಕನ್ನಡ ಕಲಿಕೆ ಕಡ್ಡಾಯಗೊಳಿಸುವುದರ ಕಡೆಗೆ ಗಮನ ಕೊಡಬೇಕಾಗಿದೆ. ಇದಕ್ಕೆ ವಿರುದ್ಧವಾಗಿ ಕನ್ನಡ ಶಾಲಾ ಮಾತೃಭಾಷೆಯುಳ್ಳವರಿಗೆ ಆವರಣದಲ್ಲಿ ಪ್ರಾಥಮಿಕ ಹಂತದಿಂದ ಇಂಗ್ಲೀಶ್ ಭಾಷೆ ಕಲಿಕೆ ಒಂದು ಭಾಷೆಯಾಗಿ ಕಲಿಯುವುದು ಸೂಕ್ತ" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸಾಮಾಜಿಕವಾಗಿ ಭಾಷೆ ಮತ್ತು ಮಾಧ್ಯಮಗಳ ನಡುವೆ ಗೊಂದಲವಿದೆ. ಇಂಗ್ಲೀಶ್ ಭಾಷಾ ಕಲಿಕೆಯ ವಿರುದ್ಧವಾದ ಮಾತುಗಳು ಇಂದಿನದಲ್ಲ. ಅದು ಕರ್ನಾಟಕದ ಸಮಸ್ಯೆ ಅಲ್ಲ, ಇಡೀ ಭಾರತದ ಸಮಸ್ಯೆ. ೧೧,೭,೧೯೫೫ರಲ್ಲಿ ಇಂಗ್ಲೀಶ್ ಸ್ಥಾನದಲ್ಲಿ ಹಿಂದಿ ಬಳಸಲು ಯೋಜಿತ ಕ್ರಮದಲ್ಲಿ ವರದಿಯೊಂದು ಸಿದ್ಧಗೊಂಡಿತ್ತು. ಹಿಂದಿ ಭಾರತದ ಆಡಳಿತ ಭಾಷೆ ಆಗಬೇಕೆಂದೂ, ಈಗ ಆಡಳಿತ ಭಾಷೆಯ ಸ್ಥಾನ ಆಕ್ರಮಿಸಿರುವ ಇಂಗ್ಲೀಶನ್ನು ಬದಲಿಸಬೇಕೆಂದು ರಾಜ್ಯಾಂಗದಲ್ಲಿ ನಮೂದಿಸಿದ್ದರೂ ಅದು ಕಾರ್ಯ ಯೋಜನೆಯಾಗಿ ಪ್ರಕಟಗೊಳ್ಳಲಿಲ್ಲ. ಇಂಗ್ಲೀಶ್ ಭಾಷೆಯ ಆಕ್ರಮಣ ರಾಷ್ಟ್ರಮಟ್ಟದ

ಚರ್ಚೆಯಾಗಬೇಕು. ಇಡೀ ರಾಜ್ಯದಲ್ಲಿ ಕನ್ನಡ ಹಾಗೂ ಇಂಗ್ಲೀಶ್ ಮಾಧ್ಯಮದವರಿಗೆ ಒಂದೇ ಭಾಷಾ ನೀತಿ ಜಾರಿಗೆಯಾಗಬೇಕು." (**ಡಾ. ಪಿ.ಮಹಾದೇವಯ್ಯ, ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ, ವಿಜಯಲಕ್ಷ್ಮಿ ಪ್ರಕಾಶನ ಮೈಸೂರು, ೨೦೦೬, ಪುಟ-೭೦-೭೧**) ಎನ್ನುವುದು ಇವರ ಸ್ಪಷ್ಟ ಧೋರಣೇಯಾಗಿದೆ.

ಇಲ್ಲಿ ಒಂದು ವಿಚಾರದ ಕಡೆಗೆ ಗಮನ ಹರಿಸುವುದಾದರೆ 'ಹಿಂದಿ' ಭಾರತದ ಆಡಳಿತ ಭಾಷೆಯಾಗಬೇಕು. ಅದು ರಾಷ್ಟ್ರಭಾಷೆಯಾದ್ದರಿಂದ ಕೇಂದ್ರ ಸರ್ಕಾರ ಅದನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತರಲು ಹವಣಿಸುತ್ತಿದೆ. ಹಿಂದಿ ರಾಷ್ಟ್ರ ಭಾಷೆಯಾದಂತೆ ಕನ್ನಡ ರಾಜ್ಯ ಭಾಷೆಯಲ್ಲವೇ? ಕನ್ನಡ ನಾಡಿನಲ್ಲಿ 'ಕನ್ನಡ' ಮಾತೃಭಾಷೆಯಲ್ಲವೆ? ಕನ್ನಡ ಆಡಳಿತ ಭಾಷೆಯಾಗಬೇಕು ಎಂಬ ಸೂಕ್ಷ್ಮ ತಿಳಿವು ರಾಜ್ಯ ಸರ್ಕಾರದ ಗಮನಕ್ಕೆ ಬರದೆ? ಮಾಧ್ಯಮ ವಿಷಯ ಇಷ್ಟು ವಿಳಂಬವಾಗುತ್ತಿರುವುದು ನಿಜಕ್ಕೂ ಸೋಜಿಗದ ಸಂಗತಿಯೇ ಸರಿ. ಭಾಷಾ ನೀತಿಯ ತರ್ಕವನ್ನು ಪರಿಶೀಲಿಸುವುದಾದರೆ ಮೊದಲು ಮಾತೃಭಾಷೆ, ಅಂದರೆ ರಾಜ್ಯ ಭಾಷೆ ನಂತರ ದೇಶ ಭಾಷೆ ದ್ವಿತೀಯ ಭಾಷೆಯಾಗಿ 'ಹಿಂದಿ' ಅದರ ನಂತರದಲ್ಲಿ ತೃತೀಯ ಭಾಷೆಯಾಗಿ ಇಂದಿನ ಜಾಗತಿಕ ಭಾಷೆಯಾದ 'ಇಂಗ್ಲೀಶ'ನ್ನು ಅಳವಡಿಸುವುದು ಸೂಕ್ತವಾದ ಕ್ರಮ. ಆದರೆ ಇದು ಯಾವುದನ್ನೂ ಪರಿಶೀಲಿಸದೆ ಏಕಾಏಕಿಯಾಗಿ ರಾಜ್ಯವೂ ಅಲ್ಲದ, ದೇಶ ಭಾಷೆಯೂ ಅಲ್ಲದ ಮತ್ತೊಂದು ಅನ್ಯದೇಶ ಭಾಷೆಯಾದ 'ಇಂಗ್ಲೀಶ್‌ನ್ನು ಆಡಳಿತ ಭಾಷೆಯನ್ನಾಗಿ, ಶಿಕ್ಷಣದ ಮಾಧ್ಯಮವನ್ನಾಗಿ ಮಾಡಹೊರಟಿರುವುದು ಯಾವ ನ್ಯಾಯ? ಇದೊಂದು ವೈಜ್ಞಾನಿಕ ತರ್ಕ ಎಂಬುದನ್ನು ಸರ್ಕಾರವೇ ಗಮನಿಸಬೇಕು. ಇದು ಕೇಂದ್ರ ಸರ್ಕಾರದ ಸುಗ್ರೀವಾಜ್ಞೆ ಕಡ್ಡಾಯವಾಗಿ ಜಾರಿಗೊಳ್ಳಲೇಬೇಕೆಂಬ ಒತ್ತಡವಿಲ್ಲ. ಇದಕ್ಕೆ ಆಂಧ್ರ ಹಾಗೂ ತಮಿಳುನಾಡು (ಸರ್ಕಾರಗಳು) ಅಪವಾದಗಳಾಗಿವೆ. ಈ ಪ್ರದೇಶಗಳಿಗೆ ಇದು ಹೇಗೆ ಸಾಧ್ಯವಾಯ್ತು ಎನ್ನುವುದನ್ನು ರಾಜ್ಯ ಸರ್ಕಾರ ಚಿಂತನೆ ನಡೆಸಬೇಕಾಗಿದೆ. ನಿಮ್ಮ ಮನೆ ಮಾತು ಅಥವಾ ಮಾತೃಭಾಷೆಯಲ್ಲಿಯೇ ನೀವು ಮನೆಯಲ್ಲಿ ಮಾತನಾಡಬೇಕು ಎನ್ನುವುದನ್ನು ಅನ್ಯಭಾಷೆಯವರು ಹೇಳಿಕೊಡಬೇಕೆ? ಹಾಗೆ ಹೇಳಿದಾಗಲೇ ನಾವು ನಮ್ಮ ಭಾಷೆಯಲ್ಲಿ ಮಾತನಾಡಲು ಪ್ರಯತ್ನ ಮಾಡುತ್ತೇವೆಯೆ ಎನ್ನುವುದನ್ನು ನಾವು ಸೂಕ್ಷ್ಮವಾಗಿ ಅರ್ಥೈಸಿಕೊಳ್ಳಬೇಕು. ಈ ತರ್ಕವನ್ನಾದರೂ ಅಳವಡಿಸಿ ಕೊಂಡು ನಮ್ಮ ನಾಡಿನಲ್ಲಿ ನಾಡಿನ ಭಾಷೆಯಾದ 'ಕನ್ನಡ'ವನ್ನು ಆಡಳಿತ ಹಾಗೂ ಶಿಕ್ಷಣ ಮಾಧ್ಯಮವನ್ನಾಗಿ ರೂಪಿಸಲು ಸರ್ಕಾರ ಪ್ರಯತ್ನಿಸಬೇಕಾಗಿದೆ.

ಇದನ್ನು ಹೊರತುಪಡಿಸಿ ಸರ್ಕಾರವೇ ಮುಂಜಾಗೃತಿ ವಹಿಸಿ ಇಂಗ್ಲೀಶ್ ಭಾಷೆಗೆ ಹೆಚ್ಚಿನ ಬೇಡಿಕೆಯನ್ನು ನೀಡುತ್ತಾ ಬಂದರೆ ಕನ್ನಡ ನಾಡಿನ ಮತ್ತು ಕನ್ನಡ ಭಾಷೆಯ ಭವಿಷ್ಯ ಏನಾಗಬಹುದು ಎಂಬುದನ್ನು ಸ್ವತಃ ನಾವೇ ಯೋಚಿಸುವ ಅಗತ್ಯತೆ ನಿರ್ಮಾಣವಾಗಿದೆ. ಇದಕ್ಕೆ **ಬಿ.ಜಿ. ಬಣಕಾರ** ಅವರ ಮಾತಿನಲ್ಲೇ ಹೇಳುವುದಾದರೆ, "ಸರಕಾರದ ಇತ್ತೀಚಿನ ಹೇಳಿಕೆ ಪ್ರಕಾರ ೧೯೯೪ ರಿಂದ ೧೯೯೭ರ ಮೂರು ವರ್ಷಗಳ ಅವಧಿಯಲ್ಲಿ ಹೊಸದಾಗಿ

೮೧ ಕನ್ನಡ ಪ್ರಾಥಮಿಕ ಶಾಲೆಗಳಿಗೆ, ೩೦೩ ಆಂಗ್ಲ ಪ್ರಾಥಮಿಕ ಶಾಲೆಗಳಿಗೆ ೧೭೮ ಆಂಗ್ಲ ಪ್ರೌಢ ಪ್ರಾಥಮಿಕ ಶಾಲೆಗಳಿಗೆ ಪರವಾನಿಗೆ ಕೊಡಲಾಗಿದೆ. ಹೀಗೆ ಆಂಗ್ಲ ಶಾಲೆಗಳ ಬೆಳವಣಿಗೆ ಶರವೇಗದಲ್ಲಿ ಉಳಿದೆಲ್ಲಾ ಅಲ್ಪ ಭಾಷಾವಾರು ಜನರ ಬೇಡಿಕೆಯನ್ನು ಮೀರಿ ನಡೆದಿರುವುದು ರಾಜ್ಯದ ಇಂಗ್ಲೀಶ್ ಅಭಿಮಾನವನ್ನು ಎತ್ತಿತೋರಿಸುತ್ತದೆ." ಪ್ರಾಥಮಿಕ ಭಾಷಾ ನೀತಿಯನ್ನು ಅನುಸರಿಸಿ ೧ ರಿಂದ ೪ನೇ ತರಗತಿಯವರೆಗೆ ಕನ್ನಡ ಅಥವಾ ಮಕ್ಕಳ ಮಾತೃಭಾಷೆಯಲ್ಲಿ ತರಗತಿಗಳನ್ನು ನಡೆಸುವುದು ಕಡ್ಡಾಯ. ಐದನೇ ತರಗತಿಯಿಂದ ಆಂಗ್ಲ ಭಾಷೆಯ ಮಾಧ್ಯಮಗಳಿಗೆ ಸರಕಾರ ಆದೇಶಿಸಿದೆ. ಇದನ್ನು ಗಮನಿಸಿ ಇದೇ ತತ್ವವನ್ನು ರಾಜ್ಯಾದ್ಯಂತ ಭಾಷಾ ಅಲ್ಪಸಂಖ್ಯಾತರಾದ ತೆಲುಗು, ಉರ್ದು, ತಮಿಳು, ಮರಾಠಿ, ಹಿಂದಿ, ಗುಜರಾತಿ ಮುಂತಾದವರು ಅವರವರ ಮಾತೃಭಾಷೆಯನ್ನು ಪ್ರೋತ್ಸಾಹಿಸಿ ಆಂಗ್ಲ ಮಾಧ್ಯಮ ಶಾಲೆಗಳನ್ನು ತೆರೆಯುತ್ತಾ ಹೋದರೆ ಸರಕಾರ ಏನು ಮಾಡುತ್ತದೆ." **(ಬಿ.ಜಿ.ಬಣಕಾರ, ಕನ್ನಡ ಕರ್ನಾಟಕ ಚಿಂತನೆಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೬,ಪು ೨೦,೨೧)**

ಸರಕಾರ ಈ ಕ್ರಮ ಕೈಗೊಂಡಲ್ಲಿ ರಾಜ್ಯದಲ್ಲಿ ಏಕಭಾಷಾ ನೀತಿಯನ್ನು ಮತ್ತು ಸಾರ್ವತ್ರಿಕ ಶಿಕ್ಷಣ ಕ್ರಮವನ್ನು ವಿರೋಧಿಸಿದಂತಾಗುವುದಿಲ್ಲವೇ. ನಾಡಿನ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿರುವಂತಹ ಸರಕಾರ ನಾಡಿನ ಸರ್ವನಾಶಕ್ಕೆ ಹಾದಿಯನ್ನು ಸುಗಮ ಮಾಡಿಕೊಟ್ಟಂತಾಗುವುದಿಲ್ಲವೆ. ಇದರಿಂದ ಎಲ್ಲಾ ಭಾಷಾ ಅಲ್ಪಸಂಖ್ಯಾತರ ಅವರವರ ಭಾಷೆಯಲ್ಲಿ ಶಿಕ್ಷಣ, ಸಾಮಾಜಿಕ ವ್ಯವಹಾರಿಕ ಭಾಷೆಯೇ ಬೀದಿಯಲ್ಲಿ ಮುಂಚೂಣಿಗಿಳಿಯುತ್ತವೆ. ಇದರಿಂದ ಕನ್ನಡದಲ್ಲಿ ವ್ಯವಹರಿಸುವವರು ಬೆರಳೆಣಿಕೆಯಲ್ಲಿರುತ್ತಾರೆ. ಕನ್ನಡ ನಾಡಿನಲ್ಲಿ ಏಕ ಭಾಷಾನೀತಿ ಜಾರಿಯಾಗದೆ ಬಹು ಭಾಷೆಗಳು ಜಾರಿಗೆ ಬರುತ್ತವೆ. ಹಾಗಾದಾಗ ಸಹಜವಾಗಿ ಕನ್ನಡ ನಾಡಿನಿಂದ ಕನ್ನಡ ಕಣ್ಮರೆಯಾಗುತ್ತದೆ. (ಅಂದರೆ ಚಾಲ್ತಿಯಲ್ಲಿ ಹಿಂದಕ್ಕೆ ಸರಿಯುತ್ತದೆ.) ಆಗ ಕನ್ನಡ ನಾಡಿನಲ್ಲಿ ಕನ್ನಡ ಅಧಿಕೃತ ಭಾಷೆಯಾಗದೆ ಬಹು ಭಾಷಾ ನೀತಿ ಏಕಕಾಲದಲ್ಲಿ ಜಾರಿಗೊಂಡಂತಾಗುತ್ತದೆ. ಇದು ಭಾಷಾ ನೀತಿ ನ್ಯಾಯ ವಿರೋಧಿ ಕ್ರಮವಾಗುತ್ತದೆ.

ಅನ್ಯಭಾಷೆಗಳಿಗೆ ಗೌರವಸ್ಥಾನವನ್ನು ನೀಡಬೇಕು, ತಪ್ಪಲ್ಲ. ಆದರೆ ಅನ್ಯಭಾಷೆಗಳಿಗೆ ಸ್ಥಾನವನ್ನು ಕಲ್ಪಿಸುವುದಕ್ಕಾಗಿ ನಮ್ಮತನವನ್ನು, ನಮ್ಮ ಭಾಷಾ ಸ್ವಾಭಿಮಾನವನ್ನು ಕಳೆದುಕೊಳ್ಳುವುದು ಯಾವ ನ್ಯಾಯ?. ಕನ್ನಡ ನಾಡಿನಲ್ಲಿ ಕನ್ನಡ ಅಧಿಕೃತ ಭಾಷೆ ಎಂದು ಎತ್ತಿ ತೋರಿಸಬೇಕಾಗಿರುವುದೇ ನಗೆ ಪಾಟಲಿನ ವಿಷಯವಾಗಿದೆ. ಇದಕ್ಕೆ ಪ್ರಥಮವಾಗಿ ಸರಕಾರ ಏಕೈಕ ಭಾಷಾ ನೀತಿಯನ್ನು ಮೊದಲು ಜಾರಿಗೆ ತರಬೇಕು. ಆಡಳಿತ ಹಾಗೂ ಶಿಕ್ಷಣ ಎರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಎರಡಕ್ಕೂ ನಿಕಟವಾದ ಸಂಬಂಧವಿದೆ. ಇವೆರಡೂ ಸಮಾಜದ ಅಭಿವೃದ್ಧಿಗೆ ನಾಂದಿಯಾಗಿವೆ. ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಪ್ರಥಮ ಕಾರಣಗಳಾಗಿವೆ. ಅದಕ್ಕಾಗಿ ಸರ್ಕಾರ ಪ್ರಥಮವಾಗಿ ಏಕೈಕ ಭಾಷಾ ನೀತಿಯನ್ನು ಜಾರಿಗೆ ತರಬೇಕು. 'ಆಡಳಿತ' ಹಾಗೂ 'ಶಿಕ್ಷಣ' ಮಾಧ್ಯಮವನ್ನಾಗಿ

ಕನ್ನಡವನ್ನು ಕಡ್ಡಾಯವಾಗಿ ಜಾರಿಗೆ ತರಲೇಬೇಕು. ಕನ್ನಡ ನಾಡಿನ ಪರಿಸರದಲ್ಲಿ ಕನ್ನಡವನ್ನು ವ್ಯವಹಾರಿಕ ಭಾಷೆಯನ್ನಾಗಿ ಜಾರಿಗೊಳಿಸಬೇಕು. ಅನ್ಯಭಾಷೆಗಳನ್ನು ಬಳಸಬಾರದು ಎಂಬ ವಿರೋಧಕ್ಕೆ ಸಮ್ಮತಿಯಿಲ್ಲ. ಅದು ಅವರವರ ಆಯ್ಕೆಗೆ ಬಿಡಬೇಕು. ಆದರೆ (ಅನ್ಯಭಾಷೆಗಳನ್ನು ಬಳಸುವುದು ಉದಾಹರಣೆಗೆ : ಇಂಗ್ಲೀಶ್, ತೆಲುಗು, ಹಿಂದಿ ಇತ್ಯಾದಿ) ಅನ್ಯಭಾಷೆಗಳನ್ನು ಬಳಸುವುದೇ  ನಿಶ್ಚಿತವಾಗಬಾರದು.

ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಜಾರಿಯಲ್ಲಿರುವ 'ತ್ರಿಭಾಷಾ ಸೂತ್ರ' ಮಾತೃಭಾಷೆ, ಪ್ರಾದೇಶಿಕ ಭಾಷೆ ಮತ್ತು ಅಂತರಾಷ್ಟ್ರಿಯ ಭಾಷೆ ಎಂದು ಗುರುತಿಸಲಾಗಿದೆ. ಮಗು ತನ್ನ ಮಾತೃಭಾಷೆಯನ್ನಲ್ಲದೇ ಕನ್ನಡವನ್ನು ಕಲಿಯುವುದು ಕಡ್ಡಾಯ. ನಂತರ ಮೂರನೆಯ ಭಾಷೆಯಾಗಿ ಇಂಗ್ಲೀಶ್ ಇಲ್ಲವೆ ಹಿಂದಿಗಳ ನಡುವೆ ಆಯ್ಕೆ ಮಾಡಿಕೊಳ್ಳಬೇಕು. ಕಲಿಕೆಗೆ ಎಲ್ಲಾ ಭಾಷೆಗಳಿಗೂ ಅನ್ವಯಿಸುವಂತೆ ಹತ್ತು ವರ್ಷಗಳ ಅವಧಿ ಸಾಧ್ಯತೆ ಇಲ್ಲ. ಕೆಲವು ವರ್ಷಗಳು ಮಾತ್ರ ಮಾತೃ ಭಾಷೆಯನ್ನು ಓದಿ, ಬರೆಯಲು ಕಲಿತು ಅನಂತರ ಅಧಿಕೃತ ತ್ರಿಭಾಷಾ ಸೂತ್ರಕ್ಕೆ ಮಗು ಪಲ್ಲಟಗೊಳ್ಳುತ್ತದೆ ಎಂದು **ಕೆ.ವಿ. ನಾರಾಯಣರು** ತಿಳಿಸಿದ್ದಾರೆ. ಇದರೊಂದಿಗೆ ತ್ರಿಭಾಷಾ ಸೂತ್ರ ಭಾಷಾ ನೀತಿ ಮತ್ತು ಮಾತೃಭಾಷೆಯ ಶಿಕ್ಷಣವನ್ನು ವಿಶ್ಲೇಷಿಸಿದ್ದಾರೆ.

ಕೆಲವು ಭಾಷೆಗಳನ್ನಾಡುವ ಮಕ್ಕಳಿಗೆ ತಮ್ಮ ಭಾಷೆಯನ್ನು ಕರ್ನಾಟಕದ ಶಾಲೆಯಲ್ಲಿ ಕಲಿಯುವ ಅವಕಾಶವಿಲ್ಲ. ಅವರು ತಮ್ಮ ಮೊದಲ ಭಾಷೆಯಲ್ಲಿ ಓದಿ ಬರೆಯುವ ಕೌಶಲವನ್ನು ಶಾಲಾ ಶಿಕ್ಷಣದಲ್ಲಿ ಪಡೆಯುವುದಿಲ್ಲ. ಉಳಿದ ಮೂರು ಭಾಷೆಗಳನ್ನು ಯಥಾ ಪ್ರಕಾರ ಕಲಿಯುತ್ತಾರೆ. ಉದಾಹರಣೆಗೆ : ತುಳು, ಲಂಬಾಣಿ ಇತ್ಯಾದಿ. ಇವುಗಳಿಗೆ ಲಿಪಿ ಇಲ್ಲ. ತುಳು, ಮನೆ ಮಾತಿನ ಭಾಷೆಯಾಗಿ ಮಾತ್ರ ಉಳಿದುಕೊಳ್ಳುತ್ತದೆ. ಲಂಬಾಣಿ ಭಾಷೆ ಅವರ ಮನೆಗಳಲ್ಲಿ, ತಾಂಡಗಳಲ್ಲಿ ಮಾತ್ರ ಬಳಕೆಯಾಗುವ ಭಾಷೆಯಾಗಿದೆ. ವಾಸ್ತವದಲ್ಲಿ ಇವರು ನಾಲ್ಕು ಭಾಷೆಗಳನ್ನು ಕಲಿಯುತ್ತಾರೆ ಎಂದು ತಿಳಿಸಿದ್ದಾರೆ. ಕೇಂದ್ರ ಸರ್ಕಾರ ಹೊರಡಿಸಿರುವ ತ್ರಿಭಾಷಾ ಸೂತ್ರ ಇಡೀ ಭಾರತದನ್ವಯ ಜಾರಿಯಾಗಬೇಕೆಂಬುದು ಅದರ ಆಶಯ. ಆದರೆ ಎಲ್ಲಾ ರಾಜ್ಯಗಳಲ್ಲಿಯೂ ಸಾರ್ವತ್ರಿಕವಾಗಿ ಜಾರಿಗೊಳ್ಳುತ್ತದೆಯೊ ಇಲ್ಲವೊ ಎಂಬುದಕ್ಕೆ ಸ್ಪಷ್ಟ ಮಾಹಿತಿ ಇಲ್ಲ. ಆದರೆ ಕರ್ನಾಟಕದಲ್ಲಿ ಶಿಕ್ಷಣ ವ್ಯವಸ್ಥೆಯ ಎರಡು ವಲಯ(ಸಂಸ್ಥೆ)ಗಳಲ್ಲಿ ತ್ರಿಭಾಷಾ ಸೂತ್ರ ಉಲ್ಲಂಘನೆಯಾಗಿದೆ. ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿ ಬರುವ ಕೇಂದ್ರಿಯ ವಿದ್ಯಾ ಶಾಲೆಗಳು ಮತ್ತು ಐ.ಸಿ.ಎಸ್.ಸಿ ಶಾಲೆಗಳು ಕನ್ನಡವನ್ನು ಬಿಟ್ಟು ಹಿಂದಿ ಮತ್ತು ಇಂಗ್ಲೀಶ್ ಎರಡು ಭಾಷೆಗಳನ್ನು ಕಲಿಸುವ ವ್ಯವಸ್ಥೆಯಿದೆ. ಅಂದರೆ ಖಾಸಗಿ, ಸರ್ಕಾರಿ ಶಾಲೆಗಳು ಮತ್ತು ಕೇಂದ್ರಿಯ ಶಾಲೆಗಳನ್ನು ಪ್ರತ್ಯೇಕ ಮಾಡಿ ತಾರತಮ್ಯವನ್ನುಂಟುಮಾಡಿವೆ. ಕನ್ನಡ ಪ್ರದೇಶದಲ್ಲಿ ಎಲ್ಲಾ ಶಾಲೆಗಳಲ್ಲಿ ಸಾರ್ವತ್ರಿಕ ಶಿಕ್ಷಣದಲ್ಲಿ ಭಾಷೆಯ ಸ್ವರೂಪವನ್ನು ಗಮನಿಸಿದರೆ ಎಲ್ಲಾ ಪರ್ಯಾಯಗಳಲ್ಲೂ ಇಂಗ್ಲೀಶ್ ಭಾಷೆಯ ಸ್ಥಾನ ಗಟ್ಟಿಯಾಗಿದೆ. ಸ್ವದೇಶಿ ನೆಲದಲ್ಲಿ ಬಹುಭಾಷಿಕರ ಸ್ವಭಾಷೆ/ಮನೆಮಾತು ಕನ್ನಡವಾಗಿದ್ದರೂ,

ಕನ್ನಡಕ್ಕೆ ಮಾತ್ರ ಭದ್ರತೆಯ ಸ್ಥಾನ ಒದಗಿಲ್ಲ. ಸರ್ಕಾರಿ, ಖಾಸಗಿ, ಕೇಂದ್ರಿಯ ಶಾಲೆ ಮುಂತಾದ ಎಲ್ಲಾ ಶಾಲೆಗಳಲ್ಲೂ ಕನ್ನಡವನ್ನು ಔಪಚಾರಿಕವಾಗಿ ಕಡ್ಡಾಯ ಭಾಷೆಯನ್ನಾಗಿ ಮಾಡಿ, ಸಾರ್ವತ್ರಿಕ ಶಿಕ್ಷಣವನ್ನು ಜಾರಿಗೊಳಿಸಬೇಕು ಎಂದು ಹೇಳುತ್ತಾರೆ.

**ಶಿವಸುಂದರ್** ಎನ್ನುವವರು ಇಂಗ್ಲೀಶ್ ಕಲಿಕೆ ಹುಟ್ಟು ಹಾಕಿರುವ ಗೊಂದಲಗಳನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ. ಸಾಮಾಜಿಕ ವರ್ಗಗಳ ಅಸಮಾನತೆಯ ಕುರುಹಾಗಿ ಇಂಗ್ಲೀಶ್ ಕಲಿಕೆಯ ವಿವಾದ ರೂಪುಗೊಂಡಿದೆ. ಇಂಗ್ಲೀಶ್ ಕಲಿಸಬೇಕೇ ಬೇಡವೇ ಎನ್ನುವ ಪ್ರಶ್ನೆ ಸುಲಭವೂ ಮತ್ತು ಅದಕ್ಕೆ ಉತ್ತರವನ್ನು ಕಂಡುಕೊಳ್ಳುವುದು ಸರಳವಲ್ಲ. ಈ ವಿವಾದವನ್ನು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಹಿನ್ನೆಲೆಯಲ್ಲಿ ಚರ್ಚಿಸಬೇಕು. ಭಾಷೆ ಮತ್ತು ಸಂಸ್ಕೃತಿಗೂ ಸಾಮಾಜಿಕ ಆರ್ಥಿಕ ವ್ಯವಸ್ಥೆಗೂ ನೇರವಾದ ಸಂಬಂಧವಿದೆ. ಭಾಷಾನೀತಿ ಶೈಕ್ಷಣಿಕ ನೀತಿಯ ಭಾಗವಾಗಿದೆ. ಈ ಶೈಕ್ಷಣಿಕ ನೀತಿ ಆರ್ಥಿಕ ರಾಜಕೀಯ ಅಗತ್ಯತೆಗಳನ್ನು ಪೂರೈಸುತ್ತಿರುತ್ತದೆ. ಈ ರಾಜಕೀಯ ಆರ್ಥಿಕ ಪರಿಸ್ಥಿತಿ ಹೇಗಿದೆ ಎಂದರೆ ಭೂಮಾಲಿಕ ವ್ಯವಸ್ಥೆಯನ್ನು ಉಳಿಸಿಕೊಂಡೇ ಜಗತ್ತಿನ ಶ್ರೀಮಂತ ರಾಷ್ಟ್ರಗಳ ಅಗತ್ಯವನ್ನು ಪೂರೈಸುವ ಹೊಸ ಬಗೆಯ ಆರ್ಥಿಕ ವ್ಯವಸ್ಥೆ ರೂಪಿತಗೊಂಡಿದೆ. ಅದರ ಭಾಗವಾಗಿಯೇ ಇರುವ ಇಂಗ್ಲೀಶ್ ಕಲಿಕೆ ಪರಿಣಾಮ ಕೇವಲ ಭಾಷಾ ಕೌಶಲ ಆದುದಲ್ಲ. ಅದು ಸಾಮಾಜಿಕ ಅಸಮಾನತೆಯ ನಿವಾರಣೆಯು ಹೌದು. ಆ ನೆಲೆಯಲ್ಲಿ ಭಾಷಿಕ ವ್ಯತ್ಯಾಸವನ್ನು ಬಗೆಹರಿಸುವಲ್ಲಿ ಚಿಂತನೆ ನಡೆಯಬೇಕಾಗಿದೆ ಎಂದಿದ್ದಾರೆ.

**ಬರಗೂರು ರಾಮಚಂದ್ರಪ್ಪ** ಅವರು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಯಬೇಕು ಎನ್ನುವವರು ಮೊದಲು ಮಕ್ಕಳಿಗೆ ಮಾತೃಭಾಷಾ ಪದಗಳ ಪರಿಣತಿ ಬಗ್ಗೆ ಚಿಂತನೆ ನಡೆಸಬೇಕು. ವಿವಿಧ ರಾಜ್ಯಗಳು ವಿಭಿನ್ನ ತರಗತಿಗಳಿಂದ ಇಂಗ್ಲೀಶ್ ಕಲಿಕೆಯನ್ನು ಆರಂಭಿಸಲು ಇರುವ ಕಾರಣ ಮತ್ತು ಮಾನದಂಡಗಳೇನು? ಎನ್ನುವುದನ್ನು ಚಿಂತಿಸಿ, ಆನಂತರ ಮಾತೃಭಾಷಾ ಕಲಿಕೆಗೆ ಎಷ್ಟು ಅವಧಿಬೇಕು ಎಂದು ನಿರ್ಧರಿಸುವ ಮೂಲಕ ಒಂದರಿಂದ ಮೂರನೆ ತರಗತಿಯೊಳಗೆ ಯಾವ ವರ್ಷದಿಂದ ಇಂಗ್ಲೀಶ್ ಕಲಿಕೆ ಬೇಕು ಎಂದು ತೀರ್ಮಾನಕ್ಕೆ ಬರುವುದು ಸರಿ ಎಂದಿದ್ದಾರೆ.

ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮವೇ ವೈಜ್ಞಾನಿಕವೂ, ಸಂವಿಧಾನಾತ್ಮಕವೂ ಆಗಿರುವುದರಿಂದ ಇದು ಕೇವಲ ಅನಿವಾರ್ಯವಾಗಿದೆ. ಅಂತಹ ಮಾಧ್ಯಮದಲ್ಲಿ ಇಂಗ್ಲೀಶನ್ನು ಎರಡನೆಯ ಭಾಷಾ ಸ್ಥಾನದಲ್ಲಿ ಐಚ್ಛಿಕವಾಗಿ ಇಡಬೇಕು. ಇಂಗ್ಲೀಶ್ ಕಲಿಕೆ ಕಡ್ಡಾಯ ಎಂಬುದು ರಾಜ್ಯ ಸರಕಾರದ ಕಾರ್ಯಕ್ರಮವಲ್ಲ. ಬದಲಾಗಿ ಸಾಮ್ರಾಜ್ಯಶಾಹಿಗಳ ಕುತಂತ್ರದ ಕಾರ್ಯಕ್ರಮವಾಗಿದೆ. ಇಂಗ್ಲೀಶ್ ಮಾಧ್ಯಮ ಶಾಲೆಗಳನ್ನು ಹಿಮ್ಮೆಟ್ಟಿಸಬೇಕಾದರೆ ಕನ್ನಡ ಮಾಧ್ಯಮ ಶಾಲೆಯವರು ಆಕರ್ಷಣೀಯ ತಂತ್ರಗಳನ್ನು ಅಳವಡಿಸಬೇಕು. ಆಂಗ್ಲ ಮಾಧ್ಯಮ ಶಾಲೆಗಳಿಗಿಂತ ಏನೂ ಕಡಿಮೆ ಇಲ್ಲವೆಂದು ತೋರಿಸುವಂತೆ ಆಡಳಿತ ಮಂಡಳಿಯು ಯೋಚಿಸಬೇಕಾಗಿದೆ.

'ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಇಂಗ್ಲೀಶ್ ಕಲಿಕೆಯ ಪ್ರಶ್ನೆ ಶೈಕ್ಷಣಿಕ ಪ್ರಶ್ನೆಯಾಗಿ ಉಳಿಯದೆ ಸಾಮಾಜಿಕ ನ್ಯಾಯದ, ರಾಜಕೀಯ ಪ್ರಶ್ನೆಯಾಗಿ ಪರಿವರ್ತಿತವಾಗಿದೆ' ಎಂದು,

**ಡಿ. ಎಸ್. ನಾಗಭೂಷಣ** ಅವರು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಏಕೆ ಬೇಡ? ಎನ್ನುವ ತಮ್ಮ ಕೃತಿಯಲ್ಲಿ ಸಾಕಷ್ಟು ದೀರ್ಘವಾಗಿ ಚರ್ಚಿಸಿದ್ದಾರೆ. ಅವರ ಕೃತಿಯಿಂದಲೇ ಅವರ ವೈಚಾರಿಕತೆ ಏನೆಂಬುದು ಸ್ಪಷ್ಟವಾಗಿದೆ.

ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆಯನ್ನು ವಿರೋಧಿಸಿ, ಕನ್ನಡ ಕಲಿಕೆಯನ್ನು ಕಡ್ಡಾಯಗೊಳಿಸುವುದು, ಕನ್ನಡ ಭಾಷಾಭಿಮಾನದ ಭಾವಾವೇಶದ ಪ್ರಶ್ನೆಯಾಗಿ ಉಳಿದಿಲ್ಲ. ಇದು ವಾಸ್ತವದ ಪ್ರಶ್ನೆಯೂ ಹೌದು. ಮಗು ಆರಂಭದಲ್ಲಿ ತನ್ನ ಮಾತೃ ಅಥವಾ ಪರಿಸರ ಭಾಷೆಯಲ್ಲಿ ಜ್ಞಾನಕ್ಕೆ ತೆರೆದುಕೊಂಡರೆ ಮಾತ್ರ ಮುಂದಿನ ಶಿಕ್ಷಣ ಸುಗಮವಾಗುತ್ತದೆ ಎಂದಿದ್ದಾರೆ. ಇದು ಶಿಕ್ಷಣ ಶಾಸ್ತ್ರಜ್ಞರ ಮತ್ತು ಭಾಷಾ ಶಾಸ್ತ್ರಜ್ಞರ ವಿಚಾರವೂ ಆಗಿದೆ. ಶಿಕ್ಷಣ ಮಾಧ್ಯಮ ಕುರಿತಾಗಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿಗೆ ರಾಜ್ಯದ ಉಚ್ಚ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ಸರ್ಕಾರ ತಿರುಚುಗೊಳಿಸದೆ ತೋರಿಸುವ ನಿರಾಸಕ್ತಿಯು ನಿಜಕ್ಕೂ ವಿಷಾದಕರ. ಪ್ರಾಥಮಿಕ ಹಂತದಲ್ಲಿ ಐದನೆಯ ತರಗತಿಗೆ ಬದಲಾಗಿ ಒಂದನೇ ತರಗತಿಯಿಂದಲೇ ಇಂಗ್ಲಿಶನ್ನು ಕಲಿಸಲಾರಂಭಿಸಿದರೆ ಮಕ್ಕಳ ಕಲಿಕೆಯಲ್ಲಿ ಜಟಿಲತೆಗಳುಂಟಾಗಿ ಶಿಕ್ಷಣದ ಆರಂಭದಲ್ಲಿಯೇ ಮಕ್ಕಳಿಗೆ ಹೊರೆಯೆನ್ನಿಸ ಬಹುದು. ಮಕ್ಕಳ ಮನಸ್ಸಿನಲ್ಲಿ ಮಾತೃಭಾಷೆಯ ಬಗೆಗೆ ಕೀಳರಿಮೆ, ಉದಾಸೀನ ಮನೋಭಾವ ಉಂಟಾಗಬಹುದು. ಇದರಿಂದ ಸಾಮಾಜಿಕ ನ್ಯಾಯಯುತ ಕಲಿಕೆಯಲ್ಲಿ ವ್ಯತ್ಯಾಸವಾಗಬಹುದು ಎಂದು ಹೇಳುತ್ತಾರೆ. ಆದ್ದರಿಂದ ರಾಜ್ಯದ ಉಚ್ಚನ್ಯಾಯಾಲಯ ತಡೆಯಾಜ್ಞೆಯನ್ನು ತೆರವುಗೊಳಿಸಿ ಏಳನೇ ತರಗತಿಯವರಿಗೆ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಕನ್ನಡ ಮಾತೃಭಾಷಾ ಮಾಧ್ಯಮವನ್ನು ಜಾರಿಗೊಳಿಸುವಂತೆ ಸರ್ಕಾರವನ್ನು ಒತ್ತಾಯಿಸಬೇಕೆಂದಿದ್ದಾರೆ. ಒಂದನೇ ತರಗತಿಯಿಂದ ಇಂಗ್ಲೀಶ್ ಬೇಡ ಎಂದರೆ, ಅದು ಸಾಮಾಜಿಕರ ಕಿವಿಗಳಿಗೆ ಇಂಗ್ಲೀಶ್ ಬೇಡ ಎಂದಂತಾಗಿದೆ. ಭಾರತದ ಸದ್ಯದ ಶ್ರೇಷ್ಠ ವಿಜ್ಞಾನಿ **ಡಾ. ಸಿ.ಎನ್.ಆರ್.ರಾವ್** ಅವರೇ ಮೊದಲು ಕನ್ನಡ, ನಂತರವಷ್ಟೇ ಇಂಗ್ಲೀಶ್ ಎಂದು ಹೇಳಿದ್ದು ಇವರ ಕಿವಿಗೆ ಬೀಳದೇ ಹೋಗುತ್ತದೆ. ಭಾಷಾ ತಜ್ಞರು ಮಗು ಏಳನೇ ವಯಸ್ಸಿನವರೆಗೆ ಒಂದು ಭಾಷೆಯನ್ನು ಮಾತ್ರ ತನ್ನೊಳಗೆ ಅಂತರ್ಗತ ಮಾಡಿಕೊಳ್ಳುತ್ತಾ ಹೋಗುತ್ತದೆ ಎಂದು ವಿಶ್ಲೇಷಿಸಿದ್ದಾರೆ. ಐದನೇ ತರಗತಿಗೆ ಬದಲಾಗಿ ಮೂರನೇ ತರಗತಿಯಿಂದಲೇ ಇಂಗ್ಲೀಶ್‌ನ್ನು ಅನೌಪಚಾರಿಕವಾಗಿ ಕಲಿಸುವ ವ್ಯವಸ್ಥೆ ಕಲ್ಪಿಸಬೇಕು. ಮಾಧ್ಯಮ ಕುರಿತ ಸರ್ವೋನ್ನತ ನ್ಯಾಯಾಲಯದ ಐತಿಹಾಸಿಕ ತೀರ್ಪನ್ನು ಜಾರಿಗೊಳಿಸಲು ಪ್ರಯತ್ನಿಸಬೇಕು. ಎಲ್ಲಾ ಸರ್ಕಾರಿ ಕನ್ನಡ ಶಾಲೆಗಳಲ್ಲಿ ಜಾರಿಗೊಳಿಸಲು ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆಯನ್ನು ಕಡ್ಡಾಯ ಮಾಡುವ ಸರ್ಕಾರದ ನಿರ್ಧಾರವನ್ನು ವಿವೇಚನಾಶೀಲರೆಲ್ಲರೂ ಖಂಡಿಸಿ ವಿರೋಧಿಸಬೇಕಾಗಿದೆ. ಇಂಗ್ಲೀಶ್ ಕಲಿಕೆ ಕುರಿತ ಸರ್ಕಾರದ ಇತ್ತೀಚಿನ ಆಜ್ಞೆಯು ಇಂಥ ರೂಕ್ಷ, ಅಮಾನವೀಯ ಹಾಗೂ ಅವಿವೇಕಿ ರಾಜಕಾರಣಕ್ಕೆ ಬಲಿಬಿದ್ದುದರ ದ್ಯೋತಕವೂ ಆಗಿರುವುದರಿಂದ ಅದನ್ನು ಸಹಜವಾಗಿಯೇ ತೀವ್ರವಾಗಿ ವಿರೋಧಿಸಬೇಕಿದೆ.

**(ಡಿ.ಎಸ್. ನಾಗಭೂಷಣ, ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ: ಏಕೆ ಬೇಡ?, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೭, ಪುಟ–೪೫).** ಕರ್ನಾಟಕದ ಎಲ್ಲಾ ಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಕಡ್ಡಾಯಗೊಳಿಸಿ, ಮೂರನೇ ತರಗತಿಯಿಂದ ಅನೌಪಚಾರಿಕವಾದ ಇಂಗ್ಲೀಶ್ ಕಲಿಕೆಗೆ ಸೂಕ್ತ ವ್ಯವಸ್ಥೆ ಕಲ್ಪಿಸಿ, ಐದನೇ ತರಗತಿಯಿಂದ ಪಠ್ಯಾಧಾರಿತವಾದ ಇಂಗ್ಲೀಶ್ ಕಲಿಕೆ ಆರಂಭಿಸಬಹುದು ಎಂಬ ಅಭಿಪ್ರಾಯವನ್ನು ಮಂಡಿಸಿದ್ದಾರೆ. **(ಪುಟ–೪೭)**

**ಡಾ. ಬಿ.ಎಂ. ಪುಟ್ಟಯ್ಯ "ಒಂದನೆ ತರಗತಿಯಿಂದಲೇ ಉರುಳು"** ಎನ್ನುವ ಕೃತಿಯ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಕುರಿತು ಭಾಷಾ ನೀತಿಯ ಯೋಜನೆ, ಸಮಸ್ಯೆ, ತೊಡಕುಗಳನ್ನು ವಿಶ್ಲೇಷಿಸಿದ್ದಾರೆ. ಒಂದನೆ ತರಗತಿಯಿಂದಲೇ ಇಂಗ್ಲೀಶ್ ಕಲಿಸಬೇಕು ಎಂಬುದು ಪ್ರಭುತ್ವದ ನಿಲುವಾಗಿದೆ. ಏಕಮುಖ ಮಂತ್ರದಲ್ಲಿ ಶಿಕ್ಷಣ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯ ವಾಸ್ತವ ಸಮಸ್ಯೆಗಳನ್ನು ಅವನತಿಯ ಅಂಚಿಗೆ ತಳ್ಳಲಾಗಿದೆ. ಹಲವು ಕ್ರೂರ ಅನುಭವಗಳನ್ನು ಮುಚ್ಚಿಡಲಾಗಿದೆ. ಈ ಚರ್ಚೆ ಕೇವಲ ಶೈಕ್ಷಣಿಕ ವಿಷಯ ಅಲ್ಲ. ಅದು ಖಚಿತವಾಗಿ ಸಾಮಾಜಿಕ ವಿಷಯ. ಇದು ಭಿನ್ನ ಸ್ತರಗಳ ಮಕ್ಕಳು, ಪೋಷಕರು, ಭಿನ್ನ ಪರಿಸ್ಥಿತಿಯ ಶಿಕ್ಷಕರು, ಪಠ್ಯಕ್ರಮದ ವಸ್ತು ವಿಷಯ, ಬೋಧನೆಯ ವಿಧಾನ, ಮೌಲ್ಯಮಾಪನ ಮತ್ತು ಫಲಿತಾಂಶ ಈ ಎಲ್ಲವನ್ನು ಒಳಗೊಂಡಿದೆ. ಈ ಚರ್ಚೆಯ ಬೇಡಿಕೆ ಕರ್ನಾಟಕದಲ್ಲಿ ಬಂಡವಾಳ ಹೂಡಿರುವವರು ಒತ್ತಾಯ ಮತ್ತು ಅವರಿಗೆ ಮುಕ್ತಾವಕಾಶ ಕೊಟ್ಟಿರುವ ಸರಕಾರದ ತಂತ್ರ' ಎಂದು ವಿಶ್ಲೇಷಿಸುತ್ತಾರೆ. **(ಪುಟ–೩,೪,೧೨)**

'ಒಂದನೆ ತರಗತಿಯಿಂದ ಇಂಗ್ಲೀಶ್ ಕಲಿಸಿ' ಎಂಬ ಅಪೇಕ್ಷೆ ಉಳ್ಳವರಲ್ಲಿ ಪಾಲಕರು, ದಲಿತ ನಾಯಕರು, ಸರ್ಕಾರ ಮತ್ತು ಇನ್‌ಫೋಸಿಸ್ ನಾರಾಯಣ ಮೂರ್ತಿ ಮುಂತಾದವರು ಮುಂಚೂಣಿಯಲ್ಲಿದ್ದಾರೆ. ದಲಿತ ಪಂಥದವರ ಪರವಾಗಿ ದಲಿತ ಸಂಘಟನಾಕಾರರು, ಸಂಘ ಸಂಸ್ಥೆಗಳು ಕೇವಲ ಮೇಲ್ವರ್ಗದವರು ಮಾತ್ರ ಇಂಗ್ಲೀಶ್ ಪಡೆದರೆ ಕೆಳವರ್ಗದವರು ಅವರ ಸಮವಾಗಿ ಸ್ಪರ್ಧಾತ್ಮಕ ಜಗತ್ತಿನಲ್ಲಿ ಪಾಲ್ಗೊಳ್ಳುವಂತಾಗಲು ಇಂಗ್ಲೀಶ್ ಶಿಕ್ಷಣದ ಅಗತ್ಯ ಬೇಕೆ ಬೇಕು ಎನ್ನುವ ತುಡಿತ ಈ ವರ್ಗದವರಲ್ಲಿ ಹೆಚ್ಚು ಕಂಡುಬರುತ್ತಿದೆ. ಆದರೆ ನಾರಾಯಣಮೂರ್ತಿಯವರ ಬೇಡಿಕೆ ಅವರ ಸ್ವಾರ್ಥ ನೆಲೆಯ ಪ್ರತಿಬಿಂಬವಾಗಿದೆ. ಜಾಗತಿಕ ನೆಲೆಯಲ್ಲಿ ಮತ್ತಷ್ಟು ಬಹುರಾಷ್ಟ್ರೀಯ ಕಂಪನಿಗಳನ್ನು ಸ್ಥಾಪಿಸಿ ಬಂಡವಾಳವನ್ನು ವೃದ್ಧಿಸಬೇಕೆನ್ನುವ ಆಶಯದಿಂದ ಇಂಗ್ಲೀಶ್ ಪರಿಣಿತರನ್ನು ಬಳಸಿಕೊಳ್ಳಲು ಸಹಾಯಕವಾಗುವುದೆ ನ್ನುವುದು ಅವರ ಧೋರಣೆಯಿಂದ ವ್ಯಕ್ತವಾಗುತ್ತದೆ. ಇದು ಸಮಾಜದ ಮೇಲ್ವರ್ಗದವರ ಸಾಮಾಜಿಕ ಧೋರಣೆಯಾಗಿದೆ. ಆದರೆ ಇದು 'ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಸಿದರೆ ಮಾತ್ರ ಜಾಗತಿಕ ನೆಲೆಯಲ್ಲಿ ತಮ್ಮನ್ನು ಸಿದ್ಧರಾಗಿಸಿಕೊಳ್ಳಲು ಹೆಚ್ಚು

ಸಹಾಯಕವಾಗುತ್ತದೆ ಎನ್ನುವ ಪರಿಕಲ್ಪನೆ ಸಹಜವಾದುದಲ್ಲ'. ಇಂಗ್ಲೀಶನ್ನು ಒಂದನೇ ಅಥವಾ ನಾಲ್ಕನೇ ತರಗತಿಯಿಂದ ಕಲಿಸಬೇಕೆನ್ನುವುದು ಮುಖ್ಯವಲ್ಲ. ಇಂಗ್ಲೀಶ್‌ನ್ನು ಮಕ್ಕಳಿಗೆ ಹೇಗೆ ಪರಿಪೂರ್ಣವಾಗಿ ಕಲಿಸಬೇಕು. ಆ ಕಲಿಕೆಗೆ ನೆರವಾಗುವಂತಹ ಬೋಧನಾ ವ್ಯವಸ್ಥೆಯ ಮೂಲಕ ಅವರನ್ನು ಕಲಿಕೆಯಲ್ಲಿ ಸಿದ್ಧರನ್ನಾಗಿ ಮಾಡುವುದು ಪ್ರಮುಖವಾಗಿದೆ. ಇದನ್ನು ಮಕ್ಕಳಿಗೆ ಮೊದಲು ಒಂದು ಹಂತದವರೆಗೆ ಮಾತ್ರ ಭಾಷೆಯನ್ನು ಸಮರ್ಪಕವಾಗಿ ಬಳಕೆ, ಕಲಿಕೆ ಹಾಗೂ ಸ್ಪಷ್ಟವಾಗಿ ಅಭಿವ್ಯಕ್ತಿಸಲು ಸಮರ್ಥರನ್ನಾಗಿ ಪ್ರೇರೇಪಿಸಿದಾಗಲೇ ಮುಂದಿನ ಇತರ ವಿಷಯಗಳ ಕಲಿಕೆ ಅವರಿಗೆ ತಾನಾಗಿಯೇ ಸಿದ್ಧವಾಗುತ್ತದೆ. ಹೀಗಾಗಿ ಒಂದನೇ ತರಗತಿಯಿಂದ ಇಂಗ್ಲೀಶನ್ನು ಕಲಿಸುವುದು ನಿಜವಾಗಲೂ ಪರಿಹಾರ ಮಾರ್ಗವಲ್ಲ. ಇದಕ್ಕೆ ಅನೇಕರ ಸಮರ್ಥನೆ, ಬೆಂಬಲವೂ ವ್ಯಕ್ತವಾಗಿದೆ.

'ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸಿ' ಎಂಬ ಯೋಜನೆ ಸರಕಾರದ ನೀತಿ ಯಾಗಿದೆಯೇ ಹೊರತು ಸಾಹಿತಿ, ಚಿಂತಕರ ಹೋರಾಟಗಾರರ ಕೂಗು ಅಲ್ಲ. ಇಂಗ್ಲೀಶ್ ಬೋಧನೆಯ ಅವಧಿಯನ್ನು ಜಾಸ್ತಿ ಮಾಡಬೇಕಾದ ಅಗತ್ಯವಿಲ್ಲ. ಐದರಿಂದ ಎಂಟನೇ ತರಗತಿವರೆಗೆ ಆಲಿಸಿಕೊಳ್ಳುವ ಮತ್ತು ಮಾತಾಡುವ ಇಂಗ್ಲಿಶೇನ್ನು ಮಕ್ಕಳಿಗೆ ಕಲಿಸಬೇಕು. ಎಂಟರಿಂದ ದ್ವಿತೀಯ ಪಿ.ಯು.ಸಿ. ವರೆಗೆ ಓದುವ ಮತ್ತು ಬರೆಯುವ ಇಂಗ್ಲೀಶನ್ನು ಕಲಿಸಬೇಕು. ಇಂಗ್ಲೀಶ್ ಪಠ್ಯಕ್ರಮದ ವಿಷಯ ಮತ್ತು ಬೋಧನೆಯ ವಿಧಾನವನ್ನು ಆಮೂಲಾಗ್ರವಾಗಿ ಬದಲಾಯಿಸಬೇಕು ಎಂದು ಪ್ರಾಥಮಿಕ ಶಿಕ್ಷಣ ಕನ್ನಡದಲ್ಲಿಯೇ ಕಡ್ಡಾಯವಾಗಬೇಕೆಂಬುದನ್ನು ತಮ್ಮ ಸುದೀರ್ಘವಾದ ವಿಚಾರಗಳ ಮೂಲಕ ಪ್ರತಿಪಾದಿಸಿದ್ದಾರೆ. **(ಪುಟ–೬೬,೬೭)**

ನಾಡು–ನುಡಿ ಕೃತಿಯಲ್ಲಿ **ನಾಡೋಜ ಪಾಟೀಲ ಪುಟ್ಟಪ್ಪನವರು** 'ಕನ್ನಡ'ವನ್ನು ಕುರಿತು ಪ್ರತಿಪಾದಿಸುವುದೇನೆಂದರೆ, ನಮ್ಮ ನಾಡಿನಲ್ಲಿ ನಮ್ಮ ಜನರನ್ನು ಕನ್ನಡದ ಮೂಲಕವೇ ಮುಟ್ಟಬೇಕಲ್ಲದೆ ಇಂಗ್ಲೀಶ್, ಹಿಂದಿಯ ಮೂಲಕವಲ್ಲ. ಜನರ ಶಿಕ್ಷಣ ಮಾಧ್ಯಮ ಹಾಗೂ ಆಡಳಿತ ಮಾಧ್ಯಮ ಎರಡೂ ಕನ್ನಡವೇ ಆಗಿರಬೇಕು. ಜನರು ಆಡುವ ಭಾಷೆಯಲ್ಲಿಯೇ ಆಡಳಿತ ನಡೆಯಬೇಕು. ಜನರ ಭಾಷೆಯೇ ಆಡಳಿತ ಭಾಷೆ ಆಗಿರಬೇಕು. ಭಾರತದ ಒಕ್ಕೂಟ ರಾಜ್ಯಗಳಾದ ಪಂಜಾಬದಲ್ಲಿ ಪಂಜಾಬಿ, ಮಹಾರಾಷ್ಟ್ರದಲ್ಲಿ ಮರಾಠಿ, ಪಶ್ಚಿಮಬಂಗಾಳದಲ್ಲಿ ಬೆಂಗಾಲಿ ಭಾಷೆಗಳ ಮೂಲ ನೆಲೆ ಭದ್ರವಾಗಿದೆ. ಆದರೆ ಕರ್ನಾಟಕದಲ್ಲಿ ಕನ್ನಡದ ಸ್ಥಿತಿ ಅವುಗಳಂತೆ ಭದ್ರವಾಗಿಲ್ಲ. ಕರ್ನಾಟಕದ ನೆಲ ಬೇರೆ ಭಾಷೆಗಳ ಆಕ್ರಮಣದಿಂದ ಕರಗಿ ಹೋದಂತೆ ಯಾವ ಭಾಷೆಯೂ ಕರಗಿ ಹೋಗಿಲ್ಲ. ನಮಗೆ ಕನ್ನಡ ಬೇಕು ಆದರೆ ಕನ್ನಡವೇ ಬೋಧನಾ ಮಾಧ್ಯಮವಾಗಿರಬೇಕು. ಇದು ಎಲ್ಲಾ ಶಾಲೆಗಳಿಗೂ ಸಾರ್ವತ್ರಿಕವಾಗಿ ಅನ್ವಯಿಸಬೇಕು. ಕನ್ನಡಿಗರು, ಇಂಗ್ಲೀಶರಂತೆ ತಮ್ಮ ಭಾಷೆಯನ್ನು ಉಳಿಸಿಕೊಳ್ಳಬೇಕು. ಇಂಗ್ಲಿಶರಿಗಿಂತ ಕನ್ನಡ ಪ್ರಾಚೀನ ಭಾಷೆ ಎನ್ನುವುದನ್ನು ಕನ್ನಡಿಗರು ಮರೆಯಬಾರದು. ಪ್ರಾತಃಸ್ಮರಣೀಯರಾದ ವಿ.ಕೃ.ಗೋಕಾಕ, ಪರಮಾಣು ವಿಜ್ಞಾನಿ ರಾಜಾರಾಮಣ್ಣ, ಬಾಹ್ಯಾಕಾಶ

ವಿಜ್ಞಾನಿ ಡಾ. ಯು.ಆರ್. ರಾವ್ ಇವರೆಲ್ಲರೂ ಕನ್ನಡದಲ್ಲಿಯೇ ಶಿಕ್ಷಣ ಪಡೆದು ಇಂಗ್ಲೀಶನಲ್ಲಿ ಆಧುನಿಕತೆ ತಂದುಕೊಂಡು ಬೆಳಗಿದರೆನ್ನುವುದನ್ನು ನಾವು ಮರೆಯಬಾರದು. ಕನ್ನಡವನ್ನು ಇರಿಸಿಕೊಂಡೇ ಇಂಗ್ಲೀಶನಲ್ಲಿ ಪ್ರಭುತ್ವ ಪಡೆಯುವುದು ಸಾಧ್ಯವಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. **(ನಾಡೋಜ ಪಾಟೀಲ ಪುಟ್ಟಪ್ಪ, ನಾಡು ನುಡಿ, ಪ್ರಸಾರಂಗ ಕನ್ನಡ ವಿ.ವಿ.ಹಂಪಿ, ೨೦೦೭, ಪುಟ-೪೪)**

**ಪಾಟೀಲ ಪುಟ್ಟಪ್ಪನವರು** ಹೇಳುವಂತೆ ಬೇರೆ ಯಾವ ರಾಜ್ಯ, ದೇಶವೂ ತನ್ನ ಮೂಲ ಭಾಷೆಯನ್ನು ಬಿಟ್ಟು ಅನ್ಯಭಾಷೆಯನ್ನು ಅಧಿಕೃತ ಭಾಷೆಯನ್ನಾಗಿ ಸ್ವೀಕರಿಸಿಲ್ಲ. ಜ್ಞಾನ ಹಾಗೂ ಸಂವಹನ, ವ್ಯವಹಾರದ ದೃಷ್ಟಿಯಿಂದ ಸಹಾಯಕ ಭಾಷೆಯನ್ನಾಗಿ ಅನ್ಯಭಾಷೆಗಳನ್ನು (ಇಂಗ್ಲೀಶ್, ಹಿಂದಿ, ಇತರೆ...) ಬಳಸಿಕೊಂಡಿರುವ ನಿದರ್ಶನಗಳಿವೆ. ಆದರೆ ಕರ್ನಾಟಕದಲ್ಲಿ ಕನ್ನಡವನ್ನು ಅಲಕ್ಷಿಸಿ ಇತರೆ ಭಾಷೆಗಳನ್ನು ಅಧಿಕೃತವಾಗಿ ಬಳಸುವಂತಹ ಮತ್ತು ಆ ಭಾಷೆಗಳ ಮೇಲೆ ಇಟ್ಟಿರುವ ಹುಚ್ಚು ಪ್ರೀತಿ ಇವತ್ತಿನ ಸಂದರ್ಭದಲ್ಲಿ ಹುಟ್ಟು ಹಾಕಿರುವ ಗಂಭೀರ ಸಮಸ್ಯೆಗಳಿಗೆ ಬುನಾದಿಯಾಗಿದೆ.

ಕರ್ನಾಟಕ ಏಕೀಕರಣದ ಪೂರ್ವದಲ್ಲಿ ಬ್ರಿಟೀಷರು ಕನ್ನಡವನ್ನು ಆಳುತ್ತಿದ್ದರು. ಆ ಸಮಯದಲ್ಲಿ ಇಂಗ್ಲೀಶ್ ಭಾಷೆಯಲ್ಲಿಯೇ ಶಿಕ್ಷಣವನ್ನು ಜಾರಿಗೆ ತಂದಾಗ್ಯೂ ಸಹ, ಪ್ರಾದೇಶಿಕ ಭಾಷೆಯ ಜರೂರನ್ನು ಅರಿತು ಆ ಭಾಷೆಯಲ್ಲಿಯೇ ಶಿಕ್ಷಣವನ್ನು ನೀಡಲು **ಮೋನಿಯರ್ ವಿಲಿಯಮ್ಸ್, ಲಾರ್ಡ ಕರ್ಜನ್, ಜೇಮ್ಸ್‌ಮಿಲ್, ವಾಲ್ಟರ್ ಎಲಿಯಟ್, ಸರ್ ಥಾಮಸ್ ಮನ್ರೋ, ಗ್ಯಾರೆಟ್, ಜಾನ್ ಮ್ಯಾಕ್ಸಮುಲ್ಲರ್** ಮುಂತಾದವರು ಶ್ರಮಿಸಿದ್ದುದನ್ನು ಕಾಣಬಹುದು. ಆದರೆ ಇವರ‍್ಯಾರು ತಮ್ಮ ಮಾತೃ ನೆಲೆಗೆ ತೆರಳಿದ ನಂತರ ಅಲ್ಲಿ 'ಕನ್ನಡ' ಭಾಷೆಯಲ್ಲಿ ವ್ಯವಹರಿಸಲಿಲ್ಲ. ಕನ್ನಡ ಭಾಷೆಯನ್ನು ಬರವಣಿಗೆಯಲ್ಲಿ ಬಳಸಿಕೊಳ್ಳಲಿಲ್ಲ. ತಮ್ಮ ಮೂಲ/ ಮಾತೃ ಭಾಷೆಯಲ್ಲಿಯೇ ತಮ್ಮ ವ್ಯವಹಾರ, ಶಿಕ್ಷಣ, ಬರವಣಿಗೆಯನ್ನು ಮುಂದುವರೆಸಿದ್ದ ರೆಂಬುದು ತಿಳಿದು ಬರುತ್ತದೆ. ಕರ್ನಾಟಕ ಸರ್ಕಾರಕ್ಕೆ/ಜನರಿಗೆ ಅರ್ಥೈಸಿಕೊಳ್ಳಲು ಇದಕ್ಕಿಂತಲೂ ಉತ್ತಮವಾದ ನಿದರ್ಶನದ ಅಗತ್ಯವಿದೆಯೇ?

**'ಶಿಕ್ಷಣ ಮಾಧ್ಯಮವಾಗಿ ಕನ್ನಡ'** ಎನ್ನುವ ಲೇಖನದಲ್ಲಿ **ಕೆ.ಆರ್.ಅವರು** ವಿದೇಶೀಯ ಭಾಷೆಯೊಂದರಲ್ಲಿ ಪ್ರಾಪಂಚಿಕ ಜ್ಞಾನವನ್ನು ತಿಳಿಸುವ ಶಿಕ್ಷಣ ವ್ಯವಸ್ಥೆಯನ್ನು ಮಾಡಿಕೊಂಡ ನಮ್ಮೀ ರೀತಿಯು ತೀರ ಅನೈಸರ್ಗಿಕ ಪದ್ಧತಿಯೆಂಬುದು ಇಂದು ಎಲ್ಲೆಡೆಯೂ ತಿಳಿದ ವಿಚಾರವಾಗಿದೆ. ದೇಶ ಭಾಷೆಯಲ್ಲಿ ಶಿಕ್ಷಣ ಮಾಧ್ಯಮವನ್ನಿರಿಸಿಕೊಂಡಿರುವ ವಿದೇಶೀಯ ರಾಷ್ಟ್ರಗಳಲ್ಲಿ ನಮ್ಮ ಇಲ್ಲಿನ ವಿದ್ಯಾರ್ಥಿಗಳು ಯಾವ ಪ್ರಾಯದಲ್ಲಿ ಎಷ್ಟು ವಿಷಯ ಗ್ರಹಿಕೆ ಮಾಡಿಕೊಳ್ಳುತ್ತಿದ್ದಾರೆ ಎಂಬುದು ಜಗತ್ತಿನ ಕಡಗೆ ಕಣ್ಣೆತ್ತಿ ನೋಡುವವರಿಗೆ ತಿಳಿಯದಿರದು; ಎಂದು ಮಾತೃ ಭಾಷೆಯ ಪ್ರಭಾವ ಕುರಿತು ಹೇಳುತ್ತಿದ್ದಾರೆ. **(ಡಾ. ಬಿ. ಶಿವರಾಮ ಶೆಟ್ಟಿ, ನಾಡು ನುಡಿ ಪ್ರತಿನಿಧೀಕರಣದ ಕಥನ, ದಕ್ಷಿಣ ಕನ್ನಡದ ವಿದ್ಯಾ ಸಂಸ್ಥೆಗಳಲ್ಲಿ ಶಿಕ್ಷಣ ಮಾಧ್ಯಮವಾಗಿ ಕನ್ನಡ (ಲೇ) ೨೦೦೬, ಪುಟ-೨೦).** ಶಿಕ್ಷಣವನ್ನು ದೇಶ ಭಾಷೆಗಳಲ್ಲಿ

ಕೊಡುವುದರಿಂದ ಶಿಕ್ಷಣವು ಉತ್ತಮವಾಗಿರುತ್ತದೆ. ಅಲ್ಲದೆ, ಶಿಕ್ಷಣವು ಸಾರ್ವತ್ರಿಕವಾಗಿರುತ್ತದೆ ಎಂದು ಸಮಜಾಯಿಸುತ್ತಾರೆ. ದೇಶೀ ಭಾಷೆಗಳ ವಿಷಯ ಶಿಕ್ಷಣವು ಅಗತ್ಯವಾದುದು. ದೇಶೀ ಭಾಷೆಗಳಿಂದ ಶಿಕ್ಷಣ ವಲಯಗಳಲ್ಲಿ ಪ್ರಥಮ ಸ್ಥಾನವನ್ನು ಕೊಡುವ ಕೆಲಸ ಸರ್ಕಾರದ್ದು. ಸರಕಾರಕ್ಕೆ ನಾವು ಆಗ್ರಹಪೂರ್ವಕವಾಗಿ ವಿಜ್ಞಾಪಿಸಿಕೊಳ್ಳಬಹುದು. ಇದಕ್ಕಿಂತ ಹೆಚ್ಚಿನ ಕೆಲಸವು ಜನರಿಂದಾಗಲು ಸಾಧ್ಯವಿಲ್ಲ ಎಂದು ಲೇಖಕ **ಆತ್ಮರಾಮಶಾಸ್ತ್ರಿ ಓಡ್ಲಮನೆ ತಿಳಿಸಿದ್ದಾರೆ. (ಪುಟ-೫೩-೫೪).**

ಪ್ರಾಥಮಿಕ ಹಂತದಲ್ಲಿ ಇಂಗ್ಲೀಶ್‌ಗಿಂತಲೂ ಅತ್ಯಂತ ವೈಜ್ಞಾನಿಕ ಭಾಷೆಯಾದ ಕನ್ನಡದಲ್ಲಿ ವಿದ್ಯಾಭ್ಯಾಸ ಮಾಡಿ ವಿಷಯಗಳನ್ನು ಅರಿಯುವ, ಕಲಿತ ವಿಷಯಗಳ ಬಗ್ಗೆ ಆಲೋಚಿಸುವ, ಅವುಗಳನ್ನು ಸ್ವಂತ ವಾಕ್ಯಗಳಲ್ಲಿ ಬರೆಯುವ ಪ್ರವೃತ್ತಿ ಬೆಳೆಸಬೇಕು. ನಂತರ ಇಂಗ್ಲೀಶ್ ಭಾಷೆಯನ್ನು ಸುಲಭವಾಗಿ ಕಲಿಯಬಲ್ಲರು ಎಂದು **ಚಿ.ವಿ. ಶ್ರೀನಾಥಶಾಸ್ತ್ರಿ** ಅವರು ಕನ್ನಡ ಮಾಧ್ಯಮ ಶಿಕ್ಷಣವನ್ನು ಎತ್ತಿಹಿಡಿದಿದ್ದಾರೆ. "ವಿದ್ಯಾಭ್ಯಾಸದ ಗುರಿ ವಿದ್ಯಾರ್ಥಿಗಳಿಗೆ ವಿಷಯ ಗಳನ್ನು ಮನದಟ್ಟು ಮಾಡಿಸಿ ಅದನ್ನು ಕುರಿತು ಚಿಂತಿಸುವ ಪ್ರವೃತ್ತಿಯನ್ನು ಉಂಟುಮಾಡುವುದು; ಚಿಕ್ಕಂದಿನಲ್ಲಿ ವಿದ್ಯಾರ್ಥಿಯ ಮಾತೃಭಾಷೆಯಲ್ಲಿ ಮಾತ್ರ ಸಾಧ್ಯ ಎಂಬ ಸತ್ಯವನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿಯೇ ಆಗಬೇಕು. ಅದೇ ನಿಜವಾದ ಶಿಕ್ಷಣ." ಎಂದಿದ್ದಾರೆ. **(ಚಿ.ವಿ. ಶ್ರೀನಿವಾಸ ಶಾಸ್ತ್ರಿ ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ, ನವಕರ್ನಾಟಕ ಪ್ರಕಾಶನ, ೨೦೦೬, ಪುಟ-೯)** ಪ್ರಾಥಮಿಕ ಹಂತದಲ್ಲಿ ಕನ್ನಡ, ಅನಂತರ ಇಂಗ್ಲೀಶ್ ಕಲಿತವರೇ ಮುಂದಿನ ತಮ್ಮ ಅಧ್ಯಯನಗಳಲ್ಲಿ ಅಧ್ಯಾಪನ, ಸಂಶೋಧನೆ ಹಾಗೂ ಇತರ ಕಾರ್ಯಕ್ಷೇತ್ರಗಳಲ್ಲಿ ಬುದ್ದಿವಂತರು, ಪ್ರಸಿದ್ಧರಾದವರು ಅಸಂಖ್ಯೆಯಲ್ಲಿದ್ದಾರೆ. ಅಲ್ಲದೆ ಬಹಳಷ್ಟು ಪ್ರಸಿದ್ಧ ಇಂಗ್ಲೀಶ್ ಪ್ರಾಧ್ಯಾಪಕರ ಪ್ರಾಥಮಿಕ ಶಿಕ್ಷಣ ಕನ್ನಡದಲ್ಲೇ ಆಗಿದೆ. ಆದ್ದರಿಂದಲೇ ಐದನೇ ತರಗತಿಯಿಂದ ಇಂಗ್ಲೀಶನ್ನು ಒಂದು ಭಾಷೆಯನ್ನಾಗಿ ಕಲಿಸಲುವ ವ್ಯವಸ್ಥೆ ಆಗಬೇಕಿದೆ. ಇಂಗ್ಲೀಶ್ ಕಲಿಕೆಯ, ಬಳಕೆಯ ಭಾಷೆ ಆಗಿರಬೇಕೆಂದಿದ್ದಾರೆ. ಕನ್ನಡದ ಜೊತೆಗೆ ಐದನೇ ತರಗತಿಯಿಂದ ಇಂಗ್ಲೀಶ್ ಚೆನ್ನಾಗಿ ಕಲಿಸಬೇಕೆನ್ನುವುದು ಸರಿಯಾದ ಮಾರ್ಗ ಎಂಬುದು ಇವರ ತಿರುಳು ಮತ್ತು ವಾದ. ಕರ್ನಾಟಕದಲ್ಲಿ ಎಸ್.ಎಸ್.ಎಲ್.ಸಿ ಅಥವಾ ಏಳನೇ ತರಗತಿಯವರೆಗಾದರೂ ಕಡ್ಡಾಯವಾಗಿ ಕನ್ನಡ ಮಾಧ್ಯಮವನ್ನು ನಿಗದಿಗೊಳಿಸಬೇಕೆಂದಿದ್ದಾರೆ. **(ಪುಟ-೧೪, ೧೫).**

ಕನ್ನಡದಲ್ಲಿ ಶಿಕ್ಷಣ ಪಡೆಯುವುದು ಕನ್ನಡಿಗರ ಹಕ್ಕು; ಕನ್ನಡದಲ್ಲಿ ಕಲಿಸುವುದು ಕರ್ನಾಟಕದಲ್ಲಿನ ಶಿಕ್ಷಣ ಸಂಸ್ಥೆಗಳ ಹಾಗೂ ಅಧ್ಯಾಪಕರ ಕರ್ತವ್ಯ. ಇದಕ್ಕೆ ಸೂಕ್ತವಾದ ಕಾಯ್ದೆಗಳನ್ನು ಜಾರಿಗೆ ತರಬೇಕು ಎಂದು ಕನ್ನಡ ಮಾಧ್ಯಮ ಕುರಿತು ರಘುನಾಥರು ತಮ್ಮ ಅಭಿಪ್ರಾಯಗಳನ್ನು ಇಲ್ಲಿ ತಿಳಿಸಿದ್ದಾರೆ. ಇಂಗ್ಲೀಶ್ ಭಾಷೆ ಒಂದು ಕೊಲೆಗಡುಕ ಭಾಷೆ, ಇದು ತಾನು ಹೊಕ್ಕ ದೇಶದ ಭಾಷೆಗಳನ್ನು ನಾಶ ಮಾಡುವ ಒಂದು ವಿಧವಾದ ವಿಷ ಅನಿಲವಿದ್ದಂತೆ ಎಂದು ಕೆಲವು ಸಾಮಾಜಿಕ ಭಾಷಾ ವಿಜ್ಞಾನಿಗಳು ಹೇಳಿದ್ದಾರೆ.

ಯಾವುದೇ ಭಾಷೆಯನ್ನು ಒಳಗಿನಿಂದಲೇ ವಿಸ್ಫೋಟಗೊಳಿಸಬಲ್ಲ ತನ್ನದೇ ಆದ ರಾಜಕೀಯ ಶಕ್ತಿಯನ್ನು ಇಂಗ್ಲೀಶ್ ಭಾಷೆ ಪಡೆದುಕೊಂಡಿದೆ. ಇದು ನಮ್ಮ ದೇಶದ ಅಧಿಕೃತ ಸಂಪರ್ಕ ಭಾಷೆ **(ಎನ್. ಎಸ್. ರಘುನಾಥ, ಲೇ: ಭಾರತದಲ್ಲಿ ಇಂಗ್ಲೀಶ್ ಭಾಷೆಯ ಸ್ಥಾನ ಈ ಶತಮಾನದ ಪ್ರಶ್ನೆ, ಪುಟ-೨೯)** ಇದು ಜಾಗತೀಕರಣದಿಂದಾಗಿ ವಿಶ್ವದ ವಾಣಿಜ್ಯ ಕ್ಷೇತ್ರದಲ್ಲಿ ಅನಿವಾರ್ಯದಿಂದ ಬೆಳೆಯುತ್ತಿರುವುದರ ಜೊತೆಗೆ ಸವಾಲಾಗುತ್ತಿದೆ. ಇದನ್ನು ನಾವು ಎದುರಿಸುವಲ್ಲಿ ನಮ್ಮ ಸಂಸ್ಕೃತಿ ಮತ್ತು ಭಾಷೆಗಳ ಅಳಿವು ಉಳಿವು ಇರುವುದು ಎಂದಿದ್ದಾರೆ.

ಮನುಷ್ಯ ಜಾಗತೀಕರಣದಿಂದಾಗಿ ವೈಜ್ಞಾನಿಕ, ವಾಣಿಜ್ಯ ಹಾಗೂ ತಾಂತ್ರಿಕ ಕ್ಷೇತ್ರಗಳಲ್ಲಿ ಇಂಗ್ಲೀಶ್‌ನ ವ್ಯಾಪ್ತಿ ವಿಸ್ತಾರವಾಗಿದ್ದುದರಿಂದ ಅದನ್ನು ಬಳಸುವ ಅಗತ್ಯವಿದೆ. ಆದರೆ ಅದನ್ನೇ ಸಂಪೂರ್ಣವಾಗಿ ಅವಲಂಬಿಸಿಕೊಂಡು ತನ್ನ ತನವನ್ನು ಕಳೆದುಕೊಳ್ಳುವುದರಲ್ಲಿ ಯಾವ ನ್ಯಾಯವಿದೆ? ಅಗತ್ಯತೆ ಎಷ್ಟಿದೆಯೋ; ಅಷ್ಟರಮಟ್ಟಿಗೆ ಉಪಯೋಗ ಮಾಡಿಕೊಂಡು ತನ್ನತನವನ್ನು ಉಳಿಸಿಕೊಳ್ಳಬೇಕು. ಆಗ ಮನುಷ್ಯನ/ವ್ಯಕ್ತಿಯ ಜಾಣತನ ಅಭಿವ್ಯಕ್ತವಾಗುತ್ತದೆ. ಆದರೆ ಇದು ಇತ್ತೀಚಿಗೆ ಮರೆಯಾಗುತ್ತಿದೆ. ಅನ್ಯರ ಭಾಷೆ ಹಾಗೂ ಸಂಸ್ಕೃತಿಗೆ ಮರುಳಾಗುತ್ತಿದ್ದೇವೆ. ಭಾಷೆಯ ಅಗಾಧ ಸಂಪತ್ತು ಅದರ ಮಹತ್ವವನ್ನು ಅರಿಯುತ್ತಿಲ್ಲ. ಭಾಷಿಕ ಸೌಂದರ್ಯದ ವ್ಯಾಮೋಹಕ್ಕೆ ಬಲಿಯಾಗುತ್ತಿದ್ದಾರೆಯೇ, ಹೊರತು ಉತ್ತಮ ಶಿಕ್ಷಣವನ್ನು ರೂಪಿಸುವಲ್ಲಿ ವಿಫಲರಾಗಿದ್ದಾರೆ. ನಮ್ಮ ಜವಾಬ್ದಾರಿಗಳು ಏನು ಎಂಬುದನ್ನು ಅರ್ಥೈಸಿ ಕೊಳ್ಳುವಲ್ಲಿ ಎಡವುತ್ತಿದ್ದಾರೆ. ಉತ್ತಮ ಶಿಕ್ಷಣ ವಿವಿಧ ವಿಷಯಗಳ ಸಾಮಾನ್ಯಜ್ಞಾನವನ್ನು ಬೆಳೆಸುವಂತೆ ನೆರವಾಗಬೇಕು ಎಂದು ಆವಲೋಕಿಸದೆ ಕೇವಲ ಉದ್ಯೋಗ, ಸಂಪಾದನೆಗೆ ಪ್ರಯೋಜನವಾದರೆ ಸಾಕು ಎನ್ನುವ ನಿಟ್ಟಿನಲ್ಲಿ ಇಂದಿನ ಶಿಕ್ಷಣವನ್ನು ಜನರು ನಿರೀಕ್ಷಿಸುತ್ತಿದ್ದಾರೆ.

ಮೊದಲನೆ ತರಗತಿಯಿಂದಲೇ ಇಂಗ್ಲೀಶ್ ಮಾಧ್ಯಮದಲ್ಲಿ ಕಲಿಸಿದರೆ, ಮಕ್ಕಳು ಮೊದಲಿನಿಂದಲೂ ಇಂಗ್ಲೀಶನ್ನು ಕಲಿಯುವಂತೆ ಪ್ರೇರೇಪಿಸುತ್ತಾರೆ. ಆದರೆ ಸೂಕ್ತ ಪರಿಸರವಿಲ್ಲದೆ ವಿದ್ಯಾರ್ಥಿಗಳು ಯಾವ ಭಾಷೆಯನ್ನು ಪೂರ್ಣವಾಗಿ ಕಲಿಯದೆ ಹಾಗೆಯೇ ಉಳಿಯುತ್ತಾರೆ. ಅಲ್ಲದೆ ಮಗು ತನ್ನ ಮೊದಲ ಭಾಷೆಯನ್ನು ಆರಂಭದಲ್ಲಿ ಕಲಿಯದಿದ್ದಲ್ಲಿ ಅದಕ್ಕೆ ಎರಡನೇ ಭಾಷೆಯನ್ನು ಕಲಿಯಲು ಸಾಧ್ಯವಾಗದೆ ಇರಬಹುದು. ಇದು ವೈಜ್ಞಾನಿಕ ರೀತಿಯಲ್ಲಿಯೂ ಸರಿಯಾದ ವಿಧಾನ ಎಂದು ವಿವರಿಸಿದ್ದಾರೆ. **(ಪುಟ-೪೦)**

**ಡಾ. ಕಾ.ವೆಂ. ಶ್ರೀನಿವಾಸ ಮೂರ್ತಿಯವರು** "ಮಾತೃಭಾಷಾ ಮಾಧ್ಯಮದ ಅನುಷ್ಠಾನ ವೈಜ್ಞಾನಿಕವಾದುದು ಮತ್ತು ಅಂತಹ ಮಾಧ್ಯಮದಲ್ಲಿ ಕಲಿಯುವುದು ಮಕ್ಕಳ ಸಂವಿಧಾನಾತ್ಮಕ ಹಕ್ಕು, ಮಾತೃಭಾಷಾ ಮಾಧ್ಯಮದ ವಿಚಾರ ಮೊದಲ ಆದ್ಯತೆಯಾಗಿದೆ" ಎನ್ನುತ್ತಾರೆ. **(ಡಾ. ಕಾ.ವೆಂ. ಶ್ರೀನಿವಾಸಮೂರ್ತಿ, ಕನ್ನಡ ಚಳುವಳಿ ಮತ್ತು ಚಿಂತನೆ, ಸಪ್ನಬುಕ್ ಹೌಸ್ ಬೆಂಗಳೂರು, ೨೦೦೬, ಪುಟ-೩೦)** ಆರ್ಥಿಕವಾಗಿ ಸಬಲರಾಗಿದ್ದವರು ಮತ್ತು ದುರ್ಬಲ ರಾಗಿರುವವರು. ಇಂಗ್ಲೀಶ್ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಎರಡು ಮಾಧ್ಯಮಗಳ ಪ್ರಶ್ನೆ ಸಮಾಜದಲ್ಲಿ ಅನಾರೋಗ್ಯಕರ ವಾತಾವರಣ ಅಸಮತೋಲನವನ್ನುಂಟು ಮಾಡುತ್ತದೆ.

ಪ್ರಾಥಮಿಕ ಹಾಗೂ ಖಾಸಗಿ ಶಾಲೆಗಳಲ್ಲಿ ಸಾರ್ವತ್ರಿಕಗೊಳಿಸಿ ಏಕರೂಪಿ ಶಿಕ್ಷಣವನ್ನು ಜಾರಿಗೊಳಿಸಬೇಕು. ಭಾರತದಲ್ಲಿ ಯಾವುದೇ ಭಾಷೆಯಲ್ಲಿ ಮಕ್ಕಳು ಶಿಕ್ಷಣದ ಮಾಧ್ಯಮ ವನ್ನಾಗಿಸಿಕೊಂಡು ಶಿಕ್ಷಣವನ್ನು ಪಡೆಯುವುದು ಸಂವಿಧಾನಾತ್ಮಕ ಹಕ್ಕಾಗಿರುತ್ತದೆ. ಪ್ರತಿ ರಾಜ್ಯಕ್ಕೆ ತನ್ನದೇ ಆದ ಸಂವಿಧಾನ ಮತ್ತು ಪರಮಾಧಿಕಾರವಿದೆ. ಸರ್ಕಾರಗಳಿಗೆ ಪ್ರತ್ಯೇಕವಾದ ಭಾಷಾ ನೀತಿ ಇರುವುದಿಲ್ಲ. ಮಾತೃಭಾಷಾ ಮಾಧ್ಯಮದ ಶಿಕ್ಷಣವು ಪ್ರತಿಯೊಬ್ಬ ಭಾರತೀಯನ ಹಕ್ಕು ಮತ್ತು ಅದನ್ನು ಪ್ರಶ್ನಿಸದೇ ಕಲ್ಪಿಸುವುದು ಯಾವುದೇ ರಾಜ್ಯ ಸರ್ಕಾರಗಳ ಕರ್ತವ್ಯ ಮಾತ್ರವಾಗಿರುತ್ತದೆ ಎಂದು ಲೇಖಕರು ಹೇಳಿರುವುದರಲ್ಲಿ ಸತ್ಯಾಂಶವೂ ಅಡಗಿದೆ. ಕರ್ನಾಟಕದಲ್ಲಿ ಕನ್ನಡೇತರ ಮಾತೃಭಾಷಾ ಮಾಧ್ಯಮದ ಶಾಲೆಗಳಲ್ಲಿ ಕನ್ನಡವನ್ನು ಒಂದು ಭಾಷೆಯನ್ನಾಗಿ ಕಲಿಯುವ ಅಗತ್ಯತೆಯಿದೆ. ಏಕೆಂದರೆ ಕನ್ನಡ ನಾಡಿನಲ್ಲಿ ಕನ್ನಡ ರಾಜ್ಯದ ಅಧಿಕೃತ ಭಾಷೆಯಾಗಿದೆ. ಯಾವುದೇ ಮಾತೃಭಾಷಾ ಮಾಧ್ಯಮದ ಮಕ್ಕಳು ಕನ್ನಡವನ್ನು ಕಲಿಯಲು ಸುಪ್ರೀಂಕೋರ್ಟನ ಒತ್ತಾಸೆಯೂ ಇದೆ, ಇದು ಅನಿವಾರ್ಯವೂ ಆಗಿರುವುದೆಂದು ಭಾಷಾ ತಜ್ಞರ ಅಭಿಪ್ರಾಯವಾಗಿದೆ. ಈ ಮೇಲೆ ತಿಳಿಸಿದಂತೆ ಕನ್ನಡೇತರ ಭಾಷಾ ಮಾಧ್ಯಮದ ಮಕ್ಕಳಿಗೆ ಒಂದನೇ ತರಗತಿಯಿಂದ ಎರಡನೇ ತರಗತಿವರೆಗೆ ಅವರ ಮಾತೃ ಭಾಷೆಯನ್ನು ಮೌಖಿಕವಾಗಿ, ಮೂರರಿಂದ ನಾಲ್ಕನೇ ತರಗತಿಯವರೆಗೆ ಮಾತೃಭಾಷೆಯನ್ನು ಕಡ್ಡಾಯವಾಗಿ ಬರಹ ಮೂಲಕ ಮತ್ತು ಭಾಷೆ ಒಂದನ್ನಾಗಿ ಕನ್ನಡವನ್ನು ಅಂದರೆ ಪ್ರಾದೇಶಿಕ ಭಾಷೆಯನ್ನಾಗಿ ಹಾಗೂ ಭಾಷೆ ಎರಡನ್ನು ಹಿಂದಿ ಅಥವಾ ಇಂಗ್ಲೀಶ್ ಭಾಷೆಯಲ್ಲಿ ಒಂದನ್ನು ಆಯ್ಕೆಯನ್ನಾಗಿ ನೀಡಲಾಗಿದೆ ಎಂದು ಚಂಪಾ ವರದಿಯಲ್ಲಿ ಸೂಚಿಸಲಾಗಿದೆ. ಆದರೆ ಈ ವರದಿಯಲ್ಲಿ ಕನ್ನಡೇತರ ವಿದ್ಯಾರ್ಥಿಗಳು ಭಾಷೆ ೧ ಹಾಗೂ ಭಾಷೆ ೨ರ ಪರೀಕ್ಷೆ ಐಚ್ಛಿಕ, ಭಾಷೆ ೧ರ ಕಲಿಕೆ ಕಡ್ಡಾಯವಾಗಿದ್ದು, ಭಾಷೆ ೨ರ ಕಲಿಕೆ ಐಚ್ಛಿಕವೆಂದು ನಿರೂಪಿಸಲಾಗಿದೆ.

ಆದರೆ ಈ ಭಾಷಾ ನೀತಿಯ ಕ್ರಮ ಸಮರ್ಪಕವಾಗದೇ ಹಾಗೆ ಉಳಿದಿರಲು ಸಾಧ್ಯವಿದೆ. ಏಕೆಂದರೆ ಮಾತೃಭಾಷೆ ಅಲ್ಲದವರಿಗೆ ಪ್ರಾದೇಶಿಕ ಭಾಷೆಯನ್ನು ವ್ಯವಹಾರ ಮತ್ತು ಸಂಪರ್ಕಕ್ಕೆ ಅನುಕೂಲವಾಗಲೆಂದು ಹಾಗೂ ಜಗತ್ತಿನ ವಿಷಯ ಜ್ಞಾನ ತಿಳುವಳಿಕೆಗಾಗಿ ಇಂಗ್ಲೀಶ್ ಹಾಗೂ ಮತ್ತಿತರ ಭಾಷೆಗಳನ್ನು ಕಲಿಯಲೆಂದೇ ಭಾಷಾ ನೀತಿಯನ್ನು ರೂಪಿಸಲಾಗಿರುತ್ತದೆ. ಆದರೆ ಪರೀಕ್ಷೆ ಕ್ರಮವನ್ನು ಐಚ್ಛಿಕ ಮಾಡಿದರೆ, ಈಗ ಕಲಿಯುವುದನ್ನು ನಿಲ್ಲಿಸಿ ಬಿಡಬಹುದು. ಇದರಿಂದ ಕಲಿಸುವ ಉದ್ದೇಶವೇ ಅರ್ಥವನ್ನು ಕಳೆದುಕೊಳ್ಳುತ್ತದೆ.

ಕಲಿಕಾ ಮಾಧ್ಯಮದಲ್ಲಿ ಇಂಗ್ಲೀಶ್‌ನ್ನು ಕಡ್ಡಾಯವಾಗಿ ಎರಡನೆ ಭಾಷೆಯ ಸ್ಥಾನದಲ್ಲಿಡಬೇಕು. ಅದು ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ಅನ್ಯಭಾಷೆಗಳ ಆಯ್ಕೆಯಲ್ಲಿ 'ಇಂಗ್ಲೀಶ'ನ್ನು ಐಚ್ಛಿಕವಾಗಿರಿಸಬೇಕು. ಇಂಗ್ಲೀಶನ್ನು ಆಯ್ಕೆಯಾಗಿರಿಸಬೇಕು. ಅದು ಕಡ್ಡಾಯವಾಗಿರಬಾರದು ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಜಗತ್ತಿನ ತಾಂತ್ರಿಕ ಆವಿಷ್ಕರಣದ ತೀವ್ರಗತಿಯ ಅಭಿವೃದ್ಧಿಯನ್ನು ಗಮನಿಸಿದರೆ ಪ್ರಸ್ತುತದಲ್ಲಿ ಇಂಗ್ಲೀಶನ ಬೇಡಿಕೆ ತೀವ್ರವಾಗಿರುವುದರಿಂದ ಇಂಗ್ಲೀಶನ್ನು ಎರಡನೆ ಭಾಷೆಯನ್ನಾಗಿ ಕಡ್ಡಾಯ ಮಾಡುವುದರಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡು ಬರುವುದಿಲ್ಲ ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಅಷ್ಟೇ ಅಲ್ಲದೆ, ಪ್ರಾಥಮಿಕ ಪೂರ್ವ ಶಿಕ್ಷಣದ ಎಲ್.ಕೆ.ಜಿ. ಮತ್ತು ಯು.ಕೆ.ಜಿ.ಗಳನ್ನು ಸರ್ಕಾರ ತನ್ನ ಹತೋಟಿಗೆ ತೆಗೆದುಕೊಳ್ಳಬೇಕು. ಪೋಷಕರು ಅನಿವಾರ್ಯವಾಗಿ ತಮ್ಮ ಮಕ್ಕಳನ್ನು ಈ ತರಗತಿಗಳಿಗೆ ಸೇರಿಸುತ್ತಾರೆ. ಇದು ಮಾಧ್ಯಮದಲ್ಲಿ ಗೊಂದಲವನ್ನುಂಟು ಮಾಡುತ್ತದೆ. ಸಾಮಾಜಿಕ ಹಾಗೂ ಭಾಷಿಕ ಅಸಮತೋಲನಗಳಿಗೂ ಮೂಲ ಕಾರಣ ವಾಗಿರುವುದರಿಂದ ಇಲ್ಲಿಯೂ ಮಾತೃಭಾಷಾ ಮಾಧ್ಯಮವನ್ನು ಜಾರಿಗೆ ತರಬೇಕು. ಸರ್ಕಾರಿ ಶಾಲೆಗಳಲ್ಲಿಯೂ ಸಹ ಈ ಪ್ರಾಥಮಿಕ ಪೂರ್ವ ಶಿಕ್ಷಣವನ್ನು ಅಳವಡಿಸಬೇಕೆನ್ನುವುದು ಇವರ ಅಭಿಮತವಾಗಿದೆ. ಈ ಕ್ರಮವನ್ನು ಸರಕಾರ ತಪ್ಪದೇ ಕಡ್ಡಾಯವಾಗಿ ಜಾರಿಗೆ ತರುವಂತಾದರೆ, ಪ್ರಾಥಮಿಕ ಕನ್ನಡ ಮಾಧ್ಯಮದ ಶಿಕ್ಷಣ ಭಾಷಿಕ ಹಾಗೂ ಶೈಕ್ಷಣಿಕ ಹಿನ್ನೆಲೆಯಲ್ಲಿ ಉತ್ತಮವಾದ ಫಲಿತಾಂಶವನ್ನು ನಿರೀಕ್ಷಿಸಲು ಸಾಧ್ಯವಾಗುತ್ತದೆ ಎಂದು ಹೇಳಬಹುದು.

ಸಾಮಾನ್ಯವಾಗಿ ಬಡವರ ಮಕ್ಕಳು ಕನ್ನಡ ಮಾಧ್ಯಮದ ಸರ್ಕಾರಿ ಶಾಲೆಗಳಿಗೆ ಮತ್ತು ಶ್ರೀಮಂತರ ಮಕ್ಕಳು ಇಂಗ್ಲೀಶ್ ಮಾಧ್ಯಮದ ಖಾಸಗಿ ಶಾಲೆಗಳಿಗೆ ಹೋಗುತ್ತಿದ್ದಾರೆ ಎನ್ನುವುದೇ ಈ ಭಾಷಾ ಶ್ರೇಣೀಕರಣ ವರ್ಗತಾರತಮ್ಯವನ್ನು ಉಂಟು ಮಾಡುತ್ತಿದೆ ಎಂದು ಹೇಳಬಹುದು. ಆದ್ದರಿಂದ ಪ್ರಾಥಮಿಕ ಹಂತದಲ್ಲಿ ಮಾತೃಭಾಷಾ/ಕನ್ನಡ ಮಾಧ್ಯಮದ ಶಿಕ್ಷಣವನ್ನು ಕಡ್ಡಾಯಗೊಳಿಸಿದಾಗ ಅಸಮತೋಲನಯನ್ನು ನಿವಾರಣೆಗೊಳಿಸಬಹುದು. ಇಂಗ್ಲೀಶ್ ಕಲಿಕೆ ಮತ್ತು ಸಾಮಾಜಿಕ ನ್ಯಾಯ, ಮೀಸಲಾತಿ ಹಾಗೂ ಸಂಪತ್ತಿನ ಸಮಾನ ಹಂಚಿಕೆಯಿಂದ ಮಾತ್ರ ಸಾಮಾಜಿಕ ನ್ಯಾಯ ಸಾಧ್ಯವಾಗುತ್ತದೆ ಎಂದು ಸೂಚಿಸಿದ್ದಾರೆ.

ಸರ್ಕಾರಿ ಪ್ರಾಥಮಿಕ ಶಿಕ್ಷಣವನ್ನು ಬಡವರು ಹೆಚ್ಚು ಆಯ್ಕೆ ಮಾಡಿಕೊಳ್ಳುತ್ತಾರೆ. ಶ್ರೀಮಂತರು ಇಂಗ್ಲೀಶ್ ಖಾಸಗಿ ಶಿಕ್ಷಣವನ್ನು, ಎನ್ನುವುದರಲ್ಲಿ ಸಾಮಾನ್ಯ ಬಡತನ ರೇಖೆಗಿಂತ ಕೆಳಗಿರುವವರು ಸರ್ಕಾರಿ ಶಾಲೆಗಳನ್ನು ಅನುಸರಿಸುತ್ತಾರೆ. ಆದರೆ ಸಾಮಾಜಿಕ ವರ್ಗದಲ್ಲಿ ಗುರುತಿಸಿಕೊಂಡಿರುವ ಬಡವರಲ್ಲಿ ಎಷ್ಟೋ ಜನರು ಇಂಗ್ಲೀಶ್ ಶಾಲೆಗಳಿಗೆ ಹೋಗುವುದನ್ನು ನಾವು ನೋಡಬಹುದು. ಆದರೆ ಸಾಮಾಜಿಕ ಪರಿಕಲ್ಪನೆ ಪ್ರಕಾರ ಬಡವ, ಶ್ರೀಮಂತ ಎಂಬ ವರ್ಗ ಭೇದಕ್ಕಿಂತ ಇಲ್ಲಿ ಮಾಧ್ಯಮ ಶಿಕ್ಷಣದ ಒಲವು ಮತ್ತು ಬೇಡಿಕೆಯ ಅಗತ್ಯತೆ ಹೆಚ್ಚಾಗಿದೆ. ಇಂಗ್ಲೀಶ್ ಭಾಷೆಯ ವ್ಯಾಮೋಹ ಮತ್ತು ಸಾಮಾಜಿಕ ಪ್ರತಿಷ್ಠೆ ಇದಕ್ಕೆ ಮೂಲ ಕಾರಣವಾಗಿದೆ. ಸರ್ಕಾರ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಕನ್ನಡ ಮಾಧ್ಯಮದ ಶಿಕ್ಷಣವನ್ನು ಕಡ್ಡಾಯಗೊಳಿಸಿದಾಗ ಮಾತ್ರ ಭಾಷಾ ತಾರತಮ್ಯ ತಡೆಗಟ್ಟಬಹುದು. ಖಾಸಗಿ ಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಅನುಷ್ಠಾನಗೊಳಿಸಲು ಸರ್ಕಾರ ಮುಂದಾಗಬೇಕು.

**ಟಿ.ಪಿ. ಕೈಲಾಸಂ** ಅವರು **'ಮಕ್ಕಳ ಸ್ಕೂಲು ಮನೇಲಲ್ವೇ'** ಎಂದಿರುವುದು ನಿಜಕ್ಕೂ ತುಂಬಾ ಅರ್ಥಗರ್ಭಿತವಾಗಿದೆ. ಮಗು ಮನೆಯಲ್ಲಿ ಬೆಳೆಯುವಾಗ ತನ್ನ ಪರಿಸರ,

ಸಂಸ್ಕೃತಿಯನ್ನು ರೂಢಿಸಿಕೊಂಡು ಬಳಸಿಕೊಳ್ಳುತ್ತಾ ಹೋಗುತ್ತದೆ. ಆಗ ಮಗು ಅದನ್ನು ಗ್ರಹಿಸುವುದು, ಅರ್ಥೈಸಿಕೊಳ್ಳುವುದು ಮತ್ತು ಅಭಿವ್ಯಕ್ತಿಗೊಳಿಸುವುದು ಸಹ ತನ್ನ ಮಾತೃಭಾಷೆಯಲ್ಲಿಯೇ ಹೊರತು, ಅನ್ಯ ಭಾಷೆಯಲ್ಲಿ ಅಲ್ಲ. ನಂತರ ಮುಂದೆ ತನ್ನ ಸೃಜನಶೀಲತೆಯನ್ನು ಬೆಳೆಸಿಕೊಳ್ಳುವುದಕ್ಕೂ ಸಹ ಮಾತೃಭಾಷೆಯೇ ಮುಖ್ಯ ಸಾಧನವಾಗಿರುತ್ತದೆ. ಮಗುವಿನ ಕಲ್ಪನೆಗಳು ರೂಪುಗೊಳ್ಳುವುದು ಮಾತೃಭಾಷೆಯಲ್ಲಿ. ಮಾತೃಭಾಷೆ ಮಗುವಿನ ಅಭಿವ್ಯಕ್ತಿ ಸಾಮರ್ಥ್ಯವನ್ನು ಮೊನಚುಗೊಳಿಸುತ್ತದೆ ಮತ್ತು ವೀಕ್ಷಣಾ ಸಾಮರ್ಥ್ಯವನ್ನು ಬೆಳೆಸುತ್ತದೆ. ಅದರಂತೆ –೪).

**'ಗೌರಿಲಂಕೇಶ್'** ಅವರು ಇಂಗ್ಲೀಶ್ ಭಾಷೆಯ ಕಲಿಕೆಯನ್ನು ಕುರಿತು ತಮ್ಮ ವಿಚಾರಗಳನ್ನು ವ್ಯಕ್ತಪಡಿಸುವಾಗ ಕೆ. ಲಕ್ಷ್ಮಣರಾವ್ ಹಾಗೂ ಸದಾಶಿವ ಶೆಣೈ ಅವರ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ ಈ ಇಂಗ್ಲೀಶ್ ಕಲಿಕೆಯ ಚರ್ಚೆ ದಲಿತ–ಹಿಂದುಳಿದ, ನಗರ–ಗ್ರಾಮೀಣ, ಕನ್ನಡ–ಇಂಗ್ಲಿಶ್, ಮೇಲ್ವರ್ಗ–ಕೆಳವರ್ಗದ ಹಿನ್ನೆಲೆಯಲ್ಲಿ ತಾರತಮ್ಯ ರೂಪಗೊಳ್ಳುತ್ತಿದೆ. ಆದರೆ ಇಲ್ಲಿ ಮೊದಲು ಕನ್ನಡಿಗರು ನಾವು ನಮ್ಮ ಸಂಸ್ಕೃತಿ, ಭಾಷೆಯ ಬಾಂಧವ್ಯವನ್ನು ಅರಿತುಕೊಳ್ಳಬೇಕು. ನಮ್ಮ ಆತ್ಮಗೌರವವನ್ನು ಅನ್ನ ಭಾಷೆ, ಸಂಸ್ಕೃತಿಯ ಮೇಲೆ ಅಡ ಇಟ್ಟಿರುವುದರಿಂದ ಖಾಸಗೀಕರಣ, ಜಾಗತೀಕರಣ ಮಾರುಕಟ್ಟೆಗಳು ಬೇಕೆಂದು ಹಪಹಪಿಸುತ್ತಿದ್ದೇವೆ. ಇಂಗ್ಲೀಶ್ ಇಲ್ಲದಿದ್ದರೆ ನಮಗೆ ಭವಿಷ್ಯವೇ ಇಲ್ಲವೆಂದು ಕೊರಗುತ್ತಿದ್ದೇವೆ. ಇಂಗ್ಲೀಶನ್ನು ಕಲಿಯೋಣ, ಆದರೆ ನಮ್ಮ ಸಮಾಜದ ಎಲ್ಲಾ ಅಂಗಗಳನ್ನು ಕನ್ನಡದಲ್ಲೇ ರೂಪಿಸಿಕೊಳ್ಳೋಣ ಎಂದು ಯಾರೂ ಯೋಚಿಸುತ್ತಿಲ್ಲ.

ಇಲ್ಲಿ ಇಂಗ್ಲೀಶ್ ಕಲಿಕೆ ಯಾವ ತರಗತಿಯಿಂದ ಎಂಬ ಪ್ರಶ್ನೆಗಿಂತ ಇಂಗ್ಲೀಶ್ ಕಲಿಕೆ ಹೇಗಿರಬೇಕು ಎಂಬುದು ಮುಖ್ಯವಾಗಿದೆ ಎನ್ನುತ್ತಾ ಲಂಕೇಶ್, ಅನಂತಮೂರ್ತಿ, ಚಂಪಾ ಸೇರಿದಂತೆ ಅನೇಕರು ಓದಿದ್ದು ಕನ್ನಡ ಮಾಧ್ಯಮದಲ್ಲೇ. ಆದರೆ ಇಂಗ್ಲೀಶ್ ಪ್ರಾಧ್ಯಾಪಕರಾಗಲಿಲ್ಲವೇ? ಅವರೆಲ್ಲ ಮೊದಲನೆ ತರಗತಿಯಿಂದ ಇಂಗ್ಲಿಶ್ ಕಲಿತದ್ದಲ್ಲ. ಆರ್ಥಿಕ–ಸಾಮಾಜಿಕ ಬೌದ್ಧಿಕ ವಲಯಗಳನ್ನು ನಾವು ಕನ್ನಡದಿಂದಲೇ ರೂಪಿಸುವಂತಾಗಬೇಕು. ಐದನೇ ತರಗತಿಯಿಂದ ಇಂಗ್ಲೀಶನ್ನು ಸರಿಯಾಗಿ ಹೇಳಿಕೊಡುವ ವ್ಯವಸ್ಥೆ ಜಾರಿಗೆ ಬರಬೇಕೆಂಬ ಅಭಿಪ್ರಾಯಗಳನ್ನು ಸೂಚಿಸುತ್ತಾರೆ.

ಮಗುವಿನ ಮೊದಲ ಶಿಕ್ಷಣ ಅದರ ಮಾತೃಭಾಷೆಯಿಂದಲೇ ನೆರವೇರುವುದರಿಂದ ಸಾಮಾಜಿಕ, ವೈಜ್ಞಾನಿಕ ಹಾಗೂ ಶೈಕ್ಷಣಿಕ ದೃಷ್ಠಿಯಿಂದಾಗಿ ಮಗುವಿನ ವ್ಯಕ್ತಿತ್ವ ವಿಕಾಸಕ್ಕೆ ದಾರಿಮಾಡಿಕೊಟ್ಟಂತಾಗುತ್ತದೆ. ಮಗುವಿನ ಬೌದ್ಧಿಕ ಬೆಳವಣಿಗೆಗೆ ಮಾತೃಭಾಷೆ ಅತ್ಯಗತ್ಯ. ಅದರಿಂದ ಭಾವಾತ್ಮಕತೆ ಸ್ಥಿರಗೊಳ್ಳುತ್ತದೆ. ಸ್ಥಿರವಾದ ಆಲೋಚನೆ, ಸ್ಪಷ್ಟವಾದ ಭಾಷಾ ಬಳಕೆ, ಲಭ್ಯವಾಗುತ್ತದೆ. ಪೂರ್ಣವಾದ ಅರಿವನ್ನು ಅನ್ಯಭಾಷೆಯಿಂದ ಪಡೆಯಲು ಅಸಾಧ್ಯ.

ಮಾತೃಭಾಷೆಯಲ್ಲಿ ಮಕ್ಕಳು ಬಹುಬೇಗನೆ ಕಲಿಯುತ್ತಾರೆ. ಮಾತೃಭಾಷಾ ಬೋಧನೆಯಿಂದ ಕಲಿಕಾ ಕೌಶಲ್ಯವನ್ನು ಬಲಗೊಳಿಸಬಹುದು. ಇದರಿಂದ ಶಿಕ್ಷಣದ ಸಾರ್ಥಕತೆ ಸಾಧ್ಯ. ಸಾಮಾಜಿಕ, ಆರ್ಥಿಕ, ರಾಜಿಕೀಯ ಪ್ರಗತಿ ಸಾಂಸ್ಕೃತಿಕ ವರ್ಗದಲ್ಲಿ ಹೊಂದಾಣಿಕೆ ಒದಗುತ್ತದೆ. ರಾಜ್ಯ/ರಾಷ್ಟ್ರದ ಐಕ್ಯತೆ ಪ್ರಥಮ ಭಾಷೆಯಿಂದ ಸಿದ್ಧಿಸುವುದು. ಮಗುವಿನ ಸಾಮಾಜಿಕ ಬೆಳವಣಿಗೆಗೆ ಮಾತೃಭಾಷೆ ಹೆಚ್ಚು ಸಹಕಾರಿಯಾಗುವುದು. ಸರ್ಕಾರ ಹಾಗೂ ಪ್ರಜೆಗಳ ನಡುವೆ ಸೌಹಾರ್ದತೆಯನ್ನು ಕಾಪಾಡಬಹುದು. ಆಡಳಿತ ಕ್ಷೇತ್ರಗಳಲ್ಲಿ ಮಾತೃಭಾಷೆಯನ್ನು ಬಳಸುವುದರಿಂದ ಐಕ್ಯತೆ, ಸೌಹಾರ್ದತೆಯನ್ನು ಕಾಪಾಡಬಹುದಲ್ಲದೆ ದೇಶದ ಅನಕ್ಷರತೆಯನ್ನು ತಡೆಗಟ್ಟಬಹುದು. ಒಂದು ನಾಡಿನ ಬಹುಸಂಖ್ಯಾತರ ಭಾಷೆ, ಸಮಾಜದ ಸಾರ್ವತ್ರಿಕರ ಸಂವಹನ ಭಾಷೆ ಇಲ್ಲವೆ ಒಂದು ದೇಶದ ಸ್ವಾಭಿಮಾನದ ಸಾಂಸ್ಕೃತಿಕ ಭಾಷೆಯೇ ಮಾತೃಭಾಷೆ. ಈ ದೃಷ್ಟಿಯಿಂದಲೇ "ಕನ್ನಡ ಮುಕ್ಕೋಟಿ ಕನ್ನಡಿಗರ ಮಾತೃಭಾಷೆ, ಕರ್ನಾಟಕ ರಾಜ್ಯದ 'ರಾಜ್ಯ ಭಾಷೆ,' ಕನ್ನಡ ನಾಡಿನ 'ಜನ ಭಾಷೆ.' ಕನ್ನಡ ನಾಡಿನ ಅಭ್ಯುದಯಕ್ಕೆ ಶಿಕ್ಷಣದ ಔನ್ನತ್ಯಕ್ಕೆ 'ಕನ್ನಡ' ಬೋಧನಾ ಮಾಧ್ಯಮವಾಗಬೇಕು." **(ಕನ್ನಡ ಭಾಷಾಲೋಚನ, ಲೇ:ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ, ಪುಟ–೭೬)**

**ಎನ್.ಎಸ್. ರಘುನಾಥ** ಅವರು ಪ್ರಾಥಮಿಕ ಶಿಕ್ಷಣ ಮಾಧ್ಯಮ ಕುರಿತು ಕೆಲವೊಂದು ವಿಚಾರಗಳನ್ನು ಹೀಗೆ ವಿವರಿಸಿದ್ದಾರೆ. ಮಗುವಿನ ಬುದ್ಧಿಶಕ್ತಿ, ವೈಚಾರಿಕತೆ ಯಾವ ದೆಸೆಯಲ್ಲಿ ಬೆಳೆಯುತ್ತದೆಯೋ ಆ ದಿಸೆಯಲ್ಲಿ ಮಗುವಿನ ಪದ ಶಕ್ತಿ, ವಾಕ್ಯ ರಚನಾಶಕ್ತಿಗಳು ಬೆಳೆಯುತ್ತವೆ. ಬುದ್ಧಿಶಕ್ತಿ ಮತ್ತು ವೈಚಾರಿಕತೆ ಬೆಳೆಯುವುದು ಮನೆಯ ಭಾಷೆಯಲ್ಲಿ. ಗ್ರಹಿಕೆ ಮತ್ತು ಅಭಿವ್ಯಕ್ತಿಯ ಸಂವೇದನೆಗಳು ಮೊದಲ ಭಾಷೆಯಲ್ಲಿ ಪೂರ್ಣವಾಗಿ ಚೇತನಗೊಂಡ ಮೇಲೆಯೇ ಎರಡನೇ ಅಥವಾ ಮೂರನೇ ಭಾಷೆಯನ್ನು ಕಲಿಯಲು ಸುಲಭವಾಗುತ್ತದೆ. ಈ ಕಾರಣ ದಿಂದಲೇ ರಾಷ್ಟ್ರೀಯ ಶಿಕ್ಷಣ ತರಬೇತಿ ಮತ್ತು ಸಂಶೋಧನಾ ಪರಿಷತ್ತು (ಎನ್.ಸಿ.ಆರ್.ಟಿ) ಇಂಗ್ಲೀಶ್ ಮಾಧ್ಯಮವನ್ನು ಅಥವಾ ಅದರ ಬಳಕೆಯನ್ನು ಶಾಲಾ ಆರಂಭದಲ್ಲಿ ಎಂದೂ ಶಿಫಾರಸ್ಸು ಮಾಡಿಲ್ಲ. ಇನ್ನು ೨೦೦೫ನೇ ವರ್ಷದಲ್ಲಿ ತಯಾರಾಗಿರುವ ಪಠ್ಯಕ್ರಮದ ಕರಡು ಪ್ರತಿಯಲ್ಲಿ "ಸಾರ್ವಜನಿಕ ಒತ್ತಡಕ್ಕೆ ಮಣಿದು ಕೆಲವು ಅಜಂಡಗಳು, ರಾಜ್ಯಭಾಷಾ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶ್‌ನ್ನು ಕಲಿಸಲು ಆರಂಭಿಸಿವೆ. ಇದಕ್ಕೆ ಸ್ಥಿತಿವಂತರು ಪೋಷಕರೂ ಕೂಡ ಇಂಗ್ಲೀಶ್ ಮಾಧ್ಯಮಕ್ಕೆ ತಮ್ಮ ಮಕ್ಕಳನ್ನು ಕಳುಹಿಸುತ್ತಿದ್ದಾರೆ. ಆದರೆ ಇದು ಉಚಿತವೇ. ಬಹಳ ಮಕ್ಕಳು ಮೂರನೇ ತರಗತಿಯಲ್ಲಿಯೂ ತಮ್ಮ ಮಾತೃಭಾಷೆಯಲ್ಲಿ ಓದುವುದು ಬರೆಯುವುದನ್ನು ಕಲಿತಿರುವುದಿಲ್ಲ. ಇದನ್ನು ಉತ್ತಮ ಪಡಿಸಲು ಶಾಲೆಗಳಲ್ಲಿ ಮಾತೃಭಾಷಾ ಮಾಧ್ಯಮ ಶಿಕ್ಷಣವನ್ನು ಅಳವಡಿಸಬೇಕು. ಇಂಗ್ಲೀಶನ್ನು ನಾಲ್ಕನೇ ತರಗತಿಯಿಂದ ಪರಿಣಾಮಕಾರಿಯಾಗಿ ಕಲಿಯುವಂತೆ ಶಾಲೆಗಳಲ್ಲಿ ಶಿಕ್ಷಕರನ್ನು ಸಜ್ಜುಗೊಳಿಸಬೇಕು. ಬಿ.ಇಡಿ ಹಾಗೂ ಡಿ.ಇಡಿ ಶಿಕ್ಷಣವನ್ನು ಪಡೆದಂಥ ವಿದ್ಯಾರ್ಥಿಗಳು, ಕನ್ನಡ ಮತ್ತು ಸಮಾಜ

ವಿಜ್ಞಾನಗಳಲ್ಲಿ ಪದವಿಗಳನ್ನು ಪಡೆದಿರುವುದರಿಂದ ಅವರಿಗೆ, ಅಂಥ ಶಿಕ್ಷಕರಿಗೆ ಇಂಗ್ಲೀಶ್ ಕಲಿಸುವ ವ್ಯವಸ್ಥೆ ನಡೆಯುತ್ತದೆ. ಇಂಥ ಪರಿಸ್ಥಿತಿಯಲ್ಲಿ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಸುವುದು ಎಷ್ಟರಮಟ್ಟಿಗೆ ಅದು ಪರಿಣಾಮಕಾರಿಯಾಗಬಹುದು ಎಂಬುದರ ಬಗ್ಗೆ ಗಂಭೀರವಾಗಿ ಆಲೋಚಿಸಬೇಕಾಗಿದೆ ಎಂದು ರಘುನಾಥವರು ಹೇಳಿರುವುದು ಸೂಕ್ತ ವಿಚಾರವೆನಿಸುತ್ತದೆ.

ಅಗ್ನಿ ಪತ್ರಿಕೆಯ ಸಂಪಾದಕರಾದ **'ಶ್ರೀಧರ್'** ಅವರು ಭಾಷೆಯ ಉನ್ನತಿಗೆ ಶಿಕ್ಷಣ ಸಂಸ್ಥೆಗಳು ಪ್ರಮುಖ ಪಾತ್ರವಹಿಸಿವೆ. ಆದರೆ ಸಂಸ್ಕೃತಿಯ ದಾಳಿಯಿಂದಾಗಿ ಎಲ್ಲವೂ ಏರುಪೇರಾಗಿದೆ ಎಂದು ಹೇಳುತ್ತಾರೆ. ಪ್ರಸ್ತುತ ಕನ್ನಡದ ಸ್ಥಿತಿ ನಗರ ವಲಯಗಳಲ್ಲಿ ಯಾವ ರೂಪ ಪಡೆದಿದೆ ಎನ್ನುವುದನ್ನು ಇಲ್ಲಿ ವಿವರಿಸಿದ್ದಾರೆ. ಗ್ರಾಮೀಣ ಮಾದ್ಯಮ ವರ್ಗದವರು ಸಹ ಇಂಗ್ಲೀಶ್ ಕಲಿಕೆಗೆ ಮುಗಿಬೀಳುತ್ತಿದ್ದಾರೆ. ಬೆಂಗಳೂರಿನ ಹಲವು ಆಂಗ್ಲ ಶಾಲೆಗಳಲ್ಲಿ ಕನ್ನಡ ಮಾತನಾಡಿದರೇ ಮಕ್ಕಳಿಗೆ ದಂಡ ಹಾಕುವ ಸ್ಥಿತಿ ಬಂದಿದೆ. ಇನ್ನು ಈ ಮಕ್ಕಳ ಪೋಷಕರಿಗೂ ಇಂಗ್ಲೀಶ್ ಬರುತ್ತಿದ್ದರೆ, ಕನ್ನಡದ ಸ್ಥಿತಿ ಮುಗಿದೇ ಹೋಯಿತು. ಭಾಷೆಯ ಅವನತಿ ಇಲ್ಲಿಂದಲೇ ಪ್ರಾರಂಭವಾಗುತ್ತದೆ. ಮಕ್ಕಳು ಇದೇ ರೀತಿ ಮುಂದುವರೆದಾಗ ಕನ್ನಡದ ಸ್ಥಿತಿ ಏನಾಗಿರಬೇಡ ಅದು ಕಲ್ಪನೆಗೂ ನಿಲುಕುವುದಿಲ್ಲ. ಆದರೆ ಇದೇ ವಿಚಾರವನ್ನು ತೆಲುಗು, ಮರಾಠಿ, ಮಲಯಾಳಿ, ತಮಿಳು ಭಾಷೆಗಳಿಗೆ ಹೋಲಿಸಿದಾಗ ಅವರು ನಮ್ಮ ನಾಡಿಗೆ ಬಂದಾಗಲೂ ತಮ್ಮ ಭಾಷೆಯಲ್ಲೇ ಮಾತನಾಡುತ್ತಾರೆ.

ಕನ್ನಡದ ಉಳಿವಿಗಾಗಿ ಏನು ಮಾಡಬೇಕೆನ್ನವುದು ಭಾಷಾಭಿಮಾನಿಗಳಿಗೆ ಇಂದಿಗೂ ದೊಡ್ಡ ಚಿಂತನೆಯಾಗಿಯೇ ಉಳಿದಿದೆ. ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮದ ಬೋಧನೆ ಕಡ್ಡಾಯವಾಗಬೇಕು. ಕನ್ನಡವನ್ನು ನಿಂದಿಸುವ ಶಾಲೆಗಳ ವಿರುದ್ಧ ಕಠಿಣ ಕ್ರಮ ವಿಧಿಸಬೇಕು. ಅನ್ಯ ಭಾಷೆಗಳ ಮೇಲಿನ ಅಂದಾಭಿಮಾನವನ್ನು ಬಿಟ್ಟು ಎಲ್ಲೆಡೆ ಕನ್ನಡವನ್ನು ಬಳಸಬೇಕು. ಭಾಷೆಯ ಉಳಿವಿನ ಜೊತೆ ಜೊತೆಗೆ ಸ್ವಾಭಿಮಾನವನ್ನು ಮೈಗೂಡಿಸಿಕೊಂಡಲ್ಲಿ ಮಾತ್ರ ಕನ್ನಡ ಜ್ಯೋತಿ ಬೆಳಗಲು ಸಾಧ್ಯ ಎಂದಿದ್ದಾರೆ.

**'ಚಂಪಾ'**ರವರು ಹೇಳುವಂತೆ ಕನ್ನಡ ಭಾಷಾ ಮಾಧ್ಯಮದ ನೀತಿಗೆ ಕನ್ನಡೇತರರಿಗಿಂತ ಕನ್ನಡಿಗರಿಂದಲೇ ಕನ್ನಡಕ್ಕೆ ಕುತ್ತು ಒದಗಿ ಬರುತ್ತಿದೆ. ಶಿಕ್ಷಣ ಸಚಿವರು ತಮ್ಮ ನಿಲುವನ್ನು ತಳೆದು ಸದ್ಯ ಚಾಲ್ತಿಯಲ್ಲಿರುವ ನೀತಿಯನ್ನು ಅನುಷ್ಠಾನಕ್ಕೆ ತಂದರೆ ರಾಜ್ಯದಲ್ಲಿ ಒಂದೂ ಇಂಗ್ಲೀಶ್ ಮಾಧ್ಯಮ ಶಾಲೆಗಳು ಇಲ್ಲವಾಗುತ್ತವೆ. ಪ್ರಾಥಮಿಕ ಶಿಕ್ಷಣ ಮಗುವಿನ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯೇ ಕಡ್ಡಾಯ ಬೋಧನಾ ಮಾಧ್ಯಮವಾಗಿರಬೇಕೆಂಬುದು ಕೋರ್ಟಿನ ಆದೇಶ. ಇದು ಶಿಕ್ಷಣ ಮನ್ನಣೆಗಳಿಸಿರುವ ನೀತಿಯೂ ಆಗಿದೆ. ತನ್ನ ಮಾತೃಭಾಷೆಯ ಮೂಲಕವೇ ಜಗತ್ತಿನ ಅರಿವಿಗೆ ತನ್ನನ್ನು ತೆರೆದುಕೊಳ್ಳುವುದು ಮಗುವಿನ ಹಕ್ಕು. ಕನ್ನಡ ಈ ನೆಲದ ಮಕ್ಕಳ ಮಾತೃಭಾಷೆ, ಕರ್ನಾಟಕದ ಸ್ಪಷ್ಟವಾದ ಗುರಿ. ಸಮಾನ ಶಿಕ್ಷಣ ನೀತಿ ಅನುಷ್ಠಾನಗೊಳ್ಳಬೇಕಾಗಿದೆ ಎಂಬುದನ್ನೇ ಒತ್ತಿ ಹೇಳುತ್ತಾರೆ.

ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಬೇಡ ಎನ್ನುವವರ ಚರ್ಚೆಯ ಗುಂಪಿನಲ್ಲಿ **ಭ.ಕೃಷ್ಣಮೂರ್ತಿ**ಯವರೂ ಒಬ್ಬರು. ಇವರ ಪ್ರಕಾರ "ಇಂಗ್ಲೀಶನ್ನು ಕಲಿಯುವ ಅರ್ಹತೆ ಇರುವವರಿಗೆಲ್ಲ ಅದನ್ನು ಕಲಿಸೋಣ. ಆದರೆ ಪ್ರಾದೇಶಿಕ ಭಾಷೆಗಳಲ್ಲಿ ಭದ್ರವಾದ ಅಡಿಪಾಯ ಬಿದ್ದನಂತರವೇ ಇಂಗ್ಲೀಶ್ ಕಲಿಕೆಯು ಪ್ರಾರಂಭವಾಗಬೇಕು. ಏಕೆಂದರೆ ತನ್ನ ಭಾಷೆಯನ್ನು ಸಲೀಸಾಗಿ ಉಪಯೋಗಿಸಲಾರದ ಯಾವುದೇ ಜನ ಸಮುದಾಯವೂ ಇನ್ನೊಂದು ಭಾಷೆಯನ್ನು ಸಮರ್ಥವಾಗಿ ಉಪಯೋಗಿಸಲಾರರು." **(ಭ. ಕೃಷ್ಣಮೂರ್ತಿ, ಲೇ: ಪ್ರಾದೇಶಿಕ ಭಾಷೆಗಳು ಅಥವಾ ಇಂಗ್ಲೀಶ್ ಉನ್ನತ ಶಿಕ್ಷಣ ಮಾಧ್ಯಮವಾಗಿ, ಪುಟ-೧೭).**

ಶಾಲೆಗಳಲ್ಲಿ ದೇಶ ಭಾಷೆಗಳ ಶಿಕ್ಷಣವನ್ನು ಬಹಳ ಚೆನ್ನಾಗಿ ಕೊಡಬೇಕು. ಹಾಗೆ ಮಾಡದೆ ಹೋದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ನಡೆಸುವ ಎಲ್ಲಾ ಪ್ರಯತ್ನಗಳೂ ವಿಫಲವಾಗುತ್ತವೆ. ಮಾತೃ ಭಾಷಾ ಮಾಧಮ ಕುರಿತಾಗಿ ೧೯೪೮ರಲ್ಲಿ ಸ್ಥಾಪಿತವಾದ ಶಿಕ್ಷಣ ಆಯೋಗದ ವರದಿಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಉನ್ನತ ಶಿಕ್ಷಣದ ಹಂತದಲ್ಲಿ ಇಂಗ್ಲೀಶನ್ನು ತೆಗೆದು ಹಾಕಿ ಅದರ ಜಾಗದಲ್ಲಿ ಯಾವುದಾದರೊಂದು ಭಾರತೀಯ ಭಾಷೆಯನ್ನು ಶಿಕ್ಷಣದ ಮಾಧ್ಯಮವಾಗಿ ಜಾರಿಗೆ ತರಬೇಕು ಎಂದು ವಿಶ್ಲೇಷಿಸುತ್ತಾರೆ.

ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಎಲ್ಲಾ ಹಂತಗಳಲ್ಲಿ ಕಡ್ಡಾಯವಾಗಿ ಜಾರಿಗೆ ತರಬೇಕು. ವೃತ್ತಿಪರ ಪದವಿಗಳೂ ಸೇರಿದಂತೆ ಶಿಕ್ಷಣದ ಎಲ್ಲಾ ಹಂತಗಳಲ್ಲಿಯೂ ಪ್ರಾದೇಶಿಕ ಭಾಷೆಯನ್ನು ಕಡ್ಡಾಯವಾಗಿ ಶಿಕ್ಷಣ ಮಾಧ್ಯಮವಾಗಿ ಮಾಡುವುದು. ಅದರ ಜೊತೆಗೆ ವಿದ್ಯಾರ್ಥಿಯು ಶಿಕ್ಷಣದಲ್ಲಿ ಮೇಲಿನ ತರಗತಿಗಳಿಗೆ ಹೋದಂತೆಲ್ಲಾ ಇಂಗ್ಲೀಶಿನ ಓದು ಬರಹದ ತಿಳುವಳಿಕೆಯನ್ನು ಹೆಚ್ಚಿಸಬಹುದು ಎಂದಿದ್ದಾರೆ.

'ಕನ್ನಡ ಮಾಧ್ಯಮ' ಕುರಿತು ನಡೆದ ವಿಚಾರ ಸಂಕಿರಣದಲ್ಲಿ ಅನೇಕರು ಮಾತೃಭಾಷಾ ಶಿಕ್ಷಣ ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಇದರ ಮೂಲಕ ಎಲ್ಲರ ವಿಚಾರ ಧಾರೆಗಳು ಒಂದೇಯಾಗಿದ್ದರೂ ಹೇಳುವ ವಿಧಾನಗಳು, ಅರ್ಥೈಸುವ ವಿಚಾರಗಳು ಭಿನ್ನವಾಗಿವೆ. ಅದರಲ್ಲಿ ಮುಖ್ಯವಾಗಿ **ಜಿ. ನಾರಾಯಣ, ಪಿಎಸ್.ಎಸ್. ಹಿರೇಮಠ, ಪಿ.ಎಸ್. ಶಂಕರ್, ಬೆಸಗರಹಳ್ಳಿ ರಾಮಣ್ಣ** ಇವರೆಲ್ಲರೂ ಮಾತೃ ಭಾಷಾ ಶಿಕ್ಷಣಕ್ಕೆ ಪ್ರಾಧಾನ್ಯತೆ ಕಲ್ಪಿಸಿದ್ದಾರೆ. ಜಿ.ನಾರಾಯಣ ಅವರು ಪ್ರಾಥಮಿಕದ ಏಳನೇ ತರಗತಿಯವರೆಗೆ ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕು. ಇಂಗ್ಲೀಶ್, ಹಿಂದಿ ಭಾಷೆಗಳನ್ನು ಕಲಿಸಲಿ. ಆದರೆ ಉಳಿದ ವಿಷಯಗಳು ಕನ್ನಡ ಮಾಧ್ಯಮದಲ್ಲಿ ಇರಬೇಕು. ಉನ್ನತ ಹಂತದ ಶಿಕ್ಷಣದಲ್ಲಿ ವಿಜ್ಞಾನ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿಯೇ ಬೋಧನೆ ಮಾಡಬೇಕು. ಪಠ್ಯಗಳು ಕನ್ನಡದಲ್ಲಿಯೇ ಮುದ್ರಣಗೊಳ್ಳಬೇಕು ಎನ್ನುವುದನ್ನು **ಯು.ಆರ್. ರಾವ್** ಅವರೂ ಒಪ್ಪುತ್ತಾರೆ. **ಪಿ. ಎಸ್. ಶಂಕರ್** ಅವರು ಶಿಕ್ಷಣದ ಭಾಷಾ ನೀತಿ ಕುರಿತು ವಿವಿಧ ರಾಜ್ಯಗಳ ಭಾಷಾ ನೀತಿ, ಅಲ್ಲಿಯ ರಾಜಕೀಯ ಪ್ರಭುತ್ವಗಳ ಬೆಂಬಲದ ಸಹಾಯವಿದೆ. ನಮ್ಮ ರಾಜ್ಯಕ್ಕೂ ಭಾಷಾ ನೀತಿಯ ಅನ್ವಯಕ್ಕೆ ರಾಜಕೀಯ ಇಚ್ಛಾಶಕ್ತಿಯ ಅಗತ್ಯತೆ ಇದೆ. ಭಾಷೆಯು ನಮ್ಮ

ಮಾನಸಿಕ ಪ್ರತಿಕ್ರಿಯೆಗಳನ್ನು ಮತ್ತು ವಿಚಾರಗಳನ್ನು ತಿಳಿಸುತ್ತದೆ. ಪೌರಾತ್ಯ ರಾಷ್ಟ್ರಗಳಲ್ಲಿಯೇ ಮಾತೃಭಾಷಾ ಶಿಕ್ಷಣ ನಡೆಯಬೇಕಾದರೆ ನಮ್ಮಲ್ಲಿ ಏಕೆ ಸಾಧ್ಯವಿಲ್ಲ. ಭಾಷೆ ನಮ್ಮ ವಿಚಾರ ಶಕ್ತಿಯ ಪ್ರಬಲ ಸಾಧನವೆಂದು ಮಾತೃಭಾಷಾ ಶಿಕ್ಷಣಕ್ಕೆ ಒತ್ತಾಯಿಸಿದ್ದಾರೆ.

ಪ್ರಾಥಮಿಕ ಶಿಕ್ಷಣದ ಭಾಷಾ ನೀತಿ ರಚನೆಗೆ ಸರ್ಕಾರ, ಸರಕಾರೇತರ ಸಂಸ್ಥೆಗಳು, ಅಧಿಕಾರ ಶಾಹಿ, ತಂತ್ರಜ್ಞಾನ ವಲಯ, ಮಠ ಮಾನ್ಯಗಳು, ಸರ್ಕಾರೇತರ ಒತ್ತಡಗಳು ಮೂಲ ಕಾರಣಗಳಾಗುತ್ತವೆ ಎಂದು **ಮುರಾರಿ ಬಲ್ಲಾಳ್, ಬಸವರಾಜ ಸಬರದ** ಅವರು ತಿಳಿಸಿದ್ದಾರೆ. ಹಿಂದಿ, ಇಂಗ್ಲೀಶ್ ಪ್ರಾದೇಶಿಕ ಭಾಷೆಗಳ ನಡುವಿನ ಸ್ಪರ್ಧೆಯನ್ನು ಕೇವಲ ಭಾಷಿಕ ನೆಲೆಯಲ್ಲಿ ಗ್ರಹಿಸದೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗಿರುವುದು ಹೆಚ್ಚು ಸೂಕ್ತವಾದದ್ದು. ನಿಜವಾಗಲೂ ಭಾಷಾ ಸ್ಪರ್ಧೆ ಉಂಟಾಗಿರುವುದು ಭಾಷೆಗಳಲ್ಲಿ ಅಲ್ಲ. ಬದಲಾಗಿ ಜನತೆಯಲ್ಲಿ. ಅದರಲ್ಲಿ ಜನ ಸಾಮಾನ್ಯರು, ದುಡಿಯುವ ವರ್ಗದ ಜನರು ಭಾಷೆಯ ಬಗೆಗೆ ಮಾಧ್ಯಮದ ಬಗೆಗೆ ತಲೆಕೆಡಿಸಿಕೊಳ್ಳುವುದಿಲ್ಲ. ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮ ಹೆಚ್ಚು ಸೂಕ್ತವೂ ಆಗಿದೆ. ಇದು ವೈಜ್ಞಾನಿಕ ಸತ್ಯ. ಜನ ಸಮುದಾಯದ ಮೇಲೆ ಇದು ಹೇರಿಕೆಯಾಗುವುದಿಲ್ಲ ಎಂದು ಸಬರದ ಅವರು ನಿರೂಪಿಸುತ್ತಾರೆ.

**ಬೆಸಗರಹಳ್ಳಿ ರಾಮಣ್ಣ** ಅವರು ಭಾಷಾ ನೀತಿಯ ರಚನೆಗೆ ಸರ್ಕಾರ ಮಾತ್ರವಲ್ಲದೆ ಹಿಂದೆ ರಾಜಕೀಯ ಪಕ್ಷಗಳ ಹೊಣೆಗಾರಿಕೆಯ ಪಾಲು ಅಧಿಕವಾಗಿದೆ. ಈ ರಾಜಕೀಯ ಪಕ್ಷಗಳು ವರ್ಗ ವರ್ಣಗಳ ಪರವಾಗಿ ಇರುತ್ತವೆಯೇ ಹೊರತು ಒಟ್ಟು ಜನ ಸಮುದಾಯದ ಪರವಾಗಿರುವುದಿಲ್ಲ. ಅದರಲ್ಲಿ ರಾಜಕೀಯ ಮತ್ತು ಆರ್ಥಿಕ ಹುನ್ನಾರಗಳು ಕೆಲಸ ಮಾಡುತ್ತವೆ. ಮಾಧ್ಯಮ ನೀತಿಯ ರಚನೆಯಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ರಾಜಕೀಯ ಹಿತಾಸಕ್ತಿಗಳದ್ದೇ ಆಗಬಾರದು. ಕೇವಲ ರಾಜಕೀಯ ಪಕ್ಷಗಳು ಪಾತ್ರವಾಗಿ ಸಹಾಯ ಒದಗಿಸಬೇಕೆನ್ನುವ ವಾದವನ್ನು ಮಂಡಿಸುತ್ತಾರೆ.

**ಟಿ.ಎಸ್. ಸತ್ಯನಾಥ್** ಅವರು ತ್ರಿಭಾಷಾ ಸೂತ್ರ ರೂಪುಗೊಂಡಿದ್ದೇ ಒಂದು ರಾಜಕೀಯ ಸೆಣಸಾಟದಿಂದಾಗಿ. ತ್ರಿಭಾಷಾ ಸೂತ್ರವನ್ನು ರೂಪಿಸಿದ ಕೇಂದ್ರ ಸರ್ಕಾರ, ರಾಜ್ಯಗಳಲ್ಲಿ ಶಿಕ್ಷಣ ಮಾಧ್ಯಮದಲ್ಲಿ ಪ್ರಾದೇಶಿಕ ಭಾಷೆಗೆ ಅಗ್ರಸ್ಥಾನವನ್ನು ಕೊಡಬೇಕೆಂದು ಹೇಳಿತ್ತು. ಆದರೆ ಈ ಅಗ್ರಸ್ಥಾನವನ್ನು ಇಂಗ್ಲೀಶ್ ಹೇಗೆ ನಿಧಾನವಾಗಿ ಆಕ್ರಮಿಸಿಕೊಂಡಿತು ಎಂಬುದು ತಿಳಿದ ವಿಷಯ. ಹಿಂದಿಯೇತರ ರಾಜ್ಯಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳು ಪ್ರಮುಖ ಮಾಧ್ಯಮ ಎಂದು ಪರಿಗಣಿತವಾದರೂ ಪ್ರಧಾನ ಮಾಧ್ಯಮ ಎಂಬ ಹಣೆ ಪಟ್ಟಿಯಲ್ಲಿ ಹಿಂದಿ ಇತರೆ ಭಾಷೆಗಳು ಸೇರಿಕೊಂಡಿವೆ. ಶಿಕ್ಷಣದಲ್ಲಿ ಪ್ರಮುಖವಾಗಿ ಪ್ರಥಮ ಭಾಷೆ ಎಂದು ಹಿಂದಿಯನ್ನು ಕರೆಯಲಾಗಿದೆ.

ಕರ್ನಾಟಕದ ಒಳಗೇ ಸರಕಾರದ ಪರ ಹಾಗೂ ವಿರೋಧ ಗುಂಪುಗಳೇ ವಿರುದ್ಧವಾದ ಒತ್ತಡವನ್ನು ತೋರಲು ಸಾಧ್ಯವಿದೆ. ಶಾಲೆಗಳಲ್ಲಿ ಕಲಿಸುತ್ತಿರುವ ಕನ್ನಡ ಗ್ರಾಂಥಿಕ ರೂಪ, ಇದು ಉನ್ನತ ವರ್ಗದವರ ಮತ್ತು ನಗರವಾಸಿಗಳ ದಿನನಿತ್ಯದ ವ್ಯವಹಾರಿಕ ಭಾಷೆಗೆ ಸಮೀಪವಾಗಿದೆ. ಈ ಭಾಷೆ ದಲಿತರ ಮತ್ತು ಅಸಂಖ್ಯಾತ ಗ್ರಾಮ ವಾಸಿಗಳ ದಿನನಿತ್ಯದ

ವ್ಯವಹಾರಿಕ ಭಾಷೆಯಿಂದ ದೂರವಾಗಿದೆ. ಈ ಗ್ರಾಂಥಿಕ ಭಾಷೆಯನ್ನು ಹೇಗೆ ಅಣಿಗೊಳಿಸಬೇಕು ಎಂಬ ಬಗ್ಗೆ ಸರ್ಕಾರ, ಸಮುದಾಯ, ಭಾಷಾ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ಯೋಚಿಸಬೇಕಾದುದು ಅವಶ್ಯಕವಾಗಿದೆ.

ಹತ್ತೊಂಬತ್ತನೆ ಶತಮಾನನ್ನು ಯುರೋಪಿನ ರಾಷ್ಟ್ರಗಳು ಏಕ ಭಾಷಾ ಸಂದರ್ಭದಲ್ಲಿ ರೂಪುಗೊಂಡಿದ್ದು, 'ಒಂದು ಭಾಷೆ ಒಂದು ರಾಷ್ಟ್ರ' ಎಂಬ ಪರಿಕಲ್ಪನೆ ಬೆಳೆಯಿತು. ಇದರ ಪರಿಣಾಮವಾಗಿ ಒಂದು ರಾಷ್ಟ್ರದ ಭಾಷೆ ಅದರ ಸಂಸ್ಕೃತಿ ಮತ್ತು ಜೀವನ ಕ್ರಮಗಳನ್ನು ಪ್ರತಿಬಿಂಬಿಸುತ್ತದೆ. ಭಾರತದಲ್ಲಿ ಎಲ್ಲವೂ ಬಹು ಸಂಸ್ಕೃತಿಯಿಂದ ಕೂಡಿದುದಾಗಿದೆ. ಭಾಷೆ ಒಂದು ಭಾಷೆಯಷ್ಟೇ ಅಲ್ಲದೆ ಒಂದು ಸಮುದಾಯದ ವಿಶಿಷ್ಟ ನಡಾವಳಿಯ ಒಂದು ಘಟಕವಾಗಿರುತ್ತದೆ. ಭಾರತದಲ್ಲಿ ವಿವಿಧ ಪ್ರಾದೇಶಿಕ ಭಾಷೆಗಳು ವಿವಿಧ ರೀತಿಯ ಸಂಸ್ಕೃತಿಯೊಂದಿಗೆ ಬೆಸೆದುಕೊಂಡಿರುವುದರಿಂದ ಏಕ ರೀತಿಯ ಪರಿಕಲ್ಪನೆ ಭಿನ್ನವಾಗುತ್ತಲೇ ಬೆಳೆದಿದೆ. ದೇಶದ ಐಕ್ಯದ ಹೆಸರಿನಲ್ಲಿ ಪ್ರಾದೇಶಿಕ ಅಂಶಗಳನ್ನು ಕಡೆಗಣಿಸಲಾಗುತ್ತಿರುವ ಈ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆ ಮತ್ತು ಸಂಸ್ಕೃತಿಗಳ ಮಹತ್ವವನ್ನು ಹತ್ತಿಕ್ಕಲಾಗುತ್ತಿದೆ. ಪ್ರಾದೇಶಿಕ ಭಾಷೆಗೆ ನೀಡಬೇಕಾದ ಆದ್ಯತೆಗೆ ಕ್ರಮವಹಿಸಬೇಕಾಗಿದೆ ಎಂದು ವಿಶ್ಲೇಷಿಸುತ್ತಾರೆ.

**'ಎಸ್.ಎಸ್. ಹಿರೇಮಠ'** ಅವರು ಒಂದು ಭಾಷಾ ನೀತಿಯನ್ನು ಜಾರಿಗೆ ತರುವ ಅಧಿಕಾರವನ್ನು, ನಡೆಸುವ ಸರ್ಕಾರವನ್ನು ವಿವಿಧ ರಾಜಕೀಯ ಪಕ್ಷಗಳು ನಡೆಸುತ್ತವೆ. ಪ್ರತಿಯೊಂದು ಪಕ್ಷಕ್ಕೂ ವಿಶಿಷ್ಟವಾದ ರಾಜಕೀಯ ಇಚ್ಛಾಶಕ್ತಿಯಿರುತ್ತದೆ. ಇಂತಹ ಪಕ್ಷಗಳು ವರ್ಗದ ಪರವಾಗಿರುತ್ತವೆಯೇ ಹೊರತು ಸಮುದಾಯದ ಪರವಾಗಿರುವುದಿಲ್ಲ. ಅವು ಆಕರ್ಷಕವಾಗಿ ಕಾಣುವ ತಾತ್ಕಾಲಿಕ ಪರಿಹಾರ ಕ್ರಮಗಳನ್ನು ರೂಪಿಸುತ್ತವೆ. ಮಾತೃ ಭಾಷೆಯ ಶಿಕ್ಷಣ ಮಾಧ್ಯಮದ ಬಗೆಗೆ ಯಾರೂ ತಾತ್ವಿಕವಾಗಿ ವಿರೋಧಿಸುವುದಿಲ್ಲ. ಹಲವು ಶಾಸ್ತ್ರಗಳ ತಿಳುವಳಿಕೆಯನ್ನು ನೀಡುವ ಶಕ್ತಿ, ಸಾಮರ್ಥ್ಯವನ್ನು ಅಂತಹ ಒಂದು ಭಾಷೆಯಿಂದ ಪಡೆದುಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆಯೇ ಎಂಬುದನ್ನು ಯೋಚಿಸ ಬೇಕಾಗಿದೆ. ಕನ್ನಡಿಗರು ತಮ್ಮ ಏಳಿಗೆಗೆ ರೂಪಿಸಿಕೊಳ್ಳುವ ಮಾರ್ಗಗಳಿಗೆ ಅನುಗುಣವಾಗಿ ಶಿಕ್ಷಣದ ಆಶಯ ಮತ್ತು ಮಾಧ್ಯಮಗಳೂ ಅವಕಾಶ ಪಡೆಯಬೇಕು. ಈ ನಿರ್ಣಯ ತೆಗೆದುಕೊಳ್ಳುವ ಅವಕಾಶ ಕೇವಲ ರಾಜಕೀಯ ಹಿತಾಸಕ್ತಿಗಳದ್ದೇ ಆಗಬಾರದು. ಜನ ಸಾಮಾನ್ಯರ ಪಾಲು ಅಗತ್ಯವಾಗಿರಬೇಕೆಂದು ತಿಳಿಸುತ್ತಾರೆ.

"ಶಿಕ್ಷಣಕ್ಕೆ ಮಾತೃ ಭಾಷೆಯಲ್ಲದೆ ಇಂಗ್ಲೀಶ್ ಸರ್ವಥಾ ಯೋಗ್ಯವಲ್ಲ. ಇಂಗ್ಲೀಶ್ ಶಿಕ್ಷಣದ ಮಬ್ಬಿಗೆ ಬಿದ್ದ ಭಾರತೀಯರು ತಮ್ಮ ವ್ಯಕ್ತಿತ್ವ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯ ಕಳೆದುಕೊಂಡಿದ್ದಾರೆ ಎಂದು ಇಂಗ್ಲೆಂಡಿನ **ರೆವರೆಂಡ್ ಸರ್.ಎಫ್. ಆಂಡ್ರೂಸ್** ಹೇಳಿದ್ದಾರೆ. ಇದೊಂದು ನಿದರ್ಶನವೇ ಸಾಕು ನಮ್ಮನ್ನು ನಾವು ಜಾಗೃತರಾಗಿಸಿಕೊಳ್ಳಲು ಎನಿಸುತ್ತದೆ. "ಇಂಗ್ಲೀಶ್ ಶಿಕ್ಷಣ ಭಾಷೆಯಾಗಿರಲು ಸಾಧ್ಯವಿಲ್ಲ. ಮಾತೃಭಾಷೆಯೇ ಶಿಕ್ಷಣ ಭಾಷೆಯಾಗಿ ಇರಬೇಕು. ಗಣಿತ, ವಿಜ್ಞಾನ, ಇತರ ವಿಷಯಗಳನ್ನು ಹೇಳುವಾಗ ಅಧ್ಯಾಪಕರು ಮಾತೃ ಭಾಷೆಯನ್ನೇ ಬಳಸಬೇಕು. ಆಗ ಸರ್ಕಾರವೂ ಕೂಡ ನ್ಯಾಯ ಸ್ಥಾನಗಳಲ್ಲಿಯೂ ಸರ್ಕಾರದ

ಪತ್ರ ವ್ಯವಹಾರಗಳಲ್ಲಿಯೂ ಮಾತೃಭಾಷೆಯನ್ನು ಬಳಸಲು ಆರಂಭಿಸುತ್ತದೆ" ಎಂದು ಹೇಳಿದ್ದಾರೆ. **(ಸಂ: ಡಾ. ಅಶೋಕ ಕುಮಾರ ರಂಜೇರೆ, ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ವಾಗ್ವಾದಗಳು–ಅಪ್ರಕಟಿತ, ಪುಟ–೫೬)**

**ಹೇಮಲತಾ ಮಹಿಷಿ** ಅವರು ಕೇರಳ, ಮಹಾರಾಷ್ಟ್ರ, ಆಂಧ್ರ, ಬಂಗಾಳ, ತಮಿಳುನಾಡು ರಾಜ್ಯಗಳಲ್ಲಿ ಆಯಾ ರಾಜ್ಯದ ಭಾಷೆಯಲ್ಲಿ ಮಾತನಾಡುವವರು, ಹೆಚ್ಚಿನ ಸಂಖ್ಯೆಯಲ್ಲಿ ಇರುವ ಕಡೆಗಳೆಲ್ಲಾ ಆಯಾ ಭಾಷೆಗಳೇ ಆಡಳಿತ, ಶಿಕ್ಷಣ ಭಾಷೆಯಾಗಿರುವುದು ಪ್ರತ್ಯಕ್ಷವಾಗಿದೆ. ಆದರೆ ಕರ್ನಾಟಕದಲ್ಲಿ ಅದು ನಿಜವಲ್ಲ. ಕಾರಣ ನಮ್ಮ ರಾಜಕೀಯ ನಾಯಕರಲ್ಲಿ ಇಚ್ಛಾಶಕ್ತಿ ಇಲ್ಲದುದು. ಕನ್ನಡ ಭಾಷೆಯನ್ನು ವ್ಯವಹಾರಿಕ ವಾಸ್ತವ ದೃಷ್ಟಿಯಿಂದ ನೋಡದೆ ರಾಜಕೀಯ ಬಣ್ಣ ಬರುವಂತೆ ಮಾಡಿದರು. ನಮ್ಮ ರಾಜ್ಯದಲ್ಲಿ ಕಾವೇರಿಯೂ ರಾಜಕೀಯ ವಾಗುತ್ತದೆ, ಕನ್ನಡವೂ ರಾಜಕೀಯವಾಗುತ್ತದೆ. ಅದೇ ನಮ್ಮ ದುರಂತ. ಕನ್ನಡಕ್ಕೆ ತಾನಾಗಿಯೇ ಸಿಗಬೇಕಿದ್ದ ಪ್ರಥಮ ಸ್ಥಾನ ಸಲ್ಲದೇ ಹೋದುದರಿಂದ ಕರ್ನಾಟಕದಲ್ಲಿ ಅನ್ಯ ಭಾಷೆಯ ಜನ ಕನ್ನಡದ ಬಗ್ಗೆ ವಿರೋಧ ನೀತಿ ತಾಳಲು ಸಾಧ್ಯವಾಗಿದೆ ಎಂಬ ಮಾತನ್ನು ನಿರೂಪಿಸಿದ್ದಾರೆ.

ಪ್ರತಿಯೊಂದು ಕ್ಷೇತ್ರಗಳಲ್ಲೂ ಆಯಾ ಕ್ಷೇತ್ರದ ವಿಷಯ ಪರಿಣತರ ಅಭಿಪ್ರಾಯ, ಸಲಹೆಗಳಿಗೆ ಮನ್ನಣೆ ದೊರಕಿಸಿಕೊಟ್ಟು ಅವರು ರೂಪಿಸಿದ ನಿಯಮ, ಯೋಜನೆಗಳನ್ನು ಘೋಷಣೆ ಮಾಡುವ ಜವಾಬ್ದಾರಿಯನ್ನು ಸರ್ಕಾರ ಹೊಣೆ ಹೊತ್ತುಕೊಂಡು ಮಾಡಬೇಕು. ಆದರೆ ಸಂಪೂರ್ಣ ನಿರ್ಣಯ ನೀಡುವ ಅಧಿಕಾರವನ್ನು ಏಕೈಕ ಸರ್ಕಾರ ನಿರ್ವಹಿಸುವುದು ಅಷ್ಟು ಸಮಂಜಸ ತೀರ್ಮಾನವೆಂದು ತೋರುವುದಿಲ್ಲ ಎಂದಿದ್ದಾರೆ.

**'ಆರ್ಕೆ. ಮಣಿಪಾಲ್'** ಆಡಳಿತ ಮಾಧ್ಯಮವಾಗಿ ಕನ್ನಡ ಎಲ್ಲಿಯವರೆಗೆ ಅಕ್ಷರಶಃ ಜಾರಿಗೆ ಬರುವುದಿಲ್ಲವೋ ಅಲ್ಲಿಯವರೆಗೆ ಕನ್ನಡದ ಪ್ರಗತಿ ಸಾಧ್ಯವಾಗದು. ಸಾಮಾಜಿಕ ಸಂಬಂಧಗಳಲ್ಲಿ ಮುಕ್ತತೆ ಸಾಧಿಸಲು ಭಾಷೆ ಉತ್ಕೃಷ್ಟ ಸಾಧನೆ ಎಂದು ಹೇಳಿದ್ದಾರೆ.

**'ಕೆ. ಲಕ್ಷ್ಮಣರಾವ್'** ಅವರು ವಿವರಿಸುವಂತೆ 'ಸರ್ಕಾರವೇ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶ್ ಕಲಿಸಲು ಉದ್ದೇಶಿಸಿದೆ. ಆದರೆ ಜನ ಯಾವತ್ತೂ ಇಂಗ್ಲೀಶ್ ಭಾಷೆಯನ್ನು ಒಂದನೇ ತರಗತಿಯಿಂದ ಕಲಿಸಲು ಕೇಳಿಲ್ಲ. ಶಿಕ್ಷಣ ಖಾಸಗೀಕರಣ ಹೆಚ್ಚಾದಂತೆ ಅಂತರವು ಹೆಚ್ಚಾಗುತ್ತಿದೆ. ಇದು ಭಾಷಿಕ ಅಸ್ಪೃಶ್ಯತೆಯನ್ನು ಸೃಷ್ಟಿಸಿದೆ. 'ಕನ್ನಡ' ಕಲಿತವರಿಗೆ ಇಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಉದ್ಯೋಗದ ಖಾತರಿಯಿರಬೇಕಿತ್ತು. ಇಂತದ್ದೇನು ಪರಿಸ್ಥಿತಿ ಇಲ್ಲದ ಸಂದರ್ಭದಲ್ಲಿ ಸರ್ಕಾರ ಯಾವ ಪರಿಹಾರ ನೀಡಲು ಸಾಧ್ಯವಾಗದೆ ಹೊಸ ತಲೆಮಾರು ಇಂಗ್ಲೀಶನ್ನು ಕಲಿಯಬೇಕಾದ ಸ್ಥಿತಿಯನ್ನು ಸರ್ಕಾರವೇ ನಿರ್ಮಾಣ ಮಾಡುತ್ತಿದೆ ಎನ್ನುತ್ತಾರೆ.

**'ಜಿ.ಪಿ. ನಾರಾಯಣ ರಾವ್'** ಮಾತೃಭಾಷೆಯಲ್ಲಿ ಪ್ರಭುತ್ವ ಇರುವವನಿಗೆ ಯಾವುದೇ ಆಧುನಿಕ ವಿಷಯವನ್ನು ಕನ್ನಡದಲ್ಲಿ ಅಭಿವ್ಯಕ್ತಿಸುವುದು ಬಲುಸುಲಭ ಎನ್ನುತ್ತಾರೆ. ಇದಕ್ಕೆ

ಒಂದು ನಿದರ್ಶನವನ್ನು ನೀಡುವ ಮೂಲಕ ಸ್ಪಷ್ಟಪಡಿಸಿದ್ದಾರೆ. "೧೯೨೦ರ ದಶಕಪ್ಪು ಹಿಂದೆಯೇ **ನಂಗಪುರಂ ವೆಂಕಟೇಶ್ ಅಯ್ಯಂಗಾರ್, ಸಿ.ಎನ್. ಶ್ರೀನಿವಾಸ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಾಯಣಪ್ಪ, ಆರ್.ಎಲ್. ನರಸಿಂಹಯ್ಯ, ಕೋಟ ಲಕ್ಷ್ಮೀನಾರಾಯಣ ಕಾರಂತ** ಮೊದಲಾದ ಮಹಾನುಭಾವರು ಕೇವಲ ಮಾತೃಭಾಷೆಯ ಮೇಲಿನ ಪ್ರೀತಿಯಿಂದ ಕನ್ನಡದಲ್ಲಿ ರಚಿಸಿದ ಪಾಠ ಪುಸ್ತಕಗಳನ್ನು ನೋಡಿದರೆ ತಿಳಿಯುತ್ತದೆ. ಅವರೆಲ್ಲರಿಗಿದ್ದ ಉಭಯ ಭಾಷಾ ಪ್ರಭುತ್ವದಿಂದಾಗಿ ಕನ್ನಡದಲ್ಲಿ ಗಹನ ವಿಷಯಗಳನ್ನು ವಿವರಿಸುವುದು ಆ ಬಗೆಗಿದ್ದ ಶ್ರದ್ಧೆ" ಎಂದು ಹೇಳಿದ್ದಾರೆ. (ಸಂ: **ಡಾ. ಅಶೋಕ ಕುಮಾರ ರಂಜೇರೆ, : ಜಿ.ಟಿ. ನಾರಾಯಣರಾವ್, ಶಿಕ್ಷಣ ಮಾಧ್ಯಮವಾಗಿ ಮಾತೃ ಭಾಷೆಯ ಪ್ರಾಧಾನ್ಯ, ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ವಾಗ್ವಾದಗಳು**)

**ಎಸ್.ಎಸ್. ರಘುನಾಥ್** ಅವರು ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಸುವ, ಕಲಿಯುವ ತೀರ್ಮಾನ ಮಾಡುವುದಾದರೆ, ಮಾತನಾಡಲು ಮಾತ್ರ ಪರಿಣತಿ ಪಡೆದ ವೃತ್ತಿಪರ ಶಿಕ್ಷಕರಿಂದಲೇ ಮಾಡಿಸಬೇಕು. ಆದರೆ ಐದನೇ ತರಗತಿಯವರೆಗೆ ಕೇವಲ ಅನೌಪಚಾರಿಕವಾಗಿ ಕಲಿಸಬೇಕು. ಪರೀಕ್ಷೆಯನ್ನು ಐದನೇ ತರಗತಿಯಿಂದ ಆರಂಭಿಸಬೇಕೆಂದು ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಚರ್ಚೆಗೆ ಗ್ರಾಸವಾಗಿರುವ ಪ್ರಾಥಮಿಕ ಹಂತದಲ್ಲಿಯ ಮಾಧ್ಯಮದ ಶಿಕ್ಷಣ ಕುರಿತು ಅಪಾರ ಸಂಖ್ಯೆಯಲ್ಲಿ ಸರ್ವವಿಧಿತವಾದ ಒಂದು ತೀರ್ಪು ಮಾತೃಭಾಷಾ ಶಿಕ್ಷಣವನ್ನೇ ಒತ್ತಿ ಹೇಳುತ್ತಿದೆ. ಇದರಲ್ಲಿ ಚಿಂತಕರ, ಸಾಹಿತಿಗಳ, ಲೇಖಕರ, ಶಿಕ್ಷಣತಜ್ಞರ ಪಾತ್ರ ಅವಿಸ್ಮರಣೀಯ. **ನಟರಾಜ್ ಹುಳಿಯಾರ್, ರವಿ ಬೆಳಗೆರೆ, ಎಂ.ಜಿ. ಚಂದ್ರಶೇಖರಯ್ಯ, ಡಾ. ಮೀನಾಕ್ಷಿ ಬಾಳಿ, ಶಿವ ಸುಂದರ್, ಶ್ರೀಧರ್ ಅರವಿಂದ ಚೊಕ್ಕಾಡಿ, ಸಾಂತೇನಹಳ್ಳಿ ಕಾಂತರಾಜ್, ಸುಬ್ಬು ಹೊಲೆಯಾರ್, ಚಂದ್ರಶೇಖರ ಪಾಟೀಲ್, ಬರಗೂರು ರಾಮಚಂದ್ರಪ್ಪ, ದೇವನೂರು ಮಾಹದೇವ, ಕಿ.ರಂ. ನಾಗರಾಜ್, ಇಂದೂಧರ ಹೊನ್ನಾಪುರ, ಪೂರ್ಣಚಂದ್ರ ತೇಜಸ್ವಿ** ಇನ್ನೂ ಅನೇಕ ಸಂಖ್ಯೆಯಲ್ಲಿದ್ದಾರೆ. ಇವರುಗಳ ಹೆಸರುಗಳನ್ನಷ್ಟು ಪಟ್ಟಿ ಮಾಡುತ್ತಾ ಹೋದರೆ ಬಹುತೇಕ ಚಿಂತಕರು ಮಾತೃಭಾಷಾ ಮಾಧ್ಯಮವನ್ನು ಬೆಂಬಲಿಸಿದ್ದಾರೆ.

ಇನ್ನು ಕೆಲವು ಮಾಸ ಪತ್ರಿಕೆ, ವಾರ ಪತ್ರಿಕೆಗಳೆಲ್ಲಿಯೂ ಸಹ ಹಲವಾರು ಲೇಖಕರ ಅಭಿಪ್ರಾಯಗಳನ್ನು ಗುರುತಿಸಬಹುದು. ಖ್ಯಾತ ಕಾದಂಬರಿಕಾರ **ಅ.ನ.ಕೃ** ಕನ್ನಡ, ರಾಜ್ಯದ ಆಡಳಿತ, ಶಿಕ್ಷಣ ಮತ್ತು ವ್ಯವಹಾರ ಭಾಷೆ ಎಂದು ಘೋಷಿಸಬೇಕು. ಹಿಂದಿಯಾಗಲಿ, ಇಂಗ್ಲೀಶ್ ಆಗಲಿ ಈ ಸ್ಥಾನದಲ್ಲಿ ನಿಲ್ಲಲು ಸಾಧ್ಯವಿಲ್ಲ ಎನ್ನುವ ಮಾತುಗಳನ್ನು ಹೇಳಿದ್ದಾರೆ. **(ಸಂ.ಕೆ.ವಿ.ನಾರಾಯಣ, ನಮ್ಮ ಕನ್ನಡ ಸಂ. ೪೪, ಡಿಸೆಂಬರ್ ೨೦೦೦, ಲೇ: ಡಾ. ಅಶೋಕ ಕುಮಾರ ರಂಜೇರೆ, ಪುಟ–೬)** ಇದಕ್ಕೆ ಅನುಗುಣವಾಗಿ ಶಿಕ್ಷಣ ಮಾಧ್ಯಮದ ಭಾಷೆ ಯಾವುದಿರಬೇಕು ಎನ್ನುವುದನ್ನು ಕುರಿತು **ರಂ.ಶ್ರೀ. ಮುಗಳಿ** ಅವರು ಮಾತೃಭಾಷೆ, ಪ್ರಾದೇಶಿಕ ಭಾಷೆ, ಇಂಗ್ಲೀಶ್ ಭಾಷೆಗಳನ್ನು ಹೇಗೆ ಬಳಸಬೇಕು ಎಂಬುದಕ್ಕೆ ರಚನೆಯಾಗಿರುವ

ತ್ರಿಭಾಷಾ ಸೂತ್ರವನ್ನು ಕುರಿತು ಕೆಲ ಬದಲಾವಣೆಗಳನ್ನು ಸೂಚಿಸುತ್ತಾರೆ. ಮೊದಲನೆ ತರಗತಿಯಿಂದ ಏಳನೇ ತರಗತಿ ಕೊನೆವರೆಗೆ ಪ್ರಾದೇಶಿಕ ಭಾಷೆಯನ್ನು, ಐದರಿಂದ ಏಳನೇ ತರಗತಿವರೆಗೆ ಹಿಂದಿ ಪ್ರಾದೇಶಿಕ (ಆಯಾಪ್ರಾಂತ್ಯಕ್ಕೆ ಅನುಸರಿಸಿ)ಮತ್ತು ಇಂಗ್ಲೀಶ್ ಹೀಗೆ ಅವಶ್ಯ ಭಾಷೆಗಳನ್ನು ಕಲಿಯುವುದು. ಮುಂದೆ ಎಂಟನೆ ತರಗತಿಯಿಂದ ಮಾಧ್ಯಮಿಕ ಪೂರ್ಣವಾಗುವರೆಗೆ ಪ್ರಾದೇಶಿಕ ಮತ್ತು ಇಂಗ್ಲೀಶ್ ಎರಡೇ ಕಡ್ಡಾಯವಾಗಿರಬೇಕು. ಹಿಂದಿ ಅಥವಾ ಇತರೇ ಭಾಷೆಗಳು ಐಚ್ಛಿಕವಾಗಿರಬೇಕು ಎನ್ನುತ್ತಾರೆ. ಮಕ್ಕಳ ಮಾತೃಭಾಷೆ, ಪ್ರಾದೇಶಿಕ ಭಾಷೆ ಬೇರೆ ಇದ್ದಾಗ ಪ್ರಾಂತ್ಯದ ಮಧ್ಯಭಾಗದಲ್ಲಿ ಎರಡೂ ಭಾಷೆಗಳ ಅಭ್ಯಾಸ ಕಡ್ಡಾಯವಾಗಬೇಕು. ಮಾತೃಭಾಷೆ ಮೊದಲು ಆ ಮೇಲೆ ಪ್ರಾದೇಶಿಕ ಭಾಷೆಯನ್ನು ಐಚ್ಛಿಕವಾಗಿ ಇಡಬೇಕು ಎನ್ನುವ ಮಾತುಗಳು ಈ ಚರ್ಚೆಗೆ ಪ್ರಸ್ತುತ ಎನಿಸುತ್ತವೆ.

**ಡಿ.ವಿ.ಜಿ** ಅವರು ಕನ್ನಡ ಭಾಷೆ ಉಳಿದು ಬೆಳೆಯಬೇಕಾದರೆ ಶಿಕ್ಷಣ ಆಡಳಿತ ಕೋರ್ಟ ಕಛೇರಿಗಳಲ್ಲಿ ಕಡ್ಡಾಯವಾಗಬೇಕು. ಪ್ರಾಥಮಿಕದಿಂದ ಮಾಧ್ಯಮಿಕ, ಪ್ರೌಢ ಶಾಲೆಯ ವರೆಗೂ ಪ್ರಾದೇಶಿಕ ಭಾಷೆಯಲ್ಲಿಯೇ ಶಿಕ್ಷಣವನ್ನು ನಡೆಸತಕ್ಕದ್ದು ಎಂದಿದ್ದಾರೆ.

**'ಎಂ.ವಿ. ಸೀತಾರಾಮಯ್ಯ'** ಅವರು ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಪ್ರಾಧಾನ್ಯತೆ ಬೇಕು, ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ ನಿರ್ಮಾಣವಾಗಬೇಕು ಎಂದರೆ ಎಲ್ಲಾ ಹಂತಗಳಲ್ಲೂ ಶಿಕ್ಷಣ ಕನ್ನಡ ಮಾಧ್ಯಮದಲ್ಲಿರಬೇಕು ಎಂದರೂ ಇಂಗ್ಲೀಶಿನ ಅವಶ್ಯಕತೆ ಆಗಬೇಕೆಂದು ತಿಳಿಸಿದ್ದಾರೆ.

**'ಎ.ಆರ್. ಕೃಷ್ಣಶಾಸ್ತ್ರಿ'** ಅವರು ಮಾತೃಭಾಷೆಗೆ ಹೆಚ್ಚಿನ ಪ್ರಾಶಸ್ತ್ಯವಿರಬೇಕು ಎಂದು ಹೇಳುತ್ತಾರೆ. ಹಾಗೆಯೇ ಕನ್ನಡಿಗರು ಒಗ್ಗಟ್ಟಾಗಿರಲು ಏಕಮಾತ್ರ ಸಾಧನ ಅವರ ನುಡಿ ಎಂದು ಸ್ವಾತಂತ್ರ ಪೂರ್ವದಲ್ಲಿ ಹೇಳಿದ್ದಾರೆ. ಮೊದಲನೇ ಸ್ಥಾನ ಮಾತೃಭಾಷೆಗೆ, ನಂತರ ದೇಶ ಭಾಷೆ ಆನಂತರ ಉಳಿದ ಭಾಷೆಗಳ ಸ್ಥಾನವಿರಬೇಕು. 'ಯುರೋಪ್' ಮುಂತಾದ ದೇಶಗಳಲ್ಲಿ ಆಯಾ ದೇಶ ಭಾಷೆಯಲ್ಲಿ ಶಿಕ್ಷಣವಿದೆ. ಅವರು ಮುಂದುವರೆದಿಲ್ಲವೆ? ಅದರಂತೆ ನಮ್ಮಲ್ಲಿಯೂ ಇಂಗ್ಲೀಶನ್ನು ಕಡಿಮೆ ಮಾಡಿ ಕನ್ನಡಕ್ಕೆ ಹೆಚ್ಚಿನ ಪ್ರಾಧನ್ಯತೆ ಕೊಡಬೇಕೆಂದಿದ್ದಾರೆ.

**'ಆಲೂರು ವೆಂಕಟರಾಯರು'** ಕರ್ನಾಟಕದಲ್ಲಿ ಎಲ್ಲವೂ ಕನ್ನಡದಲ್ಲಿಯೇ ಇರಬೇಕು. ಕರ್ನಾಟಕವೆಂಬುದೊಂದು ಜನಾಂಗ, ಅದಕ್ಕೆ ಒಂದೇ ಶರೀರ ಮನಸ್ಸು ಮತ್ತು ಆತ್ಮಗಳಿರುತ್ತವೆ ಎಂಬ ಭಾವನೆ ಎಲ್ಲಿಯವರೆಗೆ ನಮ್ಮಲ್ಲಿ ಉತ್ಪನ್ನವಾಗುವುದಿಲ್ಲವೋ ಅಲ್ಲಿವರೆಗೆ ನಮ್ಮ ಕನ್ನಡ ಎಂಬ ಭಾವ ತೋರುವುದಿಲ್ಲ ಎಂದು ಹೇಳಿದ್ದಾರೆ. ಎಲ್ಲವೂ ಕನ್ನಡದಲ್ಲಿಯೇ ಬರಬೇಕು ಎನ್ನವುದು ಇವರ ಅಭಿಪ್ರಾಯವಾಗಿದೆ. ಹೀಗೆ ಇನ್ನೂ ಅನೇಕ ವಿದ್ವಾಂಸರು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳದಲ್ಲಿ ಹೇಳಿರುವ ಕನ್ನಡ ಭಾಷೆ ಮಾಧ್ಯಮ ಕುರಿತ ಅಭಿಪ್ರಾಯಗಳನ್ನು ಪರಿಶೀಲಿಸಬಹುದಾಗಿದೆ.

**'ಎಚ್.ವಿ. ನಂಜುಂಡಯ್ಯನವರು'** ಶಾಲೆಗಳಲ್ಲಿ ಇಂಗ್ಲೀಶನ್ನು ಉಪಯೋಗಿಸುವ ಪದ್ಧತಿ ಯಿಂದಾಗಿ ವಿದ್ಯಾರ್ಥಿಗಳಿಗೆ ಅನಾವಶ್ಯಕ ಶಕ್ತಿ ವ್ಯಯವಾಗುತ್ತಿದೆ ಎಂದು ಹೇಳಿದ್ದಾರೆ.

ಇದರಿಂದ ವಿದ್ಯಾರ್ಥಿಗಳ ಯೋಚನಾ ಶಕ್ತಿಯಲ್ಲಿ ತಡೆ ಉಂಟಾಗುತ್ತದೆ, ಬೇಗ ಗ್ರಹಿಸಲು ಸಾಧ್ಯವಾಗುವುದಿಲ್ಲ. ಕಾರಣ ಮೊದಲು ತಮ್ಮ ಮಾತೃ ಭಾಷೆಯಲ್ಲಿ ಅರ್ಥೈಸಿಕೊಂಡು ಆನಂತರ ಇಂಗ್ಲೀಶ್ ಮುಖಾಂತರ ಅರ್ಥೈಸಿಕೊಳ್ಳುವುದರಿಂದ ಸಮಯ ವ್ಯರ್ಥವಾಗುತ್ತದೆ. ಶಾಲೆಗಳಲ್ಲಿ ಬೋಧನೆ ನಡೆದ ಸಂದರ್ಭದಲ್ಲಿ ಆಗಿಂದಾಗ್ಗೆ ವಿಷಯ ಗ್ರಹಿಕೆ ನಡೆಯುವುದಿಲ್ಲ. ಅಧ್ಯಾಪಕ ಮುಂದೆ ಹೇಳುತ್ತಾ ಹೋದಂತೆ ಮಗು ಅರ್ಥೈಸಿಕೊಳ್ಳುತ್ತಲೇ ಹಿಂದೆ ಬೀಳುವ ಸಾಧ್ಯತೆ ಹೆಚ್ಚಿದೆ. ಅದ್ದರಿಂದ ಕನ್ನಡ/ಮಾತೃಭಾಷೆಯಲ್ಲಿ ಅರ್ಥೈಸಿಕೊಳ್ಳುವ ರೀತಿಯಲ್ಲಿ ಬೋಧನೆ ನೀಡಬೇಕಾದ ಅವಶ್ಯಕತೆಯಿದೆ ಎಂದು ಅರ್ಥೈಸುತ್ತಾರೆ.

**'ವಿ.ಕೃ. ಗೋಕಾಕ್'**

ಯಾವುದೇ ವಿದೇಶಿ ಭಾಷೆಯನ್ನು ಪ್ರಾಥಮಿಕ ಹಂತದಲ್ಲಿ ಮಾಧ್ಯಮವನ್ನಾಗಿ ಮಾಡುವುದು ವಿನಾಶಕಾರಿ. ಕನ್ನಡ ಮಾಧ್ಯಮದಲ್ಲಿ ಕೇವಲ ಅಭಿಮಾನವೊಂದೇ ಸೇರಿಲ್ಲ. ಮುಖ್ಯವಾಗಿ ಒಂದು ಪ್ರಾಣಸಮ ಮಹತ್ವದ ಶೈಕ್ಷಣಿಕ ವಿಷಯ ಅಡಕವಾಗಿದೆ. ಬಹಳ ಜನ ಶಿಕ್ಷಕರು ತಪ್ಪು ತಪ್ಪು ಇಂಗ್ಲೀಶನ್ನು ಕಲಿಸಿಕೊಡುತ್ತಾರೆ. ಪರಿಸರದ ಸುತ್ತ ಮುತ್ತಲೂ ಇಂಗ್ಲೀಶ್ ಭಾಷೆಯನ್ನು ಮಾತಾಡುವ ವಾತಾವರಣ ಇರುವುದಿಲ್ಲ. ನಗರ ಪಟ್ಟಣಗಳಲ್ಲಿಯೇ ಈ ಸ್ಥಿತಿ ಇರುವಾಗ, ಹಳ್ಳಿಗಳೆಲ್ಲ ಇಂಗ್ಲೀಶ್ ಮಾಧ್ಯಮವನ್ನು ಪ್ರಾರಂಭಿಸಿದರೆ ಮಕ್ಕಳ ವಿದ್ಯೆ ಹಾಳಾಗುತ್ತದೆ. ಆದರೆ ಇಂಗ್ಲೀಶ್‌ನ್ನು ನುರಿತ ಶಿಕ್ಷಕರಿಂದಲೇ ಕಲಿಯಬೇಕು. ಆಧುನಿಕ ಪದ್ಧತಿಯ ಇಂಗ್ಲೀಶ್ ಶಿಕ್ಷಣಬೇಕು. ಆದರೆ ಇಂಗ್ಲೀಶ್ ಮಾಧ್ಯಮವಾದರೆ, ಕಲಿತಿರುವ ವಿಷಯವೂ ಹಾಳಾಗುತ್ತದೆ ಎಂದು ಇಂಗ್ಲೀಶ್ ಮಾಧ್ಯಮವನ್ನು ವಿರೋಧಿಸುತ್ತಾರೆ.

ದೇಶದ ಅಭಿವೃದ್ಧಿಗೆ ಅಲ್ಲಿಯ ಪ್ರಾದೇಶಿಕ ಭಾಷೆಯೇ ಮೂಲ ಕಾರಣ ಎನ್ನುವ ಮಾತನ್ನು **ಕೆ.ಪಿ. ಪಟ್ಟಣ್ಣಶೆಟ್ಟಿ** ಅವರು ತಿಳಿಸಿದ್ದಾರೆ. ಪ್ರಾಥಮಿಕ ಶಿಕ್ಷಣ ಮಕ್ಕಳ ಮಾತೃ ಭಾಷೆಯಲ್ಲಿ ೧೪ ವರ್ಷಗಳವರೆಗೆ ಕಲಿಸಲು ಯತ್ನಿಸಿದಲ್ಲಿ ಮಾತ್ರ ಅದರಿಂದ ಕಲಿತ ವಿದ್ಯೆಯು ಸಾರ್ಥಕವಾಗುವುದೆಂದು **ಬೆಳ್ಳಾವೆ ನಾರಾಣಪ್ಪ** ಹೇಳಿರುತ್ತಾರೆ.

**ಕೆ.ಜಿ.ಕುಂದಣಗಾರ, ಜೆ.ಪಿ. ರಾಜರತ್ನಂ, ಶಂ.ಭಾ. ಜೋಶಿ, ಎಂ.ಗೋಪಾಲ ಕೃಷ್ಣ ಅಡಿಗ, ಎಸ್.ವಿ. ರಂಗಣ್ಣ, ಪು.ತಿ.ನ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ಹಾ.ಮಾ. ನಾಯಕ, ಕಯ್ಯಾರ್ ಕಿಞ್ಞಣ್ಣರೈ, ಸಿದ್ಧಯ್ಯ ಪುರಾಣಿಕ್, ಆರ್.ಸಿ. ಹಿರೇಮಠ, ಎಸ್.ಎಲ್ ಬೈರಪ್ಪ, ಯು, ಆರ್, ಅನಂತಮೂರ್ತಿ, ಪಾಟೀಲ ಪುಟ್ಟಪ್ಪ** ಇನ್ನು ಹಲವಾರು ಚಿಂತಕರು ಪ್ರಥಮವಾಗಿ ಮಾತೃಭಾಷೆಯ ಮಾಧ್ಯಮವನ್ನು ಒಪ್ಪಿರುತ್ತಾರೆ. ಸುಮಾರು ೧೯ನೇ ಶತಮಾನದ ಆರಂಭದಿಂದಲೇ ಇಷ್ಟು ದೀರ್ಘವಾಗಿ ಬೆಳೆದು ಬಂದಿರುವ ಚರ್ಚೆಯ ತೀವ್ರತೆಯು ಮತ್ತಷ್ಟು ಜಟಿಲತೆಯನ್ನು ಉಂಟು ಮಾಡುತ್ತಿದೆ.

ಈ ಹಿನ್ನೆಲೆಯಲ್ಲಿ, ಇದುವರೆಗೂ ಬಂದಿರುವ ಚರ್ಚೆಯನ್ನು ಪರಿಗಣಿಸಿ ಕ್ರೋಢಿಕರಿಸುವುದಾದರೆ ಎಲ್ಲರ ಅಭಿಮತ, ಮಾತೃಭಾಷೆ ಮಾಧ್ಯಮದ ಪರವಾಗಿಯೇ ಇದೆ. ಮಾತೃಭಾಷೆಯೇ ಏಕೆ ಬೇಕು ಎನ್ನುವುದಕ್ಕೆ ಅನೇಕ ಕಾರಣಗಳನ್ನು ಕುರಿತು ಇದುವರೆಗೂ

ಚರ್ಚಿಸಲಾಗಿದೆ. ಆದರೆ ಇಲ್ಲಿ ಮುಖ್ಯವಾಗಿ ಮಗು ಯಾವುದೇ ವಿಚಾರಗಳನ್ನು ಭಾವನೆಗಳನ್ನು ವ್ಯಕ್ತಪಡಿಸುವುದು ತನ್ನ ತಾಯಿನುಡಿ ಅಥವಾ ಮಾತೃಭಾಷೆಯ ಮೂಲಕವೇ, ಮತ್ತು ಇತರ ವಿಷಯಗಳನ್ನು ಗ್ರಹಿಸುವುದು, ಅರ್ಥೈಸಿ ಕೊಳ್ಳುವುದೂ ಮಾತೃಭಾಷೆಯ ಮೂಲಕವೇ ಆಗಿರುತ್ತದೆ. ಅದ್ದರಿಂದ ಈ ವೈಚಾರಿಕ ಸಿದ್ಧಾಂತದ ಅಡಿಯಲ್ಲಿಯೇ ಮಾತೃಭಾಷೆಯ ಶಿಕ್ಷಣ ನಡೆಯಬೇಕು ಎಂದು ಅನೇಕ ಚಿಂತಕರು, ಸಾಹಿತಿಗಳು ಅಭಿಪ್ರಾಯ ವ್ಯಕ್ತಪಡಿಸುತ್ತಿರುವುದು ಅರ್ಥಪೂರ್ಣವಾಗಿದೆ. ಮತ್ತೊಂದು ನೆಲೆಯಲ್ಲಿ, ಕನ್ನಡ ಮಾಧ್ಯಮವೇ ಶಿಕ್ಷಣದಲ್ಲಿ ಮಾತೃಭಾಷೆಯಾಗಿ ಅಂಗೀಕಾರಗೊಳ್ಳಬೇಕು. ಕನ್ನಡ ನಾಡಿನಲ್ಲಿ ಕನ್ನಡ ಮಾತೃಭಾಷೆ ಹಾಗೂ ಪ್ರಾದೇಶಿಕ ಭಾಷೆ. ಅಲ್ಪ ಸಂಖ್ಯಾತರಿಗೂ ಅದು ಎರಡನೆ ಮಾತೃಭಾಷೆಯಾಗಿದೆ. ಕನ್ನಡನಾಡಿನಲ್ಲಿ ಕನ್ನಡವೇ ಪ್ರಧಾನ ಭಾಷೆಯಾಗಿದೆ. ಕನ್ನಡ ಭಾಷೆಯಲ್ಲಿಯೇ ಜನಸಮುದಾಯ ವ್ಯವಹಾರ ನಡೆಸುತ್ತಿರುವುದರಿಂದ ಜನರ ಸಂಪರ್ಕಕ್ಕೆ ಸುಗಮವಾಗಿದೆ. ಹೀಗಾಗಿ ಆಡಳಿತಾತ್ಮಕವಾಗಿಯೂ ಕನ್ನಡ ಭಾಷೆ ಜಾರಿಯಾಗಬೇಕು ಎಂದು ಹೇಳಿರುವ ಅನೇಕ ಸಾಹಿತಿಗಳ ವೈಚಾರಿಕ ವಿಧಾನ ಇದಾಗಿದೆ. ಇಲ್ಲಿ ಮುಖ್ಯವಾಗಿ ಕನ್ನಡ ನಾಡು, ಭಾಷೆಯ ಬಗೆಗಿನ ಕಾಳಜಿಯನ್ನು ಈ ವಿಚಾರವಾದಿಗಳು ವ್ಯಕ್ತಪಡಿಸುತ್ತಿದ್ದಾರೆ. ಆದರೆ ಇವರಿಗೆ ಶಿಕ್ಷಣದಲ್ಲಿ ವ್ಯಕ್ತವಾಗಿರುವ ತೊಡಕು, ಸಮಸ್ಯೆಗಳ ಬಗ್ಗೆ ಹಾಗೂ ಮಗುವಿನ ಉತ್ತಮ ಕಲಿಕೆಯ ಬಗೆಗಿನ ಕಾಳಜಿ ಮುಖ್ಯವಾಗಿ ಕಂಡು ಬಂದಿಲ್ಲ ಎಂದೆನಿಸುತ್ತದೆ. ಅಲ್ಲದೆ, ಕೇವಲ ಭಾಷಿಕ ಬೆಳವಣಿಗೆ ಅಭಿವೃದ್ಧಿಯ ನೆಲೆಯಿಂದ ಮಾತ್ರ ಸಾಧ್ಯತೆ ಇದೆ. ಕನ್ನಡ ನುಡಿಯ ಉದ್ಧಾರವಾಗಬೇಕೆಂಬ ಆಶಯ ಹೊತ್ತ ಸಾಹಿತಿಗಳ, ಉನ್ನತ ಅಧಿಕಾರಿಗಳ, ರಾಜಕಾರಣಿಗಳ, ಹೋರಾಟ ಸಮಿತಿ ಸದಸ್ಯರುಗಳ ಮುಖ್ಯ ದೃಷ್ಟಿಕೋನವಾಗಿದೆ. ಜೊತೆಗೆ ಕೆಲವೊಂದು ಸರಕಾರಿ ಜವಾಬ್ದಾರಿಗಳ ಹೊಣೆಗಾರಿಕೆಯೂ ಇವರ ಮೇಲಿರುವುದರಿಂದ ಸಾಕಷ್ಟು ಸದಸ್ಯರುಗಳ, ಸಾಹಿತಿಗಳ ಅಭಿಪ್ರಾಯ 'ಕನ್ನಡ' ಮಾಧ್ಯಮವೇ ಶಿಕ್ಷಣದಲ್ಲಿ ಜಾರಿಯಾಗಬೇಕೆಂದು ಹಕ್ಕೊತ್ತಾಯ ಚಲಾಯಿಸುತ್ತಿದ್ದಾರೆ.

ಸಾಮಾನ್ಯವಾಗಿ ಕನ್ನಡ ಮಾಧ್ಯಮಬೇಕು ಎನ್ನುವವರು ಇಂಗ್ಲೀಶ್ ಮಾಧ್ಯಮ ಕಲಿಕೆಯನ್ನು ವಿರೋಧಿಸುತ್ತಿದ್ದಾರೆ, ಹೊರತು ಇಂಗ್ಲೀಶ್‌ನ್ನು ಒಂದು ಭಾಷಾ ಕಲಿಕೆಯನ್ನಾಗಿ ವಿರೋಧಿಸುತ್ತಿಲ್ಲ. ಇಂಗ್ಲೀಶ್‌ನ್ನು ಒಂದು ಭಾಷೆಯನ್ನಾಗಿ ಮೂರನೆ ತರಗತಿಯಿಂದ ಅಥವಾ ಐದನೆ ತರಗತಿಯಿಂದ ಹೇಳಿಕೊಳ್ಳುವುದು ಉಚಿತ ಎನ್ನುವವರ ಸಂಖ್ಯೆಯೇ ಅಧಿಕವಾಗಿದೆ. ಆದರೆ ಇದಕ್ಕೆ ಪ್ರತಿರೋಧವಾಗಿ ಒಂದನೇ ತರಗತಿಯಿಂದಲೇ ಇಂಗ್ಲೀಶ್‌ನ್ನು ಒಂದು ಭಾಷೆಯನ್ನಾಗಿ ಕಲಿಸಬೇಕು ಎನ್ನುವವರ ವಾದಗಳು ಕಡಿಮೆ ಪ್ರಮಾಣದಲ್ಲಿ ಇವೆ ಎಂತಲ್ಲ. ಅಧಿಕ ಪ್ರಮಾಣದಲ್ಲಿ ಸಾಮಾಜಿಕ ಸಮುದಾಯಗಳ ಬೇಡಿಕೆಯಾಗಿರುವುದು ಕಂಡು ಬರುತ್ತದೆ. ಜೊತೆಗೆ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಮಾಧ್ಯಮದಲ್ಲಿ ಮಕ್ಕಳಿಗೆ ಶಿಕ್ಷಣ ಒದಗಿಸಬೇಕು ಎನ್ನುವ ವಾದದ ಕಡೆಗೆ ಸಾಮಾಜಿಕ ತುಡಿತ ತೀವ್ರವಾಗಿ ಪರಿಣಮಿಸಿದೆ. ಈ ನಿಟ್ಟಿನಲ್ಲಿ ಇಂಗ್ಲೀಶ್ ಭಾಷೆ ಹಾಗೂ ಮಾಧ್ಯಮ ಕಲಿಕೆಯ ಪರವಾಗಿ ವಾದಿಸುತ್ತಿರುವವರ ಚಿಂತನೆಯ ಹಿನ್ನೆಲೆ ಉದ್ದೇಶವನ್ನು ಅರ್ಥೈಸಿಕೊಳ್ಳಬೇಕಾಗಿದೆ. ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು

ಒಂದು ಭಾಷೆಯನ್ನಾಗಿ ಕಲಿಯಬೇಕು ಎನ್ನುವ ಪ್ರಸ್ತಾಪವನ್ನು ಮೊದಲಿಗೆ ಹುಟ್ಟು ಹಾಕಿದ್ದೇ ಸರ್ಕಾರ. ಸಮಾಜದ ಪ್ರತಿಷ್ಠಿತ ವರ್ಗಗಳು, ಸಂಘ ಸಂಸ್ಥೆಗಳು ಈ ಬೇಡಿಕೆಯನ್ನು ಸರ್ಕಾರದ ಮುಂದೆ ಇಟ್ಟಾಗ ಸಹಜ ಎನ್ನುವಂತೆ ಸರ್ಕಾರ ಈ ಅಹವಾಲನ್ನು ಸ್ವೀಕರಿಸಿ, ಇಂಗ್ಲೀಶ್ ಕಲಿಕೆಯ ಭಾಷಾ ನೀತಿಗೆ ಒಪ್ಪಿಗೆಯನ್ನು ಸೂಚಿಸಿತು. ಈ ಕಾರಣದಿಂದಾಗಿಯೇ ಸಮಾಜದ ಪ್ರತಿಷ್ಠಿತ ವರ್ಗಗಳು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಪ್ರಗತಿ ಮಾರ್ಗವಾಗಿ ಇಂತಹ ತಂತ್ರಗಳನ್ನು ಗುರಿಯಾಗಿರಿಸಿಕೊಂಡಿವೆ. ಈ ದಿಕ್ಕಿನಲ್ಲಿ ಸರ್ಕಾರ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಭಾಷೆಯನ್ನು ಕಲಿಯುವಂತೆ ಸಮ್ಮತಿಸಿತು. ಇದರ ಅನ್ವಯವಾಗಿ, ಒಂದನೇ ತರಗತಿಯಿಂದ ಇಂಗ್ಲೀಶ್ ಪಠ್ಯ ಮಕ್ಕಳಿಗೆ ಕ್ಲಿಷ್ಟವಾಗಿದೆ. ಆದ್ದರಿಂದ ಸರಳವಾದ ಮತ್ತು ಮಕ್ಕಳ ಜ್ಞಾನ ಅಭಿವೃದ್ಧಿಗೆ ಪೂರಕವಾಗುವ ಅಂಶಗಳನ್ನು ಒಳಗೊಂಡ ಹೊಸ ಪಠ್ಯಕ್ರಮವನ್ನು ಅಳವಡಿಸಲು ಸಂಬಂಧಪಟ್ಟವರಿಗೆ ಸೂಚಿಸಲಾಗಿದೆ ಎಂದು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವ **ವಿಶ್ವೇಶ್ವರ ಹೆಗಡೆ ಕಾಗೇರಿ** ಸ್ಪಷ್ಟಪಡಿಸಿದ್ದಾರೆ. ಅಂದರೆ ಒಂದನೇ ತರಗತಿಯಿಂದ ಇಂಗ್ಲೀಶನ್ನು ಒಂದು ಭಾಷಾ ಪಠ್ಯ ವಿಷಯವಾಗಿ ಕಲಿಯುವಂತೆ ನಾಂದಿ ಹಾಡಿತೆಂದು ಹೇಳಬಹುದು. ಇದರ ಪೂರ್ವದಲ್ಲಿ ಕೇಂದ್ರ ಸರ್ಕಾರದ ತ್ರಿಭಾಷಾ ಸೂತ್ರದನ್ವಯ ಇಂಗ್ಲೀಶನ್ನು ಐದನೆ ತರಗತಿಯಿಂದ ಕಲಿಸುವ ಪ್ರಯತ್ನಗಳು ಚಾಲ್ತಿಯಲ್ಲಿದ್ದವು. ಈ ಹಿನ್ನೆಲೆಯಲ್ಲಿ ಇಂಗ್ಲೀಶ್ ಕಲಿಕೆಯ ವಿಷಯವಾಗಿ ಎದ್ದಿರುವ ಚರ್ಚೆ, ವಾದಗಳ ಪರಿಣಾಮಗಳನ್ನು ಸೂಕ್ಷ್ಮವಾಗಿ ಪರಿಗಣಿಸಬೇಕಾಗಿದೆ.

ಲೇಖಕರಾದ **ನಟರಾಜ್ ಹುಳಿಯಾರ್** ಅವರು ಇಂಗ್ಲೀಶ್ ಶಿಕ್ಷಣಕ್ಕೆ ಬೆಂಬಲವನ್ನು ವ್ಯಕ್ತಪಡಿಸಿದ್ದಾರೆ. ಜಾಗತೀಕರಣದ ಬೆಳವಣಿಗೆಯಿಂದಾಗಿ ಸಮಾಜದಲ್ಲಿ ಅಸಮಾನತೆ ಸೃಷ್ಟಿಯಾಗುತ್ತಿದೆ. ಗ್ರಾಮೀಣ ಹಾಗೂ ನಗರಗಳ ಬಡ ಮಕ್ಕಳು ಖಾಸಗಿ ಶಾಲೆಯ ಮಕ್ಕಳೊಂದಿಗೆ ಪ್ರತಿ ಸ್ಪರ್ಧಿಯಾಗಿ ಭಾಗವಹಿಸಲು ಸಾಧ್ಯವಾಗುತ್ತಿಲ್ಲ. ಹಾಗಾಗಿ ಸರ್ಕಾರಿ ಶಾಲೆಗಳಲ್ಲಿಯೂ ಸಹ ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಸಬೇಕಾಗಿದೆ. ಭಾಷಾ ಶಾಸ್ತ್ರಜ್ಞರ ಪ್ರಕಾರ ಮಕ್ಕಳು ನಾಲ್ಕೈದು ಭಾಷೆಗಳನ್ನು ಸಹಜವಾಗಿ ಕಲಿಯುತ್ತಾರೆ. ಸರ್ಕಾರಿ ಶಾಲೆ ಮಕ್ಕಳು ಐದನೇ ತರಗತಿಗೆ ಬಂದಾಗ ಎರಡನೆ ಭಾಷೆಯನ್ನು ತಡವಾಗಿ ಕಲಿಯುವುದರಿಂದ ಎಸ್ಸೆಸ್ಸೆಲ್ಸಿ, ಪಿಯುಸಿ, ಡಿಗ್ರಿಗಳಲ್ಲಿ ಫೇಲಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ.

ಮಗು ಒಂದು ಭಾಷೆಯನ್ನು ಮಾತನಾಡಲು, ಓದಲು, ಬರೆಯಲು ತಕ್ಷಣ ಕಲಿಯುವುದಿಲ್ಲ. ಹಾಗಿದ್ದಾಗ್ಯೂ ಮಗು ತನ್ನ ಸುತ್ತ ಮುತ್ತಲಿನ ಪರಿಸರದಲ್ಲಿ ಸತತವಾಗಿ ಬಳಕೆಯಲ್ಲಿದ್ದಾಗ ಮಾತ್ರ ಪರಿಪೂರ್ಣವಾಗಿ ಆ ಭಾಷೆಯನ್ನು ಅರ್ಥಮಾಡಿಕೊಳ್ಳುವುದನ್ನು ಮಾತನಾಡುವುದನ್ನು ಕಲಿಯುತ್ತದೆ. ಆದರೆ ಇಂಗ್ಲೀಶ್ ಭಾಷೆಗೆ ಮಕ್ಕಳನ್ನು ಒತ್ತಾಯ ಪೂರ್ವಕವಾಗಿ ಅಡಿಯಾಳಾಗಿಸುವ ಪ್ರಯತ್ನ ಸತತವಾಗಿ ನಡೆದು ಬರುತ್ತಿದೆ. ಇಲ್ಲಿ ಇಂಗ್ಲೀಶ್ ಮಾತನಾಡುವ ಪರಿಸರ ಸುತ್ತಮುತ್ತಲಿನ ಪ್ರದೇಶದಲ್ಲಿ ಕಂಡು ಬರುವುದಿಲ್ಲವಾದ್ದರಿಂದ ಒಂದನೇ ತರಗತಿಯಿಂದ ಮಕ್ಕಳು ಇಂಗ್ಲೀಶ್‌ನ್ನು ಸುಲಭವಾಗಿ ಕಲಿತು ಕೊಳ್ಳುವರು ಎನ್ನುವುದು ಎಷ್ಟರಮಟ್ಟಿಗೆ ಸಮಂಜಸ. ಮಗು ಕೇವಲ ಭಾಷೆಯನ್ನು ಕಲಿಯುವುದು

ಅಷ್ಟೇ ಮುಖ್ಯವಲ್ಲ, ಭಾಷಾ ಕೌಶಲಗಳಾದ ಆಲಿಸುವಿಕೆ, ಮಾತು, ಓದು, ಬರಹ, ಪ್ರಕ್ರಿಯೆಗಳಲ್ಲಿ ಮಗು ಸಂಪೂರ್ಣವಾಗಿ ತೊಡಗಿಸಿಕೊಳ್ಳುವಂತೆ ಶಿಕ್ಷಣವನ್ನು ರೂಢಿಸಿಕೊಳ್ಳುವುದು ಅತ್ಯಂತ ಜವಾಬ್ದಾರಿಯುತ ಕರ್ತವ್ಯವಾಗಿದೆ.

**'ಅಗ್ನಿ'** ಪತ್ರಿಕೆಯ ಸಂಪಾದಕರಾದ **ಶ್ರೀಧರ್** ಅವರು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸುವುದು ಕನ್ನಡಕ್ಕೆ ಈಗಿರುವುದಕ್ಕಿಂತಲೂ ಎಳ್ಳಷ್ಟು ಹೆಚ್ಚು ತೊಂದರೆಯಾಗುವುದಿಲ್ಲ. ಆ ಯೋಜನೆಯನ್ನು ಜಾರಿಗೆ ತರುವುದರಿಂದ ಶಿಕ್ಷಣದಲ್ಲಿನ ತಾರತಮ್ಯ ಸ್ವಲ್ಪವೂ ನಿವಾರಣೆಯಾಗುವುದಿಲ್ಲ. 'ಸಮಾನ ಶಿಕ್ಷಣ ವ್ಯವಸ್ಥೆ' ಜಾರಿಗೆ ಬರಬೇಕೆನ್ನುವುದು ಇವರ ಒತ್ತಾಸೆಯಾಗಿದೆ. ಈ ಇಂಗ್ಲೀಶ್ ಕಲಿಕೆಯ ವಿಚಾರ ಸಾಮಾಜಿಕ ಅಸಮಾನತೆಯ ವ್ಯವಸ್ಥೆಯನ್ನು ಏರುಪೇರು ಮಾಡುತ್ತದೆ. ಇದನ್ನು ವರ್ಗ, ಸಮುದಾಯದ ಅಸ್ತಿತ್ವವಾಗಿ ಕಾಣದೆ, ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನೆಲೆಯಲ್ಲಿ ಈ ವಿಚಾರ ಕುರಿತು ಚರ್ಚಿಸಬೇಕಾಗಿದೆ ಎಂದು ತಿಳಿಸಿರುತ್ತಾರೆ.

**'ಸಾಂತೇನಹಳ್ಳಿ ಕಾಂತರಾಜ್'** ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆಗೆ ಸಮ್ಮತಿಸಿದ್ದಾರೆ. ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ಪರಿಶಿಷ್ಟ ಜಾತಿ, ಹಿಂದುಳಿದ ವರ್ಗ, ಬಡಜನರಿಗೆ, ಗ್ರಾಮೀಣರಿಗೆ ಹೆಚ್ಚು ಸಹಾಯಕವಾಗುತ್ತದೆ ಎನ್ನುತ್ತಾರೆ. ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸಲು ವಿರೋಧಿಸುತ್ತಿಲ್ಲ. ಬದಲಾಗಿ ಐದನೇ ತರಗತಿಯಿಂದ ಕಲಿಸಲು ಆಸಕ್ತಿ ಹೆಚ್ಚು ತೋರಿಸುವುದಿಲ್ಲ. ಗ್ರಾಮೀಣ ಜನರಿಗೆ ಒಂದನೆ ತರಗತಿಯಿಂದ ಇಂಗ್ಲೀಶ್ ಕಲಿಸಲು ಸರಕಾರ ಪ್ರಯತ್ನ ಪಟ್ಟಿರುವುದು ಈ ಮಕ್ಕಳಿಗೆ ಒಂದು ವರದಾನವೇ ಸರಿ. ಗ್ರಾಮೀಣ ಬಡವರ ಕೌಟುಂಬಿಕ ಹಾಗೂ ಸಾರ್ವಜನಿಕ ವಲಯದಲ್ಲಿ ಇಂಗ್ಲೀಶ್ ಪರಿಸರ ಲಭ್ಯವಿಲ್ಲದ್ದರಿಂದ ಮತ್ತು ಐದನೆ ತರಗತಿಯಲ್ಲಿ ಇಂಗ್ಲೀಶ್ ಕಲಿಕೆಯನ್ನು ಆರಭಿಸುವುದರಿಂದ ಎಸ್ಸೆಸ್ಸೆಲ್ಸಿ, ಪಿಯುಸಿಗಳಲ್ಲಿ ಇಂಗ್ಲೀಶ್ ಭಾಷೆಯಲ್ಲಿ ಫೇಲಾಗುತ್ತಾರೆ. ಮತ್ತು ನಗರದ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಲು ಆಗುತ್ತಿಲ್ಲ. ಆದ್ದರಿಂದ ಪ್ರಾರಂಭದಿಂದಲೇ ಕಲಿಸಿದರೆ ಮುಂದಿನ ತರಗತಿಗಲ್ಲಿ ಸುಲಭವಾಗಿ ಇಂಗ್ಲೀಶ್ ಭಾಷೆಯನ್ನು ಕಲಿಯುತ್ತಾರೆ. ದಲಿತ ಸಮುದಾಯದವರಾದ **'ಸುಬ್ಬು ಹೊಲೆಯಾರ್'** ಎಂಬುವವರು ದಲಿತ ಸಮುದಾಯ ಅಗತ್ಯತೆಯ ಅಪೇಕ್ಷೆಯಂತೆ, ಒಂದನೇ ತರಗತಿಯ ಇಂಗ್ಲೀಶ್ ಕಲಿಕೆಯ ವ್ಯವಸ್ಥೆಯನ್ನು ಸ್ವಾಗತಿಸಿದ್ದಾರೆ. ಮಕ್ಕಳಿಗೆ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸುವುದು ಭಾರವೂ ಅಲ್ಲ, ಹಗುರವೂ ಅಲ್ಲ. ಆಟವಾಡುತ್ತಲೇ ಎಲ್ಲವನ್ನೂ ಕಲಿಯುತ್ತಾರೆ. ಸಾಮಾನ್ಯ ಮಕ್ಕಳು ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಯುತ್ತಾ, ಕನ್ನಡದಲ್ಲಿಯೇ ಬರೆಯುತ್ತಾ ಬದುಕುವುದು ಒಳ್ಳೆಯದು ಎಂದು ಹೇಳುತ್ತಾರೆ.

ಇಂಗ್ಲೀಶ್ ಭಾಷೆ ಕಲಿಕೆಯ ಪರವಾಗಿ ವಾದಿಸುವವರಲ್ಲಿ **'ಡಿ.ಆರ್.ನಾಗರಾಜ್'** ಅವರ ಅಭಿಪ್ರಾಯವೂ ಒಂದು. ಈಗಿನ್ ಇಂಗ್ಲೀಶ್ ಮೀಡಿಯಂ ಸ್ಕೂಲುಗಳಿಗಿರುವ

ನೂಕು ನುಗ್ಗಲವೇ ಇಂಗ್ಲೀಶ್ ಪರವಾಗಿರುವುದನ್ನು ವಿವರಿಸುತ್ತದೆ. ಇದರಿಂದ ಸಮಾಜದಲ್ಲಿ ಪ್ರತಿಷ್ಠಿತ ವರ್ಗಗಳು ತಮ್ಮ ಪ್ರಾಬಲ್ಯ ಸಾಧಿಸಲು ಒಂದು ಮಾರ್ಗವಾಗಿದೆ. ಇಂಗ್ಲೀಶ್ ಭಾಷೆಯ ನಿಯಮಗಳು ಪ್ರತಿಷ್ಠಿತ ವರ್ಗಗಳ ಪರವಾಗಿಯೇ ಇವೆ ಎಂಬುದು ಅರ್ಥವಾಗ ಬೇಕಾದರೆ ಇನ್ನೂ ಕೆಲವು ದಶಕಗಳೇ ಬೇಕಾದೀತು. ಇಂತಹ ಪರಿಸ್ಥಿತಿಯಲ್ಲಿ ಬರೀ ಕನ್ನಡ ಮಾಧ್ಯಮವೇ ಸರಿ ಎಂದು ಹಠ ಹಿಡಿದು ಕೂತರೆ ಪ್ರಯೋಜನವಿಲ್ಲ. ಕನ್ನಡ ಮಾಧ್ಯಮದಿಂದ ಬರುವ ಸಹಜ ಶೈಕ್ಷಣಿಕ ಲಾಭ ಮತ್ತು ಇಂಗ್ಲೀಶಿನಿಂದ ದತ್ತವಾಗುವ ಸಾಮಾಜಿಕ ಪ್ರಗತಿಯ ಅಧಿಕಾರ ಇವೆರಡನ್ನು ಒಟ್ಟಿಗೇ ಬೆರೆಸುವ ನೀತಿಯೊಂದನ್ನು ರೂಪಿಸಬೇಕಾಗಿದೆ. ಕನ್ನಡ ಮಾಧ್ಯಮದ ಜೊತೆಗೆ ಅತ್ಯುತ್ತಮ ಇಂಗ್ಲೀಶ್ ಕಲಿಸುವ ವ್ಯವಸ್ಥೆಯೊಂದನ್ನು ತಕ್ಷಣ ನಾವು ರೂಪಿಸಬೇಕಾಗಿದೆ ಎಂದು, ಪ್ರತಿಷ್ಠಿತ ಜಾತಿಗಳು ಪ್ರಗತಿ ಹೊಂದಿದ್ದೇ ಇಂಗ್ಲೀಶ್ ಕಾರಣಕ್ಕಾಗಿ, ಅದು ನಮಗೂ ಲಭ್ಯವಾಗಬೇಕು ಎಂದು ಒತ್ತಾಯಿಸುತ್ತಿದ್ದಾರೆ.

**'ಪ್ರೊ. ಕಿ.ರಂ. ನಾಗರಾಜ'** ಇಂಗ್ಲೀಶ್ ಕಲಿಕೆಯನ್ನು ಮಕ್ಕಳಿಗೆ ಕಲಿಸದಿದ್ದರೆ ಚಳುವಳಿ ಹೂಡುವ ಅಗತ್ಯತೆ ಬೀಳುತ್ತದೆ ಎನ್ನುವ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಇಂಗ್ಲೀಶ್ ವಿರೋಧಿಗೆ ಸರ್ಕಾರ ಮಣಿದು, ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸುವುದನ್ನು ಬಿಟ್ಟರೆ, ನಾವೂ ಪ್ರತಿಯಾಗಿ ಚಳುವಳಿ ಮಾಡುತ್ತೇವೆ ಎಂದು ಹೇಳಿದ್ದಾರೆ. ಹಳ್ಳಿ ಮಕ್ಕಳಿಗೆ ಕನ್ನಡದ ಜೊತೆಗೆ ಇಂಗ್ಲೀಶ್ ಕಲಿಸುವ ಮೂಲಕ ಹೊಸ ಅಗತ್ಯತೆಗಳಿಗೆ ಸಜ್ಜುಗೊಳಿಸಬೇಕು. ಹಳ್ಳಿ ನಗರ ಮಕ್ಕಳ ನಡುವಿನ ಶೈಕಣಿಕ ಅಂತರ ಕಡಿಮೆ ಮಾಡಲು ಇಂಗ್ಲೀಶ್ ಕಲಿಕೆ ಅಗತ್ಯ ಎಂದು ಹೇಳಿರುವರು. ಒಂದರಿಂದ ಏಳನೇ ವಯಸ್ಸಿನ ಮಕ್ಕಳು ಮೂರು ನಾಲ್ಕು ಭಾಷೆಗಳನ್ನು ಕಲಿಯಬಲ್ಲರು. ಇದಕ್ಕೆ **ರಮೈನ್, ಡ್ರೈಡನ್, ಜೀನೆಟ್ ವೋಸ್‌ರ ಈಚಿನ ಭಾಷಾ ಶಾಸ್ತ್ರೀಯ ಅಧ್ಯಯನಗಳು ಉದಾಹರಣೆಗಳಾಗಿವೆ. ಇದಕ್ಕೆ ಅಗ್ರಹಾರ ಕೃಷ್ಣಮೂರ್ತಿ, ಪ್ರೊ.ಎಸ್.ಜಿ.ಸಿದ್ಧರಾಮಯ್ಯ, ಕೆ.ಎಸ್.ಪುಟ್ಟಣ್ಣಯ್ಯ, ಸಿ.ಜಿ.ಕೆ, ಜಿ.ಶ್ರೀನಿವಾಸ, ಎಸ್.ಚಂದ್ರಶೇಖರ್** ಮುಂತಾದವರು ಬೆಂಬಲಿಸಿದ್ದಾರೆ.

**'ಪ್ರೊ. ಪಾರ್ವತಿ.ಜಿ.ಐತಾಳ್'** ಇಂಗ್ಲೀಶ್ ಭಾಷಾ ಮಾಧ್ಯಮಕ್ಕೆ ಸಹಮತಿಸಿದ್ದಾರೆ. ಭಾಷೆ ಕೇವಲ ಒಂದು ಭಾಷೆಯೇ ಹೊರತು. ಅದು ಯಾರ ಪಿತ್ರಾರ್ಜಿತ ಆಸ್ತಿಯೂ ಅಲ್ಲ. ಇಂಗ್ಲೀಶ್ ಇಂಗ್ಲೆಡ್, ಅಮೇರಿಕಕ್ಕೆ ಸೇರಿದ್ದು ಎಂದು ಏಕೆ ಭಾವಿಸಬೇಕು. ಭಾಷೆಯ ಮೇಲಿನ ತಿರಸ್ಕಾರ ಏಕೆ? ಆ ಗತ್ತಿನಲ್ಲಿ ಯಾರು ಯಾವ ಭಾಷೆಯನ್ನಾದರೂ ಕಲಿಯಬಹುದು. ಅದರಲ್ಲಿ ಯಾವ ಗುಲಾಮಗಿರಿಯ ಪ್ರಶ್ನೆ ಬರುತ್ತದೆ. ಉನ್ನತ ಶಿಕ್ಷಣಕ್ಕೆ ಅನಿವಾರ್ಯವಾಗಿರುವ ಇಂಗ್ಲೀಶನ್ನು ಸರಿಯಾಗಿ ಕಲಿಸುವ ವ್ಯವಸ್ಥೆ ಕನ್ನಡ ಮಾಧ್ಯಮ ಶಾಲೆಗಳಲ್ಲಿಲ್ಲದಿರುವುದರಿಂದ ಮಕ್ಕಳನ್ನು ಹೆತ್ತವರು ಇಂಗ್ಲೀಶ್ ಮಾಧ್ಯಮಕ್ಕೆ ಕಳಿಸುತ್ತಾರೆ. ಮಕ್ಕಳು ಪದವಿ ಹಂತಕ್ಕೆ ಬಂದರೂ ಸಹ ಇಂಗ್ಲೀಶ್‌ನಲ್ಲಿ ವಾಕ್ಯರಚನೆಯನ್ನು ಮಾಡಲಾಗುತ್ತಿಲ್ಲ. ಇಂತಹ ತೊಂದರೆಗಳನ್ನು

ಕಡಿಮೆ ಮಾಡುವ ಸಲುವಾಗಿಯಾದರೂ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ ನೀಡಬೇಕಾಗಿರುವುದು ಅವಶ್ಯಕ ಎಂಬುದು ಇವರ ಅಭಿಮತವಾಗಿದೆ.

ಒಂದನೇ ತರಗತಿಯಿಂದ ಮಕ್ಕಳಿಗೆ ಇಂಗ್ಲೀಶನ್ನು ಕಲಿಸಿದರೆ ಈ ತಪ್ಪುಗಳು ಆಗುವುದಿಲ್ಲ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ, ಇಂಗ್ಲೀಶ್ ಮಾಧ್ಯಮ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಒಂದನೇ ತರಗತಿಯಿಂದಲೇ ಇಂಗ್ಲೀಶನ್ನು ಕಲಿತಿದ್ದರೂ ಪರಿಪೂರ್ಣವಾಗಿ ಬಳಸಲು ಅಸಮರ್ಥರಾಗಿರುವವರೂ ಸಹ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ ಎನ್ನುವುದು ಗಮನಿಸಬೇಕಾದ ಸಂಗತಿಯಾಗಿದೆ. ಹಾಗಾಗಿ ಭಾಷೆಯನ್ನು ಕಲಿಸಿ ಕೊಡುವ ವಿಧಾನದ ವ್ಯವಸ್ಥೆಯಲ್ಲಿ ಸುಧಾರಣೆಗಳಾಗಬೇಕಾಗಿರುವುದು ಅಗತ್ಯದ ಅಂಶವಾಗಿದೆ.

**'ಗಾಯಿತ್ರಿ ಮಂಜುನಾಥ'** ಪ್ರಾಥಮಿದ ಶಿಕ್ಷಣದಲ್ಲಿ ಇಂಗ್ಲೀಶ್ ಕಲಿಸುವುದು ಉತ್ತಮ ಎಂದಿದ್ದಾರೆ. ಸರ್ಕಾರಿ ಶಾಲೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರು, ಸಾಹಿತಿ, ರಾಜಕಾರಣಿಗಳು ಇಂಗ್ಲೀಶ್ ವ್ಯಾಮೋಹಕ್ಕೆ ಬಿದ್ದಮೇಲೆ ಬಡ ಮಕ್ಕಳಿಗೆ ಇಂಗ್ಲೀಶ್ ಕಲಿಕೆ ಬೇಡವೆ? ಅದಕ್ಕಾಗಿ ಉತ್ತಮ ಗುಣಾತ್ಮಕ ಶಿಕ್ಷಣದ ಅವಶ್ಯಕತೆ ಇದೆ. ಎ.ಬಿ,ಸಿ,ಡಿಯನ್ನು ಕಲಿಸಿದ ತಕ್ಷಣ ಇಂಗ್ಲೀಶ್ ಬರುವುದಿಲ್ಲ. ಯಾವ ಭಾಷೆಯನ್ನು ಯಾವ ತರಗತಿಯಿಂದ ಕಲಿಸಬೇಕೆನ್ನುವ ಚರ್ಚೆಗಿಂತ ಕಲಿಸುವ ವಿಧಾನ, ಬೋಧಕರ ಪಾತ್ರ ಗಮನಾರ್ಹ. ಮಕ್ಕಳ ಕಲಿಕೆ ಅನ್ವಯ ಬೋಧಕರ ವಿಷಯ ಪರಿಣತೆಯು ನುರಿತ ಬೋಧಕರ ಅಗತ್ಯತೆಯು ಅವಶ್ಯಕತೆಯನ್ನು ಪೂರೈಸುತ್ತದೆ ಎಂದು ತಿಳಿಸಿದ್ದಾರೆ.

**'ಜಿ.ಎಸ್. ಶರ್ಮಾ'** ಇಂಗ್ಲೀಶ್ ಮಾಧ್ಯಮಕ್ಕೆ ಜಾರಿಗೆ ನೀಡಿರುವ ಹೈಕೋರ್ಟನ ತೀರ್ಪು ಉಚಿತವಾದುದು ಹಾಗೂ ಸ್ವಾಗತಾರ್ಹ. ತಮ್ಮ ಮಗು ಯಾವ ಭಾಷೆಯಲ್ಲಿ ಕಲಿಯಬೇಕು ಎಂದು ನಿರ್ಧರಿಸುವ ಹಕ್ಕು ಪ್ರತಿಯೊಬ್ಬ ತಂದೆ ತಾಯಿಗೂ ಇದೆ ಎಂದು ಸೂಚಿಸಿದ್ದಾರೆ.

ಹೈಕೋರ್ಟ ನೀಡಿರುವ ತೀರ್ಪು ೧೯೯೪ಳಕ್ಕೆ ಮುಂಚೆ ಇದ್ದ ೧,೧೦೦ ಅನುದಾನ ರಹಿತ ಶಾಲೆಗಳಿಗೆ ಅನ್ವಯವಾಗುತ್ತದೆ. ೧೯೯೪ಳರ ಭಾಷಾ ನೀತಿ ಕಾಯ್ದೆ ಅನ್ವಯ ನಂತರದಲ್ಲಿ ಆರಂಭವಾದ ಅನುದಾನ ರಹಿತ ಶಾಲೆಗಳು ಪೋಷಕರ ಪರವಾಗಿ ಸರಕಾರಕ್ಕೆ ಮನವಿ ಸಲ್ಲಿಸಿ ಇಂಗ್ಲೀಶ್ ಮಾಧ್ಯಮದಲ್ಲಿ ಆರಂಭಿಸಲು ಅನುಮತಿಯನ್ನು ಕೋರಲು ಅವಕಾಶವಿದೆ ಎಂದು **ಕೆ.ಎ.ಎಂ.ಎಸ್.ನ ಪ್ರಧಾನ ಕಾರ್ಯದರ್ಶಿ ಕೃಷ್ಣಯ್ಯರ್** ಹೇಳಿರುತ್ತಾರೆ.

ಹೈಕೋರ್ಟ ತೀರ್ಪು ಒಕ್ಕೂಟದ ಎಲ್ಲಾ ಸದಸ್ಯರಿಗೂ ಸಂತಸ ತಂದಿದೆ. ಇದರಿಂದ ಹೋರಾಟದಲ್ಲಿ ಶೇಕಡಾ ೭೫ರಷ್ಟು ಗೆದ್ದಂತಾಗಿದೆ. ಉಳಿದ ಶೇಕಡಾ ೨೫ರಷ್ಟು ಸರ್ಕಾರಕ್ಕೆ ಮನವಿ ಸಲ್ಲಿಸುವ ಮೂಲಕ ಗೆಲ್ಲುತ್ತೇವೆ. ಇದೊಂದು ಮಹತ್ವದ ತೀರ್ಪು. ಇದು ಮುಂದಿನ ಹೋರಾಟಕ್ಕೆ ಸ್ಫೂರ್ತಿ ನೀಡಿದೆ. ಸರ್ಕಾರ ನಮ್ಮ ಮನವಿ ಪುರಸ್ಕರಿಸದಿದ್ದರೆ ಸಂಘ ಪುನಃ ನ್ಯಾಯಾಲಯದ ಮೆಟ್ಟಿಲೇರುತ್ತದೆ ಎಂದು **ರಾಜ್ಯ ಖಾಸಗಿ ಶಾಲೆಗಳ ಆಡಳಿತ ಮಂಡಳಿ ಒಕ್ಕೂಟದ ಅಧ್ಯಕ್ಷ ಎಂ.ಎ. ಆನಂದ್** ತಿಳಿಸಿರುತ್ತಾರೆ.

ಸಾಮಾಜಿಕ ಸ್ಥಾನಮಾನ ಮತ್ತು ಆರ್ಥಿಕ ಉತ್ಪಾದನೆಯ ಅಂಗವಾಗಿ ಇಂಗ್ಲೀಶ್ ಮಾಧ್ಯಮದ ಕಲಿಕೆಯನ್ನು ಅಧಿಕವಾಗಿ ಅಪೇಕ್ಷಿಸುತ್ತಿದ್ದಾರೆ. ಅಪೇಕ್ಷಿಸುವವರಲ್ಲಿ ಮೇಲ್ವರ್ಗದವರು ಮುಂಚೂಣೆಯಲ್ಲಿದ್ದಾರೆ. ಇಂಗ್ಲೀಶ್, ಭಾಷಾಭಿಮಾನದ ಪ್ರಶ್ನೆಯಾಗಿ ಉಳಿದಿದೆ. ಇಂಗ್ಲೀಶ್ ಭಾಷೆ ಕುರಿತ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಇಂಗ್ಲೀಶ್ ಮಾಧ್ಯಮದ ಗೊಂದಲವನ್ನು ಪರಿಶೀಲಿಸಿ ಭಾಷೆಯ ಪ್ರಾಮುಖ್ಯತೆಯನ್ನು ತಗ್ಗಿಸಿ, ರಾಜ್ಯಾದ್ಯಂತ ಎಲ್ಲಾ ಶಾಲೆಗಳಲ್ಲೂ ಕನ್ನಡ ಮಾಧ್ಯಮವನ್ನು ಕಡ್ಡಾಯಗೊಳಿಸಬೇಕಾಗಿರುವುದು ಅಗತ್ಯವಾಗಿದೆ.

ಪ್ರಾಥಮಿಕ ಹಂತದ ಶಿಕ್ಷಣದ ಭಾಷೆಯ ಬಗೆಗೆ ಹೆಚ್ಚು ಚಿಂತನೆ ನಡೆಸುವವರು ಶಿಕ್ಷಣವನ್ನು ಯಾವ ಭಾಷೆಯಲ್ಲಿ ನೀಡಿದರೆ ಹೆಚ್ಚು ಅರ್ಥಪೂರ್ಣವಾಗುತ್ತದೆ ಎಂದು ಆಲೋಚಿಸುತ್ತಾರೆ. ಆದರೆ ಮಕ್ಕಳ ಹಿತಾಸಕ್ತಿ ಸಾಮಾಜಿಕ ಬೆಳವಣಿಗೆಗೆ ಆರ್ಥಿಕವಾಗಿ ತಂದೆ ತಾಯಿಯರು ಪೋಷಣೆ ಒದಗಿಸುತ್ತಾರೆ. ಆದ್ದರಿಂದ ಮಕ್ಕಳು ಯಾವ ಮಾಧ್ಯಮದಲ್ಲಿ ಶಿಕ್ಷಣ ಪಡೆಯುವುದು ಉಚಿತವೆಂದು ನಿರ್ಧರಿಸುವ ಹಕ್ಕನ್ನು ಸಂವಿಧಾನ ಪೋಷಕರಿಗೆ ಸಂಪೂರ್ಣವಾಗಿ ನೀಡಿರುತ್ತದೆ. ಈ ನಿಟ್ಟಿನಲ್ಲಿ ಶಿಕ್ಷಣ ತಜ್ಞರು ಮಗುವಿನ ಕಲಿಕೆಗೆ ಯಾವ ಭಾಷೆ ಹೆಚ್ಚು ಪ್ರೇರಣೆ ಒದಗಿಸುತ್ತದೆ ಮತ್ತು ಯಾವ ಭಾಷೆ ಸುಲಭವಾಗಿರುತ್ತದೆ ಎಂದು ಹೇಳಿರುವ ತಾತ್ವಿಕತೆಯನ್ನು ಅರ್ಥೈಸಿಕೊಳ್ಳಬೇಕಾಗಿರುವುದು ಅಗತ್ಯವಾಗಿದೆ.

**'ಎ.ಆರ್. ನಾರಾಯಣ ಘಟ್ಟ'** ಅವರು ತಿಳಿಸುವಂತೆ, ಪ್ರಾಥಮಿಕ ಹಂತದಲ್ಲಿ ಮಗು ತನ್ನ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದಿದ್ದೇ ಆದರೆ, ಮುಂದೆ ಪ್ರೌಢ ಹಾಗೂ ಪದವಿ ಹಂತದ ಶಿಕ್ಷಣವನ್ನು ಪರಿಶೀಲಿಸಿದಾಗ ಮಗುವಿನ ಬುದ್ಧಿಶಕ್ತಿ ಮತ್ತು ಮನೋಬುದ್ಧಿಗಳಲ್ಲಿ ಹೆಚ್ಚು ಶಕ್ತಿಶಾಲಿಯಾಗಿರುತ್ತದೆ. ಮಕ್ಕಳಿಗೆ ಅನ್ಯಭಾಷಾ ಕಲಿಕೆ ಯಾವಾಗಲೂ ಹೊರೆಯೇ. ಮಗುವಿಗೆ ಸುಲಭವಾಗಿ ಕಲಿಯುವಂತೆ ಮಾಡಬೇಕೆ ಹೊರತು ಅದು ಪ್ರಯಾಸವಾಗಬಾರದು. ಮಕ್ಕಳು ಆಲಿಸಿರುವ ವಿಷಯಗಳನ್ನು ಚೆನ್ನಾಗಿ ಗ್ರಹಿಸಿ ಮತ್ತೆ ತನ್ನ ಸ್ವಂತ ವಿಚಾರದಲ್ಲಿ ಅಭಿವ್ಯಕ್ತಿಗೊಳಿಸುವ ಪ್ರಕ್ರಿಯೆಯು ಮಾತೃಭಾಷೆ ಮಾಧ್ಯಮದಿಂದಲೇ ಪೂರ್ಣವಾಗುತ್ತದೆ. ಪರಭಾಷೆ ಮಾಧ್ಯಮದ ಕಲಿಕೆ ಕಂಠಪಾಠವಾಗಬಾರದು ಎಂದು ಮಾತೃಭಾಷಾ ಮಾಧ್ಯಮದ ಅಗತ್ಯತೆ ಅದರ ಮಹತ್ವವನ್ನು ಕುರಿತು ವಿವರಿಸಿದ್ದಾರೆ.

**'ಆರ್ಕೆ. ಮಣಿಪಾಲ್'** ಇಂಗ್ಲೀಶ್ ತನ್ನ ಅಂತರಾಷ್ಟ್ರಿಯ ಬಲದಿಂದ ನಮ್ಮನ್ನು ಆರ್ಥಿಕ ವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಕುಬ್ಜರನ್ನಾಗಿಸುತ್ತಾ ಬಂದಿದೆ. ಈ ವರ್ಗ ಆಳ್ವಿಕೆಯ ಅನಿಷ್ಟದ ಪ್ರತೀಕವಾಗಿ ಇಂಗ್ಲೀಶ್ ಮಾಧ್ಯಮಕ್ಕಾಗಿ ನಾವು ಹೋರಾಟದ ದಾರಿ ತಪ್ಪಿ ಅಪಾಯದಲ್ಲಿ ಮುಳುಗುವ ಸಾಧ್ಯತೆ ಇದೆ ಎಂದು ಹೇಳುತ್ತಾರೆ. ಸೋಪಜ್ಞತೆಯಿಲ್ಲದ ಆಂಗ್ಲ ಮಾಧ್ಯಮದ ಭಾಷಾ ಕಲಿಕೆ ವಿದ್ಯಾರ್ಥಿಗಳ ಬಾಹ್ಯ ಆಡಂಬರ, ಸಾಮಾಜಿಕ ಹುಸಿ ಪ್ರತಿಷ್ಠೆಗೆ ಅನುಕೂಲವಾಗುತ್ತದೆ. ಆದರೆ ಸೃಜನಶೀಲ ಪ್ರತಿಭೆಗೆ ಪ್ರೇರಣೆ ಒದಗಿಸುವುದಿಲ್ಲ. ಇವೆಲ್ಲಾ ವಿಚಾರಗಳು ಮಾತೃಭಾಷಾ ಕಲಿಕೆಗೆ ಒತ್ತು ನೀಡುತ್ತದೆ. ಪ್ರಾಥಮಿಕ ಶಿಕ್ಷಣ

ಕುರಿತಾದ ನಮ್ಮ ನಿರ್ಲಕ್ಷ್ಯ ಭಾಷಾ ಬೋಧನೆಯ ಅವೈಜ್ಞಾನಿಕತೆಗೆ ಸೂಚಕವಾಗಿದೆ. ಸರಕಾರವು ಕಡ್ಡಾಯ ಮಾತೃಭಾಷಾ ಕನ್ನಡ ಮಾಧ್ಯಮ ಶಿಕ್ಷಣವನ್ನು ಜಾರಿಗೆ ತರಲಾರದೆ, 'ಉಳ್ಳವರಿಗೆ ಉತ್ಕೃಷ್ಟ ಶಿಕ್ಷಣ; ಇಲ್ಲದವರಿಗೆ ದೂರ ಶಿಕ್ಷಣ' ಸೂತ್ರವನ್ನು ಅನುಸರಿಸುತ್ತಿದೆ. ಇಂದಿನ ಶಿಕ್ಷಣದಲ್ಲಿ ಅಂಕವೇ ಪ್ರಧಾನ ಮಾನದಂಡವಾಗಿದೆ. ಕನ್ನಡ ಭಾಷೆಯ ಪ್ರಗತಿಗೆ ತನ್ನಿಂದ ತಾನೆ ಪರಿಮಿತಿ ಒಡ್ಡುತ್ತದೆ. ಭಾಷೆ ಕೇವಲ ವ್ಯವಹಾರಕ್ಕಾಗಿ ಅಲ್ಲ, ಸೃಜನ ಶೀಲತೆ, ಕಾರ್ಯಶೀಲತೆಯ ಒದಗಿಸಲು ಮುಖ್ಯ ಸಾಧನ. ಅಂತಹ ಕನ್ನಡ ಭಾಷೆಯಲ್ಲಿ ಈ ಎಲ್ಲಾ ಅಂಶಗಳು ಅಂತಸ್ಥವಾಗಿದ್ದು, ಅವುಗಳನ್ನು ಕೈಗೂಡುವಂತೆ ಮಾಡುವುದು ಶಿಕ್ಷಣ ತಜ್ಞರ, ಶಿಕ್ಷಕರ ಬಹು ದೊಡ್ಡ ಕರ್ತವ್ಯವಾಗಿದೆ ಎಂದು ತಿಳಿಸಿದ್ದಾರೆ.

ಪ್ರಾಥಮಿಕ ಹಂತದಲ್ಲಿ ಇಂಗ್ಲೀಶ್‌ಗಿಂತಲೂ ಅತ್ಯಂತ ವೈಜ್ಞಾನಿಕ ಭಾಷೆಯಾದ ಕನ್ನಡದಲ್ಲಿ ವಿದ್ಯಾಭ್ಯಾಸ ಬಹಳ ಉತ್ತಮ ಎಂದು **ಜಿ.ವಿ. ಶ್ರೀನಾಥಶಾಸ್ತ್ರಿ** ಅವರು ವ್ಯಕ್ತಪಡಿಸುತ್ತಾರೆ. ಕನ್ನಡದಲ್ಲಿ ವಿದ್ಯಾಭ್ಯಾಸ ಮಾಡಿ ವಿಷಯಗಳನ್ನು ಅರಿಯುವ, ಕಲಿತ ವಿಷಯಗಳ ಬಗ್ಗೆ ಆಲೋಚಿಸುವ ಮತ್ತು ಅವುಗಳನ್ನು ಸ್ವಂತ ವಾಕ್ಯಗಳಲ್ಲಿ ಬರೆಯುವ ಶಕ್ತಿಯನ್ನು ಬಳಸಿಕೊಂಡ ಮಕ್ಕಳು ಇಂಗ್ಲೀಶನ್ನು ಸುಲಭವಾಗಿ ಕಲಿಯುತ್ತಾರೆ. ಪ್ರಾಥಮಿಕ ಹಂತದಲ್ಲಿ ಕನ್ನಡ ಕಲಿತು ನಂತರ ಇಂಗ್ಲೀಶ್ ಕಲಿತವರೇ ಮುಂದಿನ ಹಂತಗಳಲ್ಲಿ ಹೆಚ್ಚಿನ ಯಶಸ್ಸನ್ನು ಗಳಿಸಿದ್ದಾರೆ. ಕುವೆಂಪು ಆದಿಯಾಗಿ ಸಿ.ಎನ್.ಆರ್.ರಾವ್, ಯು.ಆರ್.ರಾವ್, ಡಾ.ಅಬ್ದುಲ್ ಕಲಾಂ ಇನ್ನು ಸಾವಿರಾರು ಜನರು ಇದಕ್ಕೆ ಸಾಕ್ಷಿಯಾಗಿದ್ದಾರೆ ಎಂದು ಹೇಳುತ್ತಾರೆ. ಕನ್ನಡ ಮಾಧ್ಯಮದಲ್ಲಿ ಕಲಿಯುವ ಮಕ್ಕಳಿಗೆ ಇಂಗ್ಲೀಶ್ ಭಯ ಬಿಡಿಸುವುದಷ್ಟೇ ಸಧ್ಯದಲ್ಲಿ ಆಗಬೇಕಾದ ಕೆಲಸ, ಕನ್ನಡದ ಜೊತೆಗೆ ಐದನೇ ತರಗತಿಯಿಂದ ಇಂಗ್ಲೀಶನ್ನು ಚೆನ್ನಾಗಿ ಕಲಿಸಬೇಕಾದುದೇ ಇದಕ್ಕೆ ಸರಿಯಾದ ಮಾರ್ಗ. ಕರ್ನಾಟಕದಲ್ಲಿ ಎಸ್.ಎಸ್,ಎಲ್.ಸಿ. ಅಥವಾ ಕನಿಷ್ಠ ಏಳನೇ ತರಗತಿಯವರೆಗಾದರೂ ಕಡ್ಡಾಯವಾಗಿ ಕನ್ನಡ ಮಾಧ್ಯಮವನ್ನು ನಿಗದಿಗೊಳಿಸಬೇಕೆಂದು ಒತ್ತಾಯಿಸಿದ್ದಾರೆ.

**'ಸಿ.ಆರ್. ಚಂದ್ರಶೇಖರ್'** ವಿವರಿಸುವಂತೆ, ಮನಶಾಸ್ತ್ರಜ್ಞರು ಮತ್ತು ಶಿಕ್ಷಣ ತಜ್ಞರ ಪ್ರಕಾರ ದೊಡ್ಡವರಿಗೆ ಹೋಲಿಕೆ ಮಾಡಿದರೆ ಚಿಕ್ಕ ವಯಸ್ಸಿನ ಮಕ್ಕಳು ಒಂದಕ್ಕಿಂತ ಹೆಚ್ಚಿನ ಭಾಷೆಗಳನ್ನು ಬೇಗ ಕಲಿಯಬಲ್ಲರು ಆದರೆ ಆ ಭಾಷೆಯನ್ನು ಮಾಧ್ಯಮವಾಗಿ ಬಳಸಬಾರದು. ವ್ಯವಹಾರಕ್ಕೆ ಬೇಕಾದಷ್ಟು ಭಾಷೆಗಳನ್ನು ಕಲಿಯಲು ಬಹುತೇಕ ಮಕ್ಕಳಿಗೆ ಕಷ್ಟವಾಗುವುದಿಲ್ಲ. ಆದ್ದರಿಂದ ಪ್ರಾಥಮಿಕ ಶಾಲೆಗಳಲ್ಲಿ ಅದು ಐದನೇ ತರಗತಿ ಇರಲಿ, ಮೂರನೇ ತರಗತಿ ಇರಲಿ ಇಂಗ್ಲೀಶ್ ಭಾಷೆಯನ್ನು ಐಚ್ಛಿಕವಾಗಿ ಕಲಿಯಲು ಅವಕಾಶ ಮಾಡಿ ಕೊಡಬೇಕು. ಸರಳವಾಗಿ ವ್ಯವಹರಿಸಲು ಬೇಕಾದ ಇಂಗ್ಲೀಶ್ ಭಾಷೆ ಸಾಕು.

ಮಗುವಿನ ಭಾಷೆ ಹೇಗೆ ಹಂತ ಹಂತವಾಗಿ ಬೆಳವಣಿಗೆ ಹೊಂದುತ್ತದೆ ಎಂಬುದನ್ನು ವೈಜ್ಞಾನಿಕ ತತ್ವ ಆಧಾರದ ಮೇಲೆ ಗುರಿತಿಸಿದ್ದಾರೆ. ಮಗು ಹುಟ್ಟಿದಾರಂಭದಿಂದ ಅಥವಾ

ಆರು ತಿಂಗಳಿಂದ ಹಿಡಿದು ಹಂತ ಹಂತವಾಗಿ ಶಬ್ಧಗಳಿಂದ, ಇತರರ ಸಂಭಾಷಣೆಗಳಿಗೆ ಶಬ್ಧಮಾಡುವ ಮೂಲಕ ಪ್ರತಿಕ್ರಿಯೆ ನೀಡುತ್ತದೆ. ನಂತರದಲ್ಲಿ ಪದಗಳನ್ನು ಗುರುತಿಸಲು ಕಲಿಯುತ್ತದೆ. ಜೊತೆಗೆ ಹೊಸ ಹೊಸ ಪದಗಳನ್ನು ಕಲಿಯುತ್ತಲೇ ಇರುತ್ತದೆ. ಚಿಕ್ಕ ಚಿಕ್ಕ ವಾಕ್ಯಗಳನ್ನು ಕಲಿಯಲು ಮುಂದಾಗುತ್ತದೆ. ಹೀಗೆ ಸುಮಾರು ಐದು ವರ್ಷವಾದಾಗ ಮಗು ಮನೆ ಮಾತನ್ನು ಚೆನ್ನಾಗಿ ಕಲಿತುಕೊಂಡಿರುತ್ತದೆ. ಆ ಭಾಷೆಯ ಮೂಲಕ ಸಂವಹನದ ತಿಳುವಳಿಕೆ ಸುಲಭವಾಗುತ್ತದೆ. ಪದ ಸಂಪತ್ತನ್ನು ವಿಸ್ತರಿಸುವುದು ಅವುಗಳಿಗೆ ಸುಲಭವಾಗುತ್ತದೆ. ಆದ್ದರಿಂದ ಮಗುವಿನ ತಾಯ್ನುಡಿಯಲ್ಲಿ ಶಿಕ್ಷಣ ನೀಡುವುದೇ ಅತ್ಯುತ್ತಮ ಎಂದು ಶಿಕ್ಷಣ ತಜ್ಞರು, ಮಾನಸಿಕ ತಜ್ಞರು ಒಕ್ಕೂರಲಿನಿಂದ ಸಾಬೀತುಪಡಿಸಿದ್ದಾರೆ.

ಯಾವುದೇ ಶಿಕ್ಷಣವನ್ನು ತಾಯ್ನುಡಿಯಲ್ಲಿ ಕೊಡಬೇಕು. ಇದು ಪಾಲಕರ ಶಿಕ್ಷಕರ ಹಾಗು ಸರ್ಕಾರದ ಜವಾಬ್ದಾರಿಯಾಗಬೇಕು. ಭಾವನೆ, ಅನುಭವಗಳನ್ನು ತಾಯ್ನುಡಿಯಲ್ಲಿಯೇ ಸಮರ್ಥವಾಗಿ ವ್ಯಕ್ತ ಪಡಿಸಲು ಸಾಧ್ಯ. ಮಾತೃಭಾಷೆಯನ್ನು ಸರಿಯಾಗಿ ಕಲಿಯದೇ ಇರುವವರಿಗೆ ಭಾಷೆಯ ಮೂಲಕ ತಮ್ಮ ಭಾವನೆಯನ್ನು ಅಭಿವ್ಯಕ್ತಿಸಲು ಕಷ್ಟವಾಗುತ್ತದೆ. ತಾಯ್ನುಡಿಯನ್ನು ಪರಿಣಾಮಕಾರಿಯಾಗಿ ಬಳಸುವಂತೆ ಮಗುವಿಗೆ ಶಿಕ್ಷಣ ನೀಡಬೇಕು. ಆ ಮೂಲಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೊಳಿಸುವುದರಿಂದ ಸಾಧ್ಯವಾಗುತ್ತದೆ ಎಂದು ವಿವರಿಸಿದ್ದಾರೆ.

ಮಕ್ಕಳು ಏಕಕಾಲದಲ್ಲಿ ೨-೩ ಭಾಷೆಗಳನ್ನು ಕಲಿಯುತ್ತಾರೆ. ಏನು ಕಲಿಸಿದರೂ ಕಲಿಯುವ ಸಾಮರ್ಥ್ಯವಿರುತ್ತದೆ ಎಂದು ನಾಲ್ಕು ಭಾಷೆಗಳನ್ನು ಹೇರುವುದು ಶೈಕ್ಷಣಿಕ ಅಪರಾಧವಾಗುತ್ತದೆಂದು **ಡಾ.ಜಿ.ರಾಮಕೃಷ್ಣ** ತಿಳಿಸುತ್ತಾರೆ. ಮಾತೃಭಾಷೆಯನ್ನು ಎರಡು ಮೂರು ವರ್ಷ ಕಲಿತ ನಂತರ ಇಂಗ್ಲೀಶ್ ಕಲಿತರೆ ತೊಂದರೆ ಏನೂ ಇಲ್ಲ. ಐದನೇ ತರಗತಿ ನಂತರ ಎರಡನೇ ಭಾಷೆಯನ್ನು ಕಲಿಸಬಹುದು. ಜಗತ್ತಿನ ಯಾವ ದೇಶದಲ್ಲಿ ಮಾತೃಭಾಷೆ ಯನ್ನು ಬಿಟ್ಟು ಮೊದಲ ತರಗತಿಯಿಂದಲೇ ಇಂಗ್ಲೀಶ್ ಕಲಿಸುವುದಿಲ್ಲ. ಕಲಿಸಿದರೆ ಅದು ಅವೈಜ್ಞಾನಿಕ ಎಂದು ಉಲ್ಲೇಖಿಸುತ್ತಾರೆ.

ಶಿಕ್ಷಣ ಮಾಧ್ಯಮ ಸಹ ಏಕ ಪ್ರಕಾರವಾಗದಿದ್ದರೆ ಸಮಾನ ಪಠ್ಯಕ್ರಮ ಸಾಧ್ಯವಿಲ್ಲ. ಕರ್ನಾಟಕದ ಸದ್ಯದ ಪರಿಸ್ಥಿತಿಯಲ್ಲಿ ಕನ್ನಡ ಮಾಧ್ಯಮ ಸಾರ್ವತ್ರಿಕವಾಗುವುದು ಸಾಧ್ಯವೇ ಇಲ್ಲ. ವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ನ್ಯಾಯಾಲಯ ಅಡ್ಡಬಂದರೆ ಸರ್ಕಾರಿ ಶಾಲೆಗಳು ಮಾತ್ರ ನಿಯಮವನ್ನು ಪಾಲಿಸಿ ಅಲ್ಲಿಯ ಮಕ್ಕಳು ಅಸಮಾನ ಸ್ಪರ್ಧೆಗೆ ತುತ್ತಾಗುತ್ತಾರೆ. ಶಿಕ್ಷಣವು ರಾಜ್ಯದ ಅಧೀನದಲ್ಲಿರಬೇಕು. ರಾಜ್ಯದಲ್ಲಿ ಕೇಂದ್ರದ ಪಠ್ಯವು ಕೇಂದ್ರಿಯ ಶಾಲೆಗಳಿಗೆ ಮಾತ್ರ ಸೀಮಿತವಾಗಿರಬೇಕು. ಇಲ್ಲದಿದ್ದರೆ ಕನ್ನಡ ಮಾಧ್ಯಮ ನಿರಂತರವಾಗಿ ಮರೀಚಿಕೆ ಯಾಗುತ್ತದೆಂದು ತಿಳಿಸಿರುತ್ತಾರೆ.

**'ಸಿ.ಎಚ್. ಕೃಷ್ಣ ಶಾಸ್ತ್ರಿ ಬಾಳಿಲ'** ಅವರು ತಮ್ಮ ಶಿಕ್ಷಣ ನೋಟ ಕೃತಿಯಲ್ಲಿ 'ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆ' ಕುರಿತು ಪರ ಹಾಗೂ ವಿರೋಧವಾಗಿ ವ್ಯಕ್ತಪಡಿಸಿರುವವರ ನಿಲುವುಗಳನ್ನು ಇಲ್ಲಿ ಸಮರ್ಥಿಸಿದ್ದಾರೆ.

ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಕೆಯನ್ನು ಆರಂಭಿಸುವ ಮೂಲಕ ಸಾಮಾಜಿಕ ಅಸಮಾನತೆ ಕೀಳರಿಮೆಗಳನ್ನು ತೊಲಗಿಸಲು ಸಾಧ್ಯವೆಂದು ವಾದಿಸುವವರಿಗೆ, ಸಾಮಾಜಿಕ ಅಸಮಾನತೆಯ ಮೂಲ ಕಾರಣವೇ ಬೇರೆ ಎಂದು ಹೇಳಬಹುದು. ಒಂದನೇ ತರಗತಿಯಿಂದ ಇಂಗ್ಲೀಶ್ ಭಾಷಾ ಕಲಿಯುವಿಕೆಗೂ ಯಾವ ಸಂಬಂಧವನ್ನು ಕಲ್ಪಿಸಲಾಗದು ಎಂದಿದ್ದಾರೆ. ಸರ್ಕಾರ ಶಿಕ್ಷಣದ ಭಾಷಾನೀತಿ ಕುರಿತಾಗಿ ಕೇವಲ ಕಾನೂನನ್ನು ಮಾಡುವ ಮೂಲಕ ಪರಿಗಣಿಸುವುದಷ್ಟೇ ಅಲ್ಲ, ಕಲಿಯುವ ಮಗುವನ್ನು, ಅದರ ಕಲಿಕೆಯ ಶಕ್ತಿಯನ್ನು, ಬೌದ್ಧಿಕ ಸಾಮರ್ಥ್ಯವನ್ನು, ಆ ವಯಸ್ಸಿಗೆ ಕಲಿಯುವ ಅಗತ್ಯವನ್ನು ಸಹ ಗಮನದಲ್ಲಿಟ್ಟುಕೊಂಡು ಶಿಕ್ಷಣ ನೀತಿಯನ್ನು ಜಾರಿಗೆ ತರುವುದು ಅಗತ್ಯವಾಗಿದೆ. ಆದಾಗ್ಯೂ ಸರ್ಕಾರ ವಾಸ್ತವಗಳನ್ನು ಅಲ್ಲಗಳೆದು ಯಾವುದೇ ತಾತ್ವಿಕ, ಸೈದ್ಧಾಂತಿಕ ಸಮರ್ಥನೆಗಳಿಲ್ಲದೆ ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸಲು ಪ್ರಾರಂಭಿಸಿದೆ. ಈ ಶೈಕ್ಷಣಿಕ ದುರಂತಕ್ಕೆ ನಮ್ಮ ಮಕ್ಕಳೇ ಬಲಿಯಾಗುವರೇ ಹೊರತು, ಇಂದು ನಾಳೆ ಬಂದು ಹೋಗುವ ಅಧಿಕಾರ ಪೀಠದಲ್ಲಿ ಉಳಿದ 'ಸರ್ವಜ್ಞ'ರಲ್ಲ ಎಂದಿದ್ದಾರೆ?

ಮತ್ತೋರ್ವ ಶಿಕ್ಷಣ ತಜ್ಞರಾದ **'ಡಾ. ಮಹಾಬಲೇಶ್ವರರಾವ್'** ಮಾತೃಭಾಷೆ ಹಾಗೂ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ ಕುರಿತಾಗಿ ಹಲವಾರು ಮಾಹಿತಿಗಳನ್ನು ಇಲ್ಲಿ ವಿಶ್ಲೇಸಿದ್ದಾರೆ. ಇಂಗ್ಲೀಶ್ ಕಲಿಕೆ ಮುಖ್ಯವಾಗಿರುವುದು ಪೋಷಕರಿಗೆ ಹಾಗು ಈ ನೀತಿಯನ್ನು ಜಾರಿಗೆ ತಂದಿರುವ ಸರ್ಕಾರಕ್ಕೆ. ಇಂಗ್ಲೀಶ್ ಮಾತನಾಡಲು ಬಾರದೇ ಹೋದರೆ ತಮ್ಮ ಮಕ್ಕಳಿಗೆ ಏಳ್ಗೆಯಿಲ್ಲ ಎಂಬ ಭಯದಲ್ಲಿ ಹೆತ್ತವರ ಕೂಗು ಪ್ರತಿಫಲಿಸುತ್ತದೆ ಎಂದೇ ಹೇಳಬಹುದು.

ಆದರೆ ಲೇಖಕರು ಹೇಳುವಂತೆ, ಇಲ್ಲಿ ಮಕ್ಕಳ ಪ್ರಾಥಮಿಕ ಶಿಕ್ಷಣವಾದರೂ ಕನ್ನಡ ಮಾಧ್ಯಮದಲ್ಲಿರಲಿ. ಮಾಧ್ಯಮ ಮುಖ್ಯವಲ್ಲ ಎಂಬ ಗ್ರಹಿಕೆ ಅವರನ್ನು ಮುಟ್ಟುತ್ತಿಲ್ಲ. ರಾಜ್ಯ ಸರ್ಕಾರ ಪ್ರೌಢ ಶಾಲಾ ಹಂತದವರೆಗೆ ಕನ್ನಡವೇ ಶಿಕ್ಷಣ ಮಾಧ್ಯಮವೆಂದು ಆಜ್ಞೆ ಹೊರಡಿಸಬೇಕಿತ್ತು. ಆದರೆ ಸಚಿವ ಸಂಪುಟ ಸಭೆಗಳು ಕನ್ನಡ ಮಾಧ್ಯಮದ ಬಲವರ್ಧನೆಗೆ ಅಧಿಕ ಮಹತ್ವ ನೀಡುವ ಬದಲು ಕಡ್ಡಾಯ ಇಂಗ್ಲೀಶ್ ಕಲಿಕೆ ಜಾರಿಗೆ ತರುವ ಬಗೆಗೆ ಆಲೋಚನೆಗಳನ್ನು ಬೆಳಸಿರುವುದು ಖೇದದ ಸಂಗತಿ. ಭಾಷೆಯನ್ನು ನಾವು ಯಾವ ಉದ್ದೇಶಗಳಿಗಾಗಿ ವಿವಿಧ ಹಂತಗಳಲ್ಲಿ ಕಲಿಸುತ್ತೇವೆ ಎಂಬುದು ಪರಿಶೀಲನಾರ್ಹ ವಿಚಾರ ವಾಗಿದೆ. ಒಂದು ಭಾಷೆಯನ್ನು ತಕ್ಕ ಮಟ್ಟಿಗೆ ಚೆನ್ನಾಗಿ ಓದಲೂ ಬರೆಯಲು ಕಲಿತ ಮೇಲೆ ಇನ್ನೊಂದು ಭಾಷೆಯನ್ನು ಪರಿಚಯಿಸಿದರೆ ಮಗುವಿಗೆ ಅಧಿಕ ಲಾಭಗಳಿವೆ. ದ್ವಿಭಾಷಿಕ ಮಕ್ಕಳ ಕಲಿಕೆ, ಹಾಗೂ ಗ್ರಹಿಕೆ ಉಳಿದ ಮಕ್ಕಳಿಗಿಂತಲೂ ಅಧಿಕವೆಂದು ಪ್ರಯೋಗಗಳಿಂದ ತಿಳಿದು ಬಂದಿದೆ. ಒಂದರಿಂದ ಏಳನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿತು ಎಂಟನೇ ತರಗತಿಯಿಂದ ಆಂಗ್ಲ ಮಾಧ್ಯಮಲ್ಲಿ ಕಲಿಯುವ ಮಕ್ಕಳು ನಿಜಕ್ಕೂ

ಅಧಿಕ ಲಾಭ ಗಳಿಸುತ್ತಾರೆ. ಎರಡೂ ಭಾಷೆಗಳಲ್ಲಿ ಉತ್ತಮ ಹಿಡಿತ ಲಭಿಸುವುದಲ್ಲದೇ ಭಾಷಾ ಬಳಕೆಯ ಸಾಧ್ಯತೆಗಳು ಅವರ ಪಾಲಿಗೆ ಹೆಚ್ಚುತ್ತವೆ. ಭಾಷೆ, ಭಾಷಾ ಬೋಧನೆ, ಕಲಿಕೆಯ ಸಂವರ್ಧನೆಗಳ ಬಗ್ಗೆ ವಿಧೇಯಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳದಿರುವುದು ನಮ್ಮ ಘೋರ ಅಪರಾಧ. ಒಂದನೇ ತರಗತಿಯಿಂದಲೇ ಮಕ್ಕಳ ಮೇಲೆ ಇಂಗ್ಲೀಶ್ ಹೇರಿಕೆ ಸಾಧುವಲ್ಲ. ಮೂರು ನಾಲ್ಕನೇ ತರಗತಿಯಲ್ಲಿ ಐಚ್ಛಿಕವಾಗಿ ಆರಂಭಿಸಿ ಈಗಿರುವಂತೆ ಐದರಿಂದ ಕಡ್ಡಾಯವಾಗಿರಲಿ. ವ್ಯವಸ್ಥಿತವಾಗಿ ಕಲಿಸುವ ವಿಧಾನ ರೂಪಗೊಳ್ಳಬೇಕು. ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಪರಿಣಾಮಕಾರಿ ಕನ್ನಡ ಬೋಧನೆ ಕಲಿಕೆ, ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶಿನ ಪರಿಣಾಮಕಾರಿ ಬೋಧನೆ ವ್ಯವಸ್ಥೆ ಮಾಡುವುದು ಅಗತ್ಯವಾಗಿದೆ.

ಒಂದನೇ ತರಗತಿಯಿಂದ ಕನ್ನಡದ ಜೊತೆಗೆ ಇಂಗ್ಲೀಶ್ ಕಲಿಸುವುದು ಮಗುವಿನ ಪಾಲಿಗೆ ಹೊರೆ. ಇದು ಕನ್ನಡದ ಸಂಸ್ಕೃತಿಗೆ ಬಾಧಕ. ಇಂಗ್ಲೀಶ್ ಕಲಿಕೆ ಒಂದನೇ ತರಗತಿಯಿಂದ ಬೇಡ. ಭಾಷಾ ನೀತಿಯನ್ನು ವೈಜ್ಞಾನಿಕ, ಮನೋವೈಜ್ಞಾನಿಕ ನೆಲೆಯಲ್ಲಿ ರಚಿಸುವ ಅವಶ್ಯಕತೆ ಇದೆ ಎಂದು ಮಗುವಿನ ಉತ್ತಮ ಕಲಿಕೆಯ ದೃಷ್ಟಿಯಿಂದ ಮಾಧ್ಯಮ ರಚನೆಯಾಗಬೇಕಿದೆ ಎಂದು ಹೇಳಿರುತ್ತಾರೆ.

ಈ ಹಿನ್ನೆಲೆಯಿಂದ ಶಿಕ್ಷಣ ತಜ್ಞರು ಹಾಗು ಶಿಕ್ಷಣ ಚಿಂತಕರು ಮುಖ್ಯವಾಗಿ ವ್ಯಕ್ತ ಪಡಿಸುವುದೇನೆಂದರೆ ಮಗುವಿನ ಭಾಷಾ ಕಲಿಕೆಯನ್ನು ವೈಜ್ಞಾನಿಕ ಹಾಗೂ ಮನೋವೈಜ್ಞಾನಿಕ ತತ್ವದ ಅಧಾರದ ಮೇಲೆ ಮಾಧ್ಯವೇ ಅಗತ್ಯವಾಗಿ ಪೂರೈಕೆಯಾಗಬೇಕು ಎಂದು ಸಾಬೀತು ಪಡಿಸಿದ್ದಾರೆ. ಆ ಮೂಲಕ ಮಗು ಕೇಂದ್ರಿತ ಶಿಕ್ಷಣವನ್ನು ರೂಪಿಸುವುದೇ ಹೆಚ್ಚು ಸೂಕ್ತ. ಇದರಿಂದ ಶೈಕ್ಷಣಿಕ ಬೆಳವಣಿಗೆ ತಾನಾಗಿಯೇ ಮುಂದುವರೆಯುತ್ತದೆ ಎಂದು ಹೇಳಬಹುದು.

ಈ ಅಭಿಪ್ರಾಯಗಳೇ ಪ್ರಮುಖವಾಗಿರದೆ, ಭಾಷಾ ನೀತಿ ರಚನೆ ಜಾರಿಗೆ ಬರಬೇಕು ಎಂಬ ಅಪೇಕ್ಷೆಯಿಂದಲೇ ರಚಿರುವಂತಹ ವರದಿಗಳು ಅಷ್ಟೇ ತೀವ್ರತೆಯನ್ನು, 'ಮಾತೃ ಭಾಷಾ ಮಾಧ್ಯಮದ ಶಿಕ್ಷಣವನ್ನು ಎತ್ತಿ ಹಿಡಿದಿವೆ. ಈ ವರದಿಗಳು ಮಾತೃಭಾಷಾ ಶಿಕ್ಷಣವನ್ನು ಜಾರಿಗೆ ತರುವಂತೆ ಸರ್ಕಾರಕ್ಕೆ ಒತ್ತಾಯಿಸಲಾಗಿದೆ. ಈ ವರದಿಗಳು ರಾಜ್ಯದ ಏಕೀಕರಣದ ನಂತರ ಜಾರಿಗೆ ಬಂದವುಗಳಾಗಿವೆ. ಶಿಕ್ಷಣ ಮಾಧ್ಯಮ ಕುರಿತು ರಚನೆಯಾಗಲು ಇದ್ದಂತಹ ಕಾರಣ ಮತ್ತು ರಚನೆಯ ನಂತರ ಅವುಗಳ ಕಾರ್ಯಗಳೇನು? ಮುಂದೆ ಅವು ಜಾರಿಯಲ್ಲಿ ಬಂದವೇ ಇಲ್ಲವೇ ಎಂಬುದನ್ನು ಪರಿಶೀಲಿಸಿದೆ. ಮತ್ತು ಅವುಗಳ ವಿಫಲತೆಗೆ ಕಾರಣಗಳನ್ನು ವಿಶ್ಲೇಷಿಸಲಾಗಿದೆ.

## ೬.೨. ವರದಿಗಳು

### ಜೆ.ಬಿ. ಮಲ್ಲಾರಾಧ್ಯವರದಿ : ೧೯೫೨

೧೯೫೨ ರಿಂದ ೧೯೫೫ರವರೆಗೆ ಜೆ.ಬಿ.ಮಲ್ಲಾರಾಧ್ಯರು ಶಿಕ್ಷಣ ನಿರ್ದೇಶಕರಾಗಿದ್ದಾಗ, ಮುಖ್ಯ ಮಂತ್ರಿಗಳಾದ ಕೆಂಗಲ್ ಹನುಮಂತಯ್ಯ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಜಾರಿಗೊಳಿಸಿದರು. ಅದರಲ್ಲಿ ಪ್ರಮುಖವಾಗಿ ಕೆಲವು ಶಿಫಾರಸ್ಸುಗಳನ್ನು ಮಾಡಲಾಯಿತು.

'ಪ್ರಾಥಮಿಕ ಶಾಲೆಯಲ್ಲಿ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ನೀಡಬೇಕು. ಕನ್ನಡಿಗರಲ್ಲದ ವಿದ್ಯಾರ್ಥಿಗಳಿಗೆ ಮೂರನೆ ತರಗತಿಯಿಂದ ಕನ್ನಡ ಭಾಷೆಯನ್ನು ಕಲಿಸಬೇಕು. ಇಂಗ್ಲೀಶ್ ಭಾಷೆಯನ್ನು ಐದನೇ ತರಗತಿಯಿಂದ ಪ್ರಾರಂಭಿಸಬೇಕು ಎನ್ನುವ ಉದ್ದೇಶದಿಂದ ಸಮಿತಿಯನ್ನು ಜಾರಿಗೆ ತರಲಾಯಿತು.

**ಗೋಕಾಕ ವರದಿ : ೧೯೮೦**

ಪ್ರಾಥಮಿಕ ಶಾಲೆಗಳಲ್ಲಿ ಸಂಸ್ಕೃತವನ್ನು ಕಲಿಸುವ ವ್ಯವಸ್ಥೆ ೧೯೫೦-೮೦ರವರೆಗಿನ ಆ ಸಂದರ್ಭದಲ್ಲಿ ಇರಲಿಲ್ಲ. ಆದರೆ ಪ್ರೌಢ ಶಾಲೆಗಳಲ್ಲಿ ಕನ್ನಡ, ತೆಲುಗು, ಹಿಂದಿ, ತಮಿಳು ಮುಂತಾದ ಭಾಷೆಗಳೊಂದಿಗೆ ಸಂಸ್ಕೃತ ಪ್ರಥಮ ಭಾಷೆಯಾಗಿತ್ತು. ಹೆಚ್ಚು ಅಂಕಗಳನ್ನು ಗಳಿಸುವ ಉದ್ದೇಶದಿಂದ ಸಂಸ್ಕೃತ ಭಾಷೆಯನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಇದರಿಂದ ಕನ್ನಡವನ್ನು ಮೊದಲ ಭಾಷೆಯಾಗಿ ಓದುವವರ ಸಂಖ್ಯೆ ಕಡಿಮೆಯಾಗಿತ್ತು. ಸುತ್ತಮುತ್ತಲ ಪರಿಸರದಲ್ಲಿ ಯಾರೂ ಮಾತನಾಡದ ಭಾಷೆಯನ್ನು ಶಾಲೆಗಳಲ್ಲಿ ಪ್ರಥಮ ಭಾಷೆಯನ್ನಾಗಿ ಆಯ್ಕೆ ಮಾಡಿಕೊಳ್ಳುವುದು ಅವೈಜ್ಞಾನಿಕವಾದ ಪದ್ಧತಿಯೆಂದು ಪರಿಗಣಿಸಲಾಯಿತು. ಮಗು ತನ್ನ ಸಾಮಾಜಿಕ ಪರಿಸರದಲ್ಲಿ ಬಳಕೆ ಮಾಡುತ್ತಿರುವ ಭಾಷೆಯಿಂದ ವ್ಯವಹರಿಸುವ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ಇದನ್ನೇ ಪ್ರಥಮ ಭಾಷೆ ಎಂದು ನಿರ್ಣಯ ಮಾಡಲಾಯಿತು. ಕನ್ನಡದಲ್ಲಿ ಮಕ್ಕಳ ಭಾಷಾ ಸಾಮರ್ಥ್ಯವನ್ನು ಬೆಳೆಸುವ ಉದ್ದೇಶದಿಂದ ಶಾಲೆಗಳಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಮಾಡಲು ಒಂದು ಶಿಫಾರಸ್ಸನ್ನು ಮಾಡಲಾಯಿತು. ಅದರನ್ವಯವಾಗಿ **ಜುಲೈ ೫, ೧೯೮೦ರಂದು ಡಾ.ವಿ.ಕೃ.ಗೋಕಾಕರ ಅಧ್ಯಕ್ಷತೆಯಲ್ಲಿ ಗೋಕಾಕ ವರದಿಯನ್ನು ಜಾರಿಗೆ ತರಲಾಯಿತು.** ಸರ್ಕಾರವನ್ನು ಒತ್ತಾಯಿಸಿ, ಸಂಸ್ಕೃತವನ್ನು ಪ್ರಥಮ ಭಾಷೆಯ ಸ್ಥಾನದಿಂದ ತೆಗೆದು ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಜಾರಿಗೆ ತಂದರು. ಅದರಂತೆ ಸಂಸ್ಕೃತವನ್ನು ತೃತೀಯ ಭಾಷೆಯಾಗಿ ಓದಲು ಅವಕಾಶ ನೀಡಲಾಯಿತು. ಮುಖ್ಯವಾಗಿ ಈ ವರದಿಯು, ಪ್ರೌಢಶಾಲಾ ಶಿಕ್ಷಣದ ಭಾಷಾ ನೀತಿಯನ್ನು ಕುರಿತು ರಚನೆಗೊಂಡಿದೆ. ಈ ವರದಿ ಪ್ರಕಾರ ಪ್ರೌಢಶಾಲೆಗಳಲ್ಲಿ ಕಡ್ಡಾಯ ಮೂರು ಭಾಷೆಗಳನ್ನು.

* ಪ್ರಥಮ ಭಾಷೆ ಕನ್ನಡ ೧೫೦ ಅಂಕಗಳಿಗೆ.
* ದ್ವಿತೀಯ ಭಾಷೆ (ಕನ್ನಡ, ಇಂಗ್ಲೀಶ್, ಹಿಂದಿ, ತೆಲುಗು ಇತರೆ.) ೧೦೦ ಅಂಕಗಳಿಗೆ
* ತೃತೀಯ ಭಾಷೆ (ದ್ವಿತೀಯ ಭಾಷೆಯನ್ನು ಹೊರತು ಪಡಿಸಿ ಇತರೆ ಯಾವುದೇ ಭಾಷೆ) ೫೦ ಅಂಕಗಳಿಗೆ ನಿಗದಿಪಡಿಸಲಾಗಿತ್ತು.

ಮುಂಚೆ ಇದರಲ್ಲಿ ತೃತೀಯ ಭಾಷೆಗೆ ಪರೀಕ್ಷಾ ಪದ್ಧತಿ ಕಡ್ಡಾಯವಾಗಿರಲಿಲ್ಲ. ಆದರೆ ೫೮ ಗೋಕಾಕ ಸಮಿತಿ ಈ ಮೂರು ಭಾಷೆಗಳಿಗೆ ಪರೀಕ್ಷೆಗಳನ್ನು ಕಡ್ಡಾಯಗೊಳಿಸಿತು.

ಕರ್ನಾಟಕದಲ್ಲಿ ಸ್ವಾತಂತ್ರ್ಯಕ್ಕೂ ಪೂರ್ವದಲ್ಲಿ ಬ್ರಿಟೀಷರ ಶೈಕ್ಷಣಿಕ ಪ್ರಭಾವದಿಂದಾಗಿ ಇಂಗ್ಲೀಶ್ ಶಾಲೆಗಳು ಏಕೀಕರಣದ ಪೂರ್ವದಲ್ಲಿ ಅಧಿಕವಾಗಿದ್ದವು. ಆದ್ದರಿಂದ ಇಂಗ್ಲೀಶ್ ಶಾಲೆಗಳ ಹಾವಳಿ ತಪ್ಪಿಸುವುದಕ್ಕಾಗಿ ಕನ್ನಡ ಶಾಲೆಗಳನ್ನು ಆರಂಭಿಸಿದರು. ಈ ಹಿನ್ನೆಲೆಯಲ್ಲಿ

ರಚಿತವಾದ ಮಲ್ಲಾರಾಧ್ಯ ವರದಿಯು ಕಡ್ಡಾಯವಾಗಿ ಜಾರಿಗೊಳ್ಳದೆ ಹಾಗೆ ಉಳಿಯು ವಂತಾಯಿತು. ಪ್ರಬಲ ರಾಜಕೀಯ ಹಾಗೂ ಸರ್ಕಾರದ ಬೆಂಬಲ, ಸಹಾಯ ವಿಲ್ಲದೆ ವರದಿ ನಿರಂತರವಾಗಿ ಜಾರಿಗೆ ಬರಲಿಲ್ಲವೆಂದೆನಿಸುತ್ತದೆ. ಅಲ್ಲದೆ ಇದೇ ಪರಿಸ್ಥಿತಿ ಮುಂದು ವರೆದು ಗೋಕಾಕ ವರದಿಯು ರೂಪುಗೊಂಡಿತು. ಕೇವಲ ಪ್ರೌಢ ಶಾಲೆಗಳಲ್ಲಿ ಸಂಸ್ಕೃತಕ್ಕೆ ಪ್ರಾಶಸ್ತ್ಯವಿದ್ದುದನ್ನು ತಿರಸ್ಕರಿಸಿ, ಪ್ರಾಥಮಿಕ ೧ ರಿಂದ ೪ನೇ ತರಗತಿವರೆಗೆ ಮಾತೃಭಾಷೆ ಮಾಧ್ಯಮವನ್ನು ಜಾರಿಗೆ ತಂದರು. ಪ್ರೌಢಶಾಲೆಗಳಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯವನ್ನು ಕಲ್ಪಿಸಲು ಉಗ್ರ ಸ್ವರೂಪದ ಹೋರಾಟ ಮೂಲಕವೇ ಸಾಧ್ಯವಾಯಿತು. ೧ ರಿಂದ ೪ನೇ ತರಗತಿವರೆಗೆ ಮಾತ್ರವೇ ಮಾತೃಭಾಷೆಯನ್ನು ಕಡ್ಡಾಯಗೊಳಿಸಿದ್ದು ಈ ವರದಿಯು ಅಸ್ತಿತ್ವಕ್ಕೆ ಬರದೆ ಮತ್ತೆ ಹಾಗೆಯೇ ಉಳಿಯುವಂತಾಯಿತು. ಎರಡನೆಭಾಷೆಯನ್ನು ಯಾವ ತರಗತಿಯಿಂದ ಅಧ್ಯಯನಕ್ಕೆ ಅಳವಡಿಸಬೇಕು ಎಂಬುದು ನಿಖರಗೊಳ್ಳಲಿಲ್ಲ. ಇದರಿಂದ ೧೯೮೬ರಲ್ಲಿ ಮತ್ತೆ ರಾಷ್ಟ್ರೀಯ ಶಿಕ್ಷಣ ನೀತಿ ಏಕಪ್ರಕಾರವಾಗಿ ಬೆಳೆದು ಬರುವಂತೆ ಭಾಷಾ ನೀತಿಯೊಂದನ್ನು ಜಾರಿಗೆ ತರಲಾಯಿತು.

ಎಂಟನೇ ತರಗತಿಯಿಂದ ಏಕೈಕ ಪ್ರಥಮ ಭಾಷೆಯಾಗಿ ಕನ್ನಡವನ್ನು ಒಂದು ಕಡ್ಡಾಯ ಭಾಷೆಯನ್ನಾಗಿ ಕಲಿಸಬೇಕೆಂದು ನಿರ್ಣಯವನ್ನು ಸಮಿತಿ ಹೊರಡಿಸಿತ್ತು. ಆದರೆ ಇದಕ್ಕೆ ಅಲ್ಪಸಂಖ್ಯಾತ ವಿರೋಧ ವ್ಯಕ್ತವಾಗಬಹುದೆಂದು ಪರಿಗಣಿಸಿ ಸರಕಾರ (ಮುಖ್ಯಮಂತ್ರಿ ಗುಂಡೂರಾವ್ ಅವರ ಕಾಲ) ಈ ನೀತಿಯನ್ನು ಜಾರಿಗೊಳಿಸಲಿಲ್ಲ. ಆದರೆ ಮತ್ತೆ ಗೋಕಾಕ ಸಮಿತಿಯವರು ಅನೇಕ ಸಾಹಿತಿಗಳು, ಕಲಾವಿದರು, ಬುದ್ಧಿ ಜೀವಿಗಳು, ಕನ್ನಡಿಗರ ದೊಡ್ಡ ಬೆಂಬಲದಿಂದ ತೀವ್ರ ಹೋರಾಟಕ್ಕೆ ಇಳಿದರು. ಇದರಿಂದ ಏಪ್ರಿಲ್ ೩೦.೧೯೮೨ ರಂದು ಹೊಸ ಭಾಷಾ ಶಿಕ್ಷಣ ವ್ಯವಸ್ಥೆಯನ್ನು ಹೊರಡಿಸಲಾಯಿತು. ಅದರ ಪ್ರಕಾರ

* ವಿದ್ಯಾರ್ಥಿಗಳು ಮೊದಲ ಭಾಷೆಯಾಗಿ ಮಾತೃಭಾಷೆಯನ್ನು ಆಯ್ಕೆಮಾಡಿ ಕೊಳ್ಳಬಹುದು.
* ಮೊದಲ ಭಾಷೆಯಾಗಿ ಕನ್ನಡವನ್ನು ಅಭ್ಯಾಸ ಮಾಡದಿದ್ದರೆ, ಕನ್ನಡವನ್ನು ಒಳಗೊಂಡಂತೆ ಎರಡು ಭಾಷೆಗಳನ್ನು ಆರಿಸಿಕೊಳ್ಳಬಹುದು.
* ಮೂರು ಭಾಷೆಗಳಿಗೆ ೧೦೦ ಅಂಕಗಳು ಇರುತ್ತವೆ.
* ಸಂಸ್ಕೃತವನ್ನು ಆರಿಸಿಕೊಳ್ಳುವಂತಿಲ್ಲ.

ಈ ಬಗೆಯ ನಿಯಮದಿಂದಾಗಿ ವರದಿಯು ಸ್ಪಷ್ಟಪಡಿಸಿದಂತೆ, ಕನ್ನಡವು ಏಕೈಕ ಪ್ರಥಮ ಭಾಷೆಯಾಗಲಿಲ್ಲ. ಮತ್ತು ಕನ್ನಡಕ್ಕೆ ಅಗ್ರಸ್ಥಾನ ದೊರೆಯಲಿಲ್ಲಿ. ಕನ್ನಡವನ್ನು ಮೂರನೆಯ ಭಾಷೆಯಾಗಿ ಆರಿಸಿದ್ದರೆ, ಕನ್ನಡ ಕಡ್ಡಾಯವಾಗುವುದಿಲ್ಲ ಎಂದು, "ಕನ್ನಡಕ್ಕೆ ಅಗ್ರಸ್ಥಾನ" ದೊರೆಯಬೇಕು ಎಂದು "ಗೋಕಾಕ ವರದಿ ಪೂರ್ತಿಯಾಗಿ ಜಾರಿಗೆ" ಬರಲಿ ಎಂದು ಉಗ್ರ ಹೋರಾಟವನ್ನು ಮಾಡಲಾಯಿತು. ಈ ಹೋರಾಟದ ಪ್ರತಿಫಲದಿಂದಾಗಿ ಜುಲೈ ೨೦, ೧೯೮೨ ರಂದು 'ಗೋಕಾಕ್ ಭಾಷಾ ಸೂತ್ರ ಜಾರಿಗೆ ಬರುವಲ್ಲಿ ಯಶಸ್ವಿ ಯಾಯಿತು. ಅದರ ಕೆಲವು ಶಿಫಾರಸ್ಸುಗಳು ಈ ರೀತಿಯಾಗಿವೆ.

* ಪ್ರೌಢ ಶಾಲೆಯಲ್ಲಿ ಕನ್ನಡ ೧೨೫ ಅಂಕಗಳಿಗೆ ಕಡ್ಡಾಯ ಭಾಷೆಯಾಗಿ.
* ಉರ್ದು, ತಮಿಳು, ತೆಲಗು, ಮರಾಠಿ, ಇಂಗ್ಲೀಶ್, ಹಿಂದಿ ಕನ್ನಡ ಮುಂತಾದ ಭಾಷೆಗಳಲ್ಲಿ. ಎರಡು ಭಾಷೆಗಳನ್ನು (೧೦೦ ಅಂಕಗಳಿಗೆ) ಆಯ್ಕೆ ಮಾಡಿಕೊಳ್ಳಬಹುದು.

ಈ ನಿಯಮದಿಂದಾಗಿ ಮತ್ತೆ ಭಾಷಾ ಅಲ್ಪಸಂಖ್ಯಾತರು ಈ ಭಾಷಾ ತೀರ್ಪನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಕ್ಕೆ ರಿಟ್ ಅರ್ಜಿಯನ್ನು ಸಲ್ಲಿಸಿತ್ತು. ಮೊದಲನೇ ತರಗತಿಯಿಂದಲೇ ಕನ್ನಡವನ್ನು ಕನ್ನಡೇತರರಿಗೂ ಕಡ್ಡಾಯ ಮಾಡಿದರೆ, ಅಲ್ಪಸಂಖ್ಯಾತರ ಸವಲತ್ತನ್ನು ಕಸಿದು ಕೊಂಡಂತಾಗುವುದಿಲ್ಲವೆ? ಮತ್ತು ಪ್ರೌಢ ಶಾಲೆಗಳಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯನ್ನಾಗಿ ಮಾಡುವುದರಿಂದ ಮಾತೃಭಾಷೆಯ (ಸ್ಥಾನಕ್ಕೆ) ಅಭ್ಯಾಸಕ್ಕೆ ತೊಂದರೆ ಯಾಗುವುದಿಲ್ಲವೇ? ಎಂದು ಪ್ರಶ್ನಿಸಿದ್ದನ್ನು ಪರಿಗಣಿಸಿ ಉಚ್ಚ ನ್ಯಾಯಾಲಯ ಪೂರ್ಣ ಪೀಠವು ೨೫-೧-೧೯೮೯ರಂದು ಭಾಷಾ ಸೂತ್ರದ ಬಗ್ಗೆ ತೀರ್ಪನ್ನು ಹೊರಡಿಸಿತು. ಅದರಂತೆ ಅಲ್ಪ ಸಂಖ್ಯಾತರ ಶಾಲೆಗಳಲ್ಲೂ ಒಂದನೇ ತರಗತಿಯಿಂದಲೇ ಕನ್ನಡವನ್ನು ಕಡ್ಡಾಯ ಮಾಡಲಾಯಿತು.

* ಸಾಮಾನ್ಯವಾಗಿ ಯಾವ ತರಗತಿಯಿಂದ ಎಲ್ಲಾ ವಿದ್ಯಾರ್ಥಿಗಳು ಎರಡನೆಯ ಭಾಷೆಯನ್ನು ಕಲಿಯುತ್ತಾರೋ ಆ ತರಗತಿಯಿಂದ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯನ್ನು ಕಡ್ಡಾಯ ಮಾಡಲಾಯಿತು.
* ಪ್ರೌಢ ಶಾಲೆಗಳಲ್ಲಿ ವಿದ್ಯಾರ್ಥಿಗಳು ಅಭ್ಯಾಸ ಮಾಡುವ ಮೂರು ಭಾಷೆಗಳಲ್ಲಿ ಕನ್ನಡವನ್ನು ಕಡ್ಡಾಯ ಭಾಷೆಯನ್ನಾಗಿ ಮಾಡಲು ಸರ್ಕಾರಕ್ಕೆ ಅಧಿಕಾರವಿದೆ ಎಂಬುದನ್ನು ತಿಳಿಸಿತು. ಈ ರೀತಿ ಜಾರಿಗೆ ಬಂದಿರುವ ತೀರ್ಪಿನ ಅನ್ವಯ ಕಿರಿಯ ಪ್ರಾಥಮಿಕ ಶಾಲೆ ೧ ರಿಂದ ೪ನೇ ತರಗತಿಯವರೆಗೆ ಮಾತೃಭಾಷೆ ಕಲಿಕೆಯನ್ನು ಮಾತ್ರ ಕಡ್ಡಾಯಗೊಳಿಸಿರುತ್ತದೆ.

**ರಾಷ್ಟ್ರೀಯ ಶಿಕ್ಷಣ ನೀತಿ : ೧೯೮೬**

೧೯೮೬ರಲ್ಲಿ ರಾಜೀವಗಾಂಧಿ ಪ್ರಧಾನಿಯಾಗಿದ್ದಾಗ ಶಿಕ್ಷಣದ ಸವಾಲುಗಳು ಎಂಬ ದಸ್ತಾವೇಜನ್ನು ಸಿದ್ಧಪಡಿಸಲಾಯಿತು. ದೇಶಾದ್ಯಂತ ಶಿಕ್ಷಣ ತಜ್ಞರ, ಚಿಂತಕರ ಆಯೋಜಕರ ಸಲಹೆಗಳನ್ನು ಪಡೆದು ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಜಾರಿಗೆ ತಂದರು. ಅದನ್ನು ದೇಶಾದ್ಯಂತ ಎಲ್ಲಾ ರಾಜ್ಯಗಳು ಅನುಸರಿಸಬೇಕು ಎಂದು ಕಡ್ಡಾಯಗೊಳಿಸಿದರು.

ಸ್ವಾತಂತ್ರ ನಂತರವೂ ಸಹ, ಬ್ರಿಟೀಷರ ಪ್ರಭಾವದಿಂದಾಗಿ ಇಂಗ್ಲೀಶ್ ಭಾಷೆ, ಶಿಕ್ಷಣ ಸಂಸ್ಕೃತಿಗಳು ಭಾರತೀಯರಲ್ಲಿ ಆಳವಾಗಿ ಬೇರೂರಿದ್ದವು. ಅಂತಹ ಇಂಗ್ಲೀಶ್ ಭಾಷೆಯ ಬಳಕೆಯಿಂದ ಎದುರಿಸಬೇಕಾದ ಸಮಸ್ಯೆಗಳು ತೀವ್ರವಾಗತೊಡಗಿದ್ದವು. ಜೊತೆಗೆ ಇಂಗ್ಲೀಶ್ ಮಾತ್ರವಲ್ಲದೆ ಹಿಂದಿ, ತೆಲುಗು, ತಮಿಳು, ಮರಾಠಿ ಮುಂತಾದ ಭಾಷೆಗಳ ಪ್ರಭಾವವು ಏಕಕಾಲದಲ್ಲಿ ನೆಲೆಗೊಂಡಿದ್ದವು. ಈ ಕಾರಣದಿಂದ ಆ ಪ್ರದೇಶಗಳಲ್ಲಿ ಯಾವ ಭಾಷೆಯನ್ನು

ಅಧಿಕೃತವಾಗಿ ಬಳಸಬೇಕು ಎನ್ನುವ ದೃಷ್ಟಿಯಿಂದ ಭಾಷಾ ನೀತಿ ಜಾರಿಗೊಳ್ಳುವಂತಾಯಿತು. ಈ ವರದಿಯ ಪ್ರಕಾರ ಪ್ರಾಥಮಿಕ ಶಾಲಾ ಹಂತದಲ್ಲಿ ಮಾತೃಭಾಷಾ ಶಿಕ್ಷಣವನ್ನು ಬೋಧನಾ ಮಾಧ್ಯಮವಾಗಿ ಜಾರಿಗೆ ತರುವಂತೆ ಸೂಚಿಸಿತು. ಈ ನೀತಿಯನ್ವಯ ಕರ್ನಾಟಕದಲ್ಲಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ವಿದ್ಯಾರ್ಥಿಗಳು ಮಾತೃ ಭಾಷೆಯನ್ನು ಅಥವಾ ಪ್ರಾದೇಶಿಕ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಬೇಕು ಎಂದಾಯಿತು. ಅಲ್ಪ ಸಂಖ್ಯಾತ ವಿದ್ಯಾರ್ಥಿಗಳು (ತೆಲುಗು, ತಮಿಳು, ಉರ್ದು ಇತ್ಯಾದಿ) ತಮ್ಮ ಮಾತೃ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಬೇಕು. ಐದನೇ ತರಗತಿಯಿಂದ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಮತ್ತು ತೃತೀಯ ಭಾಷೆಯಾಗಿ ಇಂಗ್ಲೀಶ್ ಅಥವಾ ಹಿಂದಿಯನ್ನು ಕಲಿಯಬೇಕು. ತ್ರಿಭಾಷಾ ಸೂತ್ರದನ್ವಯದಂತೆ ಈ ಭಾಷಾ ನೀತಿಯನ್ನು ಜಾರಿಗೆ ತರಲಾಯಿತು.

ಈ ನೀತಿಯ ಪ್ರಕಾರ ಪ್ರಾಥಮಿಕ ಹಂತದಲ್ಲಿ ಮೂರು ಭಾಷೆಗಳನ್ನು ಇವತ್ತಿಗೂ ಶಿಕ್ಷಣದಲ್ಲಿ ಅಳವಡಿಸಲಾಗಿದೆ. ಆದರೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಭಾಷೆಗಳಲ್ಲಿ ವ್ಯತ್ಯಾಸಗಳುಂಟಾಗಿ ಅನೇಕ ಗೊಂದಲಗಳು ನಿರ್ಮಾಣವಾಗಿವೆ.

ಈ ತ್ರಿಭಾಷಾ ಸೂತ್ರ ಜಾರಿಗೆ ಬಂದ ನಂತರ ಹೆಚ್ಚಿನ ಮನ್ನಣೆಯನ್ನು ಪಡೆಯು ವಂತಾಗಿದೆ. ಈ ಭಾಷಾ ನೀತಿಯೇ ಒಂದು ಅಂತಿಮ ಸ್ವರೂಪವನ್ನು ಬೆಳೆಸಿಕೊಂಡು ಬರಲು ಅನುಕೂಲವಾಯಿತು. ಇಂದಿಗೂ ಸಹ ಭಾರತದಾದ್ಯಂತ ಈ ನೀತಿಯೇ ಶಿಕ್ಷಣ ಕ್ರಮದಲ್ಲಿ ಜಾರಿಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

**ಉಚ್ಛನ್ಯಾಯಾಲಯದ ತೀರ್ಪು : ೧೯೮೯**

ಪ್ರಾಥಮಿಕ ಮಾತೃ ಭಾಷಾ ಶಿಕ್ಷಣಕ್ಕೆ **ರಾಜ್ಯದ ಉಚ್ಛನ್ಯಾಯಾಲಯದ ನ್ಯಾಯ ಮೂರ್ತಿಗಳಾದ ಶ್ರೀ ರಾಮಾಜೋಯಿಸ್ ಮತ್ತು ಶ್ರೀ ರಾಜೇಂದ್ರಬಾಬು** ಅವರ ಪೂರ್ಣ ಪೀಠವು ಒಂದು ತೀರ್ಪನ್ನು ಹೊರಡಿಸಿದೆ. ಮಾತೃ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕೊಡಲು ಸಹಾಯಾನುದಾನ ಸಂಹಿತೆಯು ೧೨(i) ಮತ್ತು (ii)ನೇ ನಿಯಮವು ಹಿತಕರ ಮತ್ತು ತತ್ವಾಧಾರವಿದೆ ಎಂದು ತಿಳಿಸಿದ್ದಾರೆ. ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಿಕ್ಷಣವನ್ನು ೪ನೇ ತರಗತಿಯವರೆಗೆ ಮಾತೃ ಭಾಷೆಯಲ್ಲಿ ನೀಡಬೇಕೆಂದು ತನ್ನ ತೀರ್ಪನ್ನು ನೀಡಿರುತ್ತದೆ. ಮಾತೃಭಾಷೆಯಲ್ಲಿಯೇ ಮಕ್ಕಳಿಗೆ ಶಿಕ್ಷಣವನ್ನು ಕೊಡುವುದರಿಂದ ಮಕ್ಕಳು ಯಾವುದೇ ತೊಂದರೆ ಇಲ್ಲದೆಯ ಸ್ಪಷ್ಟವಾಗಿ ಆಲೋಚಿಸಬಲ್ಲವರಾಗಿರುತ್ತಾರೆ. ಅಲ್ಲದೆ ಗ್ರಹಿಸಬಲ್ಲವರಾಗಿರುತ್ತಾರೆ ಎಂದು ಪ್ರಾಥಮಿಕ ಶಾಲೆಯಲ್ಲಿ ನೀಡುವ ಮಾತೃಭಾಷೆಯಲ್ಲಿನ ಶಿಕ್ಷಣ ಭಾಷಾ ಅಲ್ಪಸಂಖ್ಯಾತರ ಹಿತದೃಷ್ಟಿಗನುಗುಣವಾಗಿದೆ ಎಂದು ಪೂರ್ಣ ಪೀಠವು ವಿವರಣೆ ನೀಡಿದೆ. ಆದರೆ ಸರಕಾರವು ಅನ್ಯ ಭಾಷೆ ಅಂದರೆ ಕನ್ನಡ, ಇಂಗ್ಲೀಶ್ ಕಲಿಕೆಗೆ ಒತ್ತಾಯಿಸಿರುವುದನ್ನು ಅಪೇಕ್ಷಿಸಿ ಅಲ್ಪಸಂಖ್ಯಾತರು ಮಾತೃಭಾಷೆ ಕಲಿಕೆ ಕುರಿತು ನ್ಯಾಯ ಪೀಠಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ಅಲ್ಪಸಂಖ್ಯಾತರ ಅರ್ಜಿಯನ್ನು ಪರಿಗಣಿಸಿ ಸರಕಾರ

ಅನ್ಯಭಾಷಾ ಕಲಿಕೆಗೆ ಹೊರಡಿಸಿರುವ ಆದೇಶವು ಸಂವಿಧಾನಾತ್ಮಕ ಹಕ್ಕನ್ನು ಉಲ್ಲಂಘಿಸಿರುವುದಾಗಿ ಪೂರ್ಣ ಪೀಠವು ೨೯.೪.೯೪ ರಂದು ಅಂತಿಮ ತೀರ್ಪನ್ನು ನೀಡಿರುತ್ತದೆ. ಈ ತೀರ್ಪಿನಿಂದ ೧ನೇ ತರಗತಿಯಿಂದ ೪ನೇ ತರಗತಿಯವರೆಗೆ ಅನ್ಯಭಾಷಾ ಕಲಿಕೆ ಸೂಕ್ತವಲ್ಲ. ಮಗುವಿನ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು ಎಂಬುದನ್ನು ಸ್ಪಷ್ಟಪಡಿಸಿರುತ್ತದೆ.

* ೧ ರಿಂದ ೪ನೇ ತರಗತಿಯವರೆಗೆ ಮಾತೃಭಾಷೆಯೇ ಶಿಕ್ಷಣ ಮಾಧ್ಯಮ ಒಂದು ಭಾಷೆಯಲ್ಲಿ ಮಾತ್ರ ಅಧ್ಯಯನದ ವಿಷಯಗಳನ್ನು ಬೋಧಿಸಬೇಕು.
* ೩ನೇ ತರಗತಿಯಿಂದ ಕನ್ನಡೇತರರಿಗೆ ಕನ್ನಡ ಐಚ್ಛಿಕ ವಿಷಯ ಬೋಧಿಸಬೇಕು. ಆದರೆ ವರ್ಷದ ಕೊನೆಯಲ್ಲಿ ಕನ್ನಡದಲ್ಲಿ ಪರೀಕ್ಷೆ ಇಲ್ಲ.
* ೫ನೇ ತರಗತಿಯಿಂದ ಎರಡನೇ ಭಾಷೆಯನ್ನು ಕಲಿಸಬೇಕು. ಕನ್ನಡೇತರರಿಗೆ ಕನ್ನಡ ಕಲಿಕೆ ಕಡ್ಡಾಯ, ಕನ್ನಡ ವಿದ್ಯಾರ್ಥಿಗಳಿಗೆ ಇನ್ನೊಂದು ಭಾಷೆ ಕಲಿಕೆ ಕಡ್ಡಾಯ. ಅದೇ ವರ್ಷದಿಂದ ಮೂರನೇ ಭಾಷೆಯ ಕಲಿಕೆಯನ್ನು ಕಡ್ಡಾಯಗೊಳಿಸಿರುತ್ತದೆ.

**ಎಚ್. ನರಸಿಂಹಯ್ಯ ವರದಿ : ೧೯೯೧**

ಗೋಕಾಕ ವರದಿಯ ಅಂಗೀಕಾರದ ನಂತರ ಸರ್ಕಾರ ಅಧಿಕೃತವಾಗಿ ಇಂಗ್ಲೀಶ್ ಮಾಧ್ಯಮ ಶಾಲೆಗಳಿಗೆ ಅನುಮತಿಯನ್ನು ನಿಲ್ಲಿಸಿದರೂ ಅನಧಿಕೃತವಾಗಿ ಇಂಗ್ಲೀಶ್ ಮಾಧ್ಯಮ ಶಾಲೆಗಳು ತಲೆ ಎತ್ತಿದ್ದವು. ಇವುಗಳ ಮೇಲೆ ಸರಿಯಾದ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿ, ಎಸ್.ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಸರಕಾರದ ವತಿಯಿಂದ ಒಂದು ಸಮಿತಿಯನ್ನು ರಚಿಸಿದ್ದರು. ಎಚ್. ನರಸಿಂಹಯ್ಯ ಅವರು ಆ ಸಮಿತಿಯ ಪ್ರಮುಖ ಸದಸ್ಯರಾಗಿದ್ದುದರಿಂದ ಸಮಿತಿಗೆ ಅವರ ಹೆಸರೇ ನಾಮಕರಣವಾಯಿತು.

ಪ್ರಾಥಮಿಕ ಶಾಲಾ ಶಿಕ್ಷಣ ಮಾಧ್ಯಮ ಕುರಿತಾಗಿ ೧ ರಿಂದ ೪ನೇ ತರಗತಿಯವರೆಗೆ ಮಾತೃಭಾಷಾ ಅಥವಾ ಕನ್ನಡವೇ ಶಿಕ್ಷಣ ಮಾಧ್ಯಮವಾಗಿರಬೇಕು ಎಂದು ಶಿಫಾರಸ್ಸು ಮಾಡಿರುತ್ತದೆ. ಆದರೆ ಇದನ್ನು ಸರ್ಕಾರ ಅಂಗೀಕರಿಸಿದರೂ, ಅನುದಾನ ಸಂಹಿತೆ ೧೨ ಎ ಪ್ರಕಾರ ಆಂಗ್ಲ ಮಾಧ್ಯಮ ಶಾಲೆಗಳಿಗೆ ಅನುಮತಿ ನೀಡಬಹುದು ಎಂದು ತಿಳಿಸಿತು.

ಈ ನಿರ್ಣಯದಿಂದಾಗಿ, ಮತ್ತೆ ಕನ್ನಡ ಭಾಷಾ ಮಾಧ್ಯಮ ಅಧಿಕೃತವಾಗಿ ಕಡ್ಡಾಯವಾಗದೇ ಹಾಗೆಯೇ ಉಳಿಯಲು ಮತ್ತೊಂದು ಬಗೆಯ ರಹದಾರಿಯನ್ನು ನಿರ್ಮಿಸಿ ಕೊಟ್ಟಂತಾಯಿತು. ಕನ್ನಡ, ಭಾಷಿಕವಾಗಿ ಬೆಳೆಯಲು ಅಧಿಕೃತ ಬೆಂಬಲ ದೊರೆಯದೇ ಹೋಯಿತು. ಕನ್ನಡ ಮಾಧ್ಯಮವನ್ನು ಏಳನೇ ತರಗತಿಯವರೆಗೆ ಕಡ್ಡಾಯಗೊಳಿಸಿದ್ದುದು ಕಾರಣ ಎಂದಾಯಿತು. ಭಾಷಾ ನೀತಿಗೆ ಮತ್ತಷ್ಟು ಸಡಿಲತೆಯನ್ನು ಒದಗಿಸಿಕೊಟ್ಟಂತಾಯಿತು. ಬಂಗಾರಪ್ಪನವರು ಆ ಸಮಯದಲ್ಲಿ ಮುಖ್ಯಮಂತ್ರಿ ಸ್ಥಾನದಿಂದ ನಿರ್ಗಮಿಸಿದರು. ನಂತರ ವೀರಪ್ಪ ಮೊಯಿಲಿ ಅವರು ಮುಖ್ಯ ಮಂತ್ರಿಯಾಗಿ ನೇಮಕಗೊಂಡಿದ್ದರಿಂದ ಆ ವರದಿಯನ್ನು ಅಲ್ಲಿಗೆ ಕೈಬಿಡಲಾಗಿದೆ ಎನ್ನಲಾಗಿದೆ.

**ಸರಕಾರದ ನಿರ್ಣಾಯಕ ಆದೇಶ : ೧೯೯೪**

ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪಿನಿಂದ ಮಾತೃಭಾಷಾ ಮಾಧ್ಯಮವನ್ನು ಜಾರಿಗೆ ತರಲು ಹೊಸ ಚೈತನ್ಯ ಮೂಡಿ ಬಂದಿತು. ಈ ತೀರ್ಪನ್ನು ಜಾರಿಗೆ ತರುವಂತೆ ಬೆಂಗಳೂರಿನ ಶಕ್ತಿಕೇಂದ್ರ, ಮೈಸೂರು, ಧಾರವಾಡದ ಪ್ರತಿನಿಧಿಗಳು ಒತ್ತಾಯ ಹೇರಿದವು. ಆದಾಗ್ಯೂ ಇದು ಕೇವಲ ಸರಕಾರದ ಬಾಯಿಮಾತಿನ ಹೇಳಿಕೆಯಾಗಿತ್ತೇ ವಿನಃ ಜಾರಿಗೆ ಬರಲಿಲ್ಲ.

ಆಗ ಕನ್ನಡದ ಶಕ್ತಿ ಕೇಂದ್ರದ **ಪ್ರೊ .ಎಂ. ಚಿದಾನಂದಮೂರ್ತಿಯವರು** ಮಾರ್ಚ್ ೨೭, ೧೯೯೪ ರಂದು ಹೂಡಿದ್ದ ಅನಿರ್ಧಿಷ್ಟ ಉಪವಾಸ ಸತ್ಯಾಗ್ರಹಕ್ಕೆ ಅನೇಕರ ಬೆಂಬಲವೂ ವ್ಯಕ್ತವಾಗಿತ್ತು. ಆಗ ಮುಖ್ಯಮಂತ್ರಿಯಾಗಿದ್ದ ವೀರಪ್ಪ ಮೊಯಿಲಿ ಅವರು ಭರವಸೆಯನ್ನು ನೀಡಿ (ಉಪವಾಸವನ್ನು ನಿಲ್ಲಿಸುವಂತೆ ಹೇಳಿ) ಒಂದು ನಿರ್ಣಯವನ್ನು ಕೈಗೊಂಡರು. ಅದರಂತೆ ೧ ರಿಂದ ೪ನೇ ತರಗತಿವರೆಗೆ ಮಾತೃಭಾಷೆ ಅಥವಾ ಕನ್ನಡ ಶಿಕ್ಷಣ ಮಾಧ್ಯಮವಾಗಲೇಬೇಕೆಂದು ಎಪ್ರಿಲ್ ೨೨, ೧೯೯೪ ರಂದು ಆದೇಶವನ್ನು ಹೊರಡಿಸಿದರು. ೧೯೮೯ಕ್ಕಿಂತ ಮುಂಚೆ ಆರಂಭವಾಗಿದ್ದ ಆಂಗ್ಲ ಮಾಧ್ಯಮ ಶಾಲೆಗಳಿಗೂ ೧ನೇ ತರಗತಿಯಿಂದ ೪ನೇ ತರಗತಿವರೆಗೆ ಮಾತೃಭಾಷೆ ತೀರ್ಪನ್ನು ಕೈಗೊಂಡರು.

ಕೇಂದ್ರ ಸರ್ಕಾರವು ಸರ್ವಶಿಕ್ಷಣ ಅಭಿಯಾನದನ್ವಯ ೧ ರಿಂದ ೫ನೇ ತರಗತಿವರೆಗೆ ಕಿರಿಯ ಪ್ರಾಥಮಿಕವೆಂದು ಪರಿಗಣಿಸಿದ್ದುದನ್ನು ರಾಜ್ಯ ಸರ್ಕಾರವು ಒಪ್ಪಿಕೊಂಡಿದ್ದರಿಂದ ೨೦೦೩ರಲ್ಲಿ ೧ ರಿಂದ ೫ನೇ ತರಗತಿವರೆಗೆ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮವಾಗ ಬೇಕೆಂದು ಆದೇಶದಲ್ಲಿ ಸೂಚಿಸಲಾಯಿತು.

**ಚಂಪಾ ವರದಿ : ೧೯೯೮**

* ಪ್ರಾಥಮಿಕ ಹಂತದಿಂದ ಉನ್ನತಮಟ್ಟದವರೆಗೂ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯು ಶಿಕ್ಷಣ ಮಾಧ್ಯಮವಾಗಬೇಕು.
* ಇಂಗ್ಲೀಶ್ ಅಥವಾ ಅನ್ಯಮಾತೃಭಾಷಾ ಮಾಧ್ಯಮ ಶೈಕ್ಷಣಿಕ ಸಂಸ್ಥೆಗಳು (ರಾಜ್ಯ/ ಕೇಂದ್ರ ಪಠ್ಯಕ್ರಮ) ಸ್ವಇಚ್ಛೆಯಿಂದ ಕನ್ನಡ ಮಾಧ್ಯಮಕ್ಕೆ ಯಾವಾಗಲೂ ಬದಲಾವಣೆ ಬಯಸಿದರೆ ರಾಜ್ಯ ಸರ್ಕಾರ ಮುಕ್ತ ಅನುಮತಿ ನೀಡಬೇಕು.
* ರಾಜ್ಯ ಗಡಿ ಭಾಗದಲ್ಲಿ ಕನ್ನಡ ಮಾಧ್ಯಮ ಶಾಲೆಗಳನ್ನು ತೆರೆಯುವ ಖಾಸಗಿ ಸಂಸ್ಥೆ ಗಳಿಗೆ ಈಗಿನ ನಿಯಮಗಳನ್ನು ಸಡಿಲಿಸಿ, ವಿಶೇಷ ಪ್ರೋತ್ಸಾಹ ನೀಡುವ ಕ್ರಮಗಳನ್ನು ಕೈಗೊಳ್ಳಬೇಕು.
* ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮವಾಗಿರಬೇಕೆಂಬ ಸರ್ಕಾರದ ನೀತಿಯನ್ನು ಪೂರ್ವ ಪ್ರಾಥಮಿಕ ಹಂತಕ್ಕೂ ಅನ್ವಯಿಸಬೇಕು ಎಂಬ ಕೆಲವು ಸಲಹೆಗಳನ್ನು ಸಮಿತಿ ಶಿಫಾರಸ್ಸು ಮಾಡಿರುತ್ತದೆ.

ಕೇಂದ್ರ ಹಾಗೂ ರಾಜ್ಯ ಸರ್ಕಾರವು ಆಯೋಗಗಳನ್ನು ರೂಪಿಸಿದಾಗಲೂ ಅವು ಜಾರಿಗೊಳ್ಳದಿರುವುದು ಆಡಳಿತದ ನಕಾರಾತ್ಮಕ ಪ್ರತಿಕ್ರಿಯೆ ಇದಕ್ಕೆ ಕಾರಣವಾಗಿರಬಹುದು. ರಾಜ್ಯ ಹಾಗೂ ಕೇಂದ್ರ ಪಠ್ಯಗಳನ್ನು ಬದಲಾವಣೆ ಮಾಡುವಂತೆ ಖಾಸಗೀ ಸಂಸ್ಥೆಗಳಿಗೆ ಸೂಚಿಸುವುದು ಉಚಿತವಲ್ಲ. ಇದು ರಾಜ್ಯ ಸರ್ಕಾರದ ಜವಾಬ್ದಾರಿ. ಇದುವರೆಗೂ ಶಿಕ್ಷಣ ಸಮಿತಿಯೇ ಇದನ್ನು ನಿರ್ವಹಿಸುತ್ತಾ ಬಂದಿದೆ. ಮುಂದೆಯೂ ನಿರ್ವಹಿಸುತ್ತಿರಬೇಕು. ಒಂದರಿಂದ ಮೂರನೇ ತರಗತಿವರೆಗೆ ಕನ್ನಡವನ್ನು ಐಚ್ಛಿಕವಾಗಿ ಕನ್ನಡೇತರ ವಿದ್ಯಾರ್ಥಿಗಳು ಕಲಿಯಬಹುದು. ಆದರೆ ಪರೀಕ್ಷೆ ಕಡ್ಡಾಯ ಮಾಡದಿದ್ದಾಗ ಭಾಷಾ ಕಲಿಕೆ ಪೂರ್ಣ ವಾಗುವುದಿಲ್ಲ. ಕೇವಲ ನಾಮಕಾವಸ್ಥೆ ಕಲಿಕೆಯಾಗಿ ಉಳಿಯುತ್ತದೆ. ಮಕ್ಕಳು ಸರಿಯಾಗಿ ಕಲಿಯುವುದಿಲ್ಲ.

**ಬರಗೂರು ವರದಿ : ೨೦೦೧**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದ **ಡಾ. ಬರಗೂರು ರಾಮಚಂದ್ರಪ್ಪನವರು** ಈ ಮುಂಚೆ ಶಿಕ್ಷಣ ಮಾಧ್ಯಮ ಕುರಿತಾಗಿ ಬಂದ ಎಚ್. ನರಸಿಂಹಯ್ಯ, ಗೋಕಾಕ್‌ವರದಿ, ಚಂಪಾ ವರದಿಗಳನ್ನು ಪರಿಶೀಲಿಸಿ ನಂತರದಲ್ಲಿ ೨೦೦೧ರಲ್ಲಿ ನೀತಿ ನಿರೂಪಣಾ ವರದಿಯನ್ನು ಸಲ್ಲಿಸಿದರು. ಈ ವರದಿಯ ಶಿಫಾರಸ್ಸುಗಳು ಹೀಗಿವೆ.

* ಪ್ರಾಥಮಿಕ ಪೂರ್ವ ಶಿಕ್ಷಣದಿಂದಲೇ ಕನ್ನಡ ಮಾಧ್ಯಮ ಕಡ್ಡಾಯವಾಗಬೇಕು. ಪ್ರಾಥಮಿಕ ಪೂರ್ವ ಶಿಕ್ಷಣದಲ್ಲಿ ಏಕರೂಪತೆ ತರಬೇಕು.
* ಒಂದರಿಂದ ಏಳನೇ ತರಗತಿವರೆಗೆ ಮಾತೃಭಾಷಾ ಶಿಕ್ಷಣವಾಗಬೇಕು. ಆಂಗ್ಲ ಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳೂ ಕನ್ನಡ ಮಾಧ್ಯಮ ಶಾಲೆಗಳಾಗಿ ಪರಿವರ್ತನೆಯಾಗಬೇಕು.
* ಕನ್ನಡೇತರ ವಿದ್ಯಾರ್ಥಿಗಳಿಗೆ ಮೂರನೇ ತರಗತಿಯಿಂದ ಎರಡನೇ ಭಾಷೆಯನ್ನಾಗಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು. ಇದಕ್ಕೆ ಉಚ್ಚನ್ಯಾಯಾಲಯವು ೨೫-೧-೧೯೮೯ ರಂದು ತೀರ್ಪು ಸಹ ಕೊಟ್ಟಿದೆ.
* ಪ್ರಾಥಮಿಕ ಮೂರನೇ ತರಗತಿಯಿಂದ ಇಂಗ್ಲೀಶ್‌ನ್ನು ಮುಂದುವರಿಸಿ, ಕಲಿಕೆಯನ್ನು ಮತ್ತು ಪರೀಕ್ಷೆಯನ್ನು ಕಡ್ಡಾಯಗೊಳಿಸಬೇಕು ಎಂದು ಹೇಳಿದ್ದಾರೆ.
* ಬಿ.ಇಡಿ, ಐ.ಟಿ.ಐ, ಎಲ್.ಎಲ್.ಬಿ., ಡಿ.ಇಡಿ (ಟಿ.ಸಿ.ಎಚ್) ಮುಂತಾದ ವೃತ್ತಿಪರ ವಿವಿಧ ಕೋರ್ಸ್‌ಗಳಲ್ಲಿ ಕನ್ನಡ ಕಡ್ಡಾಯ ಭಾಷೆಯಾಗಿರಬೇಕು ಎಂಬುದನ್ನು ಒತ್ತಿ ಹೇಳಿದ್ದಾರೆ.
* ಶಿಕ್ಷಣ ಕ್ರಮದ ಪ್ರಥಮ ಭಾಷೆಗಳ ಪಟ್ಟಿಯ ಪ್ರಕಾರವು ವಿದ್ಯಾರ್ಥಿಯ ಪ್ರಥಮ ಭಾಷೆಯಾಗಿ ಮಾತೃಭಾಷೆಯನ್ನು ಅಥವಾ ಪ್ರಾದೇಶಿಕ ಭಾಷೆಯನ್ನು ಮಾತ್ರ ಕಲಿಯ

ಬೇಕು. ಕರ್ನಾಟಕದವರಾಗಿದ್ದು ಮಾತೃಭಾಷೆಗಳಲ್ಲದ ಸಂಸ್ಕೃತ, ಇಂಗ್ಲೀಶನ್ನು ಪ್ರಥಮ ಭಾಷೆ ಮತ್ತು ಮಾಧ್ಯಮವಾಗಿ ಆಯ್ಕೆ ಮಾಡಿಕೊಳ್ಳಲು ಅವಕಾಶ ಕೊಡಬಾರದು ಎಂದು ತಿಳಿಸಿದ್ದಾರೆ.

* ಎಲ್ಲಾ ವಿಶ್ವವಿದ್ಯಾಲಯಗಳ ಪದವಿ ತರಗತಿಗಳಿಗೆ ಕ್ರಿಯಾತ್ಮಕ ಕನ್ನಡ ಪಠ್ಯಕ್ರಮವನ್ನು ರೂಪಿಸಿ ಬೋಧಿಸುವ ವ್ಯವಸ್ಥೆಯಾಗಬೇಕು.

* ಐದನೇ ತರಗತಿಯಿಂದ ಪ್ರಾರಂಭಿಸಿ ಕನಿಷ್ಠ ಪದವಿ ಪೂರ್ವ ತರಗತಿಯವರೆಗೆ ಕನ್ನಡ ಪಠ್ಯಪುಸ್ತಕಗಳು ಕನ್ನಡ ಸಂಸ್ಕೃತಿ ಪಠ್ಯಗಳಾಗಿ ರೂಪಾಂತರ ಹೊಂದಬೇಕು.

* ಶಿಕ್ಷಣ ಕ್ರಮದ ಪ್ರಥಮ ಭಾಷೆಗಳ ಪಟ್ಟಿಯಲ್ಲಿ ದೇಶದೊಳಗಿನ ಜನರ ಅಧಿಕೃತ ಮಾತೃಭಾಷೆಗಳು ಮಾತ್ರ ಇರಬೇಕು. ವಿದ್ಯಾರ್ಥಿಯು ಪ್ರಥಮ ಭಾಷೆಯಾಗಿ ತನ್ನ ಮಾತೃಭಾಷೆಯನ್ನು ಕಲಿಯಬೇಕು. ಮಾತೃಭಾಷೆಯ ಬದಲು ರಾಜ್ಯದ ಪ್ರಾದೇಶಿಕ ಭಾಷೆಯನ್ನು ಮಾತ್ರ ಕಲಿಯಲು ಅವಕಾಶವಿರಬೇಕು. ಇಂಗ್ಲೀಶ್‌ನ್ನು ಇತರರು ಪ್ರಥಮ ಭಾಷೆ ಮತ್ತು ಮಾಧ್ಯಮವಾಗಿ ಆಯ್ಕೆ ಮಾಡಿಕೊಳ್ಳಲು ಅವಕಾಶವಿರಬಾರದು.

* ಅಧಿಕೃತವಾಗಿ ಕನ್ನಡವು ಕಡ್ಡಾಯ ಶಿಕ್ಷಣ ಮಾಧ್ಯಮವಾಗದೇ ಇರುವ ಯಾವುದೇ ಹಂತದ ತರಗತಿಗಳಲ್ಲಿ ವಿದ್ಯಾರ್ಥಿಗಳು ಕನ್ನಡದಲ್ಲಿ ಪಾಠ ಕೇಳಲು ಅಪೇಕ್ಷಿಸಿದರೆ, ಕನ್ನಡದಲ್ಲಿ ಪಾಠ ಕೇಳುವುದು ಮತ್ತು ಕನ್ನಡದಲ್ಲಿ ಪಾಠ ಮಾಡುವುದು ಒಂದು ಹಕ್ಕಾಗಬೇಕು.

* ಗಡಿನಾಡು ಮತ್ತು ಹೊರನಾಡ ಕನ್ನಡಿಗರ ಸಮಸ್ಯೆಗಳನ್ನು ಕುರಿತು ರಾಜ್ಯದ ಸಚಿವರು ಸೇರಿ ಚರ್ಚಿಸುವ ವ್ಯವಸ್ಥೆಯನ್ನು ರಾಜ್ಯ ಸರ್ಕಾರವೇ ನೇತೃತ್ವವಹಿಸಿ ನಡೆಸಿಕೊಡಬೇಕು ಎಂದು ಈ ಮೇಲಿನ ಶಿಫಾರಸ್ಸುಗಳನ್ನು ಸಮಿತಿ ಮುಂದಿಟ್ಟಿದೆ.

ಇಲ್ಲಿಯ ಪ್ರತಿಯೊಂದು ವರದಿಗಳು ಒಂದಾದನಂತರ ಒಂದರಂತೆ ಜಾರಿಗೆ ಬಂದರೂ ಸಹ ಅವು ಕಡ್ಡಾಯಗೊಳ್ಳದಿರುವುದೆ ಹೆಚ್ಚು ನಷ್ಟ ಅನುಭವಿಸುವಂತಾಯಿತು. ನೀತಿಗಳನ್ನು ಜಾರಿಗೆ ತರುವಂತೆ ತಂದು ಮತ್ತೆ ಆಂಗ್ಲ ಮಾಧ್ಯಮದ ಶಿಕ್ಷಣಕ್ಕೆ ಅವಕಾಶ ನೀಡುತ್ತಿದ್ದುದರಿಂದ ಆ ನೀತಿಗಳು ಕೇವಲ ನಾಮಕಾವಸ್ಥೆಯಾಗಿ ಮಾತ್ರ ಕೆಲವು ಕಾಲದವರೆಗೆ ಜಾರಿಗೊಳ್ಳುತ್ತಾ ಬಂದಿವೆ. ಪುನಃ ಮತ್ತೆ ಯಥಾ ಪ್ರಕಾರದಂತೆ ಭಾಷಾ ಸಮಸ್ಯೆಗಳು ಉಲ್ಬಣಗೊಳುತ್ತಿರುವುದನ್ನು ಇಂದಿಗೂ ಸಹ ಕಾಣುತ್ತಿದ್ದೇವೆ. ಜೊತೆಗೆ ರಾಜ್ಯಾದ್ಯಂತ ಒಂದೇ ಭಾಷಾ ನೀತಿ ಪ್ರಮುಖವಾಗಿ ಜಾರಿಗೆಯಾಗಿಲ್ಲ.

ಕನ್ನಡ ಶಿಕ್ಷಣ ಭಾಷಾ ಮಾಧ್ಯಮವಾಗಬೇಕು ಎನ್ನುವ ಚರ್ಚೆಗೆ ಪೂರಕವಾಗಿ ಸಾಕಷ್ಟು ಚರ್ಚೆಗಳು ಬೆಳೆದು ಬಂದಿರುವುದನ್ನು ಇದುವರೆಗೂ ಲಭ್ಯವಾಗಿರುವ ಕೃತಿಗಳನ್ನು, ಲೇಖಗಳನ್ನು ಈಗಾಗಲೇ ಪರಿಶೀಲಿಸಲಾಗಿದೆ. ಈ ಚರ್ಚೆಯೊಂದಿಗೆ ಪ್ರಾಥಮಿಕ ಒಂದನೇ

ತರಗತಿಯಿಂದಲೇ ಇಂಗ್ಲೀಶ್ ಶಿಕ್ಷಣ ಬೇಕು, ಬೇಡವೇ? ಎನ್ನುವ ಚರ್ಚೆ ಸಾಕಷ್ಟು ತೀವ್ರವಾಗಿ ಬೆಳೆದು ಬಂದಿದೆ. ಕಳೆದ ನಾಲ್ಕೈದು ವರ್ಷಗಳಲ್ಲಿ ಈ ಚರ್ಚೆ ಬಹುಮುಖ ಆಯಾಮಗಳನ್ನು ಪಡೆದುಕೊಂಡಿದೆ. ಪತ್ರಿಕೆಗಳಲ್ಲಿ ಈ ಚರ್ಚೆ ಕುರಿತಾಗಿ ವಿವಿಧ ವಲಯದವರಲ್ಲಿ ವಾದ ವಿವಾದಗಳಿಂದಾಗಿ ಸಾಕಷ್ಟು ಅಭಿಪ್ರಾಯಗಳು ಮೂಡಿಬಂದಿವೆ. ಅಂತಹ ಪತ್ರಿಕೆಗಳಲ್ಲಿನ ವಿಚಾರಗಳನ್ನು ಇಲ್ಲಿ ಮುಖ್ಯವಾಗಿ ಪರಿಶೀಲಿಸಿ ವಿಶ್ಲೇಷಣೆ ಮಾಡಲಾಗಿದೆ. ಈ ಪತ್ರಿಕೆಗಳಲ್ಲಿ ಬಂದ ವಿಚಾರಗಳು, ಒಂದನೇ ತರಗತಿಂದಲೇ ಇಂಗ್ಲೀಶ್ ಕಲಿಕೆ ಬೇಕು, ಬೇಡ ಎನ್ನುವ ಚರ್ಚೆಗೆ ಪರ ಹಾಗೂ ವಿರೋಧ ನೆಲೆಯಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

**೬.೩. ಪತ್ರಿಕೆಗಳು**

**ಕನ್ನಡದ ಮೂಲಕ ಇಂಗ್ಲೀಶ್, ಕನ್ನಡ ಪ್ರಭ ೨೩.೧೨.೦೪**

ಮಾತೃಭಾಷಾ ಶಿಕ್ಷಣ ಕುರಿತು ತಿಳುವಳಿಕೆಯುಳ್ಳವರೂ ಅರೆ ಶಿಕ್ಷಣ ಇಂಗ್ಲೀಶ್ ಮೋಹಿನಿಯ ಕಾಟವನ್ನು ಅನುಭವಿಸುತ್ತಾರೆ. ಇದರಿಂದಾಗಿ ಒಳ್ಳೆಯ ಇಂಗ್ಲೀಶ್ ಹೇಳಿಕೊಡುವ ಕನ್ನಡ ಮಾಧ್ಯಮ ಶಾಲೆಗಳ ಅಗತ್ಯವಿದೆ. ಇಂಗ್ಲೀಶ್ ಮಾಧ್ಯಮ ವಿದ್ಯಾರ್ಥಿಗಳಿಗಿಂತ ಕನ್ನಡ ಮಾಧ್ಯಮ ಮಕ್ಕಳು ಕಲಿಯುವಂತ ವ್ಯವಸ್ಥೆ ಕನ್ನಡ ಶಾಲೆಗಳಲ್ಲಿ ಬರಬೇಕು. ಇದರಿಂದ ಇಂಗ್ಲೀಶ್‌ನಿಂದ ಮಾತ್ರವೇ ಮೋಕ್ಷ ಎಂಬ ಭ್ರಮೆಯಲ್ಲಿರುವ ವಿದ್ಯಾರ್ಥಿಗಳು, ಪಾಲಕರು ಕನ್ನಡವೇ ಸತ್ಯ ಎಂಬ ನಿಲುವಿಗೆ ಬರುತ್ತಾರೆ.

**ಕನ್ನಡ : ಮರೆತ ಆದ್ಯತೆ, ಆರ್. ಎಸ್. ರೋಹಿಡೇಕರ್,**
**ಪ್ರಜಾವಾಣಿ ೨೮.೧೨.೦೪**

ವರ್ಗ ೧ ರಿಂದ ಅಲ್ಪಸಂಖ್ಯಾತರನ್ನೊಳಗೊಂಡಂತೆ ಎಲ್ಲರಿಗೂ ಕನ್ನಡ ಕಡ್ಡಾಯವಾಗಬೇಕಾಗಿತ್ತು. ಆದರೆ ೧೯೮೭ರಲ್ಲಿ ಪಠ್ಯಕ್ರಮ ಪುನರ್‌ರಚನಾ ಸಮಿತಿಯ ಚೇರಮನ್, ವರ್ಗ ೫ ರಿಂದ ಕಡ್ಡಾಯಗೊಳಿಸಿದರು. ತ್ರಿಭಾಷಾ ಸೂತ್ರವನ್ನು ವರ್ಗ ಐದರಿಂದಲೇ ಕಾನೂನು ಬದ್ಧವಾಗಿ ಮಾಡಲು ಸುಪ್ರೀಂಕೋರ್ಟ್ ಎತ್ತಿ ಹಿಡಿಯಿತು. ಕನ್ನಡವೇ ಎಲ್ಲರಿಗೂ ಪ್ರಥಮ ಭಾಷೆಯಾಗಬೇಕೆನ್ನುವ ಗೋಕಾಕ ವರದಿಯ ಶಿಫಾರಸ್ಸಿಗೆ ಕಾನೂನಿನ ಮನ್ನಣೆ ಸಿಗಲಿಲ್ಲ.

**ಕನ್ನಡದ ಮಕ್ಕಳು ಇಂಗ್ಲೀಶ್ ಕಲಿಯುವುದು ಹೇಗೆ ? ಲೀಲಾ ಕೃಷ್ಣಮೂರ್ತಿ,**
**ಉದಯವಾಣಿ ೨೯.೩.೦೫**

ಇಂಗ್ಲೀಶ್ ಭಾಷೆಯನ್ನು ಕಲಿಸಲು ಇಂಗ್ಲೀಶ್ ಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣ ಕೊಡಬೇಕು ಎಂದು ಕೆಲವರು ವಾದಿಸುತ್ತಾರೆ. ಪರಭಾಷೆಯನ್ನು ಮಕ್ಕಳಿಗೆ ಕಲಿಸುವುದು ಮುಖ್ಯವೇ ಅಥವಾ ಜ್ಞಾನಾರ್ಜನೆಗಾಗಿ ತರಬೇತಿ ಕೊಡುವುದು ಮುಖ್ಯವೇ ಎಂಬುದನ್ನು ಗಂಭೀರವಾಗಿ ಯೋಚನೆ ನಡೆಯಬೇಕಾಗಿದೆ.

**ಸಮಸ್ಯೆ ಮತ್ತಷ್ಟು ಜಟಿಲ, ಡಾ.ಪಂಡಿತಾರಾಧ್ಯ, ಪ್ರಜಾವಾಣಿ ೧೪.೪.೦೫**

ಮಗುವಿನ ಮಾತೃಭಾಷೆಯಲ್ಲಿ ಅಥವಾ ೨ನೇ ಮಾತೃಭಾಷೆಯಾದ ಪರಿಸರ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು. ಇದು ಸರ್ಕಾರದ ಹೊಣೆಯೂ ಹೌದು. ಆಂಗ್ಲೋ ಇಂಡಿಯನ್ನರನ್ನು ಬಿಟ್ಟರೆ ಇಂಗ್ಲೀಶ್ ಯಾರ ಮಾತೃಭಾಷೆಯೂ ಅಲ್ಲ. ಇಂಗ್ಲೀಶ್‌ನ್ನು ಒಂದು ಭಾಷೆಯಾಗಿ ೩ನೇ ತರಗತಿಯಿಂದಲಾದರೂ ಕಲಿಸುವುದಕ್ಕೆ ಸಮರ್ಥ ಶಿಕ್ಷಣದ ಕೊರತೆಯಿರುವಾಗ ಇಂಗ್ಲೀಶನ್ನು ಮಾಧ್ಯಮ ಭಾಷೆಯಾಗಿ ಸ್ವೀಕರಿಸುವ ಯೋಚನೆಯೇ ವಾಸ್ತವವನ್ನು ತಿರುಗು ಮುರುಗಾಗಿಸುವ ಚಿಂತನೆ ಆಗಿದೆ.

**ಇಂಗ್ಲೀಶ್ ಕಲಿಕೆ : ಗೊಂದಲಗಳು ಸವಾಲುಗಳು, ಪ್ರಜಾವಾಣಿ ೧೨.೬.೦೫**

ಮಕ್ಕಳಿಗೆ ಹಲವು ಭಾಷೆಯನ್ನು ಕಲಿಯಲು ಪ್ರೋತ್ಸಾಹಿಸಬೇಕು. ಆದರೆ ಯಾವುದೇ ಭಾಷೆಯನ್ನು ಕಡ್ಡಾಯ ಮಾಡುವುದು ಸರಿಯಲ್ಲ. ಇಂಗ್ಲೀಶನ್ನು ಒಂದು ಭಾಷೆಯಾಗಿ ಕಲಿಯಬೇಕು. ಆಂಗ್ಲರ ಆಡಳಿತದಲ್ಲಿ ೫ನೇ ತರಗತಿಗಿದ್ದ ವ್ಯವಸ್ಥೆ ಇಂದು ೧ನೇ ತರಗತಿಯಿಂದಲೇ ಕಲಿಸುತ್ತೇವೆನ್ನುವುದು ಸ್ವಾಭಿಮಾನಕ್ಕೆ ಚ್ಯುತಿ ತರುವ ಸಂಗತಿ. ಇಂಗ್ಲೀಶ್ ವ್ಯಾಮೋಹ ಸರಿಯಲ್ಲವೆನ್ನುವುದಾದರೆ ಏಕೆ ಅದಕ್ಕೆ ಬಲಿಯಾಗಬೇಕು? ಪೂತನಿಯ ಮೇಲೆ ಹಾಲನ್ನೇಕೆ ಕುಡಿಯಬೇಕು. ಇಡೀ ಶಿಕ್ಷಣ ಕ್ರಮವೇ ವಿದ್ಯಾರ್ಥಿಗಳನ್ನು ಮಾರುಕಟ್ಟೆಯ ಸರಕುಗಳನ್ನಾಗಿಸುವ ಉದ್ದೇಶ ಹೊಂದಿದೆ.

**ಇಂಗ್ಲೀಶ್ ಕಲಿಕೆ : ವಾದ ಮೂಡದ ಒಮ್ಮತ, ಪ್ರಜಾವಾಣಿ ೯.೭.೦೫**

ಧರ್ಮಸಿಂಗ್ ಹೇಳಿದಂತೆ ಇಂಗ್ಲೀಶ್‌ನ್ನು ಒಂದು ಭಾಷೆಯನ್ನಾಗಿ ಜಾರಿಗೆ ತರುವಂತೆ ಸಾಕಷ್ಟು ಪ್ರತಿನಿಧಿಗಳು ಬೆಂಬಲಿಸಿದರು. ದಲಿತ ಸಂಘರ್ಷ ಸಮಿತಿ ಸರ್ವೋದಯ ಪಕ್ಷ ಸಾಮಾಜಿಕ ಸಂಘಟನೆಗಳು ಪ್ರತಿನಿಧಿಗಳು, ಹಲವಾರು ಚಿಂತಕರು ಗ್ರಾಮೀಣ ಮತ್ತು ಪಟ್ಟಣಗಳೆಂಬ ತಾರತಮ್ಯ ನಿವಾರಿಸಲು ಒಂದನೇ ತರಗತಿಯಿಂದ ಇಂಗ್ಲೀಶನ್ನು ಒಂದು ವಿಷಯವಾಗಿ ಬೋಧಿಸುವುದರ ಫಲವಾಗಿ ಪ್ರಬಲ ಹಕ್ಕೊತ್ತಾಯ ಮಂಡಿಸಿದರು. ಸರ್ಕಾರಿ ಶಾಲೆಗಳ ೨೦ ಲಕ್ಷ ಮಕ್ಕಳು ಐದನೆ ತರಗತಿಯಿಂದ ಇಂಗ್ಲೀಶ್ ಕಲಿಯಲು ಪ್ರಾರಂಭಿಸುತ್ತಾರೆ. ಇದರಿಂದ ಇಂಗ್ಲೀಶ್‌ನಲ್ಲಿ ಫೇಲಾಗುವುದೇ ಹೆಚ್ಚು ಎಂದು **ನಟರಾಜ್ ಹುಳಿಯಾರ್** ಹೇಳಿದ್ದಾರೆ.

**ಭಾಷಾ ಕಲಿಕೆಯನ್ನು ಆತ್ಮ ಸಾಕ್ಷಿನಿರ್ಧರಿಸಲಿ, ವೀರೇಶ್ ತಿಪ್ಪಣ್ಣ, ಉದಯವಾಣಿ ೧೨.೭.೦೫.**

ತಾಯಿಯ ಭಾಷೆಯ ಹೊಂಗಿರಣಗಳಿಂದ ಅರಳಬೇಕಾದ ಹೂವಿನಂಥ ಎಳೆ ಮಕ್ಕಳು ಇಂಗ್ಲೀಶ್ ತಾಪಕ್ಕೆ ನಲುಗುತ್ತಾರೆ ಎಂಬ ಸಾಮಾನ್ಯ ಜ್ಞಾನವನ್ನು ಕಳೆದುಕೊಂಡ ನತದೃಷ್ಟರು. ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರ ಮೂಲ ಬಯಕೆಯಾಗಿ ಮಾಡಿಕೊಂಡು ಬಂದ ಚಳುವಳಿ ಪ್ರಾದೇಶಿಕ ಶಿಕ್ಷಣ ಮಾಧ್ಯಮದಲ್ಲಿ ಎಂಬುದನ್ನು ಸರ್ಕಾರಗಳಿಗೆ ತೋರಿದೆ. ಪರಭಾಷಾ ಪ್ರಭಾವಗಳಿಂದ ಅಳಿವಿನ ಭೀತಿ ಎದುರಿಸುತ್ತಿರುವ ಕನ್ನಡವನ್ನು ಸರ್ಕಾರ

ಹೊರದೇಶಗಳು ಕ್ಷಣಿಕ ಆರ್ಥಿಕ ಲಾಭಗಳಿಗೆ ಮಣಿದು ಅವರನ್ನು ಮೆಚ್ಚಿಸಲು ಈ ಚರ್ಚೆ ಸೃಷ್ಟಿಸಿದೆ.

**ಕನ್ನಡವೆಂಬ ರೊಟ್ಟಿಗೆ ಇಂಗ್ಲೀಶ್ ಬೆಣ್ಣೆ, ಅಗ್ರಹಾರ ಕೃಷ್ಣಮೂರ್ತಿ, ಉದಯವಾಣಿ ೧೫.೭.೦೫**

ಇಂಗ್ಲೀಶ್‌ನ್ನು ಅನ್ಯಭಾಷೆಯೆಂದು ತಿಳಿಯುವುದೇ ಮೂರ್ಖತನದ ಪರಮಾವಧಿ. ಭಾಷೆಯ ತಿಳುವಳಿಕೆ, ಜ್ಞಾನ ಅಗತ್ಯ, ಆದರೆ ಕನ್ನಡವನ್ನಾದರೂ ಸರಿಯಾಗಿ ಕಲಿಸಿದ್ದೇವೆಯೇ? ಹಾಗಿರುವಾಗ ಕನ್ನಡವನ್ನು ಉಳಿಸುತ್ತಿರುವ ಮಾತಿಗೇ ಅಪಚಾರವಾಗುತ್ತದಲ್ಲವೇ? ಸರ್ಕಾರ ಈ ಬಗ್ಗೆ ಸರಿಯಾಗಿ ವಿವೇಚಿಸಿ ಕನ್ನಡ ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಪೋಷಕ ವಾಗುವಂತೆ ತೀರ್ಮಾನ ಕೈಗೊಳ್ಳಬೇಕು.

**ಕನ್ನಡ ಇಂಗ್ಲೀಶ್ ಕಲಿಕೆ : ಭಿನ್ನಹ, ಪ್ರಜಾವಾಣಿ ೧೫.೭.೨೦೦೫**

ಇಂಗ್ಲೀಶ್ ಕಲಿಕೆಯು ಅಗತ್ಯವೆಂದು ಸಮಾಜ ವ್ಯಕ್ತ ಪಡಿಸಿದೆ. ಆದರೆ ಗಾಂಧಿ, ಲೋಹಿಯಾ, ಕುವೆಂಪು ಅವರ ಮಾತೃಭಾಷಾ ಧೋರಣೆಯನ್ನು ತಳ್ಳಿ ಹಾಕುವಂತಿಲ್ಲ. ಹೈಕೋರ್ಟ ತೀರ್ಪನ್ನು ತೆರವುಗೊಳಸಿ ಭಾಷಾತಜ್ಞ, ಶಿಕ್ಷಣ ತಜ್ಞ, ಮನೋವಿಜ್ಞಾನಿ ಗಳನ್ನೊಳಗೊಂಡ ಸಮಿತಿಯನ್ನು ರಚಿಸಿ ಮುಂದಿನ ಕ್ರಮ ಕೈಗೊಳ್ಳಬೇಕೆಂದು ದೇಜಗೌ, ಲಿಂಗದೇವರು ಹಳೇಮನಿ ಇನ್ನೂ ಮುಂತಾದವರು ತಿಳಿಸಿದ್ದಾರೆ.

**ಇಂಗ್ಲೀಶ್ ಕಲಿಕೆ ವಿವಾದ: ವಿಧಾನ ಸಭೆಯಲ್ಲಿ ಕಾವೇರಿದ ಚರ್ಚೆ, ಉದಯವಾಣಿ ೨೬.೭.೦೫**

ಕಾಂಗ್ರೆಸ್‌ನ ಎಸ್.ಎಸ್. ಪಾಟೀಲರು ಅಂಗನವಾಡಿಯಿಂದಲೇ ಇಂಗ್ಲೀಶ್ ಕಲಿಸಿದರೆ ಕನ್ನಡ ಮಾಯವಾಗುತ್ತದೆ. ನಾವೆಲ್ಲ ಏಳನೇ ತರಗತಿಯಿಂದ ಇಂಗ್ಲೀಶ್ ಕಲಿತದ್ದು ಇದಕ್ಕೆ ಜೆ.ಡಿ.ಎಸ್, ನಾಗರಾಜ್, ರೋಷನ್ ಬೇಗ್, ಆಂಜನೇಯ ತೀವ್ರ ವಿರೋಧ ವ್ಯಕ್ತಪಡಿಸಿದರು. ದಲಿತರು ಹಿಂದುಳಿದವರು ಇಂಗ್ಲೀಶ್ ಕಲಿಸಬಾರದು. ನಿಮ್ಮ ಮಕ್ಕಳು ಇಂಗ್ಲೀಶ್ ಕಲಿತು ವಿದೇಶಗಳಿಗೆ ಹೋಗಿ ಹಣ ಸಂಪಾದನೆ ಮಾಡಬೇಕು ಅಲ್ಲವೆ. ಸಚಿವ ಪ್ರಕಾಶರು ಮೀಸಲಾತಿಯಲ್ಲಿ ಕೆನೆಪದರ ವ್ಯವಸ್ಥೆ ಬರಬೇಕಾಗಿದೆ ಎಂದರು. ಇದಕ್ಕೆ ಡಾ.ಕೆ.ಎಂ.ಶ್ರೀನಿವಾಸ ಗೌಡ, ಹಮೀದ್ ಖಾನ್ ಅವರು ಕನ್ನಡವನ್ನು ಮಾಧ್ಯಮವಾಗಿರಿಸಿಕೊಂಡು ಇಂಗ್ಲೀಶನ್ನು ಒಂದು ಭಾಷೆಯಾಗಿ ಒಂದನೇ ತರಗತಿಯಿಂದ ಕಲಿಸುವುದು ತಪ್ಪಲ್ಲ ಎಂದಿದ್ದಾರೆ.

**ಇಂಗ್ಲೀಶ್ ಕಲಿಕೆಬೇಕು ಅವಸರಬೇಡ, ಉದಯವಾಣಿ ೧೯.೭.೦೫**

ಅನ್ಯಭಾಷೆಯನ್ನು ಕಲಿಯುವುದು ತಪ್ಪಲ್ಲ. ನಮ್ಮ ಸಂವಿಧಾನದಲ್ಲಿ ಭಾಷಾ ಕಲಿಕೆಗೆ ಮಾರ್ಗದರ್ಶನವಿದೆ. ಸರ್ಕಾರ ಶಾಲೆಗಳ ಗುಣಮಟ್ಟ ಸುಧಾರಣೆ ಸೂಕ್ತಕ್ರಮ ತೆಗೆದುಕೊಳ್ಳಬೇಕು. ಭಾಷಾ ಕಲಿಕೆ ಮಕ್ಕಳಿಗೆ ಹೊರೆಯಾಗಬಾರದು.

**ಇಂಗ್ಲೀಶ್ ಕಲಿತರೇನೆ ಆತ್ಮ ವಿಶ್ವಾಸ ಹೆಚ್ಚುವುದೆ, ಸುಭಾಷ್.ಎನ್, ವಿಜಯ ಕರ್ನಾಟಕ ೨೨.೭.೦೫**

ಕನ್ನಡ ಮಾಧ್ಯಮ ಕಲಿತ ಕೂಡಲೇ ಇಂಗ್ಲೀಶ್ ಮಾತನಾಡಲು ಬರುವುದಿಲ್ಲವೆ? ವಿದ್ಯಾರ್ಥಿಗಳಿಗೆ ಇಂಗ್ಲೀಶ್ ಕಲಿಸಬೇಕಾದುದು ಮುಖ್ಯ ಅಲ್ಲ. ಬದಲಿಗೆ ಆತ್ಮವಿಶ್ವಾಸ,

ನೈತಿಕ ಕಾರ್ಯ, ನೈಪುಣ್ಯತೆ, ಶ್ರದ್ಧಾಭಾವನೆ ಅಗತ್ಯ, ಕನ್ನಡ ಭಾಷೆಯನ್ನು ಉಳಿಸುವುದು ಬಿಟ್ಟು ಸ್ವಾರ್ಥ ಸಾಧನೆಗಾಗಿ ಅಳಿಸಲು ಹೊರಟಿರುವುದು ನೋವಿನ ಸಂಗತಿ.

**ಇಂಗ್ಲೀಶ್ ಕಲಿಯಲು ಶಾಲೆಯೇ ಬೇಕೆ? ಗೀತಾ ಶೆಣೈ, ಉದಯವಾಣಿ ೨೭.೭.೦೫**

ಇಂಗ್ಲೀಶ್ ಮಾಧ್ಯಮದಿಂದ ಜ್ಞಾನವರ್ಧನೆ ಆಗುವುದಿಲ್ಲ. ಭಾಷೆ ಬರುವುದರಿಂದ ಜ್ಞಾನ ವರ್ಧನೆ ಸಾಧ್ಯವಿಲ್ಲ, ವಿಷಯಗ್ರಹಣ ಮಾಡಿದರೆ ಮಾತ್ರ ಅದು ಸಾಧ್ಯ. ಇಂಗ್ಲೀಶ್ ಮೀಡಿಯಂಗೆ ಹೋದರೆ ಮಾತನಾಡಲು ಬರುವುದಿಲ್ಲ. ಮಾತನಾಡುವ ಪರಿಸರ ಬೇಕು.

**ನೈತಿಕತೆ ಇಲ್ಲದ ಕನ್ನಡದ ಕಾಳಜಿ, ಕೆ.ಟಿ. ಶಿವಪ್ರಸಾದ.ಜಿ.ವಿ. ಆನಂದಮೂರ್ತಿ, ಎಂ.ಎಸ್. ಶೇಖರ್, ಲಂಕೇಶ್ ಪತ್ರಿಕೆ ೪.೮.೦೫.**

ಪ್ರಾಚೀನ ಕಾಲದಲ್ಲಿ ಸಂಸ್ಕೃತದ ಕಲಿಕೆ ಇಂತವರಿಗೆ ಮಾತ್ರ ಎಂದು ಗುರುತಿಸಿದ್ದು ಇವತ್ತಿನ ಸಂದರ್ಭದಲ್ಲಿ ಗ್ರಾಮೀಣ ಭಾಗದ ಜನರು/ದುರ್ಬಲ ವರ್ಗದವರಿಗೆ ಮಾತ್ರ ಕನ್ನಡ ಕಲಿಕೆಯ ಬೋಧನೆ ಮಾಡುತ್ತಿರುವುದು ವಿಪರ್ಯಾಸದ ಸಂಗತಿ. ಸಾಮಾಜಿಕ ನ್ಯಾಯ ಸಮಾನತೆಯ ಹಿನ್ನೆಲೆಯಲ್ಲಿ ಇಂಗ್ಲೀಶ್ ಕಲಿಕೆ ಸ್ವೀಕರಿಸಬೇಕಾಗಿರುವುದು ಸದ್ಯದ ಪರಿಸ್ಥಿತಿಯಾಗಿದೆ. ಜಾತಿ ವ್ಯವಸ್ಥೆಯ ಪರವಾದ ಕಡೆಗೆ ಮನಸ್ಸು ಉಲ್ಬಣಿಸುತ್ತಿರುವುದು ಕನ್ನಡಪರ ಕಾಳಜಿಗೆ ಯಾವುದೇ ನೈತಿಕ ತಳಹದಿಯಿಲ್ಲ.

**ಇಂಗ್ಲೀಶ್ ಕಲಿಕೆ, ಉದಯವಾಣಿ ೧೨.೮.೦೫**

ಯಾವುದೇ ಭಾಷೆಯನ್ನು ಯಾವ ತರಗತಿಯಿಂದ ಕಲಿಸಬೇಕೆನ್ನುವುದು ಶಿಕ್ಷಣ ತಜ್ಞರು ಚರ್ಚಿಸುವ ವಿಷಯವಾಗಬೇಕೆ ಹೊರತು ಸರಕಾರ/ರಾಜಕೀಯ ಕಾರ್ಯ ಸೂಚಿಯಾಗಬಾರದು. ಇಂಗ್ಲೀಶ್ ಕಲಿಕೆ ವರ್ಗ, ವರ್ಣಬೇಧಗಳ ಸಂಕೇತವಾಗಿ ಬದಲಾಗುತ್ತಿದೆ. ಹೆಚ್ಚುವರಿ ಭಾಷಾ ಕಲಿಕೆ ಹೇರಿಕೆಯಾಗಬಾರದು. ಪಠ್ಯಕ್ರಮಗಳ ಹೆಸರಿನಲ್ಲಿ ಇಂಗ್ಲೀಶ್ ಹೇರುತ್ತಿರುವ ಶಾಲೆಗಳಲ್ಲಿ ಕನ್ನಡ ಕಲಿಸುವ ವ್ಯವಸ್ಥೆಯಾಗಬೇಕು. ಇಂಗ್ಲೀಶ್ ಭಾಷೆಯನ್ನು ಕಲಿಸುವ ಜೊತೆಗೆ ಮಾನವೀಯ ವಿಷಯಗಳನ್ನು ಕನ್ನಡದಲ್ಲಿ ಕಲಿಸುವ ವ್ಯವಸ್ಥೆಯ ಬಗ್ಗೆಯೂ ಚಿಂತಿಸಬಹುದು.

**ಆಂಗ್ಲ ಭಾಷೆ ಅನಿವಾರ್ಯವಲ್ಲ ಪ್ರಭುತ್ವ ಅದನ್ನು ಹೇರುತ್ತದೆ. ಕನ್ನಡ ಪ್ರಭ ೧೯.೮.೦೫**

ಎಳೆಯ ಮಕ್ಕಳಿಗೆ ಆಂಗ್ಲ ಭಾಷೆ ಹೊರೆ ಎಂಬುದು ತಪ್ಪುವಾದ. ಸರ್ಕಾರಿ ಶಾಲೆಗಳಲ್ಲಿ ಇಂಗ್ಲೀಶ್ ಕಲಿಸುವುದರಿಂದ ಕಾನ್ವೆಂಟ್ ಹಾವಳಿಗಳನ್ನು ತಪ್ಪಿಸಲು ಸಾಧ್ಯ. ಇಂಗ್ಲೀಶ್ ಕಲಿಸುವ ಮೂಲಕ ಶೈಕ್ಷಣಿಕ ಅಸಮಾಧಾನತೆ ಹೋಗಲಾಡಿಸಬೇಕು ಎಂದು ಪ್ರಕಟಿಸಲಾಗಿದೆ.

**ಎಂಟರ ನಂತರ ಇಂಗ್ಲೀಶ್ ಕಲಿಯಲಿ, ಡಾ. ವಿ.ಎಸ್. ಚರಣ್ ಮೈಸೂರು, ಕನ್ನಡ ಪ್ರಭ ೨೮.೮.೦೫**

ಎಳೆಯ ವಯಸ್ಸಿನಲ್ಲಿ ಮಕ್ಕಳ ತಲೆ ಖಾಲಿ ಇರುತ್ತದೆ. ಆಗ ಅವುಗಳಲ್ಲಿ ಕನ್ನಡ ಇಂಗ್ಲೀಶಿನ ದ್ವಿಭಾಷಾ ಬಲೆಯಲ್ಲಿ ಸಿಗಿಸುವುದು ಬೇಡ. ೧ ಮತ್ತು ೨ನೇ ತರಗತಿಯಿಂದ

ಇಂಗ್ಲೀಶ್ ಕಲಿತರೆ ಸಾಕು. ಜಾಗತೀಕ ಮಟ್ಟದಲ್ಲಿ ಇಂಗ್ಲೀಶ್ ಅಗತ್ಯ. ಆದರೆ ಅದಕ್ಕಿಂತ ಒಂದು ಪುಟ್ಟ ಮಾತೃಭಾಷೆ ಅಗತ್ಯ ಹೆಚ್ಚಿರುತ್ತದೆ ಎಂದು ಎಲ್ಲರೂ ಅರಿಯಬೇಕು.

**ಕನ್ನಡ ಸಾಕೇ? ಇಂಗ್ಲೀಶ್ ಬೇಕೆ? ಕೆ.ಜಿ. ಚವ್ಹಾಣ, ಕನ್ನಡ ಪ್ರಭ ೧೩.೯.೦೫**

ಭಾರತದಲ್ಲಿ ಬೆಳೆಯುತ್ತಿರುವ ಇಂಗ್ಲೀಶ್ ಅದು ಯಾವಾಗಲೂ ಪರೋಪಜೀವಿಗಿಂತ ಇನ್ನೊಂದು ವರವನ್ನು ಆಶ್ರಯಿಸಿ ಬೆಳೆಯುತ್ತದೆ. ಕ್ರಮೇಣ ತನಗೆ ಆಶ್ರಯ ನೀಡಿದ್ದನ್ನೇ ಕೊಂದು ಹಾಕುತ್ತದೆ. ಅದೇ ರೀತಿ ಇಂಗ್ಲೀಶ್ ಮಾಧ್ಯಮದ ಮೇಲೆ ಅವಲಂಬಿಸುವುದು ತುಂಬಾ ಅಪಾಯಕಾರಿ ಎಂಬುದನ್ನು ಕನ್ನಡಿಗರು ತಿಳಿದುಕೊಳ್ಳುವುದು ಅಗತ್ಯ.

**ಭಾಷಾ ಮಾಧ್ಯಮ : ಉಲ್ಲಂಘನೆ ಮಾನ್ಯತೆ ರದ್ದು ತಡೆ ವಿಸ್ತರಣೆ, ಪ್ರಜಾವಾಣಿ ೧.೭.೦೭**

ಭಾಷಾ ಮಾಧ್ಯಮ ಉಲ್ಲಂಘನೆ ಆರೋಪದಿಂದ ಮಾನ್ಯತೆ ಕಳೆದುಕೊಂಡಿರುವ ಖಾಸಗಿ ಶಾಲೆಗಳ ಮಾನ್ಯತೆ ರದ್ದತಿಗೆ ಈ ಹಿಂದೆ ನೀಡಿದ್ದ ತಡೆಯಾಜ್ಞೆಯನ್ನು ಹೈಕೋರ್ಟ ಜೂನ್ ೧೪ರವರೆಗೆ ವಿಸ್ತರಿಸಿದೆ.

**ಶಾಲಾ ಮಾನ್ಯತೆ ರದ್ದು, ಪ್ರಜಾವಾಣಿ ೨.೭.೦೭**

ಕನ್ನಡ ಮಾಧ್ಯಮದಲ್ಲಿ ಶಾಲೆಗಳನ್ನು ನಡೆಸುತ್ತೇವೆಂದು ಮುಚ್ಚಳಿಕೆ ಬರೆದು ಕೊಟ್ಟು ಇಂಗ್ಲೀಶ್ ಮಾಧ್ಯಮದಲ್ಲಿ ನಡೆಸುತ್ತಿದ್ದುದನ್ನು ಪ್ರಶ್ನಿಸಿ ಸರ್ಕಾರ ಈ ಶಾಲೆಗಳ ಮಾನ್ಯತೆಯನ್ನು ರದ್ದು ಪಡಿಸಿತ್ತು. ಹೈಕೋರ್ಟ ನ್ಯಾಯಮೂರ್ತಿಗಳು ಸರ್ಕಾರದ ಆದೇಶದಂತೆ ಪ್ರಮಾಣ ಪತ್ರ ಸಲ್ಲಿಸಲು ಆದೇಶಿಸಿತ್ತು. ಆದರೆ ಅರ್ಜಿದಾರರ ಅಧ್ಯಕ್ಷ ಪಿ. ಪ್ರಕಾಶ ಅದಕ್ಕೆ ವಿರುದ್ಧವಾಗಿ ಹೈಕೋರ್ಟಿಗೆ ಮೇಲ್ಮನವಿ ಸಲ್ಲಿಸಲಾಗುವುದು, ಇಲ್ಲದಿದ್ದರೆ ಸುಪ್ರೀಂಕೋರ್ಟಿಗೆ ಹೋಗ ಲಾಗುವುದು ಎಂದಿದ್ದಾರೆ.

ಈ ಪತ್ರಿಕೆಗಳಲ್ಲಿ ಅನೇಕ ಲೇಖಕರು, ಸಾರ್ವಜನಿಕರು ಮತ್ತು ಸಮಾಜದಲ್ಲಿನ ದೊಡ್ಡ ವ್ಯಕ್ತಿಗಳಾದಿಯಾಗಿ ಮಾತೃಭಾಷೆಗೆ ಹೆಚ್ಚು ಒತ್ತು ನೀಡುವ ಮೂಲಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಆದರೆ ಸ್ವತಃ ತಮ್ಮ ಮಕ್ಕಳನ್ನು ಇಂಗ್ಲೀಶ್ ಮಾಧ್ಯಮಕ್ಕೆ ಕಳುಹಿಸುತ್ತಿರುವುದು ವಿಪರ್ಯಾಸ. ಇವರೆಲ್ಲರನ್ನು ಕೆಲವು ಸಾಮಾಜಿಕ ಸ್ಥಾನಮಾನಗಳು ನಿಯಂತ್ರಿಸುವುದರಿಂದ ಈ ಬಗೆಯ ಅಭಿಪ್ರಾಯಗಳನ್ನು ಹೇಳಿರಲು ಸಾಧ್ಯವಿದೆ.

ಇಂಗ್ಲೀಶ್ ಭಾಷೆ ಯಾವಾಗಲೂ ಅದು ಅನ್ಯಭಾಷೆಯೇ ಆಗಿರುತ್ತದೆ. ನಮ್ಮ ತಾಯಿ ಭಾಷೆಯಂತೆ ಸುಲಭವಾದ ಕಲಿಕೆಯಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಇಂಗ್ಲೀಶ್ ಮಾಧ್ಯಮ ಕಲಿಕೆಯನ್ನು ತೆಗೆದು ಹಾಕಲು ಶಾಲೆಗಳ ಮಾನ್ಯತೆಯನ್ನು ರದ್ದು ಪಡಿಸುವ ಬದಲು ಕನ್ನಡ ಮಾಧ್ಯಮವನ್ನು ರಾಜ್ಯಾದ್ಯಾಂತ ಏಕ ಪ್ರಕಾರವಾಗಿ ಕಡ್ಡಾಯವಾಗಿ ಜಾರಿಗೆ ತರಲು ಸರ್ಕಾರ ಕ್ರಮ ಕೈಗೊಳ್ಳಬೇಕು. ಇಂಗ್ಲೀಶನ್ನು ಐದನೇ ತರಗತಿಯಿಂದಲೇ ಕಲಿಸಲಿ. ಆದರೆ ಎಲ್ಲಾ ಶಾಲೆಗಳಲ್ಲೂ ಅನುದಾನ, ಅನುದಾನ ರಹಿತ ಸಂಸ್ಥೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ

ಶಿಕ್ಷಣ ಪಡೆಯುವಂತಾಗಬೇಕು. ಹಾಗಾದಾಗ ಮಾತ್ರ ವರ್ಗ ತಾರತಮ್ಯವಿಲ್ಲದೇ ಉತ್ತಮ ಶಿಕ್ಷಣವನ್ನು ಸಮಾಜದಲ್ಲಿ ರೂಪಿಸಲು ಅನುವಾಗುತ್ತದೆ.

**ಕನ್ನಡಕ್ಕೆ ಪ್ರಾಶಸ್ತ್ಯ ಬಿ.ಇ.ಓ ತಾಕೀತು, ಪ್ರಜಾವಾಣಿ ೧೩.೬.೦೭**

ಪ್ರಾಥಮಿಕ ಪೂರ್ವ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಬೋಧಿಸುವಂತೆ ಕ್ಷೇತ್ರ ಶಿಕ್ಷಣಾಧಿಕಾರಿ ಉಮೇಶ್ ಪೂಜಾರ ಸ್ಥಳೀಯ ಕ್ರೈಸ್ತಕಿಂಗ್ ಶಾಲೆಯ ಆಡಳಿತಕ್ಕೆ ಸೂಚನೆ ನೀಡಿದ್ದಾರೆ. ಕನ್ನಡ ಮಾಧ್ಯಮದಲ್ಲಿ ಪರವಾನಿಗೆ ಪಡೆದು ಇಂಗ್ಲೀಶ್ ಮಾಧ್ಯಮದಲ್ಲಿ ಶಾಲೆಗಳನ್ನು ನಡೆಸುತ್ತಿವೆ. ಇವುಗಳ ವಿರುದ್ಧ ರಕ್ಷಣಾವೇದಿಕೆ ದೂರು ಸಲ್ಲಿಸಿತ್ತು. ಹೈಕೋರ್ಟ ಎಚ್ಚರಿಕೆ ನೀಡಿದ್ದರೂ ಹಳೆ ಚಾಳಿಯನ್ನು ಮುಂದುವರೆಸಿವೆ. ಇಂಥ ಪ್ರವೃತ್ತಿ ಕಂಡು ಬಂದರೆ ಉಗ್ರ ಚಳುವಳಿ ನಡೆಸುವುದಾಗಿ ಕರವೇ ಜಿಲ್ಲಾಧ್ಯಕ್ಷ ಬಸವನಗೌಡ ತಿಳಿಸಿದರು.

**ಶಿಕ್ಷಣ ಸಂಸ್ಥೆಗಳಿಗೆ ಹೈಕೋರ್ಟ ತರಾಟೆ, ಪ್ರಜಾವಾಣಿ ೬.೭.೦೭**

ಇಂದಿನ ದುಬಾರಿ ಶಿಕ್ಷಣದಿಂದಾಗಿ ಶುಲ್ಕ ಭರ್ತಿಮಾಡುವಷ್ಟರಲ್ಲಿ ಪಾಲಕರು ಬಿದೀಗೆ ಬೀಳುವ ಸ್ಥಿತಿ ಉಂಟಾಗಿದೆ ಎಂದು ಹೈಕೋರ್ಟ ಅಭಿಪ್ರಾಯಪಟ್ಟಿದೆ. ಭಾಷಾ ಮಾಧ್ಯಮ ಉಲ್ಲಂಘಿಸಿರುವ ಆರೋಪ ಹೊತ್ತ ನಗರದ ಚಿದಾನಂದ ಎಜ್ಯುಕೇಶನ್ ಟ್ರಸ್ಟ ತನಗೆ ಪ್ರಮಾಣ ಪತ್ರ ಸಲ್ಲಿಸಲು ಕೋರ್ಟ ನಿರ್ದೇಶನದ ಮೇರೆಗೆ ಹೆಚ್ಚಿನ ಕಾಲಾವಕಾಶ ಕೋರಿದೆ.

**ಭಾಷಾನೀತಿ ಉಲ್ಲಂಘನೆ ಕಾನೂನು ಅಸ್ತ್ರ ತಪ್ಪಿಸಿಕೊಳ್ಳಲು ಯತ್ನ,**
**ಎಸ್. ಸಂಪತ್, ಪ್ರಜಾವಾಣಿ ೮.೭.೦೭.**

ಭಾಷಾ ನೀತಿ ಉಲ್ಲಂಘಿಸಿರುವ ಶಾಲೆಗಳ ಮಾನ್ಯತೆಯನ್ನು ರದ್ದು ಪಡಿಸಲು ಸರ್ಕಾರ ಕಾನೂನಿನ ಅಸ್ತ್ರ ಉಪಯೋಗಿಸಿದ್ದರೆ, ಇವು ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟದಲ್ಲಿ ಶೈಕ್ಷಣಿಕ ಪದ್ಧತಿಯೊಂದನ್ನು ಅಳವಡಿಸಿಕೊಳ್ಳುವ ಪ್ರಯತ್ನ ನಡೆಸಿವೆ. ತಮ್ಮ ಶಾಲೆಗಳನ್ನು ಅನೌಪಚಾರಿಕ ಶಿಕ್ಷಣಗಳನ್ನಾಗಿ ಪರಿವರ್ತಿಸುತ್ತಿವೆ. ಈ ಅನೌಪಚಾರಿಕ ಶಿಕ್ಷಣ ಮೂಲಕ ೬ನೇ ತರಗತಿಯಿಂದ ತಮ್ಮ ಶಾಲೆಯಲ್ಲಿಯೇ ಔಪಚಾರಿಕ ಶಿಕ್ಷಣಕ್ಕೆ ಪ್ರವೇಶ ಒದಗಿಸುತ್ತೇವೆಂದು ಶಾಲಾ ಸಂಘಟನೆಗಳು ತಿಳಿಸುತ್ತಿವೆ.

**ಹೈಕೋರ್ಟ ಭಾಷಾ ಮಾಧ್ಯಮ ಇಂದು ತೀರ್ಪು, ಪ್ರಜಾವಾಣಿ ೨.೭.೦೮**

ಪ್ರಾಥಮಿಕ ಶಾಲೆಗಳಲ್ಲಿ ಮಾತೃಭಾಷಾ ಬೋಧನೆ ಬಳಸಬೇಕೆಂದು ೧೯೯೪ರಲ್ಲಿ ಸರ್ಕಾರ ಹೊರಡಿಸಿದ್ದು ಸುತ್ತೋಲೆಯನ್ನು ಪ್ರಶ್ನಿಸಿ ಸಲ್ಲಿಸಲಾದ ಅರ್ಜಿಯ ತೀರ್ಪನ್ನು ಹೈಕೋರ್ಟ ಬುಧವಾರ (ಜೂನ್೨) ಪ್ರಕಟಿಸಿದೆ.

**ಇಂಗ್ಲೀಶ್ ಎಂಬ ಚಟ, ಸಾಮಗ ದತ್ತಾತ್ರಿ, ಬೆಂಗಳೂರು, ಪ್ರಜಾವಾಣಿ**

ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲೇ ಎನ್ನುವುದು ಜಗತ್ತಿನಾದ್ಯಂತ ಅಂಗೀಕರಿಸಲ್ಪಟ್ಟದೆ. ಮಾತೃಭಾಷಾ ಮಾಧ್ಯಮ ಶಿಕ್ಷಣ ನೀತಿಯನ್ನು ತಾವು ಅನುಸರಿಸುತ್ತೇವೆ ಎಂದು ಖಾಸಗಿ ಶಾಲೆಯವರು ಘೋಷಿಸಿದ್ದರೆ ಪಾಲಕರು ಏನು ಮಾಡುತ್ತಿದ್ದರು. ಅನುದಾನರಹಿತ ಶಾಲೆಗಳು

ಸರಕಾರದ ಷರತ್ತುಗಳನ್ನು ಒಪ್ಪಿಕೊಂಡು ಈ ಸಾಲಿನಿಂದ ಕನ್ನಡ ಮಾಧ್ಯಮವನ್ನೇ ಅಳವಡಿಸಲಿ. ಮೂರ್‍ನಾಲ್ಕು ವರ್ಷಗಳಲ್ಲಿ ಇವು ಸಂಪೂರ್ಣವಾಗಿ ಕನ್ನಡ ಮಾಧ್ಯಮ ಶಾಲೆಗಳಾಗಿ ಪರಿವರ್ತನೆಗೊಳ್ಳುತ್ತವೆ.

**ಭಾಷಾ ಮಾಧ್ಯಮ ಹೇರಿಕೆ ಸಂವಿಧಾನ ಬಾಹಿರ ಹೈಕೋರ್ಟ್, ಪ್ರಜಾವಾಣಿ ೩.೭.೦೮**

'ಕನ್ನಡ ಕಡ್ಡಾಯವಲ್ಲ' ಎಂಬ ಹೈಕೋರ್ಟಿನ ತೀರ್ಪು ಕನ್ನಡಿಗರಿಗೆ ಕರ್ನಾಟಕಕ್ಕೆ ಅನ್ಯಾಯವಾಗಿದೆ. ಈ ಹಿಂದೆ ಸುಪ್ರೀಂ ಕೋರ್ಟ ಮಾತೃ ಭಾಷಾ ಮಾಧ್ಯಮದ ಪರವಾಗಿ ಎಲ್ಲಾ ಕಡೆಗೂ ಏಕರೂಪದ ಶಿಕ್ಷಣ ನೀತಿ ಇರಬೇಕು ಎಂಬ ನೀತಿಗೆ ಇದು ವಿರುದ್ಧವಾಗಿದೆ. ಈ ತೀರ್ಪಿನ ವಿರುದ್ಧ ಸುಪ್ರೀಂಕೋರ್ಟಿಗೆ ಮೇಲ್ಮನವಿ ಸಲ್ಲಿಸಲಾಗುವುದು ಎಂದು ಮುಖ್ಯಮಂತ್ರಿ ಚಂದ್ರು (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು) ಹೇಳಿದ್ದಾರೆ.

ಈ ತೀರ್ಪಿನಿಂದಾಗಿ ಖಾಸಗಿ ಶಾಲೆಗಳ ಪಾಳೆಗಾರಿಕೆಗೆ ಮುಕ್ತ ಅವಕಾಶ ಸಿಕ್ಕಂತಾಗುತ್ತದೆ. ಇದು ಶೈಕ್ಷಣಿಕ ಅವಾಂತರಗಳಿಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಈ ವಿರುದ್ಧ ಸುಪ್ರೀಂಕೋರ್ಟಗೆ ಮೇಲ್ಮನವಿ ಸಲ್ಲಿಸಬೇಕು. ಮಧ್ಯಂತರ ಪರಿಹಾರಕ್ಕೂ ಅರ್ಜಿ ಸಲ್ಲಿಸಬೇಕೆಂದು ಕನ್ನಡ ಪುಸ್ತಕ ಪ್ರಾಧಿಕಾರ ಅಧ್ಯಕ್ಷ ಡಾ. ಸಿದ್ಧಲಿಂಗಯ್ಯ ಹೇಳಿದ್ದಾರೆ.

ಈ ತೀರ್ಪಿನಿಂದ ಮುಕ್ತ ಮಾರುಕಟ್ಟೆ ಖಾಸಗೀಕರಣ ನೀತಿಯನ್ನು ಶಿಕ್ಷಣ ಕ್ಷೇತ್ರದಲ್ಲೂ ಎತ್ತಿ ಹಿಡಿದಂತಾಗುತ್ತದೆ. ಶೈಕ್ಷಣಿಕ ಅಸಮಾನತೆಗೆ ನೀಡಿದ ಮನ್ನಣೆಯಾಗಿದ್ದು ಸುಪ್ರೀಂ ಕೋರ್ಟನ ಆದೇಶಕ್ಕೆ ವಿರುದ್ಧವಾಗಿದೆ ಎಂದು ಹಂ.ಪ.ನಾಗರಾಜಯ್ಯ ತಿಳಿಸಿದ್ದಾರೆ.

**ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಅನ್ಯಾಯ, ಪ್ರಜಾವಾಣಿ ೪.೭.೦೮**

ಮಾತೃಭಾಷಾ ಶಿಕ್ಷಣ ಮಾಧ್ಯಮದ ವಿರುದ್ಧವಾಗಿ ಹೈಕೋರ್ಟ ನೀಡಿರುವ ತೀರ್ಪು ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಘೋರ ಅನ್ಯಾಯವಾಗಿದೆ ಎಂದು ವಿವಿಧ ಚಿಂತಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ತೀರ್ಪಿನಿಂದ ಮುಕ್ತ ಮಾರುಕಟ್ಟೆಯ ಖಾಸಗೀಕರಣ ನೀತಿಯನ್ನು ಶಿಕ್ಷಣ ಕ್ಷೇತ್ರದಲ್ಲೂ ಎತ್ತಿ ಹಿಡಿದಂತಾಗಿದೆ ಎಂದು ಬರಗೂರು ರಾಮಚಂದ್ರಪ್ಪ ಹೇಳಿದ್ದಾರೆ.

**ಭಾಷಾ ಮಾಧ್ಯಮ ಹೇರಿಕೆ ಸಂವಿಧಾನ ಬಾಹಿರ, ಹೈಕೋರ್ಟ್, ಪ್ರಜಾವಾಣಿ ೩.೭.೦೮**

ಭಾಷಾ ನೀತಿ ಸಂಬಂಧ ಹೈಕೋರ್ಟ ನೀಡಿರುವ ತೀರ್ಪು ಸ್ವಾಗತಾರ್ಹ ತಮ್ಮ ಮಗು ಯಾವ ಭಾಷೆಯಲ್ಲಿ ಕಲಿಯಬೇಕು ಎಂದು ನಿರ್ಧರಿಸುವ ಹಕ್ಕು ಪ್ರತಿಯೊಬ್ಬ ತಂದೆ-ತಾಯಿಗೂ ಇದೆ ಎಂದು ಜಿ. ಎಸ್.ಶರ್ಮಾ ತಿಳಿಸಿದ್ದಾರೆ. ಹೈಕೋರ್ಟ ನೀಡಿರುವ ತೀರ್ಪು ೧೯೯೪ಳಕ್ಕೂ ಮುನ್ನ ಇದೆ. ೧,೧೦೦ ಅನುದಾನರಹಿತ ಶಾಲೆಗಳಿಗೆ ಅನ್ವಯವಾಗುತ್ತದೆ. ೧೯೯೪ಳರ ಭಾಷಾನೀತಿ ಕಾಯ್ದೆ ಅನ್ವಯ ರಚನೆಯ ನಂತರ ಪ್ರಾರಂಭವಾದ ಅನುದಾನರಹಿತ

ಶಾಲೆಗಳು ಪೋಷಕರ ಪರವಾಗಿ ಸರ್ಕಾರಕ್ಕೆ ಮನವಿ ಸಲ್ಲಿಸಿ, ಇಂಗ್ಲೀಶ್ ಮಾಧ್ಯಮದಲ್ಲಿ ಶಾಲೆಯನ್ನು ಆರಂಭಿಸಲು ಅನುಮತಿಯನ್ನು ಕೋರಲು ಅವಕಾಶವಿದೆ ಎಂದು ಕೆ.ಎ.ಎಂ.ಎಸ್. ಪ್ರಧಾನ ಕಾರ್ಯದರ್ಶಿ ಕೃಷ್ಣಯ್ಯರ್ ಹೇಳಿದ್ದಾರೆ.

ಹೈಕೋರ್ಟಿನ ತೀರ್ಪು ಕನ್ನಡಿಗರ ಮೇಲೆ ಬರೆ ಎಳೆದಂತಾಗಿದೆ. ನ್ಯಾಯಾಲಯಗಳು ಆಯಾ ರಾಜ್ಯದ ಪ್ರಾದೇಶಿಕ ಭಾಷೆಗಳಿಗೆ ಸ್ಪಂದಿಸುವ ಅಗತ್ಯ ಈಗ ಹೆಚ್ಚಾಗಿದೆ ಎಂದು ಹಂಪಾ ನಾಗರಾಜಯ್ಯ ಹೇಳಿದ್ದಾರೆ.

ಹೈಕೋರ್ಟಿನ ತೀರ್ಪನ್ನು ಪ್ರಶ್ನಿಸಿ ರಾಜ್ಯ ಸರ್ಕಾರ ಅನುದಾನ ರಹಿತ ಶಾಲೆಗಳ ಮಾನ್ಯತೆಯನ್ನು ರದ್ದು ಪಡಿಸುವಂತೆ ಆದೇಶ ಸೂಚಿಸಿದ್ದಾರೆ. ಹೈಕೋರ್ಟ ತೀರ್ಪನ್ನು ಸರ್ಕಾರ ಉಲ್ಲಂಘಿಸಿ ನ್ಯಾಯ ನಿಂದನೆಯನ್ನು ಎದುರಿಸಬೇಕಾಗುತ್ತದೆ. ಆದರೆ ಸುಪ್ರೀಂ ಕೋರ್ಟ ಮಾತೃ ಭಾಷಾ ಮಾಧ್ಯಮ ಶಿಕ್ಷಣವನ್ನು ಜಾರಿಗೆ ತರುವಂತೆ ಎಲ್ಲಾ ರಾಜ್ಯಗಳಿಗೂ ಆದೇಶ ಹೊರಡಿಸಿದೆ. ಆದರೆ 'ಕನ್ನಡ ಕಡ್ಡಾಯವಲ್ಲ' ಎಂಬ ತೀರ್ಮಾನಕ್ಕೆ ಬಂದ ಹೈಕೋರ್ಟ ಸುಪ್ರೀಂಕೋರ್ಟಿನ ತೀರ್ಪು ಉಲ್ಲಂಘಿಸಿ ನ್ಯಾಯ ನಿಂದನೆಯನ್ನು ಎದುರಿಸಿ ದಂತಾಗುವುದಿಲ್ಲವೆ? ಅಂದರೆ ಹೈಕೋರ್ಟಿನ ತೀರ್ಪು ಯಾವುದಾದರೂ ಅದನ್ನು ಹಾಗೆಯೇ ಸ್ವೀಕರಿಸಬೇಕು, ಇದು ಯಾವ ನ್ಯಾಯ? ಇಲ್ಲಿ ಹೈಕೋರ್ಟ ತೀರ್ಪನ್ನು ಯಾರು ಪ್ರಶ್ನಿಸುವುದಿಲ್ಲವೇ? ಈ ಬಗೆಯ ತಾರತಮ್ಯ ಆಡಳಿತದ ನೀತಿಯಿಂದಾಗಿ ರಾಜ್ಯದಲ್ಲಿ ಮತ್ತು ಶಿಕ್ಷಣದಲ್ಲಿ ಒಂದು ಅಂತಿಮ ರೂಪವನ್ನು ಪಡೆಯಲಾಗುತ್ತಿಲ್ಲ.

**ಇಂಗ್ಲೀಶ್ ವ್ಯಾಮೋಹ, ಕನ್ನಡ ಪ್ರಭ ೭.೭.೦೮**

ಮಕ್ಕಳ ಮತ್ತು ಹೆತ್ತವರ ಇಂಗ್ಲೀಶ್ ವ್ಯಾಮೋಹದಿಂದಾಗಿ ಗ್ರಾಮೀಣ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಇಳಿಮುಖವಾಗುತ್ತಿದೆ. ಸರ್ಕಾರ ಇಂಗ್ಲೀಶ್ ಮಾಧ್ಯಮ ಶಾಲೆಗಳಿಗೆ ಕಡಿವಾಣ ಹಾಕಬೇಕು. ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲೀಶ್ ಕಲಿಸುವ ವ್ಯವಸ್ಥೆ ಆದಾಗ ಗ್ರಾಮೀಣ ಪ್ರದೇಶದ ಮಕ್ಕಳು ಆ ಕಾಲಕ್ಕೆ ಅಗತ್ಯವಾಗಿರುವ ಇಂಗ್ಲೀಶ್ ಭಾಷೆ ಕಲಿಯುವಂತಾಗುತ್ತದೆ. ಇದರಿಂದ ಕನ್ನಡ ಮಾಧ್ಯಮ ಶಾಲೆಗಳು ಉಳಿಯುತ್ತವೆ.

**ಭಾಷಾ ಮಾಧ್ಯಮ ಸುಗ್ರೀವಾಜ್ಞೆ ಹೊರಡಿಸಲು ರಾಜ್ಯ ಚಿಂತನೆ,**
**ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪ್ರಭ ೭.೭.೦೮**

ಭಾಷಾ ಮಾಧ್ಯಮ ಕುರಿತು ಹೈಕೋರ್ಟ ತೀರ್ಪಿನ ವಿರುದ್ಧ ಸುಗ್ರೀವಾಜ್ಞೆ ಹೊರಡಿಸಿ ಕನ್ನಡಿಗರಿಗೆ ನ್ಯಾಯ ದೊರಕಿಸುವ ಬಗ್ಗೆ ಚಿಂತಿಸಲಾಗುತ್ತಿದೆ. ಕನ್ನಡ ಭಾಷಾ ಕಲಿಕೆ ಮುಖ್ಯವಾದ್ದರಿಂದ ಕನ್ನಡಕ್ಕೆ ಯಾವ ಅನ್ಯಾಯವಾಗಲು ಪ್ರಾಧಿಕಾರ ಬಿಡುವುದಿಲ್ಲ. ಕನ್ನಡ ಮಾಧ್ಯಮ ಹೆಸರಲ್ಲಿ ಇಂಗ್ಲೀಶ್ ಬೋಧನೆ ನಡೆಸುವ ಶಾಲೆಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಿದ್ದು ಇದರಿಂದ ವಿದ್ಯಾರ್ಥಿಗಳು ಅತಂತ್ರರಾಗದಂತೆ ಬದಲಿ ವ್ಯವಸ್ಥೆ ಕಲ್ಪಿಸಲಾಗುವು ದೆಂದು ಮುಖ್ಯಮಂತ್ರಿ ಚಂದ್ರು ಹೇಳಿದ್ದಾರೆ.

**ಭಾಷಾ ಮಾಧ್ಯಮ ಸಲಹೆ, ಪ್ರಜಾವಾಣಿ ೮.೭.೦೮**

ಶಿಕ್ಷಣದಲ್ಲಿ ಕನ್ನಡವನ್ನು ಭಾಷಾ ಮಾಧ್ಯಮವನ್ನಾಗಿ ಜಾರಿಗೆ ತರಬೇಕೆಂದು ಸಾಹಿತಿಗಳು, ಕನ್ನಡಪರ ಚಿಂತನೆಗಳು, ಸಂಘಟನೆಗಳು ರಾಜ್ಯ ಸರ್ಕಾರದ ಮೇಲೆ ಒತ್ತಡ ಹಾಕಲು ಸುಪ್ರೀಂ ಕೋರ್ಟನಲ್ಲಿ ನ್ಯಾಯ ಸಿಗುವವರೆಗೂ ಹೋರಾಟ ನಡೆಸುವುದಾಗಿ ತಿಳಿಸಿದರು.

**ಮಾತೃಭಾಷೆ ಮತ್ತು ಶಿಕ್ಷಣ, ಡಾ. ಸರಸ್ವತಿ ವಿಜಯ ಕುಮಾರ್, ಪ್ರಜಾವಾಣಿ**

ಮಾತೃಭಾಷೆ ಮತ್ತು ಶಿಕ್ಷಣ ಪೂರಕ ಅಂಶಗಳು. ಮಗುವಿನ ಮಾನಸಿಕ ವಿಕಾಸ ತಾಯ್ನುಡಿಯ ಪರಿಸರದಿಂದಲೇ ಉಂಟಾಗುತ್ತದೆ. ತನ್ನ ಪರಿಸರದ ಮೂಲಕವೇ ಹಲವಾರು ವಿಷಯಗಳನ್ನು ತಿಳಿಯುತ್ತದೆ. ಕಾಲಕ್ರಮೇಣ ರಾಷ್ಟ್ರದ ಅಗತ್ಯಕ್ಕೆ ತಕ್ಕಂತೆ ದ್ವಿಭಾಷೆ, ಬಹುಭಾಷೆ ಯನ್ನು ಕಲಿಯಲಿ. ಆದರೆ ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಾದರೆ ಹೆಚ್ಚು ಆತ್ಮವಿಶ್ವಾಸ ದಿಂದ ಮುನ್ನಡೆಯುತ್ತದೆ.

**ಮಾತೃಭಾಷೆ ಮಾಧ್ಯಮವೇ ಉತ್ತಮ, ಸಿ.ಆರ್. ಚಂದ್ರಶೇಖರ್, ೦೯.೦೭.೨೦೦೮**

ಶಿಕ್ಷಣ ಮಾಧ್ಯಮದ ಕುರಿತು ಹೈಕೋರ್ಟ್ ನೀಡಿರುವ ತೀರ್ಪನ್ನು ಅಲ್ಲಗಳೆಯುತ್ತ ಮಾತೃ ಭಾಷೆಯ ಮುಖಾಂತರ ಶಿಕ್ಷಣವೇ ಅತ್ಯುತ್ತಮ ಎಂದಿದ್ದಾರೆ. ಇಂದಿನ ಸಂದರ್ಭದಲ್ಲಿ ಇಂಗ್ಲೀಶ್ ವ್ಯಾಮೋಹ ಪಾಲಕರನ್ನು ಕುರುಡರನ್ನಾಗಿಸಿಬಿಟ್ಟಿದೆ. ಕನ್ನಡ ಮತ್ತು ಇಂಗ್ಲೀಶ್ ಭಾಷೆಯ ಶಿಕ್ಷಣದ ಮೂಲಕ ಶಾಲೆಗಳಲ್ಲಿ ಉಂಟಾಗುತ್ತಿರುವ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಇಂಗ್ಲೀಶ್ ಮಾಧ್ಯಮದ ಶಿಕ್ಷಣವನ್ನು ಪಡೆಯಲಾಗದವರು ದುಃಖ, ನಿರಾಶೆ, ಕೀಳರಿಮೆಯಿಂದ ಬಳಲುವಂತಾಗಿದೆ. ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದವರಿಗೆ ಮೀಸಲಾತಿ ಇದ್ದರೂ, ಖಾಸಗಿ ಕ್ಷೇತ್ರದಲ್ಲಿ ಅದಕ್ಕೆ ಬೆಲೆ ಇಲ್ಲ. ಆದ್ದರಿಂದ ಇಂತಹ ಸಮಸ್ಯೆಗೆ ಸರಕಾರ ಮತ್ತು ಪ್ರಜ್ಞಾವಂತರು ಪರಿಹಾರವನ್ನು ಒದಗಿಸಬೇಕು. ಆದರೆ ಶಿಕ್ಷಣ ಮಾಧ್ಯಮ ಮಾತೃಭಾಷೆ ಯಾಗಬೇಕು. ಇದರಿಂದ ಮುಂದಿನ ಪೀಳಿಗೆಗೆ ಮಹದುಪಕಾರವಾಗುತ್ತದೆ ಎಂದು ಅಭಿಪ್ರಾಯ ಮಂಡಿಸಿದ್ದಾರೆ.

**ಅಪ್ರಾಮಾಣಿಕರಿಂದ ಕನ್ನಡಕ್ಕೆ ಕುತ್ತು, ತೇಜಸ್ ಚಕ್ರವರ್ತಿ, ಪ್ರಜಾವಾಣಿ**

ಕನ್ನಡ ನಾಡಿನಲ್ಲಿ ಕನ್ನಡ ಪರಿಸ್ಥಿತಿಯನ್ನು ಹಾಗೂ ಇಂದಿನ ಸಂದರ್ಭದಲ್ಲಿ ಕನ್ನಡ ಮತ್ತು ಇಂಗ್ಲೀಶ್ ಭಾಷೆಯ ಸಹಜ ಸ್ಥಿತಿಯನ್ನು ವಿವರಿಸಿದ್ದಾರೆ. ಪ್ರಾಥಮಿಕ ಶಾಲೆಯಲ್ಲಿ ಮಾತೃಭಾಷೆಯಲ್ಲಿ ಕಲಿತರೆ ಮಗುವಿನ ವಿಷಯ ಜ್ಞಾನ ಚೆನ್ನಾಗಿರುತ್ತದೆ ಎನ್ನುವುದು ಭಾಷಾ ತಜ್ಞರ ಅಭಿಪ್ರಾಯವೆಂದು ತಿಳಿಸಿ, ಭಾಷಾ ವಿವಾದದ ಹಿನ್ನೆಲೆಯಲ್ಲಿ ಹೈಕೋರ್ಟ್ ನೀಡಿರುವ ತೀರ್ಪು ಇಂದಿನ ವಾಸ್ತವ ಬದುಕಿಗೆ ಪೂರಕವಾಗಿದೆ ಎಂದಿದ್ದಾರೆ. ಪೋಷಕರ ಒಲವು ಸಹ ಇಂಗ್ಲೀಶ್ ಮಾಧ್ಯಮದ ಶಿಕ್ಷಣವೇ ಆಗಿದೆ. ಸಾಹಿತಿಗಳು ಕನ್ನಡ ಚಿಂತಕರು ಮಾತ್ರ ಇಂಗ್ಲೀಶ್ ಶಿಕ್ಷಣಕ್ಕೆ ವಿರೋದ ವ್ಯಕ್ತಪಡಿಸಿದ್ದಾರೆ. ಹೊರಗಿನಿಂದ ಬಂದವರನ್ನು ಹೊರತುಪಡಿಸಿ ಕನ್ನಡ ನಾಡಿನ ಮಕ್ಕಳಿಗೆ ಕನ್ನಡದಲ್ಲಿಯೇ ಶಿಕ್ಷಣ ಕೊಡಿಸುವ ವ್ಯವಸ್ಥೆ ಜಾರಿಗೆ ಬಂದರೆ ಅತ್ಯಂತ ಸ್ವಾಗತಾರ್ಹ. ಕನ್ನಡದ ಬಗೆಗೆ ಮಾತನಾಡುವವರೆಲ್ಲರೂ ತಮ್ಮ

ಮಕ್ಕಳಿಗೆ ಇಂಗ್ಲೀಶ್ ಮಾಧ್ಯಮ ಶಿಕ್ಷಣ ಕೊಡಿಸುತ್ತಿರುವುದು ವಿಪರ್ಯಾಸ. ಇಂದಿನ ಅನೇಕ ಹೋರಾಟಗಳು ಇಂತಹ ನಾಯಕರ ನಡೆ ಮತ್ತು ನುಡಿಗಿರುವ ವ್ಯತ್ಯಾಸದಿಂದಾಗಿ ವಿಫಲವಾಗುತ್ತಿವೆ. ಇದು ಬಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವ ಪ್ರವೃತ್ತಿ ಎಂದು ವರ್ಣಿಸಿದ್ದಾರೆ. ಇಂತಹ ಅಪ್ರಾಮಾಣಿಕರಿಂದಲೇ ಕನ್ನಡದ ಪರಿಸ್ಥಿತಿ ಹೀಗಾಗಿದೆ, ಇವರು ಪ್ರಾಮಾಣಿಕತೆಯನ್ನು ಪ್ರದರ್ಶಿಸಿದರೆ ನಿಜವಾಗಿಯೂ ಕನ್ನಡ ಉಳಿದೀತೆಂದು ಕನ್ನಡದ ಬಗೆಗಿನ ಒಲವು, ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ.

**ಕನ್ನಡಕ್ಕೊಂದು ಭಾರಿ ಪೆಟ್ಟು, ಕರ್ಮವೀರ. ೨೦.೭.೦೮**

೧೯೯೪ಳ ಏಪ್ರೀಲ್ ೧೯ರಂದು ಕರ್ನಾಟಕ ಸರ್ಕಾರ ಒಂದರಿಂದ ನಾಲ್ಕನೇ ತರಗತಿಯ ವರೆಗೆ ಮಾತೃಭಾಷಾ ಶಿಕ್ಷಣ ಕಡ್ಡಾಯವಾಗಿ ನೀಡಬೇಕೆಂದು ಆದೇಶ ಹೊರಡಿಸಿತು. ಶಿಕ್ಷಣ ಚಿಂತಕರು ಮಕ್ಕಳ ಶಿಕ್ಷಣ ಮಾತೃಭಾಷೆಯಲ್ಲಿಯೇ ಇರಬೇಕೆಂದು ತಿಳಿಸಿದ್ದಾರೆ. ಕನ್ನಡದ ಮಕ್ಕಳಲ್ಲಿಯೇ ವರ್ಗಬೇಧ ಉಂಟಾಗುತ್ತದೆ. ಆದ್ದರಿಂದ ರಾಜ್ಯದ ಎಲ್ಲಾ ಶಾಲೆಗಳಿಗೂ ಒಂದೇ ಭಾಷಾ ನೀತಿ ಅನ್ವಯವಾಗುವಂತಾಗಬೇಕು. ಸಂವಿಧಾನದ ಏಳನೇ ಶೆಡ್ಯೂಲ್‌ನಲ್ಲಿ ಮಾತೃಭಾಷೆಗೆ ಸಂಬಂಧಿಸಿದಂತೆ ನೀತಿ ಮತ್ತು ನಿರ್ವಹಣೆಯ ಅಧಿಕಾರ ಸಂಪೂರ್ಣ ರಾಜ್ಯ ಸರ್ಕಾರಗಳಿಗೆ ಸೇರಿದೆ ಎಂದು ಪ್ರಸ್ತಾಪಿಸಲಾಗಿದೆ.

**ಕನ್ನಡ ಮಾಧ್ಯಮ ಸುಪ್ರೀಂಗೆ ರಾಜ್ಯ ಮೇಲ್ಮನವಿ, ಕನ್ನಡ ಪ್ರಭ ೨೪.೭.೦೮**

ರಾಜ್ಯ ಹೈಕೋರ್ಟನ ತೀರ್ಪನ್ನು ಪ್ರಶ್ನಿಸಿ ಸರ್ಕಾರ ಬುಧುವಾರ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿತು. ಉಚ್ಚ ನ್ಯಾಯಾಲಯದ ತೀರ್ಪಿಗೆ ತಕ್ಷಣದ ಪರಿಹಾರವಾಗಿ ತಡೆಯಾಜ್ಞೆ ನೀಡಬೇಕು. ಅನುದಾನ ರಹಿತ ಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಕಡ್ಡಾಯಗೊಳಿಸಬೇಕು ಎಂಬುದು ಅದರ ಸಾರಾಂಶ.

ಭಾಷಾ ಮಾಧ್ಯಮ ನೀತಿಯನ್ನು ಜಾರಿಗೊಳಿಸುವ ಅಧಿಕಾರ ಸರ್ಕಾರಕ್ಕಿದೆ. ಆದರೆ ಸಾರ್ವಜನಿಕರ ಮೂಲಭೂತ ಹಕ್ಕುಗಳಿಗೆ ಚ್ಯುತಿ ತರಬಾರದು. ಹೈಕೋರ್ಟನ ಈ ತೀರ್ಪು ಕನ್ನಡಕ್ಕೆ ಮರಣ ದಂಡಣೆ, ಸರ್ಕಾರದ ಭಾಷಾನೀತಿಗೆ ಆದ ದೊಡ್ಡ ಸೋಲು. ಸಾಮಾಜಿಕ ಅಸಮಾನತೆಗೆ ಎಡೆಮಾಡಿ ಕೊಡುವ ದುರಾದೃಷ್ಟಕರ ತೀರ್ಪು ಎಂದು ಬಣ್ಣಿಸಲಾಗಿದೆ.

**ಮಾತೃಭಾಷೆಯಲ್ಲಿ ಶಿಕ್ಷಣ, ಸಂಯುಕ್ತ ಕರ್ನಾಟಕ ೩೧.೮.೦೯**

ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂಬುದು ವಿದ್ಯಾರ್ಥಿಗಳ ಒತ್ತಾಯ. ವ್ಯಕ್ತಿತ್ವ ವಿಕಸನಕ್ಕೆ ಮಾರಕವಾಗಿರುವ ದೃಶ್ಯ ಮಾಧ್ಯಮ ಬೇಡವೇ ಬೇಡ ಎಂದು ಸ್ವತಃ ವಿದ್ಯಾರ್ಥಿಗಳೇ ಮಾತೃ ಭಾಷೆಯ ಪರವಾಗಿ ಕೂಗನ್ನು ಎತ್ತಿರುವುದು ಶ್ಲಾಘನೀಯ. ಮಕ್ಕಳ ಭವಿಷ್ಯಕ್ಕೆ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಅನಿವಾರ್ಯ ಎಂಬ ವಿಷಯದ ಮೇಲೆ ಮಾತನಾಡಿದ ವಿದ್ಯಾರ್ಥಿಗಳು ಪ್ರಾಥಮಿಕ ಶಿಕ್ಷಣವನ್ನು ಮಾತೃ ಭಾಷೆಯಲ್ಲಿಯೇ ನೀಡಬೇಕೆಂದು ಹಕ್ಕೊತ್ತಾಯ ಮಂಡಿಸಿದ್ದಾರೆ. ಅನ್ಯಭಾಷೆಯಲ್ಲಿ ಶಿಕ್ಷಣ ಪಡೆಯುವ ಮಕ್ಕಳು ಉರು ಹೊಡೆದು ಹೆಚ್ಚಿನ

ಅಂಕಗಳನ್ನು ಗಳಿಸುತ್ತಾರೆ. ಆದರೆ ಆಳವಾದ ವಿಷಯ ಜ್ಞಾನದ ತಿಳುವಳಿಕೆ ಮಾತೃಭಾಷೆಯಿಂದ ಅಥವಾ ಆಡುಭಾಷೆಯಿಂದ ಕಲಿಯಲು ಸಾಧ್ಯವಾಗುತ್ತದೆ. ಇದರಿಂದ ಮಾತೃಭಾಷೆ ನಾಡಿನ ಸ್ವಾಭಿಮಾನ ಬೆಳೆಸುತ್ತದೆ. ಅನ್ಯಭಾಷೆಗಳು ಮಾತೃ ಭಾಷೆಯ ಸ್ಥಾನ ತುಂಬಲಾರದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಎಲ್ಲಾ ವಿದ್ಯಾರ್ಥಿಗಳು ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣ ನೀಡುವಂತೆ ಒತ್ತಾಯಿಸಿ ಪ್ರತಿಭಟಿಸಿದರೆ ಖಂಡಿತ ಸಾಧ್ಯವಾಗಬಹುದು ಎನಿಸುತ್ತದೆ.

**ಪ್ರಾಥಮಿಕ ಶಿಕ್ಷಣ ಕನ್ನಡ ಮಾಧ್ಯಮದಲ್ಲಿಯೇ ಬೋಧನೆ, ಪ್ರಜಾವಾಣಿ ೧೦.೧.೦೯**

ಬರುವ ಶೈಕ್ಷಣಿಕ ಸಾಲಿನಿಂದ ಕನ್ನಡದಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡುವ ವ್ಯವಸ್ಥೆ ಮಾಡುತ್ತೇವೆ ಎಂದು ಶಿಕ್ಷಣ ಸಚಿವ ವಿಶ್ವೇಶರ ಹೆಗಡೆ ಕಾಗೇರಿ ತಿಳಿಸಿದ್ದಾರೆ. ಇಂಗ್ಲೀಶನ್ನು ಭಾಷೆಯಾಗಿ ಕಲಿಸುವುದಕ್ಕೆ ಅಭ್ಯಂತರವಿಲ್ಲ. ಮಾತೃಭಾಷೆ ನಮ್ಮ ಸಂಸ್ಕೃತಿ, ಸಂಸ್ಕಾರ ವ್ಯಕ್ತಿತ್ವ ನಿರ್ಮಾಣದಲ್ಲಿ ಬಹು ದೊಡ್ಡ ಪಾತ್ರ ವಹಿಸುತ್ತದೆ. ಈ ಬಗ್ಗೆ ಸಮಾಜದಲ್ಲಿ ಅರಿವು ಮೂಡಿಸಬೇಕಿದೆ.

**ಶಿಕ್ಷಣ, ಒಂದಿಷ್ಟು ಚಿಂತನೆ, ಶಂ.ಗು.ಬಿರಾದರ, ಪ್ರಜಾವಾಣಿ**

೧ನೇ ತರಗತಿಯಿಂದಲೇ ಇಂಗ್ಲೀಶ್ ಶಿಕ್ಷಣ ಕಡ್ಡಾಯ ಮಾಡಿರುವುದು ಇದು ಕನ್ನಡಕ್ಕೆ ಕೊಡಲಿ ಏಟು ನೀಡುವ ಧೋರಣೆಯಾಗಿದೆ. ಇಂಥಾ ಧೋರಣೆಯನ್ನು ಕುವೆಂಪು ಅಂತಹ ಮಹಾಕವಿಗಳು ಎಂದೋ 'ತ್ರಿಭಾಷಾ ತ್ರಿಶೂಲ' ಎಂದು ಟೀಕಿಸಿದ್ದಾರೆ. ವಾಸ್ತವವಾಗಿ ಕನ್ನಡ ಮಕ್ಕಳ ಎದೆಗೆ ತ್ರಿಶೂಲ ಸದೃಶ್ಯವೇ ಆಗಿದೆ.

**ಎಳೆಯ ವಯಸ್ಸಿನಲ್ಲಿಯೇ ಇಂಗ್ಲೀಶ್ ಕಲಿಕೆ ಅಗತ್ಯ ಹೈಕೋರ್ಟ, ಪ್ರಜಾವಾಣಿ**

ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಮಾತೃಭಾಷೆಯ ಜೊತೆಗೆ ಎಳೆಯ ವಯಸ್ಸಿನಲ್ಲಿ ಮಕ್ಕಳಿಗೆ ಇಂಗ್ಲೀಶ್ ಕಲಿಸುವುದು ಅಗತ್ಯವೆಂದು ಹೈಕೋರ್ಟ ಅಭಿಪ್ರಾಯಪಟ್ಟಿದೆ. ೧೯೯೪-೯೫ ಮತ್ತು ೨೦೦೭-೦೩ ರಾಜ್ಯ ಸರ್ಕಾರದಿಂದ ಅಂಗೀಕೃತವಾಗಿರುವ ಶಾಲೆಗಳಲ್ಲಿ ಒಂದರಿಂದ ಐದನೇ ತರಗತಿವರೆಗೆ ಮಾತೃ ಭಾಷಾ ಮಾಧ್ಯಮ ಶಿಕ್ಷಣ ಜಾರಿಯಾಗಬೇಕೆಂಬ ಸರ್ಕಾರಿ ಆದೇಶವನ್ನು ಹೈಕೋರ್ಟ ರದ್ದು ಪಡಿಸಿದೆ. ಇಂಗ್ಲೀಶ್ ಮಾತೃಭಾಷೆಯಾಗಿರದ ವಿದ್ಯಾರ್ಥಿಗಳಿಗೆ ಶಾಲೆಗಳಲ್ಲಿ ೧ ರಿಂದ ೫ರವರೆಗೆ ಇಂಗ್ಲೀಶ್ ಮಾಧ್ಯಮ ವ್ಯಾಸಂಗ ಮಾಡಲು ಅನುಮತಿ ನೀಡಬಹುದು. ಇಲ್ಲದಿದ್ದರೆ ಅವುಗಳನ್ನು ಮುಚ್ಚಬೇಕು ಎಂಬ ಸರ್ಕಾರದ ಆದೇಶವನ್ನು ನ್ಯಾಯಮೂರ್ತಿ ಹುಲುವಾಡಿ ಜಿ. ರಮೇಶ ಅನೂರ್ಜಿತಗೊಳಿಸಿದ್ದಾರೆ.

ಈ ಬಗೆಯ ಹೈಕೋರ್ಟನ ಖಚಿತ ನಿರ್ಧಾರದ ಹಿಂದೆ ಅನುದಾನರಹಿತ ಖಾಸಗಿ ಸಂಸ್ಥೆಗಳ ಹಾಗೂ ರಾಜಕೀಯ ಅಧಿಕಾರಿಗಳ, ಬಂಡವಾಳ ಶಾಹಿಗಳ, ಬಲವಾದ ಒತ್ತಡ ಹಾಗೂ ಹೇರಿಕೆಯ ಕೈವಾಡವಿದೆ ಎಂದೆನಿಸುತ್ತದೆ. ಇದಕ್ಕೆ ಸರಕಾರ ವಿಚಲಿತಗೊಳ್ಳದೆ, ರಾಜ್ಯದ ಭಾಷೆಯಲ್ಲಿ ಶಿಕ್ಷಣ ಮಾಧ್ಯಮವನ್ನು ಜಾರಿಗೊಳಿಸಲು ಸರಕಾರಕ್ಕೆ ಸಂಪೂರ್ಣ

ಅಧಿಕಾರವಿದೆ. ಸರಕಾರ ಈ ಬಗೆಯ ಕಠಿಣ ನಿರ್ಧಾರವನ್ನು ಕೈಗೊಂಡು ಕನ್ನಡ ಮಾಧ್ಯಮವನ್ನು ಜಾರಿಗೆ ತಂದಲ್ಲಿ ಶಿಕ್ಷಣದ ಅಭಿವೃದ್ಧಿಯನ್ನು ಕಾಣಲು ಸಾಧ್ಯ. ಇಲ್ಲದಿದ್ದಲ್ಲಿ ಐವತ್ತು ವರ್ಷಗಳಿಂದ ನಡೆಯುತ್ತಾ ಬಂದಿರುವ ಈ ಚರ್ಚೆ ಇನ್ನೂ ಕೆಲವೇ ವರ್ಷಗಳಲ್ಲಿ ಕಣ್ಮರೆಯಾಗುವ ಸಾಧ್ಯತೆ ಅಧಿಕವಾಗಿದೆ. ಅಷ್ಟೊತ್ತಿಗೆ ಇಂಗ್ಲೀಶ್‌ನ ತೀವ್ರ ಪ್ರಭಾವ ನಾಡಿನಲ್ಲಿ ಸಂಪೂರ್ಣವಾಗಿ ಆವರಿಸಿಕೊಂಡು ಬಿಟ್ಟಿರುತ್ತದೆ. ಇಂಗ್ಲೀಶ್ ಮಾಧ್ಯಮಕ್ಕೆ ಬದಲಾಯಿಸಿಕೊಳ್ಳಲು ಅನುಮತಿ ಕೋರಿ ಅರ್ಜಿ ಸಲ್ಲಿಸಿದ್ದವು. ಆದರೆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡದೆ ನ್ಯಾಯ ಮತ್ತು ಸಮಾನತೆಗೆ ಅವಕಾಶವಾಗುವಂತೆ ಮಧ್ಯಂತರ ತಡೆಯಾಜ್ಞೆಯನ್ನು ನೀಡುವಂತೆ ಸರ್ಕಾರ ಕೋರಿರುತ್ತದೆ.

**ಭಾಷಾ ಮಾಧ್ಯಮ ಮತ್ತೆ ಕೋರ್ಟಿಗೆ, ಪ್ರಜಾವಾಣಿ ೧೧.೩.೦೯**

ಸುಪ್ರೀಂ ಕೋರ್ಟ ತೀರ್ಪು ನೀಡದೆ ವಿಳಂಬ ಮಾಡುತ್ತಿರುವ ಕಾರಣ ಅನುದಾನ ರಹಿತ ಖಾಸಗಿ ಶಾಲೆಗಳು ಇಂಗ್ಲೀಶ್ ಮಾಧ್ಯಮದಲ್ಲಿ ತರಗತಿ ನಡೆಸಲಾಗದೆ ಮತ್ತೆ ಹೈಕೋರ್ಟಗೆ ಅರ್ಜಿ ಸಲ್ಲಿಸಿದ್ದವು. ಜುಲೈ ೨, ೨೦೦೮ ರಂದು ರಾಜ್ಯದಲ್ಲಿ ಅನುದಾನ ಪಡೆಯದ ಶಾಲೆಗಳು ಕನ್ನಡಮಾಧ್ಯಮ ಅಥವಾ ಆಯಾ ರಾಜ್ಯದ ಪ್ರಾದೇಶಿಕ ಭಾಷೆಯಲ್ಲಿಯೇ ಬೋಧನೆ ಮಾಡಬೇಕು ಎನ್ನುವುದು ಸಂವಿಧಾನಬಾಹಿರ ಎಂದು ಹೈಕೋರ್ಟ ತೀರ್ಪನ್ನು ನೀಡಿತ್ತು. ಇದಕ್ಕೆ ಸರ್ಕಾರ ತೀರ್ಪನ್ನು ಕೋರಿ ಸುಪ್ರೀಂ ಕೋರ್ಟಗೆ ಪ್ರಶ್ನಿಸಿದೆ. ಪ್ರಸ್ತುತ ಶೈಕ್ಷಣಿಕ ವರ್ಷದಿಂದ ಇಂಗ್ಲೀಶ್ ಮಾಧ್ಯಮದಲ್ಲಿ ತರಗತಿ ನಡೆಸಲು ಅನುಮತಿ ನೀಡಲು ಶಿಕ್ಷಣ ಇಲಾಖೆಗೆ ಆದೇಶಿಸುವಂತೆ ಅರ್ಜಿಯಲ್ಲಿ ಕೋರಲಾಗಿದೆ.

**ಕನ್ನಡವೆಂಬ ದೋತರವೂ ಇಂಗ್ಲಿಸ್ಸೆಂಬ ಎಂಬ ಪ್ಯಾಂಟೂ, ಕುಂ. ವೀರಭದ್ರಪ್ಪ, ಪ್ರಜಾವಾಣಿ ೧೦.೫.೦೯**

ಪ್ರಸ್ತುತ ಪ್ರಾಥಮಿಕ ಶಿಕ್ಷಣದ ಮಾಧ್ಯಮ ಕುರಿತು ಕನ್ನಡ ಪ್ರಾಥಮಿಕ ಶಾಲೆಗಳ ದುಃಸ್ಥಿತಿಯನ್ನು ಪರಿಗಣಿಸಿ ಇಲ್ಲಿ ವಿಶ್ಲೇಸಿದ್ದಾರೆ. ಐಟಿ.ಬಿಟಿ. ಕಂಪನಿಗಳು ಅಣಬೆಯಂತೆ ತಲೆಎತ್ತುತ್ತಿರುವುದರಿಂದ ಅವುಗಳ ಪಗಾರದ ಆಮೀಷದಿಂದಾಗಿ ಸರಕಾರಗಳು ಅನುಸಂಧಾನ ಮಾಡಿಕೊಂಡಿರುವುದು ಖಚಿತ. ಈ ಹಿಂದೆ ಕನ್ನಡ ಮಾಧ್ಯಮದಲ್ಲಿ ಓದಿರುವವರೆಲ್ಲರೂ ಇಂದು ಅತ್ಯುತ್ತಮ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇದು ಪ್ರತ್ಯಕ್ಷ ನಿದರ್ಶನವು ಹೌದು, ಎಂದಿದ್ದಾರೆ.

ಸರ್ಕಾರಿ ಕನ್ನಡ ಮಾಧ್ಯಮ ಶಾಲೆಗಳು ಖಾಸಗಿ ಶಾಲೆಗಳೊಂದಿಗೆ ಅನಾರೋಗ್ಯಕರ ಪೈಪೋಟಿಯನ್ನು ಎದುರಿಸುತ್ತಿವೆ. ಶಾಲೆಗಳ ಸ್ಥಿತಿಯನ್ನು ಉತ್ತಮಪಡಿಸುವ ಹೊಣೆ ತೋರ್ಪಡುತ್ತಿದೆ. ಮಾಧ್ಯಮ ಶಿಕ್ಷಣದಿಂದಾಗಿ ಏರ್ಪಟ್ಟಿರುವ ಗೊಂದಲ, ಭಿನ್ನಾಭಿಪ್ರಾಯಗಳು ಅಷ್ಟಿಷ್ಟಲ್ಲ. ಕನ್ನಡ ಮತ್ತು ಇಂಗ್ಲೀಶಿನ ನಡುವಿನ ಸಂಘರ್ಷವನ್ನು ಅರ್ಥೈಸಲು ಲೇಖಕರಿಲ್ಲಿ

ಪ್ರತ್ಯಕ್ಷ ಘಟನೆಯ ನಿದರ್ಶನವನ್ನು ನೀಡಿದ್ದಾರೆ. 'ಬೈಕ್ ಸವಾರರಾದ ಯುವಕ, ಯುವತಿ ದಾರಿಯಲ್ಲಿ ಒಬ್ಬ ಮುದುಕನ ಮೇಲೆ ಹರಿಹಾಯುತ್ತಾರೆ. ಸಣ್ಣಪುಟ್ಟ ಗಾಯಗಳಾಗಿದ್ದರಿಂದ ಮುದುಕ ಸ್ವಲ್ಪ ತರಾಟೆಗೆ ತೆಗೆದುಕೊಂಡು ಕೇಲವು ಇಂಗ್ಲೀಶ್ ಪದಗಳನ್ನು ಬೈದಿದ್ದರಿಂದ, "ಏನೋ ಮುತ್ತ್ಯಾ ದೋತರನ ತೊಟಕೊಂಡೇ ಇಷ್ಟು ಮಾತಾಡ್ತಿ. ಇನ್ನು ನಮ್ಮಂತೆ ಪ್ಯಾಂಟ್ ತೊಟಗೊಂಡಿದ್ದಲ್ಲಿ ಇನ್ನೆಷ್ಟು ಮಾತಾಡ್ತಿದ್ಯೋ" ಎಂದು ತರಾಟೆಗೆ ತೆಗೆದುಕೊಂಡನಂತೆ. ಇದು ಪ್ರಸ್ತುತ ಭಾಷೆಗಳ ನಡುವಿನ ತಾರತಮ್ಯ ಪರಿಸ್ಥಿತಿಯನ್ನು ಬಿಗಡಾಯಿಸುತ್ತಿದೆ ಎಂಬುದನ್ನು ಮನಗಾಣಬೇಕಿದೆ.

ಕನ್ನಡ ಮಾಧ್ಯಮದಲ್ಲಿ ಓದಿರುವವರ ಮನೋಭಾವದ ವಾತ್ಸಲ್ಯ, ಅಂತಃಕರಣ ಮಾನವೀಯತೆಗೆ ಹತ್ತಿರವಾಗಿರುತ್ತದೆ ಎಂದು ಲೇಖಕರು ಕಂಡುಕೊಂಡ ಅನುಭವವಾಗಿದೆ. ಇದು ಇಂಗ್ಲೀಶ್ ಮಾಧ್ಯಮದಲ್ಲಿ ಸಾಧ್ಯವಿಲ್ಲ. ಮಗುವಿಗೆ ತನ್ನ ಮಾತೃಭಾಷೆ ಮುಖ್ಯ, ಅನ್ಯಭಾಷೆ ತದನಂತರ. ಕನ್ನಡ ಮಾಧ್ಯಮ ಶಾಲೆಗಳಿಗೆ ಅನುಕಂಪ ವ್ಯಕ್ತಪಡಿಸುವವರು ಬಹುಪಾಲು ಜನ ತಮ್ಮ ಮಕ್ಕಳನ್ನು ಕಾನ್ವೆಂಟ್ ಶಾಲೆಗಳಲ್ಲಿ ಓದಿಸುತ್ತಿರುವುದರಿಂದಲೇ ಸರ್ಕಾರಿ ಶಾಲೆಗಳು ಆರಕ್ಕೇರುತ್ತಿಲ್ಲ. ಮೂರಕ್ಕಿಳಿಯುತ್ತಿಲ್ಲ. ಇದರಿಂದ ಪರಿಸ್ಥಿತಿಯ ಸುಧಾರಣೆ ಅಸಾಧ್ಯವೆಂದು ತಿಳಿಸುತ್ತಾರೆ.

**ಭಾಷಾ ಮಾಧ್ಯಮ ಸರ್ಕಾರಕ್ಕೆ ಬಿಸಿ ತುಪ್ಪ, ಪ್ರಜಾವಾಣಿ ೧೨.೫.೦೯**

ಆಂಗ್ಲ ಮಾಧ್ಯಮ ಖಾಸಗಿ ಶಾಲೆಗಳಿಗೆ ಅನುಮತಿ ನೀಡುವಂತೆ ಹೈಕೋರ್ಟ ಸರ್ಕಾರಕ್ಕೆ ಎಪ್ರಿಲ್ ತಿಂಗಳಲ್ಲಿ ಗಡುವು ನೀಡಿತ್ತು. ಒಂದು ವೇಳೆ ಅನುಮತಿ ನೀಡದಿದ್ದರೆ ಸರ್ಕಾರ ನ್ಯಾಯಾಂಗ ನಿಂದನೆ ಎದುರಿಸಬೇಕಾಗುತ್ತದೆ ಎಂಬ ಆದೇಶದ ಅನ್ವಯ, ಅನುಮತಿ ನೀಡುವುದು ಒಳ್ಳೆಯದೆಂದು ಕೆಲವು ಅಧಿಕಾರಿಗಳು ಸಲಹೆ ಮಾಡಿದರು. ಆದರೆ ಸರ್ಕಾರದ ನಿರ್ಣಯ ಮಾತೃಭಾಷೆಯ ಪರವಾಗಿಯೇ ಇದ್ದರೂ, ಇದುವರೆಗೂ ಸುಪ್ರೀಂ ಕೋರ್ಟನ ತೀರ್ಪು ಹೊರಡಿಸದಿರುವುದರಿಂದ ಖಾಸಗಿ ಶಾಲೆಗಳಿಗೆ ಅನುಮತಿ ನೀಡುವ ಬಹುಪಾಲು ಸಾಧ್ಯತೆ ಇದೆ ಎಂದು ಹಿರಿಯ ಅಧಿಕಾರಿಯೊಬ್ಬರು ಹೇಳಿಕೆ ನೀಡಿದ್ದರು.

**ಆಂಗ್ಲ ಮಾಧ್ಯಮ ವಿರುದ್ಧ ಸರ್ಕಾರದಿಂದ ಮೇಲ್ಮನವಿ, ಕನ್ನಡ ಪ್ರಭ ೨೦.೦೬.೦೯**

ಖಾಸಗಿ ಆಡಳಿತ ಮಂಡಳಿಗಳು ಸರ್ಕಾರದ ವಿರುದ್ಧ ನ್ಯಾಯಾಂಗ ನಿಂದನೆ ಅರ್ಜಿಯನ್ನು ಸಲಿಸಿದ್ದವು. ಅದಕ್ಕೆ ೨೦೦೯ ಎಪ್ರಿಲ್ ೬ ರಂದು ಏಕಸದಸ್ಯ ಪೀಠ ಆಂಗ್ಲ ಮಾಧ್ಯಮ ತರಗತಿಗಳಿಗೆ ಸಲ್ಲಿಸಿರುವ ಅರ್ಜಿಗಳನ್ನು ಪರಿಶೀಲಿಸುವಂತೆ ಕೋರಲಾಗಿತ್ತು. ಆದರೆ ಸರ್ಕಾರ ವಿಭಾಗೀಯ ಪೀಠಕ್ಕೆ ಮೇಲ್ಮನವಿ ಸಲ್ಲಿಸಿರುತ್ತದೆ.

ಸುಪ್ರೀಂ ಕೋರ್ಟನಲ್ಲಿ ಅರ್ಜಿ ಬಾಕಿ ಇರುವಾಗ ಹೈಕೋರ್ಟ ಮಧ್ಯ ಪ್ರವೇಶಿಸುವಂತಿಲ್ಲ ಎಂದು ಅರ್ಜಿಗಳನ್ನು ಪರಿಗಣಿಸಬೇಕೆಂದು ಕೋರಿರುವ ಏಕಸದಸ್ಯ ಪೀಠದ ಆದೇಶವನ್ನು ರದ್ದುಗೊಳಿಸಬೇಕೆಂದು ಸರ್ಕಾರ ಮೇಲ್ಮನವಿಗೆ ತಿಳಿಸಿರುತ್ತದೆ.

**ಭಾಷಾ ಮಾಧ್ಯಮ ಹೈಕೋರ್ಟ ಗಡುವು, ಪ್ರಜಾವಾಣಿ ೪.೭.೦೯**

ಖಾಸಗಿ ಶಾಲೆಗಳಿಗೆ ಅನುಮತಿ ನೀಡಬೇಕೆಂದು ತೀರ್ಪನ್ನು ಕೊಟ್ಟ ಹೈಕೋರ್ಟ ಆದೇಶವನ್ನು ಸರ್ಕಾರ ಪಾಲನೆ ಮಾಡದಿದ್ದುದರಿಂದ ಹೈಕೋರ್ಟ ಸರ್ಕಾರವನ್ನು ಹಿಗ್ಗಾಮುಗ್ಗಾ ತರಾಟೆಗೆ ತೆಗೆದುಕೊಂಡಿದೆ. ನ್ಯಾಯಮೂರ್ತಿ ಎನ್.ಕುಮಾರ, ಸರ್ಕಾರಿ ಅಧಿಕಾರಿಗಳ ವಿರುದ್ಧ ಆರೋಪ ಪಟ್ಟಿ ನಿಗದಿ ಮಾಡಬೇಕಾಗುತ್ತದೆಂದು ಎಚ್ಚರಿಕೆಯೊಂದಿಗೆ ಐದು ದಿನಗಳ ಗಡುವು ನೀಡಿರುತ್ತದೆ.

**ಭಾಷಾ ಮಾಧ್ಯಮ ಚರ್ಚಿಸಿ ನಿರ್ಧಾರ, ಪ್ರಜಾವಾಣಿ ೫.೭.೦೯**

ಹೈಕೋರ್ಟ ನೀಡಿರುವ ಆದೇಶವನ್ನು ಪಾಲಿಸುವ ಅನ್ವಯ ಮುಖ್ಯಮಂತ್ರಿ, ಸಂಪುಟ ಸಚಿವರು ಹಿರಿಯ ಅಧಿಕಾರಿಗಳು ಚರ್ಚಿಸಿ ನಿರ್ಧಾರಕ್ಕೆ ಬರಲಾಗುವುದೆಂದು ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಣ ಸಚಿವ ವಿಶ್ವೇಶ್ವರ ಹೆಗಡೆ ಕಾಗೇರಿ ತಿಳಿಸಿದ್ದಾರೆ. ರಾಜ್ಯದಲ್ಲಿ ಕನ್ನಡ ಭಾಷೆಯ ಅಭಿವೃದ್ಧಿ, ರಕ್ಷಣೆ ಹಾಗೂ ಬೆಳೆವಣಿಗೆಗೆ ಸರ್ಕಾರ ಬದ್ಧ ಎಂದಿದ್ದಾರೆ.

**ಭಾಷೆ ಮಾಧ್ಯಮ ಗೊಂದಲ ಸರ್ಕಾರಕ್ಕೆ ಇಕ್ಕಟ್ಟಿನ ಸ್ಥಿತಿ, ಸಂಪಾದಕರ ಮಾತು, ವಿಜಯ ಕರ್ನಾಟಕ ೬.೭.೦೯**

ಹೈಕೋರ್ಟ ನೀಡಿರುವ ಗಡುವಿನ ಹಿನ್ನೆಲೆಯಲ್ಲಿ ಸರ್ಕಾರ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸುವಂತಿಲ್ಲ. ಕನ್ನಡ ಭಾಷಾಭಿಮಾನಕ್ಕಾಗಿ ಪ್ರಾಥಮಿಕ ಶಿಕ್ಷಣ ಮಾತೃಭಾಷೆ ಯಲ್ಲಿಯೇ ನೀಡಬೇಕು ಎನ್ನುವ ಸರ್ಕಾರದ ಬದ್ಧ ನಿಲುವಿನಿಂದ ಈಗ ಬಿಕ್ಕಟ್ಟಿನ ಪರಿಸ್ಥಿತಿ ಒದಗಿದೆ. ನ್ಯಾಯಾಲಯ ಸರ್ಕಾರಕ್ಕೆ ಈ ತಿಂಗಳ ೮ರವರೆಗೆ ಅವಕಾಶ ನೀಡಿದೆ. ಆದರೆ ಸುಪ್ರೀಂಕೋರ್ಟ ಹೈಕೋರ್ಟ ಆದೇಶಕ್ಕೆ ತಡೆ ನೀಡಿಲ್ಲ. ಈ ಮಧ್ಯೆ ಸರಕಾರ ಮತ್ತೆ ಸುಪ್ರೀಂಕೋರ್ಟಗೆ ಮೊರೆಹೋಗುವ ಸಾಧ್ಯತೆಗಳಿವೆ. ಸುಪ್ರೀಂಕೋರ್ಟನಲ್ಲಿ ಪ್ರಕರಣ ಬಾಕಿ ಇರುವ ಕಾರಣ ಈ ವಿಷಯದಲ್ಲಿ ಹೈಕೋರ್ಟ ಆದೇಶವನ್ನು ಪಾಲಿಸಲಾಗುವುದಿಲ್ಲ ಎನ್ನುವುದು ಸರಕಾರದ ವಾದವಾಗಿದೆ. ಆದರೆ ಸುಪ್ರೀಂಕೋರ್ಟನಲ್ಲಿ ಆದೇಶವನ್ನು ಪ್ರಶ್ನಿಸಿದಾಕ್ಷಣ ಹೈಕೋರ್ಟ ತೀರ್ಪನ್ನು ಜಾರಿಮಾಡದಿರುವುದು ಸರಿಯಲ್ಲ ಎಂದು ನ್ಯಾಯಾಲಯ ಹೇಳಿದೆ. ಭಾಷಾ ಮಾಧ್ಯಮದ ಗೊಂದಲವನ್ನು ಸರಕಾರ ಹೇಗೆ ಪರಿಹರಿಸುತ್ತದೆ ಎಂದು ಕಾದು ನೋಡಬೇಕಿದೆ. ಇದರಿಂದ ವಿವಿಧ ವಲಯಗಳಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗಿವೆ. ಮಾತೃಭಾಷೆಯಲ್ಲಿ ಶಿಕ್ಷಣ ನೀಡಿದರೆ ಮಕ್ಕಳಿಗೆ ಕಲಿಕೆಯಲ್ಲಿ ಆಸಕ್ತಿ ಬೆಳೆಯುವುದೆಂಬುದು ನಿಸ್ಸಂಶಯ. ಇದನ್ನು ಶಾಲೆಗಳೂ ಸರಕಾರವೂ ಸಮಾಲೋಚಿಸಿ ತೀರ್ಮಾನ ಕೈಗೊಳ್ಳುವುದು ಅಗತ್ಯವಾಗಿದೆ.

೨೦೦೦ ಇಸ್ವಿಯಿಂದಲೇ ಪ್ರಾಥಮಿಕ ಶಿಕ್ಷಣದ ಭಾಷೆ ಹಾಗೂ ಮಾಧ್ಯಮದ ಕುರಿತ ಚರ್ಚೆಯ ಬಿಸಿ ಏರುತ್ತಲೇ ಇದೆ. ಆದರೆ ಸಾಕಷ್ಟು ಅಭಿಪ್ರಾಯಗಳು ಹೆಚ್ಚು ಮಾತೃಭಾಷಾ ಮಾಧ್ಯಮಕ್ಕೆ ಪ್ರಾಶಸ್ತ್ಯ ಕಲ್ಪಿಸುತ್ತಿರುವುದು ತಿಳಿದು ಬರುತ್ತದೆ. ಇಲ್ಲಿ ಮಗುವಿನ ಕಲಿಕೆ ಮುಖ್ಯವಾಗುವುದು ಮಾತೃಭಾಷೆಯ ಮೂಲಕವೇ ಹೊರತು, ಎರಡನೇ ಭಾಷೆಯಿಂದಲ್ಲ.

ಇದು ಸಾರ್ವಕಾಲಿಕ ಸತ್ಯವೂ ಹೌದು. ಈ ಭಾಷೆಯ ಕುರಿತಂತೆ, ಅನ್ಯಭಾಷಿಕರು ಸ್ವತಃ ನಮ್ಮ ಭಾಷೆಯ ಮಹತ್ವವನ್ನು, ಅರಿವನ್ನು ನಮಗೆ ಮೂಡಿಸುತ್ತಿರುವುದು ಅತ್ಯಂತ ದುರದೃಷ್ಟಕರ ಸಂಗತಿ. ಇದು ಇಂಗ್ಲೀಶ್ ಮೇಲಿರುವ ನಮ್ಮ ಭಾಷಾ ಅಂಧಾನುಕರಣೆಯನ್ನು ಎತ್ತಿ ತೋರಿಸುತ್ತದೆ. ನಮ್ಮ ಭಾಷೆಯ ಮೇಲಿನ ಅಭಿಮಾನ ನಮ್ಮಲ್ಲಿ ಅಂತಸ್ಥವಾದಾಗ ಮಾತ್ರ ಅನ್ಯ ಭಾಷೆಯ ಪ್ರಭಾವವನ್ನು ತಗ್ಗಿಸಬಹುದು. ಇದರಿಂದ ಶಿಕ್ಷಣ ಕಲಿಕೆಯಲ್ಲಿಯೂ ಸಹ ಏಕ ಭಾಷಾ ನೀತಿಯನ್ನು ಜಾರಿಗೆ ತಂದಂತಾಗುತ್ತದೆ. ಸರಕಾರದ ಆರ್ಥಿಕ ನೀತಿಯಿಂದಾಗಿಯೇ ಈ ಭಾಷಾ ನೀತಿ ಚರ್ಚೆಯ ಸೃಷ್ಟಿಗೆ ಕಾರಣವಾಗಿದೆ. ಮಗುವಿಗೆ ಮಾತೃ ಭಾಷೆ ಕಲಿಕೆಯೇ ಪ್ರಧಾನ ಅಗತ್ಯವಾಗಿದೆ. ಇದು ಮನೋವೈಜ್ಞಾನಿಕ ನೆಲೆಯಲ್ಲಿಯೂ ಮಾತೃಭಾಷೆಯೇ ಮಗುವಿನ ಕಲಿಕೆಗೆ ಉತ್ತಮ ಸಾಧನವಾಗಿದೆ. ಇದಕ್ಕೆ ಸಾಕಷ್ಟು ಜನರ, ಸಾಹಿತಿಗಳ, ಚಿಂತಕರ, ಮನೋವಿಜ್ಞಾನಿಗಳ ಪೂರ್ಣ ಸಮ್ಮತಿ ಪ್ರಮುಖವಾಗಿ ಕಂಡು ಬರುತ್ತಿದೆ.

ಮಗುವಿಗೆ ಪ್ರಾರಂಭದಲ್ಲಿ ಭಾಷೆಯನ್ನು ಕಲಿಸುವುದು ಮುಖ್ಯವಲ್ಲ. ಆ ಭಾಷೆಯ ಮೂಲಕ ಗ್ರಹಿಸುವಿಕೆಯ ಮುಖಾಂತರ ವಿಷಯಗಳ ತಿಳುವಳಿಕೆಯನ್ನು ಮೂಡಿಸುವುದು ಶಿಕ್ಷಣದ ಮುಖ್ಯ ಉದ್ದೇಶ. ಈ ನೆಲೆಯಲ್ಲಿಯೇ ಶಿಕ್ಷಣದ ಕಲಿಕೆ ಬೆಳೆದು ಬರಬೇಕೆ ಹೊರತು, ಅನ್ಯ ಭಾಷೆಗೆ ಜೋತು ಬೀಳುವುದಲ್ಲ. ಈ ಭಾಷಾ ನೀತಿಯ ಯೋಜನೆಯನ್ನು ಘೋಷಿಸುವುದು ಮಾತ್ರ ಸರಕಾರದ ಹೊಣೆಯಾಗಬೇಕು. ಆದರೆ ಯಾವ ಭಾಷೆಯಲ್ಲಿ ಶಿಕ್ಷಣವು ಬೆಳೆದು ಬರಬೇಕು. ಯಾವ ವಿಷಯಗಳನ್ನು ಕಲಿಯಬೇಕು. ಯಾವಾಗ ಎರಡು ಭಾಷೆಗಳನ್ನು ಕಲಿಸಬೇಕು ಎನ್ನುವುದನ್ನು ನಿರ್ಧರಿಸುವುದಕ್ಕಾಗಿ ಆಯಾ ವಿಷಯ ಪರಿಣತರಿಗೆ ಬಿಡಬೇಕು. ಈ ತೀರ್ಮಾನಗಳನ್ನು ಶಿಕ್ಷಣ ತಜ್ಞರು, ಶಿಕ್ಷಕರು ಕೈಗೊಳ್ಳುವುದು ಹೆಚ್ಚು ಸೂಕ್ತವಾಗಿದೆ.

ಈ ರೀತಿಯ ಗೊಂದಲದ ತಾಕಲಾಟಗಳ ನಡುವೆಯೇ ಅನೇಕ ಸಂಶಯಗಳು ಹುಟ್ಟಿಕೊಂಡಿವೆ. ಮಾಧ್ಯಮದ ಪ್ರಶ್ನೆ ಬಗೆ ಹರಿಯುತ್ತದೆಯೋ? ಇಲ್ಲವೇ? ಎಂಬುದು ದೊಡ್ಡ ಪ್ರಶ್ನೆಯಾಗಿ ನಮ್ಮೆದುರಿಗಿದೆ. ಈ ತೀರ್ಪಿನಲ್ಲಿ ಸರ್ಕಾರದ ಹೊಣೆ ಅಧಿಕವಾಗಿದೆ. ಸರ್ಕಾರ ದೃಢ ನಿರ್ಧಾರ ಮಾಡಿದರೆ ಮಾಧ್ಯಮದ ಗೊಂದಲವನ್ನು ಪರಿಹರಿಸಲು ಸಾಧ್ಯ. ಆದರೆ ಸರಕಾರವೇ, ಹೈಕೋರ್ಟ್ ತೀರ್ಪು ನೀಡಿದ ಗಡುವಿನ ಅವಧಿ ಪೂರ್ಣವಾದ ನಂತರ ಮುಂದೇನು ಮಾಡಬೇಕು ಎನ್ನುವ ಆತಂಕವನ್ನು ಎದುರಿಸುತ್ತಿದೆ. ಹೀಗಾಗಿ ಸರ್ಕಾರ ನಿಯಮವನ್ನು ಜಾರಿಗೆ ತರಲು ಹಿಂದೇಟು ಹಾಕುತ್ತಿದೆ. ಇದೊಂದು ರೀತಿಯಲ್ಲಿ ಸರ್ಕಾರ ತೀರ್ಪನ್ನು ಸುಪ್ರೀಂ ಕೋರ್ಟನ ಮೇಲೆ ಹಾಕಿ ಜವಾಬ್ದಾರಿಯಿಂದ ನುಣಚಿಕೊಳ್ಳುವ ಪ್ರಯತ್ನವನ್ನೂ ಮಾಡುತ್ತಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ. ಇದು ರಾಜ್ಯ ಸರ್ಕಾರದ ಅಧಿಕೃತ ಬೇಡಿಕೆಯ ಪ್ರಶ್ನೆಯಾಗಿದೆ. ರಾಜ್ಯದ ಕಾಳಜಿಯಿಂದ, ರಾಜ್ಯದ ಅಭಿವೃದ್ಧಿಗಾಗಿ ಶ್ರಮವಹಿಸಲು, ರಾಜ್ಯದ ಹಿತದೃಷ್ಟಿಯಿಂದಾಗಿ ಸರ್ಕಾರ ಕ್ರಮಗಳನ್ನು ಕೈಗೊಳ್ಳಲು ಸಾಧ್ಯವಿದೆ. ಈಗ ಉಳಿದಿರುವ ಯೋಜನೆಗಳನ್ನೇ ಗಮನಿಸುವುದಾದರೆ ಭಾಗ್ಯಲಕ್ಷ್ಮಿ ಯೋಜನೆ, ವೃದ್ಧಾಪ್ಯ ಪಿಂಚಣಿ ಯೋಜನೆ, ಹಿರಿಯ ನಾಗರಿಕರಿಗೆ ಬಸ್ ಪಾಸ್ ವಿತರಣೆ, ರೈತರಿಗೆ ಸಾಲಮನ್ನಾ

ಯೋಜನೆ, ಇತ್ಯಾದಿ ತರಹದ ಯೋಜನೆಗಳನ್ನು ಜಾರಿಗೆ ತಂದಿರುವುದನ್ನು ಕಾಣುತ್ತೇವೆ. ಶಿಕ್ಷಣಕ್ಕೆ ಸಂಬಂಧಿಸಿದ ಹಲವಾರು ಉಚಿತ ಕಾರ್ಯಕ್ರಮಗಳಿಗೆ ಸರಕಾರವು ಅನುಮತಿ ನೀಡಿಲ್ಲವೇ? ಅದೇ ರೀತಿಯಾಗಿ ಕನ್ನಡ ಭಾಷೆಗೆ ಶಾಸ್ತ್ರಿಯ ಸ್ಥಾನಮಾನವನ್ನು, ನಿರಂತರ ಹೋರಾಟದ ಮೂಲಕ ತಂದುಕೊಳ್ಳಲಿಲ್ಲವೇ. ಇದೇ ರೀತಿಯಲ್ಲಿಯೂ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮ ಜಾರಿಗೊಳ್ಳವಂತೆ ಮಾಡುವುದು ಸರಕಾರದ ಕೈಯಲ್ಲಿಯೇ ಇದೆ. ಪ್ರಸ್ತುತ ಸಂದರ್ಭದಲ್ಲಿ ಕನ್ನಡ ಭಾಷೆಗೆ ಸ್ಥಾನಮಾನ ಒದಗಬೇಕಾದದ್ದು ಆಡಳಿತ ಹಾಗೂ ಶೈಕ್ಷಣಿಕ ನೆಲೆಯಲ್ಲಿ. ಈ ಎರಡೂ ನೆಲೆಗಳಲ್ಲಿ ತೀವ್ರವಾದ ಭಾಷೆಯ ಅಗತ್ಯತೆಯಿದೆ. ಇವುಗಳಿಗೆ ನ್ಯಾಯ ಒದಗಿಸುವುದು ಬಿಟ್ಟು ಭಾಷೆಗೆ ಸ್ಥಾನ ದೊರಕಿಸಿ ಕೊಟ್ಟಿರುವುದು ಯಾವ ಬಗೆಯ ಲಾಭಕ್ಕಾಗಿ. ಅಂದರೆ ಭಾಷೆಗೆ ಶಾಸ್ತ್ರೀಯ ಸ್ಥಾನ ಮಾನಕ್ಕಿಂತಲೂ ನಾಡಿನ, ಭಾಷೆಯ ಅಭಿವೃದ್ಧಿ ಪ್ರತೀಕವಾದ ಶಿಕ್ಷಣದಲ್ಲಿ ಭಾಷೆಯ ಅಗತ್ಯತೆ ಪ್ರಮುಖವಾಗಿರುವುದರಿಂದ ಮೊದಲು ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕಾಗಿದೆ. ಭಾಷೆ ಕುರಿತು ಇದುವರೆಗೂ ಬಂದ ಎಲ್ಲಾ ವರದಿಗಳು ತೀವ್ರ ಹೋರಾಟವನ್ನು ನಡೆಸಿದ ನಂತರವೇ ಅದಕ್ಕೆ ಪ್ರತಿಫಲವನ್ನು ಕಂಡುಕೊಳ್ಳಲಾಗಿದೆ.

ಹೀಗಾಗಿ ಈ 'ಕನ್ನಡ' ಶಿಕ್ಷಣ ಮಾಧ್ಯಮವನ್ನಾಗಿಸಲೂ ಉಗ್ರ ಹೋರಾಟದ ಮೂಲಕವೇ ಉತ್ತರವನ್ನು ಕಂಡುಕೊಳ್ಳುವ ಸಾಧ್ಯತೆ ಅಧಿಕವಾಗಿದೆ ಎಂದೆನಿಸುತ್ತದೆ. ಅಷ್ಟೇ ಅಲ್ಲದೆ ಜನರಲ್ಲಿ, ಸಮುದಾಯದವರಲ್ಲಿ ಭಾಷೆಯ ಬಗೆಗೆ ಅಭಿಮಾನ, ಸ್ವಾಭಿಮಾನಗಳು ಮೂಡಿ ಬರಬೇಕು. ಆ ಮೂಲಕ ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ಒದಗಿಸಿ ಕೊಡಬೇಕು ಎಂಬ ವಿಶ್ವಾಸ ಪಾಲಕರಲ್ಲಿ, ಶಿಕ್ಷಕರಲ್ಲಿ ಉಳಿದಂತೆ ಎಲ್ಲಾ ವಲಯದ ವರ್ಗದವರಲ್ಲಿ ಕಂಡು ಬರಬೇಕಾಗಿದೆ. ಅನ್ಯ ಭಾಷೆಯ ವ್ಯಾಮೋಹವನ್ನು ಸಾಮಾಜಿಕ ವಲಯದಲ್ಲಿ ಅಗತ್ಯತೆಗೆ ತಕ್ಕಂತೆ ಬಳಸಿಕೊಳ್ಳಬೇಕು. ಈ ಅರಿವು ಎಲ್ಲರಲ್ಲಿಯೂ ಮೂಡಬೇಕಾದ ಅಗತ್ಯತೆಯಿದೆ. ಉಳಿದಂತೆ ಎಲ್ಲಾ ಸಂದರ್ಭಗಳಲ್ಲಿ ಕನ್ನಡ/ಮಾತೃ ಭಾಷೆಯ ಅಗತ್ಯವನ್ನು ಸಾರ್ವಜನಿಕರು ಪರಿಗಣಿಸುವಂತಾಗಬೇಕು. ಕೇವಲ ಸಾಮಾಜಿಕ ಸ್ಥಾನಮಾನ, ಆರ್ಥಿಕ ಉತ್ಪಾದನೆಯ ಅಂಗವಾಗಿ ಶಿಕ್ಷಣವನ್ನು ಪರಿಗಣಿಸಬಾರದು. ಈ ನಿಟ್ಟಿನಲ್ಲಿ ಸರಕಾರವೂ ಸಹ ಶಿಕ್ಷಣದಲ್ಲಿ ಉತ್ತಮ ಬೋಧನೆ, ಪಠ್ಯಕ್ರಮದ ವ್ಯವಸ್ಥೆಯನ್ನು ಅಳವಡಿಸಿದಾಗ ಮಾತ್ರ 'ಕನ್ನಡ ಮಾಧ್ಯಮ'ದ ಕಲಿಕೆಗೆ ಒಂದು ಸ್ಥಾನವನ್ನು, ಬೆಲೆಯನ್ನು ಒದಗಿಸಿದಂತಾಗುತ್ತದೆ. ರಾಜ್ಯಾದ್ಯಂತ ಎಲ್ಲಾ ಶಾಲೆಗಳಲ್ಲೂ ಏಕಪ್ರಕಾರದ, ಸಾರ್ವತ್ರಿಕ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಅನುಷ್ಠಾನ ಗೊಳಿಸಬೇಕಾಗಿದೆ. ಇಂಗ್ಲೀಶನ್ನು ಒಂದು ಭಾಷೆಯಾಗಿ ಐದನೇ ತರಗತಿಯಿಂದ ಉತ್ತಮವಾಗಿ ಕಲಿಸುವಂತೆ ಬೋಧನಾ ವ್ಯವಸ್ಥೆಯನ್ನು ಒದಗಿಸಿಕೊಡಬೇಕು. ಇದರಿಂದ ಭಾಷಾ ಮಾಧ್ಯಮದ ತಾರತಮ್ಯದ ಅಂತರವನ್ನು ಕಡಿಮೆ ಮಾಡಬಹುದು. ಈ ದೃಷ್ಟಿಯಿಂದ ರಾಜ್ಯದಲ್ಲಿ ಇಂಗ್ಲೀಶ್ ಮಾಧ್ಯಮದ ಹಾವಳಿಯನ್ನು ತಪ್ಪಿಸಿ 'ಕನ್ನಡ' ಮಾಧ್ಯಮವನ್ನು ಸಂಪೂರ್ಣವಾಗಿ ಜಾರಿಗೆ ತರುವ ಮೂಲಕ ಶಿಕ್ಷಣದಲ್ಲಿಯ ಮಾಧ್ಯಮದ ಸಮಸ್ಯೆಯನ್ನು ಶಮನಗೊಳಿಸಲು ಮುಂದಾಗ ಬಹುದು. ಕನ್ನಡ ಮಾಧ್ಯಮಕ್ಕಿಂತ ಇಂಗ್ಲೀಶ್ ಕಲಿಕೆಯನ್ನು ಒಂದನೇ ತರಗತಿಯಿಂದಲೇ

ಬೇಕೆನ್ನುವವರೇ ಹೆಚ್ಚಿನವರಾಗಿದ್ದಾರೆ. ಆದರೆ ಕನ್ನಡ ಮಾಧ್ಯಮವೇ ಬೆಳೆದು ಬರಬೇಕೆನ್ನುವವರು ಕೇವಲ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಕಲ್ಪನೆಯಾಗಿ ಅದನ್ನು ಬಯಸುತ್ತಿಲ್ಲ. ಮಗುವಿನ ಭಾಷಾ ಪ್ರಭುತ್ವ, ತಿಳುವಳಿಕೆ ಹಾಗೂ ಕಲಿಕೆಯಿಂದ ಪ್ರಯೋಜನವಾಗುವ ಭಾಷೆಯ ಮಹತ್ವ ಕಂಡು ಬರುವುದು ಮಾತೃಭಾಷೆಯಲ್ಲಿಯೇ. ಆದ್ದರಿಂದ ಯಾವುದೇ ಒಂದು ವಿಷಯವನ್ನು ಕಲಿಯುವುದು ಅರ್ಥೈಸಿಕೊಳ್ಳುವುದು ಮತ್ತು ಬಳಸುವುದರಿಂದ ಅದು ಪ್ರಯೋಜನವಾಗುತ್ತದೆ. ಈ ನೆಲೆಯಲ್ಲಿಯೇ ಭಾಷಾ ಮಾಧ್ಯಮವನ್ನೂ ಪರಿಗಣಿಸ ಬಹುದು. ಒಂದು ಭಾಷೆಯನ್ನು ಕಲಿಯುವುದರ ಜೊತೆಗೆ ಅದನ್ನು ಸರಾಗವಾಗಿ ಬಳಸು ವಂತಾಗಬೇಕಾದರೆ ಮೊದಲು ಕಲಿಕೆ ಅರ್ಥಪೂರ್ಣವಾಗಬೇಕು. ಅಂತಹ ಕಲಿಕೆ ಮಾತೃಭಾಷೆಯಿಂದಲೇ ಮಾತ್ರ ಸಾಧ್ಯವೆಂದು ಪ್ರಾಯೋಗಿಕ ಹಾಗೂ ವೈಜ್ಞಾನಿಕವಾಗಿ ಹೇಳಲಾಗಿದೆ. ಈ ದೃಷ್ಟಿಯಿಂದ ಸಮಾಜ ಮೊದಲು ಮಾತೃಭಾಷೆಯ ಮಹತ್ವ ಹಾಗೂ ಪ್ರಯೋಜನವನ್ನು ತಿಳಿದುಕೊಳ್ಳಬೇಕಾಗಿದೆ. ಮನುಷ್ಯ ಜೀವನ ಪರ್ಯಂತ ಕಲಿಯುತ್ತಲೇ ಹೋಗುವುದರಿಂದ ಆ ಕಲಿಕೆ ಸರಳವಾಗಿ ಅಂತರ್ಗತವಾಗುವ ದಾರಿಯನ್ನು ಆಯ್ಕೆ ಮಾಡಿಕೊಳ್ಳಬೇಕೆ ಹೊರತು ಕೇವಲ ಸಾಮಾಜಿಕ ಪ್ರತಿಷ್ಠೆ ಹಾಗೂ ಆರ್ಥಿಕ ಉತ್ಪಾದನೆಯ ನೆಲೆಯಲ್ಲಿ ಅದನ್ನು ನೋಡಬಾರದು. ಮಗು ಆರಂಭದಲ್ಲಿ ಎರಡು ಮೂರು ಭಾಷೆಗಳನ್ನು ಒಟ್ಟೊಟ್ಟಿಗೆ ಕಲಿಯಬಹುದು; ಯಾವ ಭಾಷೆಯು ಅದಕ್ಕೆ ಹೊರೆಯಾಗುವುದಿಲ್ಲ ಎಂದು ಭಾಷಾ ಚಿಂತಕರು ಹೇಳಿದ್ದಾರೆ. ಆದರೆ ಎರಡು ಮೂರು ಭಾಷೆಗಳನ್ನು ಕಲಿತಾಗಲೂ ಸಹ ಮಗು ವಿಷಯವನ್ನು, ಭಾವನೆಗಳನ್ನು ಅರ್ಥೈಸಿಕೊಳ್ಳಲು ಹಾಗೂ ಅಭಿವ್ಯಕ್ತಿಸಲು ಒಂದೇ ಭಾಷೆಯನ್ನು ಬಳಸುತ್ತದೆಯೇ ಹೊರತು ಕಲಿತಂತಹ ಎಲ್ಲಾ ಭಾಷೆಗಳನ್ನು ಅಲ್ಲ. ತನಗೆ ಪರಿಚಿತವಿರುವ ಹಾಗೂ ದಿನನಿತ್ಯದಲ್ಲಿ ಬಳಸುವಂತಹ ಭಾಷೆಯನ್ನೇ ಬಳಸುತ್ತದೆ. ಆದ್ದರಿಂದ ಆರಂಭದ ಹಂತದಿಂದಲೂ ಮಗುವಿಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವುದು ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಇದನ್ನು ಹೊರತುಪಡಿಸಿಯೂ ಮಗು ಪಡೆಯುವಂತಹ ಶಿಕ್ಷಣವನ್ನು ಔದ್ಯೋಗಿಕ ಅವಕಾಶ ಆರ್ಥಿಕ ಉತ್ಪಾದನೆಯ ಅಂಗವಾಗಿಯೇ ಬಳಸುವಂತಾದರೆ, ಸಮಾಜದಲ್ಲಿ ಚಾಲ್ತಿಯಲ್ಲಿರುವ ಶಿಕ್ಷಣ ಅರ್ಥವನ್ನೇ ಕಳೆದುಕೊಳ್ಳುತ್ತದೆ. ಆದರೆ ಬಾಲ್ಯದಲ್ಲಿ ನೀಡುವ ಶಿಕ್ಷಣ ಶಾಶ್ವತವಾಗಿ, ಸರ್ವತೋಮುಖ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಪ್ರಾಥಮಿಕ ಹಂತದ ಮಾಧ್ಯಮ ರೂಪಗೊಳ್ಳಬೇಕು.

ಈ ನಿಟ್ಟಿನಲ್ಲಿ ಮಾತೃಭಾಷೆಯ ಉಪಯೋಗ ಮತ್ತು ಮಹತ್ವವನ್ನು ಅರಿಯುವ ಮೂಲಕ ಮಾತೃಭಾಷೆಯ ಕಡೆಗೆ ಗಮನ ಹರಿಸಬೇಕಾಗಿರುವುದು ಅಗತ್ಯವಾಗಿದೆ. ಅನ್ಯಭಾಷಾ ಕಲಿಕೆ ಹೊರೆಯಾಗುವುದಿಲ್ಲವಾದರೂ ಮಗುವಿಗೆ ಮಾತೃಭಾಷಾ ಕಲಿಕೆಯೇ ಅರ್ಥಪೂರ್ಣ ವಾಗುತ್ತದೆ ಎನ್ನುವುದು ಇದುವರೆಗಿನ ಅಧ್ಯಯನದಿಂದ ತಿಳಿದು ಬರುತ್ತದೆ. ಈ ಚಿಂತನೆ ಸ್ಪಷ್ಟ ಹಾಗೂ ಸಾರ್ವಕಾಲಿಕ ಸತ್ಯವೂ ಆಗಿದೆ. ಹಾಗಾಗಿ ಈ ನಿಯಮವನ್ನೇ ರಾಜ್ಯಾದ್ಯಾಂತ ಏಕ ಮಾದರಿಯ ಮಾಧ್ಯಮವನ್ನಾಗಿ ಮಾತೃಭಾಷೆಯನ್ನು ಬಳಸಬೇಕೆನ್ನುವುದು ಸರಕಾರದ ಧೋರಣೆಯಾಗಿದೆ. ಆದರೆ ಇದರಲ್ಲಿ ಇನ್ನೂ ಸಮಾನತೆಯನ್ನು ಕಂಡುಕೊಳ್ಳುವ ಅಗತ್ಯತೆ ಇದೆ.

## ಅಧ್ಯಾಯ : ಏಳು

# ಸಮಾರೋಪ

ಮನುಷ್ಯನ ವ್ಯಕ್ತಿತ್ವ ವಿಕಾಸ ನಿರ್ಮಾಣ ಮಾಡುವಲ್ಲಿ ಶಿಕ್ಷಣ ಅತ್ಯಂತ ಪ್ರಮುಖ ವಾದುದಾದರೆ, ಶಿಕ್ಷಣ ಯಶಸ್ವಿಯಾಗಲು ಭಾಷೆ ಪ್ರೇರಣೆಯಾಗುತ್ತದೆ. ಅಂತಹ ಭಾಷೆ ವ್ಯಕ್ತಿಯ ಮನೆ ಮಾತು ಅಥವಾ ಮಾತೃಭಾಷೆಯಾಗಿದ್ದರೆ ಕಲಿಯುವ ಎಲ್ಲಾ ವಿಷಯಗಳು ಸುಲಭವಾಗಿ ಮನವರಿಕೆಯಾಗುತ್ತದೆ ಎನ್ನುವುದು ಮನೋವಿಜ್ಞಾನಿಗಳ ಅಭಿಪ್ರಾಯವಾಗಿದೆ. ಈ ದೃಷ್ಟಿಯಿಂದಲೇ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂದು ಚಿಂತಕರು, ಶಿಕ್ಷಣತಜ್ಞರು, ಸಾಹಿತಿಗಳು ಹಾಗೂ ಕರ್ನಾಟಕ ಸರ್ಕಾರ ಸಹ ಪ್ರಯತ್ನದ ಹೆಜ್ಜೆ ಹಾಕುತ್ತಾ ಬಂದಿದೆ. ಜಾಗತಿಕ ಬದಲಾವಣೆಯಿಂದಾಗಿ ಇಂಗ್ಲೀಶ್‌ನ ಸ್ಥಾನಮಾನಗಳು ಹೆಚ್ಚುತ್ತಿರುವುದರಿಂದ ಎಲ್ಲಾ ವಲಯಗಳಲ್ಲಿ ಕನ್ನಡಕ್ಕಿಂತ ಹೆಚ್ಚಾಗಿ ಇಂಗ್ಲೀಶ್‌ನ ಪ್ರಭಾವ ದಟ್ಟವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಾಥಮಿಕ ಹಂತದಲ್ಲಿ ಮಾತೃಭಾಷಾ ಶಿಕ್ಷಣವನ್ನು ನೀಡಬೇಕೆನ್ನುವ ಚರ್ಚೆ ವಾಗ್ವಾದ ಸ್ವರೂಪದಲ್ಲಿ ಹಿಂದೆಂದಿಗಿಂತಲೂ ತೀವ್ರ ತೆರನಾದ ಹೋರಾಟ ನಡೆಯುತ್ತಿರುವುದನ್ನು ಇಂದು ಕಾಣಬಹುದು. ಇಂತಹ ಚರ್ಚೆಯ ವಿವಿಧ ಮಜಲುಗಳನ್ನು ಅರ್ಥೈಸಿಕೊಳ್ಳುವುದು ಮತ್ತು ಅದನ್ನು ಸಂಶೋಧನೆಗೆ ಒಳಪಡಿಸಿ ವಿಶ್ಲೇಷಿಸುವ ಅಗತ್ಯತೆ ತುಂಬಾ ಇದೆ ಎಂದು ಹೇಳಬಹುದು.

ಪ್ರಸ್ತುತ ಮಹಾಪ್ರಬಂಧದಲ್ಲಿ ಕರ್ನಾಟಕದ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳ ಕುರಿತು ವಿವಿದ ಆಯಾಮಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಪರಿವಿಡಿಯನ್ನು ಒಟ್ಟು ಏಳು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ. ವಾಗ್ವಾದಗಳ ಕುರಿತು ಬೆಳವಣಿಗೆಯ ಸ್ವರೂಪವನ್ನು ಈ ಎಲ್ಲಾ ಅಧ್ಯಯಗಳಲ್ಲಿ ಚರ್ಚೆ ಮಾಡಲಾಗಿದೆ. ಮುಖ್ಯವಾಗಿ ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮ ಕುರಿತು ನಡೆಸುತ್ತಿರುವ ಚರ್ಚೆಯ ವಿಷಯವನ್ನು ಕೈಗೆತ್ತಿಕೊಂಡು ಶಿಕ್ಷಣ ತಜ್ಞರು, ಭಾಷಾವಿಜ್ಞಾನಿಗಳು, ಚಿಂತಕರು, ಸಾಹಿತಿಗಳು ವ್ಯಕ್ತಪಡಿಸಿರುವ ಅಭಿಪ್ರಾಯ ಗಳನ್ನು ಬಳಸಿಕೊಂಡು ಈ ಅಧ್ಯಯನವನ್ನು ವಿಶ್ಲೇಷಣೆಗೆ ಒಳಪಡಿಸಲು ಪರಿವಿಡಿ ಭಾಗವನ್ನು ಗುರುತಿಸಿಕೊಂಡಿದೆ.

ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು ಎನ್ನುವ ಶೀರ್ಷಿಕೆ ಹಾಕಿಕೊಂಡು ಹಲವು ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನವನ್ನು ಕೈಗೊಂಡಿದೆ. ಕನ್ನಡ ನಾಡಿನಲ್ಲಿ ಶಿಕ್ಷಣ ಎಂದರೆ ಮಾತೃ(ಕನ್ನಡ)ಭಾಷೆಯಲ್ಲಿ ಶಿಕ್ಷಣ ಎಂಬುದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಆದರೆ ವಾಸ್ತವ ಸಂಗತಿ ಎಂದರೆ ಕನ್ನಡ ನೆಲದಲ್ಲಿ ಕನ್ನಡ ಭಾಷೆಯನ್ನು ತೊರೆದು ಅನ್ಯಭಾಷೆಯಾದ ಇಂಗ್ಲೀಶ್ ಭಾಷಾ ಶಿಕ್ಷಣಕ್ಕಾಗಿ ಮೊರೆ ಇಡುತ್ತಿರುವುದು ವಿಪರ್ಯಾಸ. ಅಂದರೆ ಮಾತೃಭಾಷಾ ಮಾಧ್ಯಮವನ್ನು ಬಿಟ್ಟು ಅನ್ಯಭಾಷಾ ಮಾಧ್ಯಮದ ಶಿಕ್ಷಣವನ್ನು ಪಡೆಯುತ್ತಿರುವುದು ಸಾಮಾನ್ಯ ಎಂಬಂತೆ ತೋರಿ ಬರುತ್ತದೆ. ಇಲ್ಲಿ ಭಾಷೆಯ ಪ್ರಶ್ನೆ ಮುಖ್ಯವಾಗಿ ಪರಿಗಣಿಸಲಾಗುತ್ತಿಲ್ಲ. ಮಗು ಪಡೆಯುತ್ತಿರುವ ಶಿಕ್ಷಣ ಪೂರ್ಣ ಕಲಿಕೆಯಾಗಬೇಕೆನ್ನುವ ದೃಷ್ಟಿಯಿಂದ ಇಲ್ಲಿ ಭಾಷೆಯನ್ನು ಮುಖ್ಯವಾಗಿ ಗುರುತಿಸಲಾಗುತ್ತಿದೆ. ಅಂದರೆ ಮಗುವಿಗೆ ಅಥವಾ ಮಕ್ಕಳಿಗೆ ಯಾವುದೇ ವಿಷಯವನ್ನು ಮಾತೃಭಾಷೆಯಲ್ಲಿ ತಿಳಿಸಿದಾಗ ಮಾತ್ರ ಅದು ಸುಲಭವಾಗಿ ಗ್ರಹಿಸಬಲ್ಲದು ಎಂಬುದು ಪ್ರಾಯೋಗಿಕವಾಗಿ ದೃಢಪಡಿಸಿರುವುದನ್ನು ಕಾಣುತ್ತೇವೆ. ಇದರಿಂದ ಮಗು ವಿಷಯವನ್ನು ಸುಲಭವಾಗಿ ಅರ್ಥೈಸಿಕೊಳ್ಳುತ್ತದೆ. ಅಲ್ಲದೆ ಅಷ್ಟೇ ಸರಳವಾಗಿ ಅಭಿವ್ಯಕ್ತಿಸಬಲ್ಲದು ಎಂಬುದು ಚಿಂತಕರ ಮತ್ತು ಮನೋವಿಜ್ಞಾನಿಗಳ ವಿಚಾರವಾಗಿದೆ. ಇನ್ನೊಂದು ವಿಚಾರವೆಂದರೆ 'ಕನ್ನಡ ಪ್ರದೇಶದಲ್ಲಿ' 'ಕನ್ನಡ ಭಾಷೆಯ ಉಳಿವಿಗಾಗಿ ಹೋರಾಟ ನಡೆಸುತ್ತಿರುವುದು ನಿಜಕ್ಕೂ ಗಂಭೀರವಾಗಿ ಯೋಚಿಸುವ ಸಂಗತಿ. ಅಂದರೆ ತಾಯಿಯ ಗರ್ಭದಲ್ಲಿ ಜನಿಸಿದ ಶಿಶುವಿಗೆ ತಾಯಿಯ ಎದೆ ಹಾಲು ಕುಡಿಯುವಂತೆ ಕಲಿಸುವುದು' ವಿಪರ್ಯಾಸವೇ ಸರಿ. ಅಲ್ಲದೆ ಕನ್ನಡ ಭಾಷೆಯಲ್ಲಿ ಅಥವಾ ಮಗುವಿನ ಮಾತೃಭಾಷೆಯಲ್ಲಿಯೇ ಶಿಕ್ಷಣ ಬೆಳದು ಬರಬೇಕೆನ್ನುವ ವಿಚಾರವಾಗಿ ನಡೆಯುತ್ತಿರುವ ಚರ್ಚೆ ವಿಶ್ವಾಸನೀಯವಾಗಿದೆ. ಆದರೆ ಇನ್ನೂ ಈ ಚರ್ಚೆ ಕುರಿತು ಪರಿಹಾರವನ್ನು ಕೈಗೊಳ್ಳದಿರುವುದು ಚಿಂತನೆಗೀಡು ಮಾಡಿದೆ. ಇಂತಹ ಎಲ್ಲಾ ಸಮಸ್ಯೆಗಳ ಸ್ವರೂಪವನ್ನು ಹಾಗೂ ಅದರ ಹಿಂದಿರುವ ಕಾರಣಗಳನ್ನು ತಿಳಿದುಕೊಳ್ಳುವ ಈ ಬಗೆಯ ಪ್ರಯತ್ನವೇ ಅಧ್ಯಯನದುದ್ದಕ್ಕೂ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಅದರದೇ ಆದ ಸ್ವರೂಪವನ್ನು ಹೊಂದಿದೆ.

ಆರಂಭದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆಯ ಭಾಗದಲ್ಲಿ ಪ್ರಸ್ತುತ ಸಂದರ್ಭದಲ್ಲಿರುವ ಮಾತೃಭಾಷೆಯ ಪರಿಕಲ್ಪನೆ, ಶೈಕ್ಷಣಿಕ ವಲಯದಲ್ಲಿ ಮಾತೃಭಾಷೆಯ ಸ್ಥಾನಮಾನ ಯಾವ ರೀತಿಯಲ್ಲಿದೆ ಎನ್ನುವುದನ್ನು ವಿವರಿಸಲಾಗಿದೆ. ಹಾಗೆಯೇ ಸಾರ್ವತ್ರಿಕವಾಗಿ ಬಳಕೆಯಾಗುತ್ತಿರುವ ಭಾಷಾ ನೀತಿಗೂ ಮತ್ತು ಶೈಕ್ಷಣಿಕ ವಲಯದಲ್ಲಿ ಜಾರಿಯಲ್ಲಿರುವ ಶಿಕ್ಷಣ ನೀತಿಗೂ ಇರುವಂತಹ ವ್ಯತ್ಯಾಸವನ್ನು ವಿಶ್ಲೇಷಿಸಲಾಗಿದೆ. ಶೈಕ್ಷಣಿಕ ವಲಯದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ವಿವರಿಸಲಾಗಿದೆ. ಇಂತಹ ಭಾಷಿಕ ಮತ್ತು ಶೈಕ್ಷಣಿಕ ಸಮಸ್ಯೆಗಳನ್ನು ಉದ್ದೇಶವಾಗಿಟ್ಟುಕೊಂಡು ನಡೆಸಿದಂತಹ ಅಧ್ಯಯನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳುವ ನಿಟ್ಟಿನಿಂದ ಸಮೀಕ್ಷೆ ಮಾಡಲಾಗಿದೆ. ಅಂತಹ ಪೂರಕ ಅಧ್ಯಯನಗಳಾದ ಪಿಎಚ್.ಡಿ. ಮಹಾಪ್ರಬಂಧಗಳು ಎಂ.ಫಿಲ್. ಪ್ರಬಂಧಗಳು, ಎಂ.ಇಡಿ.

ಕಿರುಪ್ರಬಂಧಗಳು, ಕೃತಿಗಳು, ನಿಯತಕಾಲಿಕೆಗಳಲ್ಲಿನ ಲೇಖನಗಳನ್ನಾಗಿ ಕ್ರೊಢೀಕರಿಸಿಕರಿಸಿ ಅವುಗಳ ಆಶಯವನ್ನು ಚರ್ಚೆ ಮಾಡಲಾಗಿದೆ. ಈ ಎಲ್ಲಾ ಅಧ್ಯಯನಗಳನ್ನು ಬಳಸಿ ಕೊಳ್ಳುವುದರ ಉದ್ದೇಶದೊಂದಿಗೆ ಪ್ರಸ್ತುತ ಅಧ್ಯಯನವು ಹೇಗೆ ಭಿನ್ನವಾಗಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಶಿಕ್ಷಣ ಕ್ಷೇತ್ರ ನಿರಂತರ ಚಲನಶೀಲವಾದುದು. ಅಂದಿನ ಪ್ರಾಚೀನ ಶಿಕ್ಷಣಕ್ಕೂ ಪ್ರಸ್ತುತ ಶೈಕ್ಷಣಿಕ ವ್ಯವಸ್ಥೆಗೂ ಸಾಕಷ್ಟು ಬದಲಾವಣೆಗಳನ್ನು ನಾವು ಗುರುತಿಸಬಹುದು. ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಯಾವುದಾಗಿರಬೇಕೆನ್ನುವ ಕುರಿತು ಚರ್ಚೆಗಳು ಪ್ರಾಚೀನ ಕಾಲದಿಂದಲೂ ನಡೆಯುತ್ತಲೇ ಬಂದಿವೆ. ಅಂದಿನಿಂದ ಇಂದಿನವರೆಗೆ ಬೆಳೆದು ಬಂದ ಚರ್ಚೆಯ ವಿಷಯ ಒಂದೇ ಆಗಿದ್ದರೂ ಶಿಕ್ಷಣದ ಸ್ವರೂಪದಲ್ಲಿ ಬದಲಾವಣೆಯಾಗುತ್ತಾ ಬಂದಿದೆ. ಕರ್ನಾಟಕದಲ್ಲಿ ಮೊದಲು ಶಿಕ್ಷಣ ಪರಂಪರೆ ಭಾರತೀಯ ಶಿಕ್ಷಣ ಪರಂಪರೆಯ ಹಿನ್ನೆಲೆಯಲ್ಲಿ ಬೆಳದು ಬಂದಿದ್ದರಿಂದ ಆರಂಭದಲ್ಲಿ ಪ್ರಾಚೀನ ಭಾರತೀಯ ಶಿಕ್ಷಣ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ.

ವೇದ, ಬೌದ್ಧ ಹಾಗೂ ಮುಸ್ಲಿಂ ಕಾಲದ ವ್ಯವಸ್ಥೆಯನ್ನು ಚಾರಿತ್ರಿಕವಾಗಿ ನೋಡಲಾಗಿದೆ. ಪ್ರತಿಯೊಂದು ಕಾಲಘಟ್ಟದಲ್ಲಿ ಭಾಷಾ ಮಾಧ್ಯಮ ಕುರಿತು ಸಂಘರ್ಷಗಳು, ಚಳುವಳಿಗಳು ನಡೆಯುತ್ತಲೇ ಬಂದಿವೆ. ಅದು ಮಾತೃಭಾಷೆಯಲ್ಲಿಯೇ ಮಾಧ್ಯಮವಾಗಿ ಜಾರಿಗೆ ಬರಬೇಕೆಂಬುದು ಪ್ರತಿಯೊಂದು ಧರ್ಮದ ಪ್ರತಿಪಾದನೆ. ಒಂದು ಧರ್ಮದ ಭಾಷೆ ಮತ್ತು ಸಂಸ್ಕೃತಿ ಇನ್ನೊಂದು ಧರ್ಮದ ಮೇಲೆ ಒತ್ತಾಯವಾಗಿ ಹೇರಲ್ಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ. ಅಂದಿನ ಕಾಲದಲ್ಲಿ ಧರ್ಮ ಪ್ರಧಾನವಾದ ಶಿಕ್ಷಣ ವ್ಯವಸ್ಥೆ ಬೆಳೆದು ಬಂದಿತ್ತು. ಮುಖ್ಯವಾಗಿ ಶಿಕ್ಷಣ ಮಾಧ್ಯಮವು ಧರ್ಮದ ಆಡಳಿತಾನುಸಾರ ರಚನೆಯೊಂಡಿತ್ತು. ಅಂದರೆ ಯಾವ ಧರ್ಮದ ಆಡಳಿತ ಜಾರಿಯಲ್ಲಿತ್ತೋ ಅಥವಾ ಪ್ರಭುತ್ವ ಪಡೆದಿತ್ತೋ ಆ ಧರ್ಮದ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ರೂಪಿಸಲಾಗಿತ್ತು. ಇವತ್ತಿನ ಸಂದರ್ಭದಲ್ಲಿ ಇಂಗ್ಲೀಶ್ ಭಾಷೆ ಪ್ರಭುತ್ವ ಪಡೆದುಕೊಂಡಂತೆ ಪ್ರಾಚೀನ ಕಾಲದಲ್ಲಿ ಸಂಸ್ಕೃತವೇ ಆಗಿತ್ತು. ಅನ್ಯಭಾಷೆಯನ್ನು ಮಾಧ್ಯಮವಾಗಿರಿಸಿಕೊಂಡು ಶಿಕ್ಷಣವನ್ನು ನೀಡುವುದು ಸೂಕ್ತವಲ್ಲ. ಆಯಾ ಧರ್ಮದವರಿಗೆ ಅವರ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆನ್ನುವುದು ಸ್ವ ಧರ್ಮದವರ ಧೋರಣೆಯಾಗಿತ್ತು. ಈ ಹಿನ್ನೆಲೆಯಲ್ಲಿಯೇ ಅನ್ಯ ಧರ್ಮದವರ ನಡುವೆ ಭಾಷಾ ಮಾಧ್ಯಮ ಕುರಿತಾಗಿ ಚಳುವಳಿಗಳು ನಡೆದುಕೊಂಡು ಬಂದಿವೆ. ಮುಸ್ಲಿಮರ ನಂತರ ಬಂದ ಬ್ರಿಟೀಷರು ತಮ್ಮ ಕಂಪನಿಯ ವಿಸ್ತಾರಕ್ಕಾಗಿ ಇಂಗ್ಲೀಶ್ ಶಿಕ್ಷಣವನ್ನು ಭಾರತದಲ್ಲಿ ಹುಟ್ಟು ಹಾಕಿದರು. ತಮ್ಮ ಸಂಸ್ಕೃತಿಯನ್ನು ಭಾರತೀಯರಲ್ಲಿ ಬಿತ್ತಬೇಕೆನ್ನುವ ಉದ್ದೇಶದಲ್ಲಿ ಸಫಲರಾದರು. ಆದರೆ ಕೊನೆಗೆ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಭಾರತೀಯರಿಗೆ ಹಾಗೂ ಕನ್ನಡ ನಾಡಿನ ಜನತೆಗೆ ನೀಡಲು ಅನೇಕ ಬ್ರಿಟೀಷ್ ಅಧಿಕಾರಿಗಳು ಮುಂದಾದರು. ಈ ಅಂಶಗಳನ್ನು ನಿದರ್ಶನಗಳ ಮೂಲಕ ಇಲ್ಲಿ ಚರ್ಚಿಸಲಾಗಿದೆ. ಇಂಗ್ಲೀಶ್ ಮಾಧ್ಯಮದ ಶಿಕ್ಷಣಕ್ಕೆ ಬ್ರಿಟೀಷರು ಕಾರಣೀಕರ್ತರಾದರೂ ಸಹ ನಂತರದಲ್ಲಿ ಮಾತೃಭಾಷಾ ಮಾಧ್ಯಮವನ್ನು ಪ್ರೋತ್ಸಾಹಿಸಿದರು. ಅಷ್ಟೊತ್ತಿಗಾಗಲೇ ಭಾರತೀಯರೆ ಸ್ವತಃ ಇಂಗ್ಲೀಶ್ ವ್ಯಾಮೋಹಕ್ಕೆ ಒಳಪಟ್ಟಿದ್ದರೆನ್ನುವುದು

ತಿಳಿದು ಬರುತ್ತದೆ. ಇದರಿಂದಾಗಿ ಬ್ರಿಟೀಷರ ನಂತರವೂ ಸಹ ಇಂಗ್ಲೀಶ್ ಕುರಿತು ಚರ್ಚೆ ಬೆಳೆದು ಬರಲು ಕಾರಣವಾಗಿದೆ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಶಿಕ್ಷಣ ಮಾಧ್ಯಮ ಕುರಿತಾಗಿ ಕೆಲವು ವರದಿಗಳು ರಚನೆಗೊಂಡಿರುವುದನ್ನು ಚಾರಿತ್ರಿಕವಾಗಿ ನೋಡಲಾಗಿದೆ. ಅದರಲ್ಲಿ ಮೆಕಾಲೆ, ವುಡ್ಸ್ ವರದಿಗಳು ಇಂಗ್ಲೀಶ್ ಮಾಧ್ಯಮ ಶಿಕ್ಷಣ ಕುರಿತು ವಿಶ್ಲೇಷಿಸಿದರೆ ಹಂಟರ್, ಸಾರ್ಜೆಂಟ್, ಸ್ಯಾಡ್ಲರ್ ವರದಿಗಳು ಮಾತೃಭಾಷಾ ಮಾಧ್ಯಮಕ್ಕೆ ಒಪ್ಪಿಗೆಯನ್ನು ಸೂಚಿಸಿದರೂ ಸಹ ನಂತರದಲ್ಲಿ ಜಾರಿಗೆ ಬರಲಿಲ್ಲ. ಈ ವರದಿಗಳಷ್ಟೇ ಅಲ್ಲದೆ ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಬಂದ ವರದಿಗಳು ಸಹ ಪೂರ್ಣವಾಗಿ ಜಾರಿಗೆ ಬರದೆ ಸ್ಥಗಿತಗೊಂಡಿವೆ. ಅದಕ್ಕೆ ಕಾರಣಗಳನ್ನು ಈ ರೀತಿಯಾಗಿ ನೀಡಬಹುದು ಎನಿಸುತ್ತದೆ. ಬ್ರಿಟೀಷ್ ಅಧಿಕಾರಿಗಳ ಪದಚ್ಯುತಿಗೊಳ್ಳುವುದು, ವರ್ಗಾವಣೆಯಾಗುವುದು ಮತ್ತು ದೇಶೀ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ಕಲ್ಪಿಸದೇ ಇರುವುದರಿಂದ ವರದಿಗಳು ಪೂರ್ಣವಾಗಿ ಜಾರಿಗೆ ಬರಲು ಸಾಧ್ಯವಾಗಲಿಲ್ಲ ಎಂದು ಹೇಳಬಹುದು. ಅಷ್ಟೇ ಅಲ್ಲದೆ ಈ ಬಗೆಯ ಭಾಷಾ ಮಾಧ್ಯಮ ಆಯ್ಕೆ ತಾರತಮ್ಯದಿಂದಾಗಿ ಇಂಗ್ಲೀಶ್ ಬುದ್ಧಿವಂತರ, ಶ್ರೀಮಂತರ ಆಯ್ಕೆ ಎಂದು ಕನ್ನಡ ಅಷ್ಟು ಬುದ್ಧಿವಂತರಲ್ಲದವರ, ಬಡವರ ಆಯ್ಕೆ ಎಂದು, ಬಿಂಬಿಸಲಾಗಿದೆ. ಈ ಪರಿಸ್ಥಿತಿ ಉಂಟಾಗುವುದಕ್ಕೆ ಪ್ರಸ್ತುತ ಸಂದರ್ಭದಲ್ಲಿಯೂ ಸಹ ಸಮಸ್ಯೆಗೆ ಸಾಮಾಜಿಕ ವಿನ್ಯಾಸಗಳು ಕಾರಣವಾಗಿವೆ ಎಂದು **ಕೆ.ವಿ.ನಾರಾಯಣರವರು** ಸ್ಪಷ್ಟಪಡಿಸಿದ್ದಾರೆ. **(ಕನ್ನಡ ಜಗತ್ತು : ಅರ್ಧ ಶತಮಾನ ಕೃತಿಯಲ್ಲಿ ವಿವರಿಸಿದ್ದಾರೆ. ಪುಟ-೭೧)** ಭಾರತದಲ್ಲಿ ೧೯೮೬ರಲ್ಲಿ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ತ್ರಿಭಾಷಾ ಸೂತ್ರದ ನೀತಿ ಅಡಿಯಲ್ಲಿ ಇಂದಿನ ಶಿಕ್ಷಣ ವ್ಯವಸ್ಥೆ ಬೆಳೆದು ಬಂದಿದೆ. ಆದರೆ ಇದರಲ್ಲಿ ಕೆಲವೊಂದು ಬದಲಾವಣೆಗಳನ್ನು ಗುರುತಿಸಬಹುದಾಗಿದೆ. ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯನ್ನು ಪ್ರಥಮ ಭಾಷೆಯಾಗಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕಲಿಸಬೇಕು ಎಂಬುದನ್ನು ಜಾರಿಗೆ ತರಲಾಯಿತು. ಆದರೆ ಅದು ಸರ್ಕಾರಿ ಹಾಗೂ ಖಾಸಗಿ ಶಾಲೆಗಳಿಗೆ ಏಕರೀತಿಯಾಗಿ ಅನ್ವಯಿಸುತ್ತಿಲ್ಲ. ಖಾಸಗಿ ಶಾಲೆಗಳು ಇಂದಿನ ದಿನಮಾನದಲ್ಲಿ ಇಂಗ್ಲೀಶ್ ಮಾಧ್ಯಮವನ್ನು ಅನುಸರಿಸುತ್ತಿವೆ. ಖಾಸಗಿ ಹಾಗೂ ಸರ್ಕಾರಿ ಶಾಲೆಗಳು ಅಂದೇ ಏಕಕಾಲದಲ್ಲಿ ಕಡ್ಡಾಯವಾಗಿ ಈ ನೀತಿಯನ್ನು ಜಾರಿಗೆ ತಂದಿದ್ದರೆ ಇಂದು ಶಿಕ್ಷಣ ಮಾಧ್ಯಮ ವಿಚಾರವಾಗಿ ಇಷ್ಟು ಸಮಸ್ಯೆಗಳು ಹುಟ್ಟಿಕೊಳ್ಳುತ್ತಿರಲಿಲ್ಲ. ಇನ್ನು ಭಾಷಾ ಅಲ್ಪಸಂಖ್ಯಾತ ಮಕ್ಕಳು ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಪಡೆಯುವಂತಾಗಿದೆಯೇ ಹೊರತು ಮಾತೃಭಾಷೆಯಲ್ಲಿ ಅಲ್ಲ ಎನ್ನುವುದನ್ನು ಗಮನಿಸಬಹುದು. ಹಾಗೆಯೇ ತ್ರಿಭಾಷಾ ಸೂತ್ರದ ಪ್ರಕಾರ ನೋಡುವುದಾದರೆ ಪ್ರಚಲಿತದಲ್ಲಿ ರಾಜ್ಯ ಹಾಗೂ ದೇಶಾದ್ಯಂತ ಈ ನೀತಿಯು ಶಿಕ್ಷಣದಲ್ಲಿ ಜಾರಿಯಲ್ಲಿದೆ. ತ್ರಿಭಾಷಾ ಸೂತ್ರದ ಪ್ರಕಾರ ಪ್ರಾದೇಶಿಕ ಭಾಷೆ ಅಧಿಕೃತ ಭಾಷೆಯಾಗಿದ್ದು ಅದನ್ನು ಶಿಕ್ಷಣದಲ್ಲಿ ಪ್ರಥಮ ಭಾಷೆಯಾಗಿ ಅಳವಡಿಸಲಾಗಿದೆ. ಇದೇ ರೀತಿಯಾಗಿ ಭಾರತದ ಅಧಿಕೃತ ಭಾಷೆ ಹಿಂದಿ ಎಂದು ಪರಿಗಣಿಸಲ್ಪಟ್ಟಿದ್ದರಿಂದ ಹಿಂದಿಯನ್ನು ದ್ವಿತೀಯ ಭಾಷೆಯಾಗಿ ಮತ್ತು ಅಂತರಾಷ್ಟ್ರೀಯವಾಗಿ ಅಧಿಕೃತ ಭಾಷೆ ಇಂಗ್ಲೀಶ್‌ನ್ನು ತೃತೀಯ ಭಾಷೆಯನ್ನಾಗಿ ಅಳವಡಿಸಲಾಗಿದೆ. ಆದರೆ ಪ್ರಸ್ತುತದಲ್ಲಿ ಇಂಗ್ಲೀಶ್

ದ್ವಿತೀಯ ಭಾಷೆಯಾಗಿ ಶಿಕ್ಷಣ ನೀತಿಯಲ್ಲಿ ನಿರೂಪಿಸಲಾಗಿದೆ. ಹಿಂದಿ ತೃತೀಯ ಭಾಷೆಯಾಗಿ ಒಂದೇ ರೀತಿಯಾಗಿ ಅನ್ವಯವಾಗುವುದಿಲ್ಲ ಭಾರತ ಬಹುಭಾಷೆಗಳ ರಾಷ್ಟ್ರವಾಗಿರುವುದರಿಂದ ತ್ರಿಭಾಷಾ ಸೂತ್ರ ಬೇಡ ದ್ವಿಭಾಷಾ ಸೂತ್ರ ಅತ್ಯಂತ ಪ್ರಯೋಜನಕಾರಿ, **ತ್ರಿಭಾಷಾ ಸೂತ್ರ ತ್ರಿಶೂಲ ಎಂದು ಮಹಾಕವಿ ಕುವೆಂಪುರವರು** ಸೂಚಿಸಿದ್ದಾರೆ. ಆದರೆ ಈ ಸೂತ್ರದಿಂದ ಕನ್ನಡವನ್ನು ಔಪಚಾರಿಕವಾಗಿ ಕಲಿಯುವ ಸಾಧ್ಯತೆಯು ಕಡಿಮೆಯಾಗುತ್ತದೆ. ಏಕೆಂದರೆ ಯಾವುದಾದರು ಎರಡು ಭಾಷೆಗಳನ್ನು ಆಯ್ಕೆ ಮಾಡಿಕೊಳ್ಳಬಹುದು ಎಂದಿದೆ. ಆದರೆ ಆ ಎರಡು ಭಾಷೆಗಳಲ್ಲಿ ಕನ್ನಡ ಇರಲೇಬೇಕೆಂಬ ಕಡ್ಡಾಯವಿಲ್ಲ. ಹಾಗಾಗಿ ಇತ್ತೀಚಿನ ಪರಿಸ್ಥಿತಿಯಲ್ಲಿ ಉಂಟಾಗಿರುವ ಭಾಷಾ ಪರಿವರ್ತನೆಯಿಂದಾಗಿ ಈ ಸೂತ್ರ ಪರಿಹಾರವನ್ನು ತೋರುತ್ತಿಲ್ಲ ಎಂದು **ಕೆ.ವಿ. ನಾರಾಯಣ ಕನ್ನಡ ಜಗತ್ತು : ಅರ್ಧಶತಮಾನ ಪುಟ-೪೮೮ರಲ್ಲಿ** ವಿವರಿಸಿದ್ದಾರೆ. ಅದರಂತೆ ತ್ರಿಭಾಷಾ ಸೂತ್ರವನ್ನು ವಿವರಿಸುವುದಾದರೆ ಹಿಂದಿ ಪ್ರಾದೇಶಿಕ ಭಾಷೆಯಾಗಿರುವಂತಹ ಸಂದರ್ಭದಲ್ಲಿ ಹಿಂದಿ ಪ್ರಥಮ, ಇಂಗ್ಲೀಶ್ ದ್ವಿತೀಯ ಭಾಷೆಯಾಗಿರುವುದರಿಂದ ತ್ರಿಭಾಷಾ ಸೂತ್ರ ಎಲ್ಲಿ ಜಾರಿಗೆ ಬಂದಂತಾಗುತ್ತದೆ.?

ಅಷ್ಟೇ ಅಲ್ಲದೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ಮಾತೃಭಾಷೆ ಪ್ರಥಮ ಭಾಷೆಯಾದಾಗ ಪ್ರಾದೇಶಿಕ ಭಾಷೆ ದ್ವಿತೀಯ ಭಾಷೆಯಾಗಿರುತ್ತದೆ ಎಂದುಕೊಂಡರೆ ಇನ್ನು ತೃತೀಯ ಭಾಷೆಯಾಗಿ ಹಿಂದಿ ಅಥವಾ ಇಂಗ್ಲೀಶ್ ಯಾವುದಕ್ಕೂ ಪ್ರಾಶಸ್ತ್ಯ ನೀಡಬೇಕು ರಾಷ್ಟ್ರೀಯ ಭಾಷೆಗೋ, ಅಂತರಾಷ್ಟ್ರೀಯ ಭಾಷೆಗೋ ಈ ಬಗೆಯ ಗೊಂದಲ ಮೂಲ ಶಿಕ್ಷಣ ನೀತಿಯಲ್ಲಿರುವುದರಿಂದ ರಾಷ್ಟ್ರೀಯ ಶಿಕ್ಷಣ ನೀತಿ, ತ್ರಿಭಾಷಾ ಸೂತ್ರ ಇವುಗಳನ್ನು ಸರಿಯಾಗಿ ಪರಿಶೀಲಿಸಿ ಶಿಕ್ಷಣ ಹಾಗೂ ಪಠ್ಯಕ್ರಮ ಸಮಿತಿಯವರು ಏಕರೂಪ ಮಾದರಿಯ ಶಿಕ್ಷಣ ಜಾರಿಗೆ ತರಲು ಚಿಂತಿಸುವ ಅಗತ್ಯತೆ ಇದೆ. ಈ ನಿಯಮದಡಿಯಲ್ಲೇ ಮುಂದುವರೆದ ರಾಜ್ಯ ಸರ್ಕಾರದ ಶಿಕ್ಷಣವೂ ಮಾತೃಭಾಷಾ ಶಿಕ್ಷಣಕ್ಕಾಗಿ ಕೆಲವು ವರದಿಗಳನ್ನು ಜಾರಿಗೆ ತಂದಿದೆ. ಆದರೆ ಈ ವರದಿಗಳ ಭಾಷಾ ನಿಯಮದಲ್ಲಿ ಕೆಲವು ಬದಲಾವಣೆಯಾದ ಶಿಕ್ಷಣ ವ್ಯವಸ್ಥೆ ಕಂಡು ಬರುತ್ತದೆ. ಇಲ್ಲಿ ಇನ್ನೊಂದು ಗಮನಕ್ಕೆ ಬಂದಿರುವ ಅಂಶವೆಂದರೆ ಗೋಕಾಕ್ ಅಥವಾ ಇತರ ಯಾವುದೇ ಒಂದು ವರದಿ ಜಾರಿಗೆ ಬರಬೇಕೆಂದರೆ ಉಗ್ರಸ್ವರೂಪದ ಹೋರಾಟದ ಅನಿವಾರ್ಯತೆ ಇಂದು ಕನ್ನಡ ನಾಡಿನಲ್ಲಿ ಉಂಟಾಗಿರುವುದು ಗಮನಾರ್ಹ ವಿಷಯವಾಗಿದೆ. ಏಕೆಂದರೆ ಉಳಿದಂತೆ ಅನೇಕ ಯೋಜನೆಗಳನ್ನು (ಮಾತೃಭಾಷಾ ಮಾಧ್ಯಮ ಕುರಿತಾಗಿ) ಜಾರಿಗೆ ತರುವಲ್ಲಿ ವಿಳಂಬ ಮಾಡುತ್ತಿರುವುದು ನಮಗೆ ಕಂಡು ಬರದೇ ಇರದು. ಅಲ್ಲದೆ ರಾಜಕೀಯ ಮತ್ತು ಸರ್ಕಾರದ ಸೂಕ್ತ ಬೆಂಬಲ ದೊರಕದೇ ಇರುವುದು ಸಹ ಯೋಜನೆಗಳು ಜಾರಿಯಾಗದಿರುವುದಕ್ಕೆ ಸಾಧ್ಯತೆ ಇದೆ ಎಂದು ಹೇಳಬಹುದು.

ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಒದಗಿಸಬೇಕೆಂದು ಕರ್ನಾಟಕ ಏಕೀಕರಣ ಆದಂದಿನಿಂದ ಹೇಳುತ್ತಾ ಬರಲಾಗಿದೆ. ಜೊತೆಗೆ ಸಾಕಷ್ಟು ಪ್ರಯತ್ನವನ್ನು ಮಾಡಲಾಗಿದೆ. ಆದರೂ ಸಹ ಕೆಲವೊಂದು ಸರ್ಕಾರೇತರ ಅಥವಾ ಅನುದಾನರಹಿತ ಸಂಘ, ಸಂಸ್ಥೆಗಳಲ್ಲಿ ಇಂಗ್ಲೀಶ್ ಮಾಧ್ಯಮವನ್ನೇ ಮುಂದುವರೆಸಿಕೊಂಡು ಬರುತ್ತಿರುವುದನ್ನು ಇಂದಿಗೂ

ಕಾಣಬಹುದು. ಪ್ರಸ್ತುತದಲ್ಲಿ ಇವುಗಳ ಸಂಖ್ಯೆ ಇನ್ನಷ್ಟು ಹೆಚ್ಚಾಗುತ್ತಿದೆ. ಇದಕ್ಕೆ ಸರ್ಕಾರದ ಬೆಂಬಲವಿಲ್ಲವೆಂದು ಹೇಳಲು ಬರುವುದಿಲ್ಲ. ಆದರೆ ಕಟ್ಟುನಿಟ್ಟಿನ ಕಾನೂನು ಜಾರಿಯಾಗುತ್ತಿಲ್ಲ ಎಂಬ ಮಾತು ಸತ್ಯ. ಈ ಬಗೆಯ ತಾರತಮ್ಯ ನೀತಿಯಿಂದಾಗಿಯೇ ಏಕರೂಪದ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರಲು ಸಾಧ್ಯವಾಗುತ್ತಿಲ್ಲ. ಗೋಕಾಕ ವರದಿ, ಬರಗೂರು ಮುಂತಾದವರ ವರದಿಗಳ ಮೂಲಕ ಮಾತೃಭಾಷಾ ಮಾಧ್ಯಮ ಮೂಲಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ಈ ರೀತಿಯಾಗಿ ಮೊದಲ/ಪ್ರಥಮ ಭಾಷೆಯಾಗಿ ಮಾತೃಭಾಷೆಯನ್ನು ಅಳವಡಿಸಲಾಯಿತು. ಈ ಹಿನ್ನೆಲೆಯಲ್ಲಿ ಮಾತೃಭಾಷಾ ಪ್ರಧಾನವಾದ ಪಠ್ಯಪುಸ್ತಕಗಳನ್ನು ಭಾಷಾ ಮಾಧ್ಯಮದ ಹಿನ್ನೆಲೆಯಲ್ಲಿ ಗಮನಿಸಲಾಗಿದೆ. ಇಲ್ಲಿ ಕನ್ನಡ ಭಾಷಾ ಪಠ್ಯ ಪುಸ್ತಕಗಳನ್ನು ಗಮನಿಸಿದಾಗ ಭಾಷೆಗಿಂತ ಸಾಹಿತ್ಯವನ್ನು ಹೇಳಿಕೊಡುತ್ತಿರುವುದು ಕಂಡು ಬರುತ್ತದೆ. ಇದರ ಜೊತೆಗೆ ಕನ್ನಡ ಭಾಷೆಯಲ್ಲಿ ಕನ್ನಡ ಪದಗಳು ಯಾವುವು ಎಂದು ಗುರುತಿಸುವುದರ ಮಟ್ಟಿಗೆ ಸಂಸ್ಕೃತ ಪದಗಳು ಸೇರಿಕೊಂಡಿವೆ. ಇದು ಪ್ರಾಚೀನಕಾಲದಿಂದಲೂ ಇದೇ ರೀತಿಯಲ್ಲಿ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು. ಇದರಿಂದ ಸಂಸ್ಕೃತ ಪದಗಳ ವ್ಯತ್ಯಾಸ ಮಕ್ಕಳಿಗೆ ಗೊತ್ತಾಗದೇ ಗೊಂದಲವಾಗುತ್ತದೆ. ಶಾಲೆಗಳಲ್ಲಿ ಕಲಿಯುವ ಭಾಷೆಗೂ ಆಡುಮಾತಿನ ಭಾಷೆಗೂ ತುಂಬಾ ವ್ಯತ್ಯಾಸವಿರುವುದರಿಂದ ಮಕ್ಕಳಿಗೆ ಕಷ್ಟವಾಗುತ್ತದೆ ಎಂದು ಹೇಳಬಹುದು. ಈ ಒಂದು ಪದ್ಧತಿಯಿಂದಾಗಿ ಪಠ್ಯಪುಸ್ತಕಗಳಲ್ಲಿ ಸಂಸ್ಕೃತ ಪದಗಳನ್ನು ತದ್ಭವಗಳನ್ನಾಗಿ ಮಾಡಿಕೊಂಡು ಕೇವಲ ಕನ್ನಡ ಪದಗಳನ್ನು ಅಳವಡಿಸುವ ಪ್ರಯತ್ನ ಮಾಡಬೇಕಾಗಿದೆ ಎಂದು **ಡಿ.ಎನ್. ಶಂಕರಭಟ್ ಅವರು ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾರೆ.** ಆದ್ದರಿಂದ ಆರಂಭದ ಹಂತದಲ್ಲಿ ಮಕ್ಕಳ ಕಲಿಕೆ ಸರಳವಾಗಲು ಕನ್ನಡ ಭಾಷೆಯನ್ನು ಮಾತ್ರ ಕಲಿಸುವ ಪ್ರಯತ್ನ ಮಾಡುವುದು ಉಚಿತವೆನಿಸುತ್ತದೆ. ಅಂದರೆ ಮೊದಲು ಮಾತೃಭಾಷೆಯನ್ನು ಪೂರ್ಣವಾಗಿ ಕಲಿತ ನಂತರ ಇತರ ಭಾಷಾ ವಿಷಯಗಳನ್ನು ಸುಲಭವಾಗಿ ಗ್ರಹಿಸಬಲ್ಲರೆಂಬುದು ತಿಳಿದು ಬರುತ್ತದೆ. ಇದನ್ನೇ ಅನೇಕ ಚಿಂತಕರು ವ್ಯಕ್ತಪಡಿಸುತ್ತಾ ಬಂದಿದ್ದಾರೆ.

ಪ್ರಾದೇಶಿಕವಾಗಿ ಜನರ ವ್ಯವಹಾರಿಕ ಭಾಷೆಯ ಕೆಲವೊಂದು ಪದಗಳನ್ನು ಪಠ್ಯಪುಸ್ತಕಗಳಲ್ಲಿ ನೇರವಾಗಿ ಹಾಗೆಯೇ ಬಳಸಿಕೊಳ್ಳಲಾಗಿದೆ. ಇದರಿಂದ ಮಕ್ಕಳಿಗೆ ಪದಗಳ ಅರ್ಥವನ್ನು ಕೊಡುವುದು ಕಷ್ಟವಾಗುತ್ತದೆ. ಪ್ರದೇಶದಿಂದ ಪ್ರದೇಶಕ್ಕೆ ಭಾಷೆ ಬದಲಾವಣೆಯಾಗುವುದರಿಂದ ಪ್ರಾದೇಶಿಕ ಭಾಷಾ ಪರಿಚಯದ ಕೊರತೆ ಶಿಕ್ಷಕರಲ್ಲಿ ಹಾಗೂ ಮಕ್ಕಳಲ್ಲಿ ಕಂಡು ಬರುತ್ತದೆ. ಇಂತಹ ಸಂದರ್ಭದಲ್ಲಿ ಮಕ್ಕಳ ಕಲಿಕೆ ಕಂಠಪಾಠವಾಗಿ ಉಳಿದುಕೊಂಡು ಬರುತ್ತದೆ. ಪ್ರಾಥಮಿಕ ಶಿಕ್ಷಣದ ಕಲಿಕೆ ಮಕ್ಕಳಿಗೆ ಕೇವಲ ಕಂಠಪಾಠ ಕಲಿಕೆಯಾಗಿರದೇ ಅವರ ಭಾವೀ ಭವಿಷ್ಯವನ್ನು ರೂಪಿಸುವಂತಿರಬೇಕು. ಈ ದೃಷ್ಟಿಯಿಂದಾಗಿಯೇ ಮಾತೃಭಾಷಾ ಮಾಧ್ಯಮದ ಕಡೆಗೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಸಂಪ್ರದಾಯವಾದಿಗಳು ಸಹ ಈ ವಿಚಾರವನ್ನೇ ಎತ್ತಿ ಹಿಡಿಯುತ್ತಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಕೇಂದ್ರ ಭಾಗವಾಗಿ ಮೂಡಿ ಬಂದಿರುವ ಈ ಘಟಕದಲ್ಲಿ ಭಾಷಾ ಮಾಧ್ಯಮ ಕುರಿತಾಗಿ ಅಭಿಪ್ರಾಯಗಳನ್ನು ಚಾರಿತ್ರಿಕವಾಗಿ ನೋಡುವ ಮೂಲಕ ಅರ್ಥೈಸಿಕೊಳ್ಳುವ ಪ್ರಯತ್ನ ನಡೆದಿದೆ. ಅಲ್ಲದೆ ವಿಶ್ಲೇಷಣೆಗೆ ಒಳಪಡಿಸಿ ಗೊಂದಲಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಬಂದ ವಾಗ್ವಾದಗಳು ಎರಡು ರೀತಿಯಲ್ಲಿವೆ. ಪ್ರಾಥಮಿಕ ಹಂತದಲ್ಲಿ ಒಂದನೇ ತರಗತಿಯಿಂದ ಏಳನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡಬೇಕೆಂದು ಚಿಂತಕರು, ಸಾಹಿತಿಗಳು, ಕರ್ನಾಟಕ ಸರ್ಕಾರದವರು, ಶೈಕ್ಷಣಿಕ ಮನೋವಿಜ್ಞಾನಿಗಳು ಮತ್ತು ಸಾಮಾನ್ಯ ವರ್ಗದವರು ಅಭಿಪ್ರಾಯಪಡುತ್ತಾರೆ. ಅದೇ ರೀತಿಯಾಗಿ ಪ್ರಾಥಮಿಕ ಒಂದನೇ ತರಗತಿಯಿಂದ ಕಲಿಕೆ ಹಾಗೂ ಇಂಗ್ಲೀಶ್ ಮಾಧ್ಯಮದ ಶಿಕ್ಷಣವನ್ನು ನೀಡಬೇಕೆಂದು ಮಧ್ಯಮ ವರ್ಗದ ಕೆಲವರು, ಉನ್ನತವರ್ಗದ ಶ್ರೀಮಂತರು, ರಾಜಕೀಯ ವ್ಯಕ್ತಿಗಳು ಮತ್ತು ಇಂಗ್ಲೀಶ್ ವ್ಯಾಮೋಹಿಗಳು ಬೆಂಬಲಿಸುತ್ತಿದ್ದಾರೆ. ಇವರ ಅಪೇಕ್ಷೆಗೆ ಕಾರಣಗಳನ್ನು ಈಗಾಗಲೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಇಲ್ಲಿ ಮುಖ್ಯವಾಗಿ ವಿಷಯ ಕಲಿಕೆಗೆ ಕನ್ನಡ, ಇಂಗ್ಲೀಶ್ ಮಾಧ್ಯಮವಾಗಬೇಕು ಎಂದಷ್ಟೇ ಹೇಳಲಾಗುತ್ತಿದೆ. ಆದರೆ ಯಾವ ಯಾವ ವಿಷಯಗಳನ್ನು ಕಲಿಸಬೇಕು, ಹೇಗೆ ಕಲಿಸಬೇಕು, ಕಲಿಕೆಯ ಪ್ರಯೋಜನವೇನು ಎನ್ನುವುದರ ಬಗ್ಗೆ ಸ್ಥೂಲವಾಗಿ ವಿವೇಚಿಸುತ್ತಿಲ್ಲ. ಕಲಿಕೆ ಯಶಸ್ವಿಯಾಗಬೇಕಾದರೆ ಮಗುವಿಗೆ ಪರಿಚಯವಿರುವ ಭಾಷೆಯಾದರೆ ಕಲಿಕೆ ಶ್ರಮದಾಯಕವಿಲ್ಲದೆ ಮಕ್ಕಳಿಗೆ ಸುಲಭವಾಗಬಲ್ಲದು ಎಂದು ಸಾಮಾನ್ಯವಾಗಿ ವಾದಿಸಲಾಗುತ್ತಿದೆ. ಆದರೆ ವಿಷಯ ಕಲಿಕೆಗೆ ಭಾಷೆಯೊಂದೇ ಸಾಧನವಾಗಬೇಕಿಲ್ಲ. ಕನ್ನಡ ಅಥವಾ ಇಂಗ್ಲೀಶ್‌ನ್ನು ಮಾಧ್ಯಮವಾಗಿ ಸಾಬೀತು ಮಾಡಲು ಯಾವ ಮಾನದಂಡಗಳು ಇಲ್ಲ ಎಂದು ಭಾಷಾ ವಿಜ್ಞಾನಿಯಾದ **ಡಾ. ಕೆ.ವಿ. ನಾರಾಯಣರು ಕನ್ನಡ ಜಗತ್ತು : ಅರ್ಧಶತಮಾನ** ಎನ್ನುವ ಕೃತಿಯಲ್ಲಿ **(ಪುಟ-೭೦)** ತಿಳಿಸಿದ್ದಾರೆ. ಇದರ ಜೊತೆಗೆ ಭಾಷೆ ಹಾಗೂ ವಿಷಯ ಕಲಿಕೆ ಎರಡೂ ಒಂದನ್ನೊಂದು ಅನ್ವಯಿಸುವುದಿಲ್ಲ. ಕಲಿಕೆಯ ಯಶಸ್ಸು ಪ್ರಧಾನವಾದಾಗ ಯಾವ ಭಾಷೆಯ ಮೂಲಕ ಕಲಿಯುತ್ತೇವೆ ಎಂಬುದು ಮುಖ್ಯವಾಗುವುದಿಲ್ಲ. ವಿಷಯ ಕಲಿಕೆ ಮತ್ತು ಭಾಷಾ ಕಲಿಕೆ ಎರಡೂ ಬೇರೆ ಬೇರೆ. ವಿದ್ಯಾರ್ಥಿಗಳು ಇವೆರಡರಲ್ಲಿಯೂ ವಿಭಿನ್ನ ಸಾಮರ್ಥ್ಯವನ್ನು ಪಡೆದಿರುತ್ತಾರೆ ಎಂದು ವಿವರಿಸಿದ್ದಾರೆ. ಆದರೆ ಇವೆರಡರಲ್ಲಿಯೂ ವಿದ್ಯಾರ್ಥಿಗಳ ಸಾಮರ್ಥ್ಯದ ಸಾಧನೆಗಳನ್ನು ಕುರಿತು ಅಧಿಕ ಚಿಂತನೆಗಳು, ಸಂಶೋಧನಾತ್ಮಕ ಅಧ್ಯಯನಗಳು ನಡೆಯಬೇಕಾಗಿದೆ. ಕಲಿಕೆಯ ಯಶಸ್ಸಿಗೆ ಒಂದಲ್ಲಾ ಒಂದು ರೀತಿಯಲ್ಲಿ ಭಾಷೆ ಹೆಚ್ಚು ಸಹಕಾರಿಯಾಗುತ್ತದೆ ಎನ್ನುವುದೂ ಅಷ್ಟೇ ಸತ್ಯ. ಆದ್ದರಿಂದ ವಿಷಯ ಕಲಿಕೆಗಿಂತಲೂ ಪೂರ್ವದಲ್ಲಿ ವಿಷಯವನ್ನು ಅರ್ಥೈಸಿಕೊಳ್ಳಲು ಭಾಷೆಯನ್ನು ಸಹಾಯಕವಾಗಿ (ಮಾಧ್ಯಮ/ಸಾಧನ) ಬಳಸುತ್ತೇವೆ. ಆದ್ದರಿಂದ ಈ ಭಾಷೆಯನ್ನು ಮೊದಲು ಪೂರ್ಣವಾಗಿ ಕಲಿಯಬೇಕಾಗಿರುವುದು ಅಗತ್ಯವಾಗಿದೆ. ಅದು ಸುತ್ತಮುತ್ತಲಿನ ಪರಿಸರದಲ್ಲಿ ಬಳಕೆಯಲ್ಲಿರುವ ಭಾಷೆಯೆಂದರೆ ಕಲಿಕೆ ಇನ್ನಷ್ಟು ಸರಳವಾಗುತ್ತದೆ. ಇದು ಭಾಷಾ ವಿಜ್ಞಾನಿಗಳ ಅಭಿಪ್ರಾಯವೂ

ಆಗಿದೆ. ಈ ಬಗೆಯ ವಿಚಾರಗಳು ಭಾಷೆಯ (ಮಾಧ್ಯಮ) ಮೂಲಕ ವಿಷಯ ಕಲಿಕೆಯ ಕಡೆಗೆ ಹೆಚ್ಚು ಗಮನ ಹರಿಸುವ ಪ್ರಯತ್ನವನ್ನು ನಿರೀಕ್ಷಿಸಲಾಗುತ್ತಿದೆ. ಆದರೆ ಇನ್ನೊಂದು ಕಡೆಗೆ ಕಲಿಕೆಯ ಮಾಧ್ಯಮವಾಗಿ ಕನ್ನಡವನ್ನು ಆಯ್ಕೆ ಮಾಡುವ ಜವಬ್ದಾರಿಯನ್ನು ಶಿಕ್ಷಣ ಸಂಸ್ಥೆಗಳಿಂದಾಗಿಯೂ ಇಂಗ್ಲೀಶ್ ಶಿಕ್ಷಣವನ್ನು ನಡೆಸುವ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗಿದೆ. ಏಕೆಂದರೆ ಶೈಕ್ಷಣಿಕ ಹಂತದಲ್ಲಿ ಎಲ್ಲಾ ಶಾಲೆಗಳಲ್ಲಿ ಒಂದರಿಂದ ಏಳನೇ ತರಗತಿಯವರೆಗೆ ಕನ್ನಡ ಮಾಧ್ಯಮದ ಕಲಿಕೆ ಕಂಡು ಬರುತ್ತಿಲ್ಲ. ಇದು ಕೇವಲ ಸರ್ಕಾರಿ ಶಾಲೆಗಳಿಗೆ ಈ ನಿಯಮ (ಭಾಷಾ ನೀತಿ) ಅನ್ವಯಿಸುತ್ತದೆ. ಉಳಿದಂತೆ ಸರ್ಕಾರೇತರ ಖಾಸಗಿ ಶಾಲೆಗಳಲ್ಲಿ ಇಂಗ್ಲೀಶ್ ಮಾಧ್ಯಮದ ಶಿಕ್ಷಣವೇ ಪ್ರಧಾನವಾಗಿದೆ.

ಇನ್ನೊಂದು ಅಂಶವೆಂದರೆ ಕರ್ನಾಟಕದಲ್ಲಿ ಶಿಕ್ಷಣ ನೀತಿಗೂ ಭಾಷಾ ನೀತಿಗೂ ಸಾಮ್ಯತೆ ಇಲ್ಲದೆ ಅನೇಕ ಗೊಂದಲಗಳು ಇರುವುದನ್ನು ಗುರುತಿಸಬಹುದು. ಕೆಲವೊಂದು ಪ್ರಾದೇಶಿಕ ಅಗತ್ಯತೆಗನುಗುಣವಾಗಿ ಮಾರ್ಪಾಡುಗಳನ್ನು ಮಾಡಿಕೊಂಡಾಗ್ಯೂ ಸಹ ಸ್ಪಷ್ಟತೆಯನ್ನು ಕಂಡುಕೊಂಡಿಲ್ಲ. ಹೊಸ ರಾಷ್ಟ್ರೀಯ ಶಿಕ್ಷಣನೀತಿ ಹಾಗೂ ತ್ರಿಭಾಷಾ ಸೂತ್ರದನುಸಾರ ಶಿಕ್ಷಣ ನೀತಿಯಲ್ಲಿ ಐದನೇ ತರಗತಿಯಿಂದ ದ್ವಿತೀಯ ಹಾಗೂ ತೃತಿಯ ಭಾಷೆಯನ್ನು ಅಳವಡಿಸಲಾಗಿದೆ. ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿರಿಸಿದ್ದು ಉತ್ತಮ ವಿಧಾನ ಆದರೆ ದ್ವಿತೀಯ ಮತ್ತು ತೃತೀಯ ಭಾಷೆಯಲ್ಲಿ ಗೊಂದಲ ಕಂಡು ಬರುತ್ತದೆ. ಅಂದರೆ ದ್ವಿತೀಯ ಭಾಷೆ ಪ್ರಾದೇಶಿಕ ಭಾಷೆಯಾದರೆ ತೃತೀಯ ಭಾಷೆಯಲ್ಲಿ ರಾಷ್ಟ್ರೀಯ ಭಾಷೆಯನ್ನೋ, ಅಥವಾ ಅಂತರಾಷ್ಟ್ರೀಯ ಭಾಷೆಯನ್ನೋ? ಎನ್ನುವುದರಲ್ಲಿ ಖಚಿತತೆ ಇಲ್ಲ. ತ್ರಿಭಾಷಾ ಸೂತ್ರದ ಪ್ರಕಾರ ರಾಷ್ಟ್ರೀಯ ಭಾಷೆ 'ಹಿಂದಿ'ಯನ್ನು ಕಡ್ಡಾಯವಾಗಿ ಕಲಿಸಲೇಬೇಕೆಂದಿದೆ. ಹಾಗಾದರೆ ಮಾತೃಭಾಷೆ ಹಾಗೂ ಪ್ರಾದೇಶಿಕ ಭಾಷೆ ಎರಡೂ ಒಂದೇ ಇದ್ದು ತೃತೀಯ ಭಾಷೆಯಾಗಿ ಇಂಗ್ಲೀಶ್‌ನ್ನು ಆಯ್ಕೆ ಮಾಡುವುದು ಸರಿಯೆನಿಸಬಹುದು. ಆದರೆ ಶಿಕ್ಷಣ ನೀತಿಯನುಸಾರ ಎಲ್ಲಾ ಭಾಷಾ ಅಲ್ಪಸಂಖ್ಯಾತ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿಯೇ ಶಿಕ್ಷಣ ಕಂಡು ಬರುತ್ತಿಲ್ಲ.

ಭಾಷಾ ವಿಭಾಗ ಕ್ರಮದ ಮೂಲಕ ಗಮನಿಸುವುದಾದರೆ ಮಾತೃಭಾಷೆ, ಪ್ರಾದೇಶಿಕಭಾಷೆ, ರಾಷ್ಟ್ರೀಯ ಭಾಷೆಯನ್ನು ಶಿಕ್ಷಣ ನೀತಿಯಲ್ಲಿ ಅಳವಡಿಸುವುದು ಉಚಿತವೆನಿಸುತ್ತದೆ. ತೃತೀಯ ಭಾಷೆಯಲ್ಲಿ ರಾಷ್ಟ್ರೀಯ ಅಥವಾ ಅಂತರಾಷ್ಟ್ರೀಯ ಭಾಷೆಯನ್ನು ಐಚ್ಛಿಕವಾಗಿರಿಸಿ ಆಯ್ಕೆಗೆ ಬಿಡಬೇಕು. ಇದು ರಾಜ್ಯದ ಎಲ್ಲಾ ಶಾಲೆಗಳಲ್ಲಿ ಏಕರೂಪವಾಗಿ ಜಾರಿಗೆ ಬರುವಂತಾಗಬೇಕು. ಕೊನೆಯ ಪಕ್ಷ ಸರ್ಕಾರೇತರ ಶಿಕ್ಷಣ ಸಂಸ್ಥೆಗಳಲ್ಲಿ ನಿರ್ದಿಷ್ಟ ಕಾಲಾವಧಿಯವರೆಗೆ (೫ನೇ ತರಗತಿವರೆಗೆ) ಕಲಿಕೆಯ ಮಾಧ್ಯಮವಾಗಿ ಕನ್ನಡವನ್ನು ಮಾತ್ರ ಬಳಸಬೇಕು. ಪ್ರಸ್ತುತದ ಭಾಷಾನೀತಿಯನ್ನು ಗಮನಿಸಿದರೆ ಒಂದರಿಂದ ಏಳನೇ ತರಗತಿವರೆಗಿನ ಶಾಲೆಗಳಲ್ಲಿ ಮಾತೃಭಾಷಾ ಮಾಧ್ಯಮವನ್ನು ಜಾರಿಗೆ ತರಬೇಕೆಂದು ಹೇಳಲಾಗಿದೆ. ಇಂಗ್ಲೀಶ್ ಮಾಧ್ಯಮ ಶಾಲೆಗಳಿಗೂ ಈ ನಿಯಮ ಹೊರತಾಗಿಲ್ಲ. ಅಲ್ಲದೆ ಮೂರನೇ ತರಗತಿಯಿಂದ ದ್ವಿತೀಯ ಭಾಷೆಯನ್ನು ಕಲಿಸಬೇಕೆಂಬ ನಿಯಮವಿದೆ. ಇತ್ತೀಚೆಗೆ ಅದು ಒಂದನೇ ತರಗತಿಯಿಂದಲೇ

ಪ್ರಾರಂಭವಾಗಬೇಕೆಂಬ ಒತ್ತಾಯವಿದೆ. ಆದರೆ ಈ ಎರಡು ವಿಚಾರಗಳಲ್ಲಿ ಸಾಕಷ್ಟು ಗೊಂದಲವಿರುವುದು ವ್ಯಕ್ತವಾಗುತ್ತದೆ. ಇಲ್ಲಿ ಮುಖ್ಯವಾಗಿ ಮಗುವಿನ ಕಲಿಕೆಯನ್ನು ಗಮನಿಸಿದ್ದೇ ಆದರೆ ಐದನೇ ತರಗತಿಯಿಂದಲೇ ದ್ವಿತೀಯ ಭಾಷೆಯನ್ನು ಅಭ್ಯಾಸ ಮಾಡಿಸುವುದು ಉಪಯುಕ್ತವೆಂದೆನಿಸುತ್ತದೆ. ಮಗು ಐದನೆ ತರಗತಿಗೆ ಬರುವಷ್ಟಿಗಾಗಲೇ ಮಾತೃಭಾಷೆಯ ಬಗೆಗೆ ಸಾಕಷ್ಟು ವಿಷಯಗಳನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತದೆ. ಆದರೆ ಒಂದನೇ ತರಗತಿಯಿಂದ ಕಲಿಯಲು ಮಗುವಿಗೆ ಸಾಮರ್ಥ್ಯವಿಲ್ಲವೆಂದರ್ಥವಲ್ಲ ಅವರಿಗೆ ಸಾಮರ್ಥ್ಯವಿರುತ್ತದೆ. ಆದರೆ ಕಲಿಕೆ ಪರಿಪೂರ್ಣವಾಗಲಾರದು ಏಕೆಂದರೆ ಮಗುವಿಗೆ ಈ ಸಂದರ್ಭದಲ್ಲಿ ಆಟದ ಮೂಲಕ ಪಾಠ ಮತ್ತು ಮಾತೃಭಾಷಾ ಮಾಧ್ಯಮದ ಮೂಲಕ ಬೋಧನೆ ನಡೆಯುವುದರಿಂದ ಕಲಿಕೆ ಅರ್ಥಪೂರ್ಣವಾಗುವುದರಲ್ಲಿ ಯಾವುದೇ ಅನುಮಾನ ಗಳಿಲ್ಲ. ಆದ್ದರಿಂದ ಪ್ರಾರಂಭದಲ್ಲಿ ಮಾತೃಭಾಷೆ ಮಾಧ್ಯಮ ಕಲಿಕೆಯನ್ನು ಅಳವಡಿಸಿವುದು ಪ್ರಯೋಜನಕಾರಿಯಾಗುತ್ತದೆ. ಇಂಗ್ಲೀಶ್‌ನ್ನು ಕಲಿಸುವ ಉದ್ದೇಶ ಸಾಮಾಜಿಕ ಸ್ಥಾನಮಾನ, ಆರ್ಥಿಕ ಭದ್ರತೆ, ಉದ್ಯೋಗ ದೃಷ್ಟಿಯಿರಬಹುದು. ಹಾಗೆಂದ ಮಾತ್ರಕ್ಕೆ ಮಗುವಿನ ಕಲಿಕೆ ಅರ್ಥಪೂರ್ಣವಾಗಬೇಡವೆ? ಶೈಕ್ಷಣಿಕ ಮನೋವಿಜ್ಞಾನಿಗಳೂ ಸಹ ಮಗುವಿಗೆ ಮಾತೃಭಾಷಾ ಮಾಧ್ಯಮದ ಶಿಕ್ಷಣವೇ ಅವಶ್ಯಕ ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕೇಂದ್ರಸರ್ಕಾರ ಹಾಗೂ ಉಚ್ಚ ನ್ಯಾಯಾಲಯವೂ ಸಹ ಮಾತೃಭಾಷಾ ಮಾಧ್ಯಮಕ್ಕೆ ಉತ್ತೇಜಿಸಿದ್ದು ಅತ್ಯಂತ ಶ್ಲಾಘನೀಯ. ಆದರೆ ಮಾತೃಭಾಷಾ ಮಾಧ್ಯಮ ಕಲಿಕೆ ಒತ್ತಾಯವಲ್ಲ ಎಂದು ರಾಜ್ಯ ಹೈಕೋರ್ಟ್ ನೀಡಿರುವ ತೀರ್ಪು ವಿಷಾದಕರ ಬೆಳವಣಿಗೆಯಾಗಿದೆ. ಈ ಕ್ರಮದಿಂದಾಗಿ ಭಾಷಾ ನೀತಿಗೂ, ಶಿಕ್ಷಣ ನೀತಿಗೂ ಪರಸ್ಪರ ಸಂಬಂಧವಿಲ್ಲದೆ ಹಲವಾರು ಬದಲಾವಣೆ ಗಳಿರುವುದು ಕಂಡು ಬರುತ್ತದೆ. ಈ ಬಗೆಗೆ ಶಿಕ್ಷಣನೀತಿ ಹಾಗೂ ಪಠ್ಯಕ್ರಮ ರೂಪಿಸುವ ಸಮಿತಿಯವರು ಸೂಕ್ಷ್ಮವಾಗಿ ಪರಿಶೀಲಿಸಿ ಸಾರ್ವತ್ರಿಕ ಶಿಕ್ಷಣವನ್ನು ಜಾರಿಗೆ ತರಬೇಕಾಗಿದೆ.

ಮಾತೃಭಾಷಾ ಮಾಧ್ಯಮವನ್ನು ಎತ್ತಿ ಹಿಡಿಯುವ ಮೂಲಕ ಇಂಗ್ಲೀಶ್ ಭಾಷೆಯನ್ನು ಅಥವಾ ಮಾತೃಭಾಷಾ ಮಾಧ್ಯಮವನ್ನು ಅಲ್ಲಗಳೆಯಲಾಗುತ್ತಿದೆ ಎಂದಲ್ಲ. ಒಂದು ಮಗು ಎರಡು ಭಾಷೆಗಳನ್ನು ಕಲಿಯುವಲ್ಲಿ ತೊಂದರೆ ಇಲ್ಲ. ಆದರೆ ಕಲಿಯುವಂತಹ ಶಿಕ್ಷಣ ಕೊನೆಯವರೆಗೆ ಪರಿಪೂರ್ಣವಾಗಿ ಬಳಕೆಯಾಗಬೇಕಾದರೆ ಮಗು ತಾನು ಪಡೆಯುವಂತಹ ಶಿಕ್ಷಣವನ್ನು ಮೊದಲು ತನ್ನ ಮಾತೃಭಾಷೆಯಲ್ಲಿ ಗ್ರಹಿಸಿ ಮನನ ಮಾಡಿಕೊಂಡು ನಂತರ ತನಗೆ ಅಗತ್ಯವಿದ್ದ/ತಿಳಿದಂತ ಭಾಷೆಯಲ್ಲಿಯೇ ಅಭಿವ್ಯಕ್ತಿಸುತ್ತದೆ ಎಂಬ ವೈಜ್ಞಾನಿಕ ಕಾರಣ ದಿಂದಾಗಿ ಮಗುವಿನ ಸರ್ವತೋಮುಖ ಅಭಿವೃದ್ಧಿ ಹಾಗೂ ಗುಣಮಟ್ಟದ ಶಿಕ್ಷಣದ ಹಿತದೃಷ್ಟಿಯಿಂದಾಗಿ ಮಾತೃಭಾಷಾ ಮಾಧ್ಯಮದ ಅಗತ್ಯತೆಯನ್ನು ಒತ್ತಿ ಹೇಳಲಾಗಿದೆ.

ಈ ಎಲ್ಲಾ ವಿವರಗಳೊಂದಿಗೆ ಅಧ್ಯಯನವನ್ನು ತಾತ್ವಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಇಲ್ಲಿಯ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಸ್ತುತ ಅಧ್ಯಯನ ಅದರದೇ ಆದ ಮಹತ್ವವನ್ನು ಹೊಂದಿದೆ. ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಲ್ಲಿ ಹೊಸ ನಿಯಮಗಳನ್ನು/ ಆಯಾಮಗಳನ್ನು ರೂಪಿಸಲು ಇದರ ಪ್ರಯೋಜನ

ನೆರವಾಗುವುದು ಅಂದರೆ ತಪ್ಪಾಗಲಾರದು. ಅಂದರೆ ಮುಂದಿನ ದಿನಗಳಲ್ಲಿ ಶಿಕ್ಷಣ ನೀತಿಯಲ್ಲಿ ಮಾರ್ಪಾಡುಗಳನ್ನು ಮಾಡಲು ಬಯಸಿದಾಗ ಇಂತಹ ಸಂಶೋಧನೆಯ ಅಧ್ಯಯನಗಳು ನೆರವಿಗೆ ಬರಬಹುದು. ಅಲ್ಲದೆ ಪ್ರಾಥಮಿಕ ಹಂತದಲ್ಲಿರುವ ಮಾಧ್ಯಮದ ಗೊಂದಲಗಳನ್ನು ಸೂಕ್ಷ್ಮವಾಗಿ ಬಗೆಹರಿಸಿಕೊಳ್ಳಬಹುದು. ಜೊತೆಗೆ ರಾಜ್ಯ ಸರ್ಕಾರ ಹಾಗು ಸರ್ಕಾರಿ ಸಂಘ, ಸಂಸ್ಥೆಗಳು ಹೊಸ ಯೋಜನೆಗಳೊಂದಿಗೆ ಭಾಷಾ ನೀತಿಯನ್ನು ಜಾರಿಗೆ ತರಲು ಪ್ರಯತ್ನಿಸಿದಾಗ ಇಂತಹ ಸಂಶೋಧನೆಯ ಬರಹಗಳು ಅಧ್ಯಯನಕ್ಕೆ ಸಹಾಯವಾಗುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು. ಈ ನಿಟ್ಟಿನಲ್ಲಿ ಬಳಸಿಕೊಂಡಂತಹ ಅಂಶಗಳನ್ನು ಒಂದು ಚೌಕಟ್ಟಿಗೆ ಅಳವಡಿಸಿಕೊಳ್ಳುವಲ್ಲಿ ಅಧ್ಯಯನ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಇದರಿಂದಾಗಿ ಪ್ರಚಲಿತದಲ್ಲಿ ಮಾಧ್ಯಮದ ಕುರಿತ ಚಿಂತನೆಗಳನ್ನು ಕನ್ನಡ ಮತ್ತು ಇಂಗ್ಲೀಶ್ ಎಂಬ ಎರಡು ಪ್ರತ್ಯೇಕ ಭಾಗದಲ್ಲಿರಿಸಿ ವಿಶ್ಲೇಷಿಸಲಾಗಿದೆ. ವಿಶ್ಲೇಷಣೆ ಮಾಡುವಾಗ ಮಾಧ್ಯಮ ಕುರಿತಾಗಿ ಕ್ಷೇತ್ರಕಾರ್ಯ ಆಧಾರಿತ ಮಾಹಿತಿಯನ್ನು ಅತಿ ಕಡಿಮೆ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆ. ಇದರ ಬದಲಾಗಿ ಕೃತಿಗಳನ್ನು, ಪತ್ರಿಕೆಗಳಲ್ಲಿನ ಸಂಶೋಧನಾ ಲೇಖನಗಳನ್ನು ಚರ್ಚೆಗೆ ಬಳಸಿಕೊಳ್ಳಲಾಗಿದೆ. ಶಿಕ್ಷಣ ತಜ್ಞರು, ಚಿಂತಕರು, ಸಾಹಿತಿಗಳು, ಭಾಷಾವಿಜ್ಞಾನಿಗಳು ವ್ಯಕ್ತಪಡಿಸಿರುವ ವಿಚಾರಗಳು ಕೃತಿಯಲ್ಲಿಯೇ ಸಾಕಷ್ಟು ಲಭ್ಯವಿರುವುದರಿಂದ ನೇರವಾಗಿ ಚರ್ಚೆಗೆ ಬಳಸಿಕೊಂಡು ಸಂಶೋಧನೆಗೆ ನ್ಯಾಯ ಒದಗಿಸುವ ಪ್ರಯತ್ನ ಈ ಅಧ್ಯಯನದುದ್ದಕ್ಕೂ ಮಾಡಲಾಗಿದೆ. ಒಟ್ಟಾರೆಯಾಗಿ ಈ ಪ್ರಸ್ತುತ ಸಂಶೋಧನೆಯು ಮುಂದಿನ ದಿನಗಳಲ್ಲಿ ಮಾಧ್ಯಮದ ವಾಗ್ವಾದಗಳ ವಿಶ್ಲೇಷಣೆಗೆ ದಾರಿ ತೋರಿಸಿದರೆ ಮತ್ತು ಗೊಂದಲಗಳಿಗೆ ಪರಿಹಾರ ಒದಗಿದರೆ ಈ ಪ್ರಯತ್ನ ಸಾರ್ಥಕವೆನಿಸುತ್ತದೆ.

**ಅಧ್ಯಯನದ ಫಲಿತಗಳು**

* ಮಾತೃಭಾಷೆಯಲ್ಲಿಯೇ ಮಕ್ಕಳಿಗೆ ಶಿಕ್ಷಣ ನೀಡಬೇಕೆನ್ನುವುದನ್ನು ಪ್ರಾಚೀನರು ಆ ಕಾಲದಲ್ಲಿಯೇ ವ್ಯಕ್ತಪಡಿಸಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.
* ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆನ್ನುವ ಉದ್ದೇಶದಿಂದ ಪ್ರತಿಯೊಂದು ಕಾಲಘಟ್ಟಗಳಲ್ಲಿ ಭಾಷೆ ಕುರಿತು ಚಳುವಳಿಗಳು ಬೆಳೆದು ಬಂದಿವೆ.
* ಪ್ರಾಚೀನ ಕಾಲದಲ್ಲಿ ಧರ್ಮ ಪ್ರಧಾನವಾದ ಶಿಕ್ಷಣ ಪದ್ಧತಿ ಜಾರಿಯಲ್ಲಿತ್ತು ಎನ್ನುವುದು ಅಧ್ಯಯನದಿಂದ ತಿಳಿದು ಬರುತ್ತದೆ.
* ಪ್ರಾಚೀನ ಸಂದರ್ಭದಲ್ಲಿ ಆಡಳಿತ ನಡೆಸುತ್ತಿದ್ದಂತಹ ಧರ್ಮವೇ ಅಥವಾ ಪ್ರಭುತ್ವ ಹೊಂದಿದಂತ ಧರ್ಮ ತನ್ನ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡುತ್ತಿತ್ತು.
* ಕನ್ನಡ ಮಾತೃಭಾಷಾ ಮಾಧ್ಯಮ ಕುರಿತು ಕರ್ನಾಟಕ ಏಕೀಕರಣದ ನಂತರ ಬಂದ ಕನ್ನಡ ಭಾಷಾ ಪಠ್ಯಪುಸ್ತಕಗಳ ಮುನ್ನುಡಿಯ ಭಾಗದಲ್ಲಿ ಮತ್ತು ಪಠ್ಯಕ್ರಮದಲ್ಲಿ ಪ್ರಸ್ತಾಪಿಸದೆ ಇರುವ ಅಂಶವನ್ನು ಕಾಣಬಹುದಾಗಿದೆ.

* ಪ್ರಾಥಮಿಕ ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮದ ಬಗೆಗೆ ನಡೆಯುತ್ತಿರುವ ಚರ್ಚೆಗಳು ಭಾಷಾ ನೀತಿ ಹಿನ್ನೆಲೆಯಲ್ಲಿ ಚರ್ಚೆಯಾಗುತ್ತಿರುವುದು ಕಂಡು ಬರುತ್ತದೆ.

* ಭಾಷಾನೀತಿ ಹಾಗೂ ಶಿಕ್ಷಣನೀತಿ ಎರಡೂ ಒಂದೇ ಉದ್ದೇಶದ ಹಿನ್ನೆಲೆಯಲ್ಲಿ ವ್ಯತ್ಯಾಸಗಳಿರುವುದು ಕಂಡು ಬರುತ್ತದೆ. ನಾಲ್ಕನೇ ತರಗತಿಯಿಂದ ಏಳನೇ ತರಗತಿಯ ವರೆಗೆ ಮಕ್ಕಳಿಗೆ ದ್ವಿತೀಯ ಹಾಗೂ ತೃತೀಯ ಭಾಷೆಗಳನ್ನಾಗಿ ಕಡ್ಡಾಯ ಮಾಡಿರುವ ವಿಷಯದಲ್ಲಿ ಗೊಂದಲವಿದೆ.

* ಕರ್ನಾಟಕ ಏಕೀಕರಣ ನಂತರ ನಡೆದು ಬಂದ ಭಾಷಾಮಾಧ್ಯಮ ಕುರಿತು ಚರ್ಚೆಗಳು ಭಾಷಾನೀತಿ ಹಾಗೂ ಭಾಷಾ ಯೋಜನೆಗಳ ಹಿನ್ನೆಲೆಯಲ್ಲಿ ರಚನೆಗೊಂಡಿವೆಯೇ ಹೊರತು ಸಾಮಾಜಿಕ ವರ್ಗದ ಭಾಷಾದಾರಿತ ಹಿನ್ನೆಲೆಯಲ್ಲಿ ಅಲ್ಲ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

* ಕನ್ನಡ ಮತ್ತು ಇಂಗ್ಲೀಶ್ ಮಾಧ್ಯಮದ ಚರ್ಚೆಗಳಲ್ಲಿ ಇಂಗ್ಲೀಶ್ ಮಾಧ್ಯಮದ ಕಲಿಕೆಯ ಬಗೆಗಿನ ಚರ್ಚೆಯ ಒಲವು ಪರೋಕ್ಷವಾಗಿ ಅಧಿಕವಾಗಿರುವುದು ತಿಳಿದು ಬರುತ್ತದೆ.

* ಕನ್ನಡ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆನ್ನುವುದು ಸಾಹಿತಿಗಳ, ಚಿಂತಕರ ಅಭಿಪ್ರಾಯವಾದರೂ ಇಂಗ್ಲೀಶ್‌ನ್ನು ಬೇಡ ಎಂದು ಯಾರೂ ಹೇಳಿಲ್ಲ. ದ್ವಿತೀಯ ಭಾಷೆಯಾಗಿ ಕಲಿಯಬೇಕೆನ್ನುವುದು ಇವರ ಅಭಿಪ್ರಾಯವಾಗಿದೆ. ಅದು ಮೂರು, ನಾಲ್ಕು ಅಥವಾ ಐದನೇ ತರಗತಿಯಿಂದಲೇ ಎನ್ನುವುದರಲ್ಲಿ ಸಾಕಷ್ಟು ಗೊಂದಲಗಳಿವೆ. ಆದರೆ ಸರಿಯಾದ ಕಾರಣಗಳನ್ನು ನೀಡಿರುವುದಿಲ್ಲ.

* ಅನುದಾನರಹಿತ ಶಾಲಾ ಸಂಘ ಸಂಸ್ಥೆಗಳ ಇಂಗ್ಲೀಶ್ ಮಾಧ್ಯಮದ ಶಿಕ್ಷಣದಿಂದಾಗಿ ಮಕ್ಕಳಲ್ಲಿ ಹಾಗೂ ಸಾಮಾಜಿಕ ವಲಯದಲ್ಲಿ ತಾರತಮ್ಯವನ್ನುಂಟುಮಾಡಿದೆ.

* ಇಂಗ್ಲೀಶ್ ಮಾಧ್ಯಮ ಹಾಗೂ ಇಂಗ್ಲೀಶ್ ಕಲಿಕೆಯ ಅಗತ್ಯತೆಯನ್ನು ಸಾಮಾಜಿಕ ಸ್ಥಾನಮಾನ, ಆರ್ಥಿಕ ಉತ್ಪಾದನೆ ಹಿನ್ನೆಲೆಯಲ್ಲಿ ಬೇಕು ಎನ್ನುವ ಉದ್ದೇಶದಿಂದ ಚರ್ಚೆಗಳು ಬೆಳೆದು ಬಂದಿವೆ.

* ಇಂಗ್ಲೀಶ್ ಮಾಧ್ಯಮದ ಬೇಡಿಕೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳು ಹಿನ್ನೆಲೆಯಾಗಿರುವುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

* ಸರಕಾರ ತಮ್ಮ ರಾಜಕೀಯ ಉದ್ದೇಶವನ್ನು ಈಡೇರಿಸಿಕೊಳ್ಳುವ ನಿಟ್ಟಿನಿಂದ ಶಿಕ್ಷಣ ನೀತಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರುತ್ತದೆ. ಆದರೆ ಆ ಶಿಕ್ಷಣನೀತಿ ಭಾಷೆಗನುಗುಣವಾಗಿರಬೇಕು ಎಂಬ ಕಲ್ಪನೆ ಇಲ್ಲದೆ ಗೊಂದಲಗಳು ಸಂಭವಿಸುತ್ತಿರುವುದು ನಮಗೆಲ್ಲರಿಗೂ ಗೊತ್ತಿರುವ ವಿಚಾರ. ಈ ಹಿನ್ನೆಲೆ ಭಾಷಾನೀತಿ, ಶಿಕ್ಷಣನೀತಿ ಮತ್ತು ಮಾಧ್ಯಮ ಕುರಿತು ವಾಗ್ವಾದಗಳಿಗೆ ಕಾರಣವಾಗಿದೆ.

* ಪ್ರಚಲಿತ ಶೈಕ್ಷಣಿಕ ವಲಯದಲ್ಲಿ ಒಂದನೇ ತರಗತಿಯಿಂದಲೇ ಇಂಗ್ಲೀಶ್ ಕಲಿಕೆ/ ಮಾಧ್ಯಮ ವಿಷಯವಾಗಿ ಸಾಕಷ್ಟು ಚರ್ಚೆಗಳು ನಡೆಯುತ್ತಿವೆ. ಆದರೆ ಭಾಷಾ ಮಾಧ್ಯಮ ಕುರಿತು ಸಮಗ್ರ ರೂಪದಲ್ಲಿ ಸಂಶೋಧನಾ ಅಧ್ಯಯನಗಳು ಕಡಿಮೆ ಪ್ರಮಾಣದಲ್ಲಿ ನಡೆದಿವೆ ಎಂಬುದು ಸಮೀಕ್ಷೆಯಿಂದ ಕಂಡು ಬರುತ್ತದೆ.

• • •

# ಅನುಬಂಧಗಳು

* ಪರಾಮರ್ಶನ ಗ್ರಂಥಗಳು
* ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಪಿಎಚ್.ಡಿ. ಮಹಾಪ್ರಬಂಧಗಳು
* ಎಂ.ಫಿಲ್. ಕಿರುಪ್ರಬಂಧಗಳು
* ಎಂ.ಇಡಿ. ಕಿರುಪ್ರಬಂಧಗಳು
* ಪತ್ರಿಕೆಗಳ ಲೇಖನಗಳು

# ಪರಾಮರ್ಶನ ಗ್ರಂಥಗಳು


* ಅಂಗಡಿ ಎಸ್.ಎಸ್, **ವ್ಯಾಕರಣ ಪರಿಭಾಷೆ,** ವಿದ್ಯಾನಿಧಿ ಪ್ರಕಾಶನ ಗದಗ, ೨೦೦೫
* ಅನಸೂಯ ವಿ ಪರಗಿ, **ಮಾತೃಭಾಷಾ ಕನ್ನಡ ತತ್ವ ಮತ್ತು ಬೋಧನಾಮಾರ್ಗ,** ವಿವೇಕ ಪ್ರಕಾಶನ, ಚಿಕ್ಕಬಳ್ಳಾಪುರ, ೨೦೦೭
* ಅನಂತಮೂರ್ತಿ ಯು. ಆರ್. ಕನ್ನಡ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨
* ಅನಂತರಾಮು ರಾ, **ಕನ್ನಡ ಭಾಷಾ ಬೋಧನೆ,** ಚೇತನ್ ಬುಕ್ ಹೌಸ್, ಮೈಸೂರು, ೧೯೯೧
* ಅರವಿಂದ ಚೊಕ್ಕಾಡಿ, **ಬದುಕಿಗಾಗಿ ಶಿಕ್ಷಣ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೭
* ಅರವಿಂದ ಚೊಕ್ಕಾಡಿ, ಶಿಕ್ಷಣ ದೃಷ್ಟಿ, ಸುಮುಖ ಪ್ರಕಾಶನ, ಬೆಂಗಳೂರು,೨೦೦೭
* ಅಶೋಕಕುಮಾರ ರಂಜೇರೆ, **ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ವಾಗ್ವಾದಗಳು,**
* ಅಶೋಕಕುಮಾರ ರಂಜೇರೆ, ಭಾಷೆ ಮತ್ತು ಶಿಕ್ಷಣ, ನಿಧಿ ಪ್ರಕಾಶನ, ಹೊಸಪೇಟೆ, ೨೦೦೫
* **ಆಡಳಿತ ಭಾಷೆ,** ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೭೮
* ಆಯ್. ಎಸ್. ಬಿದರಿ, ಮೂಲ ರಾಧಾಕುಮುದ್ ಮುಖರ್ಜಿ, **ಪ್ರಾಚೀನ ಭಾರತದ ಶಿಕ್ಷಣ,** ಪಠ್ಯಪುಸ್ತಕ ನಿರ್ದೇಶನಾಲಯ, ಧಾರವಾಡ,೧೯೭೮
* ಓಬಳೇಶ್ವರಘಟ್ಟಿ, **ಸೂಕ್ಷ್ಮ ಬೋಧನಾ ಕೌಶಲ್ಯಗಳು,** ಕೇಂಬ್ರಿಡ್ಜ್ ಪ್ರಕಾಶನ, ಬೆಂಗಳೂರು, ೧೯೯೭
* ಕರಜಗಿ ಆರ್.ಡಿ. **ಭಾರತದ ಶಿಕ್ಷಣ ಚರಿತ್ರೆ,** ಶ್ರೀಪ್ರಕಾಶನ ಧಾರವಾಡ, ೧೯೯೩
* ಕರೀಗೌಡ ಬೀಚನಹಳ್ಳಿ (ಸಂ), **ಕನ್ನಡ ವಾರ್ಷಿಕ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫
* ಕುಮಾರ್ ಟಿ.ಎಂ, **ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ,** ಶ್ರೀದೇವಿ ಪ್ರಕಾಶನ, ಬೆಂಗಳೂರು, ೨೦೦೪

* ಕೆ.ಜಿ.ಕುಲಕರ್ಣಿ, ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪ್ರದೀಪ ಪ್ರಕಾಶನ, ಗದಗ, ೨೦೦೪
* ಕಾಶಿನಾಥ ಎಚ್.ಎಂ, **ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬,** ಪ್ರಗತಿ ಪರಿಶೀಲನೆ, ತೃಪ್ತಿ ಪ್ರಕಾಶನ, ಧಾರವಾಡ-೧೯೮೮
* ಕೇಶವಮೂರ್ತಿ ಎಸ್. **ಶೈಕ್ಷಣಿಕ ಆಡಳಿತ ನಿರ್ವಹಣೆ ಹಾಗೂ ಶಾಲಾ ಸಂಘಟನೆ,** ಅಖಿಲಾ ಏಜನ್ಸೀಸ್, ಮೈಸೂರು, ೨೦೦೦
* ಕೇಶವಮೂರ್ತಿ ಎಸ್. **ಕನ್ನಡ ಶಿಕ್ಷಣ ಬೋಧನೆ,** ಅಖಿಲಾ ಏಜನ್ಸೀಸ್, ಮೈಸೂರು, ೧೯೯೯
* ಕೃಷ್ಣಕುಮಾರ್ ಸಿ.ಪಿ ಮತ್ತು ಶಿವರಾಮು ಕಾಡನಕುಪ್ಪೆ (ಸಂ), **ಸುವರ್ಣ ಶಿಕ್ಷಣ,** ವಿದ್ಯಾವರ್ಧಕ ಸಂಘ, ಮೈಸೂರು, ೨೦೦೧
* ಕೃಷ್ಣ ಪರಮೇಶ್ವರ ಭಟ್ಟ, **ಕನ್ನಡ ತೆಲುಗು ದ್ವಿಭಾಷಿಕತೆಯ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫
* ಕೃಷ್ಣರಾವ್ ಕೆ.ಎಂ. **ಕನ್ನಡ ಭಾಷಾ ಸ್ವರೂಪ,** ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೮.
* ಕೃಷ್ಣಶಾಸ್ತ್ರಿ ಬಾಳಿಲ ಸಿ.ಎಚ್. **ಶಿಕ್ಷಣ ನೋಟ,** ಜ್ಞಾನಗಂಗಾ ಪುಸ್ತಕ ಮಳಿಗೆ, ಪುತ್ತೂರು, ದಕ್ಷಿಣ ಕನ್ನಡ, ೨೦೦೭
* ಕಿಂದ್ರಿ ಎನ್.ಎನ್. **ಕನ್ನಡ ಬೋಧನಾ ಪದ್ಧತಿಗಳು ಇಂದು ಮತ್ತು ನಾಳೆ,** ಜ್ಞಾನ ಗಂಗೋತ್ರಿ ಪ್ರಕಾಶನ, ಗದಗ, ೨೦೦೫
* ಗುಂಡ್ಮಿ ಚಂದ್ರಶೇಖರ ಐತಾಳ. **ಸಂಶೋಧನಾ ವಿಹಾರ,** ಆನಂದ ಪ್ರಕಾಶನ, ಮಂಗಳಗಂಗೋತ್ರಿ, ದಕ್ಷಿಣ ಕನ್ನಡ
* ಗೋಕಾಕ ವಿ.ಕೃ (ಸಂ), **ಕನ್ನಡದ ಕಾಲು ಶತಮಾನ,** ಮಿಂಚಿನ ಬಳ್ಳಿ ಕಾರ್ಯಾಲಯ ಧಾರವಾಡ, ೧೯೬೫
* ಗೋಪಾಲಕೃಷ್ಣಯ್ಯ ಕೆ.ಎಲ್. **ಭಾಷೆಯ ಬೆಳಕು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೩
* ಗೋವಿಂದರಾಜು ಸಿ.ಆರ್, **ಗೋಕಾಕ್ ವರದಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೬
* ಗೋವಿಂದರಾಜು ಸಿ.ಆರ್. **ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬
* ಗಂಗಾಧರಪ್ಪ ಎನ್. ಆರ್. **ಶಿಕ್ಷಣದ ಮೂಲ ತತ್ವಗಳು,** ರೇಖಾ ಪ್ರಕಾಶನ, ೨೦೦೪
* ಚಿದಾನಂದಮೂರ್ತಿ ಎಂ. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನಬುಕ್‌ಹೌಸ್ ಬೆಂಗಳೂರು, ೧೯೭೯

* ಚಂದ್ರಶೇಖರಯ್ಯ ಪಿ. **ಶಿಕ್ಷಣ ದರ್ಶನ,** ಸುಮುಖ ಪ್ರಕಾಶನ, ಬೆಂಗಳೂರು, ೨೦೦೭
* ಚಂದ್ರಶೇಖರ ಸಿ.ಆರ್, **ನಿಮ್ಮ ಮಕ್ಕಳ ಬೆಳವಣಿಗೆ ಚೆನ್ನಾಗಿದೆಯೇ?** ನವಕರ್ನಾಟಕ ಪ್ರಕಾಶನ–೨೦೦೭
* ಚಂದ್ರಶೇಖರಯ್ಯ ಪಿ, **ಪರಿಣಾಮಕಾರಿ ಓದು ಏನು?ಹೇಗೆ?** ನವಕರ್ನಾಟಕ ಪ್ರಕಾಶನ–೨೦೦೮
* ಜಗದೀಶ ಬಸಾಪುರ, **ಶೈಕ್ಷಣಿಕ ಮನೋವಿಜ್ಞಾನ,** ಅಭಿಷೇಕ ಪ್ರಕಾಶನ, ಹೂವಿನ ಹಡಗಲಿ–೨೦೦೬
* ಜವರೇಗೌಡ ದೇ(ಸಂ) **ಕುವೆಂಪು ಅವರ ಶಿಕ್ಷಣ ತತ್ವ ವಿಚಾರ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೭
* ಜವರೇಗೌಡ ದೇ. **ಶಿಕ್ಷಣ ಮತ್ತು ಕನ್ನಡ (ಕೆಲವು ಚಿಂತನೆಗಳು),** ತೆಲುಗು ಪ್ರಕಾಶನ, ಮೈಸೂರು, ೨೦೦೬
* ಜವರೇಗೌಡ ದೇ. **ಕನ್ನಡ ಚಿಂತನೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
* ಜಯಕುಮಾರ್ ಅನಗೋಳ್, **ಕಡ್ಡಾಯದ ಪ್ರಾಥಮಿಕ ಶಿಕ್ಷಣ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೩
* ಜಯಣ್ಣ ಸಿ.ವಿ. ಮತ್ತು ರುದ್ರಾಣಿ ವಿ.ಸಿ. **ಕನ್ನಡ ವಿಷಯಧಾರಿತ ಬೋಧನಾ ಪದ್ಧತಿ,** ಸಪ್ನಬುಕ್ ಹೌಸ್, ಬೆಂಗಳೂರು.
* ಜೇವೂರು ಎಸ್.ವಿ. **ಕರ್ನಾಟಕದ ಶೈಕ್ಷಣಿಕ ಇತಿಹಾಸ,** ಸುದರ್ಶನ್ ಅಂಡ್ ಕಂಪನಿ, ಬೆಂಗಳೂರು, ೧೯೭೧
* ತಳವಾರ ಎಂ.ಎಸ್. **ಕರ್ನಾಟಕದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣ,** ಉಲ್ಲಾಸ ಪ್ರಕಾಶನ, ಬೆಂಗಳೂರು, ೨೦೦೨
* ತಿರುಮಲೇಶ್ ಕೆ.ವಿ. **ನಮ್ಮ ಕನ್ನಡ,** ಅಭಿನವ ಪ್ರಕಾಶನ, ಬೆಂಗಳೂರು–೨೦೦೬
* ದತ್ತಪ್ಪಗೌಡ ಬಿ. ಓದುಗೌಡರ, **ಶಿಕ್ಷಣ ಸಂಪದ,** ಕೆ.ಎಚ್. ಪ್ರತಿಷ್ಠಾನ ಗದಗ–೧೯೯೯
* ಧಾರವಾಡಕರ ಯು, **ಕನ್ನಡಭಾಷಾಶಾಸ್ತ್ರ,** ಗೀತಾಬುಕ್ ಹೌಸ್, ಮೈಸೂರು–೧೯೫೧
* ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೨
* ಡಿ.ಎಸ್.ಇ.ಆರ್.ಟಿ, **ಕನ್ನಡ ಸಂಪದ,** ಡಿ.ಎಸ್.ಇ.ಆರ್.ಟಿ, ಪ್ರಕಾಶನ, ಬೆಂಗಳೂರು–೨೦೦೫
* ಡಿ.ಎಸ್.ಇ.ಆರ್.ಟಿ, **ಪ್ರಾಥಮಿಕ ಹಂತದಲ್ಲಿ ಕನಿಷ್ಟ ಕಲಿಕಾ ಹಂತಗಳು,** ಡಿ.ಎಸ್.ಇ.ಆರ್.ಟಿ–೧೯೯೨

* ನರಸಿಂಹಮೂರ್ತಿ ಎ.ವಿ, **ಕನ್ನಡ ಲಿಪಿಯ ಉಗಮ ಮತ್ತು ವಿಕಾಸ,** ವಿವೇಕ ಹಂಸ, ಪ್ರಕಾಶನ, ಬೆಂಗಳೂರು–೧೯೯೯
* ನಾಗಪ್ಪ ಟಿ.ಆರ್, **ಪಠ್ಯಪುಸ್ತಕ ರಚನೆ,** ಚಾಮುಂಡಿಪುರಂ, ಮೈಸೂರು–೧೯೮೮
* ನಾಗಪ್ಪ ಬಿ.ಕೆ, ಶಿಕ್ಷಣ, ಚೇತನ ಬುಕ್ ಹೌಸ್, ಮೈಸೂರು–೧೯೭೭
* ನಾಗರಾಜ ಎಚ್, **ಪ್ರಾಥಮಿಕ ಚೇತನ ಶಾಲಾ ವ್ಯಾಕರಣ,** ಜನಪದ ಪ್ರಕಾಶನ, ಬೆಂಗಳೂರು
* ನಂಜುಂಡಸ್ವಾಮಿ ಎ.ಎಸ್, **ಭಾರತೀಯ ಶಿಕ್ಷಣ ಇತಿಹಾಸ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೯೪
* ನರಸಿಂಹಾಚಾರ್ ಎ.ಎಲ್. **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ,** ಭಾರತೀ ಪ್ರಕಾಶನ, ಮೈಸೂರು, ೧೯೯೨
* ನಾಗಪ್ಪ ಕೆ.ಎಸ್. **ಗುರು ಪರಂಪರೆ ಹಾಗೂ ವಿದ್ಯಾಮಟ್ಟ,** ಭಾರತೀಯ ಪ್ರಕಾಶನ, ಮೈಸೂರು, ೨೦೦೩
* ನಾಗಭೂಷಣ ಡಿ.ಎಸ್. **೧ನೇ ತರಗತಿಯಿಂದ ಇಂಗ್ಲೀಶ್ ಕಲಿಕೆ : ಏಕೆ ಬೇಡ?,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭
* ನಾಗರತ್ನ ಎಂ.ಜೆ. **ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು ಮತ್ತು ಆಧುನಿಕ ಶಿಕ್ಷಣದಲ್ಲಿ ಮನೋವಿಜ್ಞಾನ,** ಚೇತನಬುಕ್ ಹೌಸ್, ಮೈಸೂರು, ೨೦೦೬
* ನಾಗರಾಜ ಡಿ.ಕೆ. **ಕೊಠಾರಿ ಆಯೋಗದ ವರದಿ,** ಶ್ರೀರಾಮಕೃಷ್ಣ ಪ್ರಕಾಶನ, ಗುಲಬರ್ಗಾ, ೧೯೯೮
* ನಾಯಕ್ ಜೆ.ಪಿ. **ಭಾರತದಲ್ಲಿ ಪ್ರಾಥಮಿಕ ಶಿಕ್ಷಣ,** ಗೀತಾ ಬುಕ್ ಹೌಸ್ ಬೆಂಗಳೂರು ೧೯೯೦
* ನಾಯಕ್ ಜೆ.ಪಿ. **ಶಿಕ್ಷಣ ಆಯೋಗ,** ಪೂರ್ವೋತ್ತರ, ೧೯೭೮, ಮಹಾಬಲೇಶ್ವರರಾವ್ ಕನ್ನಡಕ್ಕೆ ಅನುವಾದ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೭
* ನಾರಾಯಣ ಘಟ್ಟ ಎ.ಆರ್. **ಶಿಕ್ಷಣ ಮಾಧ್ಯಮ ಸಮಗ್ರ ಚಿಂತನೆ,** ಗೀತಾ ಕುಟೀರ, ಬೆಂಗಳೂರು, ೧೯೯೩
* ನಾರಾಯಣ ಕೆ.ವಿ. **ಮತ್ತೆ ಭಾಷೆಯ ಸುತ್ತಮುತ್ತ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೨೦೦೧
* ನಾರಾಯಣ ಕೆ.ವಿ. (ಸಂ) **ಭಾಷೆ ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫
* ನಾರಾಯಣ ಕೆ.ವಿ. **ಕನ್ನಡ ಜಗತ್ತು : ಅರ್ಧ ಶತಮಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೭
* ನಂಜುಂಡಸ್ವಾಮಿ ಎಸ್. **ಭಾಷಾ ಬೋಧನೆ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೮೯

* ನಂಜುಂಡಸ್ವಾಮಿ ಎ.ಎಸ್. **ಪೂರ್ವ ಪ್ರಾಥಮಿಕ ಶಿಕ್ಷಣ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೯೮
* ಪಾದೇಕಲ್ಲು ನರಸಿಂಹಭಟ್ಟ, **ಶಿಕ್ಷಣ–ಶೋಧನ,** ಕನ್ನಡ ಸಾಹಿತ್ಯ ಪರಿಷತ್ತು,
* ಪಾಟೀಲ ಪುಟ್ಟಪ್ಪ ನಾಡೋಜ, **ನಾಡು–ನುಡಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
* ಪುಟ್ಟಯ್ಯ ಬಿ.ಎಂ. **೧ನೇ ತರಗತಿಯಿಂದಲೇ ಉರುಳು,** ದುಡಿಮೆ ಪ್ರಕಾಶನ, ಬೆಂಗಳೂರು, ೨೦೦೭
* ಪುರಾಣಿಕ್ ಎಸ್.ಡಿ. **ಭಾರತೀಯ ಹಾಗೂ ಪಾಶ್ಚಾತ್ಯ ಶಿಕ್ಷಣ ತಜ್ಞರು,** ಸಮಾಜ ಪುಸ್ತಕಾಲಯ, ಧಾರವಾಡ
* ಪುರುಷೋತ್ತಮ ಜಿ, **ಕಿವುಡ ಮಗು ಮಾತಾಡಬಲ್ಲದು,** ನವಕರ್ನಾಟಕ ಪ್ರಕಾಶನ–೨೦೦೮
* ಪ್ರಧಾನ ಗುರುದತ್ತ, **ಆಡಳಿತ ಭಾಷೆ ಕೆಲವು ವಿಚಾರಗಳು,** ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು, ೧೯೭೬
* ಪ್ರಕಾಶ್‌ರಾವ್ ಪಯ್ಯಾರ್(ಸಂ), **ಕನ್ನಡ ನಾಡುನುಡಿ ರಕ್ಷಣೆ ಯಾಕೆ ಮತ್ತು ಹೇಗೆ?** ಧ್ವನಿ ಪ್ರತಿಷ್ಠಾನ, ಯು.ಎ.ಇ, ೨೦೦೫
* ಪಾಂಡುರಂಗಬಾಬು ಡಿ. **ನುಡಿನೋಟ,** ಆಕಾಶ್ ಪ್ರಕಾಶನ, ಹೊಸಪೇಟೆ, ೨೦೦೫
* ಬಣಕಾರ ಬಿ.ಜಿ. **ಕನ್ನಡ ಕರ್ನಾಟಕ ಚಿಂತನೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬
* ಬರಗೂರು ರಾಮಚಂದ್ರಪ್ಪ, **ಶಿಕ್ಷಣ ಮತ್ತು ಮಾಧ್ಯಮ ನೀತಿ ನಿರೂಪಣಾ ವರದಿ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ೨೦೦೧
* ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ,** ಅಂಕಿತ ಪುಸ್ತಕ, ಬೆಂಗಳೂರು, ೨೦೦೭
* ಬರಗೂರು ರಾಮಚಂದ್ರಪ್ಪ, **ಕನ್ನಡ ಪ್ರಜ್ಞೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
* ಬಸವರಾಜ ಕೊಡಗುಂಟಿ, **ಮಕ್ಕಳ ಭಾಷಾವಿಜ್ಞಾನ ಮತ್ತು ಇತರ ಲೇಖನಗಳು,** ಭಂಡಾರ ಪ್ರಕಾಶನ, ಮಸ್ಕಿ, ೨೦೦೭
* ಭಾಸ್ಕರರಾವ್ ಬಿ, **ಇಂದಿನ ಶಿಕ್ಷಣ ಪದ್ಧತಿ ಅಸಂಗತ ಅವೈಜ್ಞಾನಿಕ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೨.
* ಬೇದ್ರೆ ಎನ್, ಮಂಜುನಾಥ, **ಆಡಿ ಕಲಿಯೋಣ ಕನ್ನಡ,** ಬೇಂದ್ರೆ ಪ್ರತಿಷ್ಠಾನ, ಚಿತ್ರದುರ್ಗ, ನವಕರ್ನಾಟಕ ಪ್ರಕಾಶನ
* ಬಾಳಣ್ಣ ಸೀಗಿಹಳ್ಳಿ, **ಡೆಪ್ಯೂಟಿ ಚನ್ನಬಸಪ್ಪನವರ ಜೀವನ ಮತ್ತು ಸಾಧನೆ,** ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೩

* ಬುರ್ಲಿ ಎಸ್.ಎ. (ಅನು) ಮೂಲ : ಡಬ್ಲ್ಯೂ ಎಂ. ರಯಬರ್ನ್, **ಭಾರತದಲ್ಲಿ ಮಾತೃಭಾಷೆಯ ಬೋಧನೆಯ ಬಗ್ಗೆ ಸಲಹೆಗಳು,** ಪ್ರಸಾರಾಂಗ, ಕ.ವಿ.ವಿ.ಧಾರವಾಡ
* ಬಂಜಗೇರೆ ಜಯಪ್ರಕಾಶ್, **ಕರ್ನಾಟಕತ್ವ ಸಮಾಜೋ ಆರ್ಥಿಕ ತಳಹದಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬
* ಮಣಿಪಾಲ ಆರ್ಕೆ, **ಶಿಕ್ಷಣ ಮತ್ತು ವೈಚಾರಿಕತೆ,** ಸಂವಾದ ಪ್ರಕಾಶನ, ಮಣಿಪಾಲ, ೨೦೦೦
* ಮಹಾದೇವಯ್ಯ ಪಿ. **ದಲಿತರು ಭಾಷೆ ಮತ್ತು ಸಮಾಜ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
* ಮಹಾಬಲೇಶ್ವರರಾವ್, **ಬಹುಮುಖಿ ಶಿಕ್ಷಣ,** ಎಸ್.ಬಿ.ಎಸ್. ಪ್ರಕಾಶನ, ಬೆಂಗಳೂರು, ೧೯೯೨
* ಮಹಾಬಲೇಶ್ವರರಾವ್, **ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩
* ಮಹಾಬಲೇಶ್ವರರಾವ್, **ರಾಷ್ಟ್ರೀಯ ಶಿಕ್ಷಣ ನೀತಿ,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ೧೯೯೮
* ಮಹಾಬಲೇಶ್ವರರಾವ್, **ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು, ಸವಾಲುಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯
* ಮಹಾಬಲೇಶ್ವರರಾವ್, **ಶಿಕ್ಷಣ ಚಿಂತನ,** ಸುರಾಬುಕ್ಸ್ ಚೆನ್ನೈ, ೨೦೦೭
* ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೬
* ಮಂಚಯ್ಯ ಸಾ. **ಶಿಕ್ಷಣ ಪುಷ್ಪಗುಚ್ಛ,** ಅಳಿಲು ಸೇವಾ ಸಂಸ್ಥೆ, ಬೆಂಗಳೂರು, ೨೦೦೩
* ಮಂಜುನಾಥ ಎಸ್. **ಬಳ್ಳಾರಿ ನಗರದ ದ್ವಿಭಾಷಿಕತೆಯ ವೈವಿಧ್ಯತೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಮರುಳಯ್ಯ ಸಾ.ಶಿ, **ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ,** ಸಪ್ನ ಬುಕ್ ಹೌಸ್, ೨೦೦೭
* ಯದುರಾಜನ್ ಎಸ್.ಎಸ್. **ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು,** ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು, ೨೦೦೫
* ಯಾದವಾಡ ಎಸ್.ಬಿ, **ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ,** ವಿದ್ಯಾನಿಧಿ ಪ್ರಕಾಶನ, ಧಾರವಾಡ, ೨೦೦೪
* ರಮಣ ಬಿ.ವಿ, **ಕನ್ನಡ ನುಡಿ ಬೋಧನೆ,** ಸರ್ವೋದಯ ಪ್ರಕಾಶನ, ವಿರಾಜಪೇಟೆ (ಕೊಡಗು) ೧೯೫೩

* ರವೀಂದ್ರನಾಥ ಕೆ, **ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ,** ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸೊಂಡೂರು, ೨೦೦೭
* ರಹಮತ್ ತರೀಕೆರೆ, **ಕನ್ನಡ ಸಂಶೋಧನೆ ತಾತ್ವಿಕ ವಿಚಾರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
* ರಾಘವೇಂದ್ರರಾವ್ ಎಚ್.ಎಸ್. (ಸಂ), **ಕನ್ನಡ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪
* ರಾಮಚಂದ್ರ ಸಿ.ಎಸ್. **ಕನ್ನಡ ಭಾಷಾಲೋಚನ,** ಮಾಘಿರಿ ಪ್ರಕಾಶನ, ಮೈಸೂರು.
* ರಾಮಚಂದ್ರೇಗೌಡ ಹಿ.ಶಿ. **ಶಿಕ್ಷಣ ಶಿಕ್ಷಕರ ಯಜಮಾನಿಕೆ,** (ಲೇ) ಸಕಾಲ ಪತ್ರಿಕೆ, ೨೦೦೭
* ರಾಮಚಂದ್ರರಾವ್ ಬಿ. **ಕನ್ನಡ ಭಾಷೆಯ ಇತಿಹಾಸ,** ಡಿ.ವಿ.ಕೆ ಪ್ರಕಾಶನ, ಮೈಸೂರು, ೧೯೯೯
* ರೇಣುಕ ಪ್ರಸನ್ನ ಮ.ಗಂ. **ಒರೆಗಲ್ಲು,** ಅಧ್ಯಾಪಕರ ಸಂಘ, ಮೈಸೂರು, ೧೯೭೫
* ರೇಣುಕ ಪ್ರಸನ್ನ ಮ.ಗಂ. **ಪ್ರಚಲಿತ ಶಿಕ್ಷಣ : ಒಂದು ಚಿಂತನೆ,** ಅಧ್ಯಾಪಕರ ಸಂಘ, ಮೈಸೂರು, ೧೯೭೮
* ರೇಣುಕ ಪ್ರಸನ್ನ ಮ.ಗಂ, **ಮತ್ತಷ್ಟು ಶೈಕ್ಷಣಿಕ ಚಿಂತನೆಗಳು,** ಸಂವಹನ ಪ್ರಕಾಶನ, ಮೈಸೂರು, ೧೯೯೬
* ರೇಣುಕಪ್ಪ ಬಿ.ಎಸ್. **ಶಿಕ್ಷಣದ ಬುನಾದಿ,** ಶಿವಾರ್ಚಿತ ಪ್ರಕಾಶನ, ತುಮಕೂರು, ೨೦೦೪.
* ಲಕ್ಷ್ಮಣರಾವ್ ಕೆ. (ಸಂ)&(ಲೇ) **ಕನ್ನಡ–ಇಂಗ್ಲೀಶ್ ಭಾಷೆ ಮತ್ತು ಮಾಧ್ಯಮ,** ಸೂರ್ಯ ಪ್ರಕಾಶನ, ಭದ್ರಾವತಿ, ೨೦೦೭
* ಲಲಿತಾಬಾಯಿ ವೃಷಬೇಂದ್ರಸ್ವಾಮಿ, **ಮಕ್ಕಳ ಶಿಕ್ಷಣ ಚಿಂತನೆಗಳು,** ಮಹಿಳಾ ಸಾಹಿತ್ಯಕಾ, ನವನಗರ ಹುಬ್ಬಳ್ಳಿ.
* ಲಿಂಗದೇವರು ಹಳೆಮನೆ, ಕಿಕ್ಕೇರಿ ನಾರಾಯಣ,ಎಸ್.ಎಸ್. ಯದುರಾಜನ್, **ರಾಷ್ಟ್ರೀಯ ಪಠ್ಯಕ್ರಮ ನೆಲೆಗಟ್ಟು,** ಎನ್.ಸಿ.ಇಆರ್.ಟಿ, ೨೦೦೫
* ಲೀಲಾಭಟ್ ಬಿ. (ಸಂ), **ಎಂ.ಎನ್. ಕಾಮತ್ ಕೃತಿಗಳು,** ಕರ್ನಾಟಕ ಸಂಘ, ಮೈಸೂರು ದಕ್ಷಿಣ ಕನ್ನಡ, ೧೯೯೫
* ವಿದ್ಯಾಶಂಕರ ಎಸ್. (ಸಂ), ಆರಾಧ್ಯ ಸಂಪದ ಎನ್. ಬಸವರಾಧ್ಯ, **ಸಮಗ್ರ ಸಾಹಿತ್ಯ ಸಂಪುಟ,** ಬಸವರಾಧ್ಯ ಅಭಿನಂದನ ಸಮಿತಿ, ಬೆಂಗಳೂರು, ೨೦೦೫
* ವೀಣಾ ಎಸ್. ಜಾಲಾದಿ, **ಭಾರತೀಯ ಸಮಾಜದಲ್ಲಿ ಶಿಕ್ಷಣ ಮತ್ತು ಶಿಕ್ಷಕ,** ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗಾ, ೨೦೦೬
* ವಿಜಯಕುಮಾರ್ ಅವರೇಕಾಡು, **ಭಾಷಾ ಸೌಜನ್ಯ,** ತಳಗವಾದಿ ಪ್ರಕಾಶನ, ಮೈಸೂರು, ೨೦೦೪

* ವೀರಭದ್ರಪ್ಪ ಬಿ.ವಿ. **ಶಿಕ್ಷಣ ಮತ್ತು ಸಂಸ್ಕೃತಿ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫
* ವೀರಪ್ಪ ಎನ್.ಎಸ್, **ಭಾರತೀಯ ಶಿಕ್ಷಣದ ಇತಿಹಾಸ (ಕ್ರಿಪೂ. ೮೦೦ ಕ್ರಿಶ. ೧೯೮೪),** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* ವೀರಭದ್ರಪ್ಪ ಬಿ.ವಿ. **ದ್ವಿತೀಯ ಭಾಷಾ ಬೋಧನೆ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮
* ವಿಲ್ಯಂಮಾಡ್ತ **ಅನ್ಯಭಾಷಾ ಬೋಧನೆ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೯
* ಶ್ಯಾಮಲಕುಮಾರಿ ಬಿ. ಮತ್ತು ಭ ಮಲ್ಲಿಕಾರ್ಜುನ, **ಭಾಷಾ ಅಲ್ಪ ಸಂಖ್ಯಾತ ವಿದ್ಯಾರ್ಥಿಗಳಿಗೆ ಕನ್ನಡ ಬೋಧನೆ,** ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು, ೧೯೮೬
* ಶಂಕರಭಟ್ ಡಿ.ಎನ್. **ಕನ್ನಡ ನುಡಿಯ ಬಗೆಗೆ ಚಿಂತನೆ,** ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬
* ಶಂಕರಭಟ್ ಡಿ.ಎನ್. **ಕನ್ನಡ ನುಡಿ ನಡೆದು ಬಂದ ದಾರಿ,** ಬಾಶಾ ಪ್ರಕಾಶನ, ಹೆಗ್ಗೋಡು, ೨೦೦೭
* ಶಂಕರಭಟ್ ಡಿ.ಎನ್. **ಕನ್ನಡ ಬರಹವನ್ನು ಸರಿಪಡಿಸೋಣ,** ಬಾಶಾ ಪ್ರಕಾಶನ, ಹೆಗ್ಗೋಡು, ೨೦೦೫
* ಶಂಕರಭಟ್ ಡಿ.ಎನ್. **ಭಾಷೆಯ ಬಗೆಗೆ ನೀವೇನು ಬಲ್ಲಿರಿ?** ಬಾಶಾ ಪ್ರಕಾಶನ, ಹೆಗ್ಗೋಡು, ೨೦೦೨
* ಶ್ರೀಧರ್ ಎಸ್.ಎನ್. ಇಂದಿನ **ಕನ್ನಡ ರಚನೆ ಮತ್ತು ಬಳಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫
* ಶ್ರೀನಾಥಶಾಸ್ತ್ರಿ ಜಿ.ವಿ. **ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ,** ನವಕರ್ನಾಟಕ ಪ್ರಕಾಶನ, ೨೦೦೬
* ಶ್ರೀನಿವಾಸ ಹಾವನೂರು, **ಹೊಸಗನ್ನಡದ ಅರುಣೋದಯ,** ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೦
* ಶ್ರೀನಿವಾಸಮೂರ್ತಿ ಕಾ.ವೆಂ. **ಕನ್ನಡ ಚಳುವಳಿ ಮತ್ತು ಚಿಂತನೆ,** ಸಪ್ನಬುಕ್ ಹೌಸ್, ಬೆಂಗಳೂರು, ೨೦೦೬
* ಶ್ರೀನಿವಾಸ ಕಾರ್ಕಳ, ಮೂಲ–ಜೇಕಬ್ ಸಾಂಪ್ರಿಕಲ್ ಲೀಲಾಜೋಸೆಫ್, **ಮಾಧ್ಯಮ ಶಿಕ್ಷಣ ಬೋಧನೆ,** ಸಂದೇಶ ಸಾಂಸ್ಕೃತಿಕ ಮತ್ತು ಶಿಕ್ಷಣ ಪ್ರತಿಷ್ಠಾನ, ೨೦೦೪
* ಶ್ರೀಮಾಲಿ ಕೆ. ಎಲ್. **ವರ್ಧಾಯೋಜನೆ,** ಮೈಸೂರು ವಿಶ್ವವಿದ್ಯಾಲಯ, ೧೯೬೯
* ಸದಾಶಿವಯ್ಯ ಕೆ.ಎಸ್. **ಶಿಕ್ಷಣ ಮತ್ತು ಪ್ರಜಾಸತ್ತೆ,** ವಿಶ್ವನಾಥ ಪ್ರಕಾಶನ, ಮೈಸೂರು, ೧೯೭೫

* ಶಿವರಾಮಶೆಟ್ಟಿ ಬಿ. **ನಾಡು–ನುಡಿ ಪ್ರತಿನಿಧೀಕರಣದ ಕಥನ,** ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೨೦೦೬
* ಶಿವಾರೆಡ್ಡಿ ಕೆ.ಸಿ.(ಸಂ) **ಕುವೆಂಪು ಸಮಗ್ರ ಗದ್ಯ ಸಂ–೨,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪
* ಸದಾಶಿವಯ್ಯ ಕೆ.ಎಸ್. **ಶ್ರೀ ಅರವಿಂದರ ಶೈಕ್ಷಣಿಕ ಚಿಂತನೆಗಳು,** ವಿಶ್ವನಾಥ ಪ್ರಕಾಶನ, ಮೈಸೂರು, ೧೯೭೮
* ಸುಜಾತ ಎಚ್. ಎಸ್. (ಸಂ) **ಎಂ.ಎಸ್. ಪುಟ್ಟಣ್ಣನವರ ಕನ್ನಡ ಮತ್ತು ಇಂಗ್ಲೀಶ್ ಲೇಖನಗಳು,** ಸುಹಾಸ ಪ್ರಕಟಣೆಗಳು, ಮೈಸೂರು, ೧೯೪೪
* ಸುದರ್ಶನ ಸ.ರ. **ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬
* ಸೋಮಶೇಖರಗೌಡ, **ಇಂದಿನ ಕನ್ನಡ ಭಾಷಾ ಬಳಕೆ,** ವೆಂಕಣ್ಣಯ್ಯ ಪ್ರತಿಷ್ಠಾನ, ಮೈಸೂರು, ೧೯೮೧.
* ಸೂರ್ಯಕಾಂತ ಶೀಲವಂತರ, **ಸ್ವತಂತ್ರ ಭಾರತದಲ್ಲಿ ಶಿಕ್ಷಣ ಮತ್ತು ಶ್ರೇಷ್ಠ ಶಿಕ್ಷಣ ತಜ್ಞರು,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೩.
* ಹನುಮಂತರೆಡ್ಡಿ, **ಸಮಾಜಶಾಸ್ತ್ರದ ದೃಷ್ಟಿಯಲ್ಲಿ ಶಿಕ್ಷಣ,** ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೫.

• • •

# ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಪಿಎಚ್.ಡಿ. ಮಹಾಪ್ರಬಂಧಗಳು

* ಎಚ್.ಎಸ್. ಶಿವಸ್ವಾಮಿಯವರು, **ಪದವಿ ತರಗತಿಗಳ ಕನ್ನಡ ಭಾಷೆ, ಸಾಹಿತ್ಯ ಕಲಿಕೆ** ಎಂಬ ಮಹಾಪ್ರಬಂಧವನ್ನು ಯು.ಪಿ. ಉಪಾಧ್ಯಾಯ ಅವರ ಮಾರ್ಗದರ್ಶನದಲ್ಲಿ ೧೯೮೮ರಲ್ಲಿ ಮಾಡಿದ್ದಾರೆ.

* ನಂದಾ ಆರ್. ಇಟಕರ, **ಒಂದನೇ ತರಗತಿಯಿಂದ ಐದನೇ ತರಗತಿಯವರೆಗಿನ ಕನ್ನಡ ಪಠ್ಯ ಪುಸ್ತಕಗಳಲ್ಲಿಯ ಪದಗಳಲ್ಲಿಯ ಪದಗಳ ಅಧ್ಯಯನ,** ಮಾ: ಕೃ.ಅನ್ವನ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಪಾರ್ವತಮ್ಮ ಜಿ.ಎಚ್, **ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲ್ಯಗಳ ಸಾಧನೆ,** ಮೈಸೂರುವಿಶ್ವವಿದ್ಯಾಲಯ

* ಭೀಮಣ್ಣ ಮೇಟಿ, **ಕನ್ನಡ ಭಾಷಾ ಕಲಿಕೆಯ ಸಮಸ್ಯೆಗಳು, (ಗುಲಬರ್ಗಾ ಜಿಲ್ಲೆಯ ಉರ್ದು ಭಾಷಿಕ ಮಕ್ಕಳನ್ನು ಅನುಲಕ್ಷಿಸಿ)** ಮಾ : ಡಾ. ಪಿ.ಮಹಾದೇವಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ರಂಗನಾಥ ಕೆ. **ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷದ ನೆಲೆಗಳು,** ಮಾ: ಡಾ. ಕಿ.ರಂ. ನಾಗರಾಜ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ಸೋಮಕ್ಕ ಎಂ. **ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)** ಮಾ: ಡಾ. ಪಿ. ಮಹಾದೇವಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ಗಜಾನನನಾಯ್ಕ, **ಇಂಗ್ಲೀಶ್ ಗೀತೆಗಳು ಪೂರ್ವದ ಭಾಷಾಂತರ ಪ್ರಕ್ರಿಯೆ (೧೮೫೦–೧೯೨೦)** ಮಾ : ಡಾ. ಎಂ. ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ಪ್ರಕಾಶ ಬಿ. **ದಕ್ಷಿಣ ಕನ್ನಡ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಕನ್ನಡ ಪಠ್ಯ ಪುಸ್ತಕಗಳ ರಾಚನಿಕ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ,** ಮಾ: ಪ್ರೊ. ಉಪ್ಪಂಗಳ ರಾಮಭಟ್ಟ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು

• • •

## ಎಂ.ಫಿಲ್ ಕಿರುಪ್ರಬಂಧಗಳು

---

* ಬಸವರಾಜ ಕೊಡಗುಂಟಿ, **ಮಕ್ಕಳ ಭಾಷೆ ಒಂದು ಅಧ್ಯಯನ,** ಮಾ: ಸಂಗಮೇಶ ಸವದತ್ತಿಮಠ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ
* ಸಿದ್ಧಲಿಂಗಪ್ಪ ಎಸ್, **ಪ್ರೌಢಶಾಲಾ ಮಕ್ಕಳ ಕನ್ನಡದ ಬಳಕೆಯಲ್ಲಿ ಕಾಗುಣಿತದ ದೋಷಗಳು,** ಮಾ: ಡಾ.ಕೃಷ್ಣ ಪರಮೇಶ್ವರಭಟ್ಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ನಾರಾಯಣ ಡಿ.ಎಸ್, **ಇಂಗ್ಲೀಶ್ ಕನ್ನಡ ಸಂಬಂಧ ಕುರಿತ ಚಿಂತನೆಗಳು,** ಮಾ: ಡಾ. ಓ.ಎಲ್. ನಾಗಭೂಷಣಸ್ವಾಮಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ತಿಪ್ಪನಾಯಕ ಎಸ್.ಪಿ. **ಕನ್ನಡ ಸಂಧಿ : ಸಮಸ್ಯೆಯ ಸ್ವರೂಪ,** ಮಾ: ಡಾ. ಪಿ. ಮಹಾದೇವಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

• • •

# ಎಂ.ಇಡಿ. ಕಿರುಪ್ರಬಂಧಗಳು

* ಮಂಜುನಾಥಗೌಡ ಟಿ, ಪ್ರಾಥಮಿಕ ಆಂಗ್ಲಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿನ ದೋಷಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ., ಶಿವಮೊಗ್ಗ
* ಪುಷ್ಪಾವತಿ ಎಸ್.ಕೆ. ಐದನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳು ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ., ಶಿವಮೊಗ್ಗ
* ನಾರನಗೌಡ್ರು ಮಂಜುನಾಥ, ಏಳನೇ ತರಗತಿಯ ಕನ್ನಡ ಪಠ್ಯಪುಸ್ತಕದಲ್ಲಿನ ನೈತಿಕ ಮೌಲ್ಯಗಳನ್ನು ಗುರುತಿಸುವ ಬಗ್ಗೆ ಒಂದು ಸ್ಥೂಲ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ., ಶಿವಮೊಗ್ಗ
* ಬಸವರಾಜ ಹಿರೇಮಠ, ಕುಷ್ಟಗಿ ತಾಲೂಕಿನ ಹಿರೇಮನ್ನಾಪುರ ಗ್ರಾಮದ ಐದನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿ ದೋಷಗಳನ್ನು ಕುರಿತು ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ., ಶಿವಮೊಗ್ಗ

• • •

# ಪತ್ರಿಕೆಗಳಲ್ಲಿನ ಲೇಖನಗಳು

* **ಕನ್ನಡದ ಮೂಲಕ ಇಂಗ್ಲೀಶ್,** ಕನ್ನಡ ಪ್ರಭ, ೨೩.೧೨.೨೦೦೪
* **ಕನ್ನಡ ಮರೆತ ಆದ್ಯತೆ,** ಆರ್.ಎಸ್. ರೋಹಿಡೇಕರ್, ಪ್ರಜಾವಾಣಿ, ೨೮.೧೨.೦೪
* **ಕನ್ನಡದ ಮಕ್ಕಳು ಇಂಗ್ಲೀಶ್ ಕಲಿಯುವುದು ಹೇಗೆ?** ಲೀಲಾ ಕೃಷ್ಣಮೂರ್ತಿ, ಉದಯವಾಣಿ, ೨೯.೦೩.೨೦೦೫
* **ಸಮಸ್ಯೆ ಮತ್ತಷ್ಟು ಜಟಿಲ,** ಡಾ. ಪಂಡಿತಾರಾಧ್ಯ, ಪ್ರಜಾವಾಣಿ, ೦೪.೦೪.೨೦೦೫
* **ಇಂಗ್ಲೀಶ್ ಕಲಿಕೆ : ಗೊಂದಲಗಳು ಸವಾಲುಗಳು,** ಪ್ರಜಾವಾಣಿ, ೧೨.೦೬.೨೦೦೫
* **ಇಂಗ್ಲೀಶ್ ಕಲಿಕೆ ವಾದ : ಮೂಡದ ಒಮ್ಮತ,** ಪ್ರಜಾವಾಣಿ, ೦೯.೦೭.೨೦೦೫
* **ಭಾಷಾ ಕಲಿಕೆಯನ್ನು ಆತ್ಮ ಸಾಕ್ಷಿ ನಿರ್ಧರಿಸಲಿ,** ವೀರೇಶ್ ತಿಪ್ಪಣ್ಣ, ಉದಯವಾಣಿ, ೧೨.೦೭.೨೦೦೫
* **ಕನ್ನಡ ಎಂಬ ರೊಟ್ಟಿಗೆ ಇಂಗ್ಲೀಶ್ ಬೆಣ್ಣೆ,** ಅಗ್ರಹಾರ ಕೃಷ್ಣಮೂರ್ತಿ, ಉದಯವಾಣಿ ೧೫.೦೭.೨೦೦೫
* **ಕನ್ನಡ–ಇಂಗ್ಲೀಶ್ ಕಲಿಕೆ ವಿವಾದ : ಭಿನ್ನಹ,** ಪ್ರಜಾವಾಣಿ, ೧೫.೦೭.೨೦೦೫
* **ಕನ್ನಡ–ಇಂಗ್ಲೀಶ್ ಕಲಿಕೆ ವಿವಾದ : ವಿಧಾನ ಸಭೆಯಲ್ಲಿ ಕಾವೇರಿದ ಚರ್ಚೆ,** ಉದಯವಾಣಿ, ೨೬.೦೭.೨೦೦೫
* **ಇಂಗ್ಲೀಶ್ ಕಲಿತರೇನೆ ಆತ್ಮವಿಶ್ವಾಸ ಹೆಚ್ಚುವುದೇ,** ಸುಭಾಷ್ ಎನ್, ವಿಜಯ ಕರ್ನಾಟಕ, ೨೨.೦೭.೨೦೦೫
* **ಇಂಗ್ಲೀಶ್ ಕಲಿಯಲು ಶಾಲೆಯೇ ಬೇಕೆ?** ಗೀತಾ ಶೆಣೈ, ಉದಯವಾಣಿ, ೨೭.೭.೨೦೦೫
* **ನೈತಿಕತೆ ಇಲ್ಲದ ಕನ್ನಡದ ಕಾಳಜಿ,** ಕೆ.ಟಿ. ಶಿವಪ್ರಸಾದ, ಜಿ.ವಿ.ಆನಂದಮೂರ್ತಿ, ಎಂ.ಎಸ್. ಶೇಖರ್, ೪.೮.೨೦೦೫
* ಇಂಗ್ಲೀಶ್ ಕಲಿಕೆ, ಉದಯವಾಣಿ, ೧೨.೮.೨೦೦೫

* **ಆಂಗ್ಲಭಾಷೆ ಅನಿವಾರ್ಯವಲ್ಲ : ಪ್ರಭುತ್ವ ಅದನ್ನು ಹೇರುತ್ತದೆ,** ಕನ್ನಡ ಪ್ರಭ, ೧೯.೮.೨೦೦೫
* **ಎಂಟರ ನಂತರ ಇಂಗ್ಲೀಶ್ ಕಲಿಯಲಿ, ವಿ.ಎಸ್. ಚರಣ್,** ಕನ್ನಡ ಪ್ರಭ, ೨೮.೮.೨೦೦೫
* **ಕನ್ನಡ ಸಾಕೆ ? ಇಂಗ್ಲೀಶ್ ಬೇಕೆ ?** ಕೆ.ಜಿ.ಚವ್ಹಾಣ, ಕನ್ನಡ ಪ್ರಭ, ೧೩.೯.೨೦೦೫
* **ಭಾಷಾ ಮಾಧ್ಯಮ : ಉಲ್ಲಂಘನೆ ಮಾನ್ಯತೆ ರದ್ದು, ತಡೆ ವಿಸ್ತರಣೆ,** ಪ್ರಜಾವಾಣಿ, ೧.೭.೨೦೦೭
* **ಶಾಲಾ ಮಾನ್ಯತೆ ರದ್ದು,** ಪ್ರಜಾವಾಣಿ, ೨.೭.೨೦೦೭
* **ಕನ್ನಡಕ್ಕೆ ಪ್ರಾಶಸ್ತ್ಯ :** ಬಿ.ಇ.ಒ.ತಾಕೀತು, ಪ್ರಜಾವಾಣಿ, ೧೩.೬.೨೦೦೭
* **ಶಿಕ್ಷಣ ಸಂಸ್ಥೆಗಳಿಗೆ ಹೈಕೋರ್ಟ್ ತರಾಟೆ,** ೬.೭.೨೦೦೭
* **ಭಾಷಾ ನೀತಿ ಉಲ್ಲಂಘನೆ : ಕಾನೂನು ಅಸ್ತ್ರ ತಪ್ಪಿಸಿಕೊಳ್ಳಲು ಯತ್ನ,** ಎಸ್.ಸಂಪತ್, ೮.೭.೨೦೦೭
* **ಹೈಕೋರ್ಟ್ : ಭಾಷಾ ಮಾಧ್ಯಮ ಎಂದು ತೀರ್ಪು,** ೨.೭.೨೦೦೮
* **ಇಂಗ್ಲೀಶ್ ಎಂಬ ಚಟ,** ಸಾಮಗ ದತ್ತಾತ್ರಿ
* **ಭಾಷಾ ಮಾಧ್ಯಮ ಹೇರಿಕೆ : ಸಂವಿಧಾನ ಬಾಹಿರ ಹೈಕೋರ್ಟ್,** ಪ್ರಜಾವಾಣಿ ೩.೭.೨೦೦೮
* **ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಅನ್ಯಾಯ,** ಪ್ರಜಾವಾಣಿ, ೪.೭.೨೦೦೮
* **ಇಂಗ್ಲೀಶ್ ವ್ಯಾಮೋಹ,** ಕನ್ನಡ ಪ್ರಭ, ೭.೭.೨೦೦೮
* **ಭಾಷಾ ಮಾಧ್ಯಮ ಸುಗ್ರೀವಾಜ್ಞೆ ಹೊರಡಿಸಲು ರಾಜ್ಯ ಚಿಂತನೆ,** ಕನ್ನಡ ಪ್ರಭ, ೭.೭.೨೦೦೮
* **ಭಾಷಾ ಮಾಧ್ಯಮ : ಸಲಹೆ,** ಪ್ರಜಾವಾಣಿ ೮.೭.೨೦೦೮
* **ಮಾತೃಭಾಷಾ ಮತ್ತು ಶಿಕ್ಷಣ,** ಡಾ. ಸರಸ್ವತಿ ವಿಜಯಕುಮಾರ್.
* **ಕನ್ನಡಕ್ಕೊಂದು ಭಾರಿ ಪೆಟ್ಟು,** ಕರ್ಮವೀರ, ೨೦.೭.೨೦೦೮
* **ಮಾತೃ ಭಾಷೆ ಮಾಧ್ಯಮವೇ ಉತ್ತಮ,** ಸಿ.ಆರ್.ಚಂದ್ರಶೇಖರ್, ಪ್ರಜಾವಾಣಿ, ೯.೭.೨೦೦೮
* **ಕನ್ನಡ ಮಾಧ್ಯಮ : ಸುಪ್ರೀಂಗೆ ರಾಜ್ಯ ಮೇಲ್ಮನವಿ,** ಕನ್ನಡ ಪ್ರಭ, ೨೪.೭.೨೦೦೮
* **ಮಾತೃಭಾಷೆಯಲ್ಲಿ ಶಿಕ್ಷಣ :** ವಿದ್ಯಾರ್ಥಿಗಳ ಒತ್ತಾಯ, ಸಂಯುಕ್ತ ಕರ್ನಾಟಕ, ೩೧.೮.೨೦೦೯

* **ಪ್ರಾಥಮಿಕ ಶಿಕ್ಷಣ : ಕನ್ನಡ ಮಾಧ್ಯಮದಲ್ಲಿ ಬೋಧನೆ,** ಪ್ರಜಾವಾಣಿ,೧೦.೧.೨೦೦೯
* **ಶಿಕ್ಷಣ, ಒಂದಷ್ಟು ಚಿಂತನೆ,** ಶಂ.ಗು, ಬಿತರಾದಾರ, ಪ್ರಜಾವಾಣಿ.
* **ಎಳೆ ವಯಸ್ಸಿನಲ್ಲಿಯೇ ಇಂಗ್ಲೀಶ್ ಕಲಿಕೆ ಅಗತ್ಯ : ಹೈಕೋರ್ಟ್.**
* **ಭಾಷಾ ಮಾಧ್ಯಮ ಮತ್ತೆ ಕೋರ್ಟಿಗೆ,** ಪ್ರಜಾವಾಣಿ, ೧೧.೩.೨೦೦೯.
* **ಕನ್ನಡ ಎಂಬ ದೋತರವೂ ಇಂಗ್ಲಿಸ್ಸೆಂಬ ಪ್ಯಾಂಟೂ,** ಕುಂ. ವೀರಭದ್ರಪ್ಪ, ಪ್ರಜಾವಾಣಿ, ೧೦.೫.೨೦೦೯
* **ಭಾಷಾ ಮಾಧ್ಯಮ : ಸರ್ಕಾರಕ್ಕೆ** ಬಿಸಿತುಪ್ಪ, ಪ್ರಜಾವಾಣಿ, ೧೨.೫.೨೦೦೯.
* ಆಂಗ್ಲ ಮಾಧ್ಯಮ ವಿರುದ್ಧ ಸರ್ಕಾರದ ಮೇಲ್ಮನವಿ, ಪ್ರಜಾವಾಣಿ,೨೦.೬.೨೦೦೯
* **ಭಾಷಾ ಮಾಧ್ಯಮ : ಹೈಕೋರ್ಟ್** ಗಡವು. ಪ್ರಜಾವಾಣಿ, ೪.೭.೨೦೦೯
* **ಭಾಷಾ ಮಾಧ್ಯಮ ಗೊಂದಲ ಸರ್ಕಾರಕ್ಕೆ ಇಕ್ಕಟ್ಟಿನ ಪರಿಸ್ಥಿತಿ :** ಸಂಪಾದಕರ ಮಾತು, ವಿಜಯ ಕರ್ನಾಟಕ, ೬.೭.೨೦೦೯
* **ಪ್ರಜಾತಂತ್ರ : ಶಿಕ್ಷಣ ಮತ್ತು ಭಾಷೆ,** ಸಂಕ್ರಮಣ ಪತ್ರಿಕೆ, ಸಂಚಿಕೆ–೧೧೩–೧೨೪, ಲೇಖಕರು : ಸುಬ್ಬಣ್ಣ ಜಿ.ಎಸ್. ೧೯೮೨
* **ಕನ್ನಡ ನುಡಿ ಪತ್ರಿಕೆ,** ಸಂಚಿಕೆ–೯, ೧೯೭೮
* **ಕನ್ನಡ ನುಡಿ ಪತ್ರಿಕೆ,** ಸಂಚಿಕೆ–೫೫, ೧೯೯೨
* **ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು,** ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ, ೧೯೮೯
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೧೯೯೮
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೨೦
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೨೧, ೧೯೯೮
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೩೨, ೧೯೯೮
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೫೧, ೧೯೯೮
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೩೯, ೧೯೯೯
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೪೧, ೨೦೦೦
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೪೩, ೨೦೦೦
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೪೪, ೨೦೦೦

* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೪೫, ೨೦೦೧
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೪೭, ೨೦೦೧
* **ನಮ್ಮ ಕನ್ನಡ,** ನಾರಾಯಣ ಕೆ.ವಿ. (ಸಂ), ಸಂಚಿಕೆ–೫೪, ೨೦೦೨
* **ಕರ್ನಾಟಕದಲ್ಲಿ ಆಡಳಿತ ಭಾಷೆ ನಡೆದು ಬಂದ ದಾರಿ,** ದೂರಶಿಕ್ಷಣ ಕೇಂದ್ರ,, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
* **ನಮ್ಮ ಕನ್ನಡ,** ಪಾಂಡುರಂಗಬಾಬು. ಡಿ. (ಸಂ), ಸಂಚಿಕೆ–೫೭, ೨೦೦೪
* **ನಮ್ಮ ಕನ್ನಡ,** ಪಾಂಡುರಂಗಬಾಬು. ಡಿ. (ಸಂ), ಸಂಚಿಕೆ–೬೦, ೨೦೦೫
* **ನಮ್ಮ ಕನ್ನಡ,** ಪಾಂಡುರಂಗಬಾಬು. ಡಿ. (ಸಂ), ಸಂಚಿಕೆ–೬೧, ೨೦೦೫
* **ನಮ್ಮ ಕನ್ನಡ,** ಪಾಂಡುರಂಗಬಾಬು. ಡಿ. (ಸಂ), ಸಂಚಿಕೆ–೬೨, ೨೦೦೬
* **ನಮ್ಮ ಕನ್ನಡ,** ಅಶೋಕಕುಮಾರ (ಸಂ), ಸಂಚಿಕೆ–೬೩, ೨೦೦೭
* **ಸಕಾಲ ಪತ್ರಿಕೆ,** ಸಂಚಿಕೆ–೧೨, ೨೦೦೭
* **ಹೊಸತು ಪತ್ರಿಕೆ,** ಸಂಚಿಕೆ–೪೯, ನವಕರ್ನಾಟಕ ಪ್ರಕಾಶನ, ೨೦೦೮


•••

